## ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೨೧

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶಿವಮಹಾಪುರಾಣಂ

(ಸಂಸ್ಕೃತದಲ್ಲಿ ಮೂಲ, ಕನ್ನಡ ಅರ್ಥಾನುವಾದವಿವರಣೆಗಳೊಡನೆ)

## ಭಾಗ—೩

## ರುದ್ರಸಂಹಿತಾ—ಸತೀಖಂಡ



ಅನುವಾದಕ :
**ಹಾಸನದ ಪಂಡಿತ ವೆಂಕಟರಾವ್**



ಮೈಸೂರು
ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್
೧೯೪೫



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರುದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ

**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ.ಸಿ.ಎಸ್.ಐ. ರವರು**




## ಶ್ರೀ ಪ್ರಸನ್ನ ಶಂಕರ

ವಾಮಾಂಕನ್ಯಸ್ಯವಾಮೇತರಕರಕಮಲಾಯಾಸ್ತಥಾ ವಾಮಬಾಹು-
ನ್ಯಸ್ತಾರಕ್ತೋತ್ಪಲಾಯಾಃ ಸ್ತನವಿಧೃತಲಸದ್ವಾಮಬಾಹುಂ ಪ್ರಿಯಾಯಾಃ ।
ಸರ್ಪಾಕಲ್ಪಾಭಿರಾಮೋ ಧೃತಪರಶುಮೃಗೇಷ್ಟೈಃ ಕರೈಃ ಕಾಂಚನಾಭೋ
ಧ್ಯೇಯಃ ಪದ್ಮಾಸನಸ್ಥಃ ಸ್ಮರಲಲಿತವಪುಃ ಸಂಪದೇ ಪಾರ್ವತೀಶಃ ॥

ಬೆಂಗಳೂರು ಪ್ರೆಸ್

# ಪ್ರಸ್ತಾವನೆ.



ರುದ್ರಸಂಹಿತೆಯಲ್ಲಿ ಎರಡನೆಯ ಖಂಡವಾದ ಈ ಸತೀಖಂಡದಲ್ಲಿ ಸಚ್ಚಿದಾನಂದ ಸ್ವರೂಪನಾದ ಪರಮೇಶ್ವರನು ಲೋಕಕಲ್ಯಾಣಕ್ಕಾಗಿ ದಕ್ಷಬ್ರಹ್ಮನ ಪುತ್ರಿಯಾಗಿ ಜನಿಸಿದ ಜಗನ್ಮಾತೆಯಾದ ಸತೀದೇವಿಯನ್ನು ಪಾಣಿಗ್ರಹಣಮಾಡಿದ ವಿಷಯವೂ, ದಕ್ಷನು ಮಾಡಿದ ತಿರಸ್ಕಾರದಿಂದ ಕೋಪಗೊಂಡ ಸತಿಯ ಶರೀರತ್ಯಾಗವೂ, ದಕ್ಷಯಜ್ಞ ವಿಧ್ವಂಸನವೂ ಹೃದಯಂಗಮವಾಗಿ ವಿವರಿಸಲ್ಪಟ್ಟಿರುವವು. ಇವೆಲ್ಲವೂ ಪರಮೇಶ್ವರನು ಭಕ್ತರ ಅನುಗ್ರಹಕ್ಕಾಗಿ ಪ್ರದರ್ಶಿಸುವ ಲೀಲೆಗಳು. ಪೂರ್ಣಕಾಮನೂ, ಸಚ್ಚಿದಾನಂದಸ್ವರೂಪನೂ ಆದ ಪರಮೇಶ್ವನಿಗೆ ಲೋಕವ್ಯವಹಾರಾದಿ ಕೃತ್ಯಗಳಿಂದ ಸಾಧಿಸಬೇಕಾದ ಪ್ರಯೋಜನವು ಯಾವುದೂ ಇರುವುದಿಲ್ಲ. ನಾಮರೂಪಭೇದಗಳಿಲ್ಲದ ಅವ್ಯಕ್ತಸ್ವರೂಪನೂ, ನಿರ್ಗುಣಸ್ವರೂಪನೂ ಆದ ಪರಮಾತ್ಮನನ್ನು ಚಿಂತಿಸಲೂ, ಆರಾಧಿಸಲೂ, ಯೋಗಿಗಳಿಗೂ, ತಪಸ್ವಿಗಳಿಗೂ ಕಷ್ಟಸಾಧ್ಯವಾಗಿರುವಾಗ ಸಾಮಾನ್ಯಜನರು ಪರಮಾತ್ಮನ ಸ್ವರೂಪವನ್ನು ತಿಳಿದು ಭಜಿಸುವುದೆಂತು? ನಮ್ಮ ಇಂದ್ರಿಯಗಳಿಗೆ ಗೋಚರವಾಗುವ ಲೋಕವ್ಯವಹಾರಾದಿ ವಿಷಯಗಳನ್ನು ಸಾಮಾನ್ಯ ಜನರು ಗ್ರಹಿಸಲು ಶಕ್ತರಾಗಿರುವರಷ್ಟೆ? ಇಂತಹ ಭಕ್ತರ ಅನುಗ್ರಹಕ್ಕಾಗಿಯೇ ಪರಮೇಶ್ವರನು ಸಗುಣವಾದ ರೂಪದಿಂದ ಅವತರಿಸಿ ವಿಧವಿಧವಾದ ಲೀಲೆಗಳನ್ನು ಪ್ರದರ್ಶಿಸುವನು. ಸಗುಣೋಪಾಸನೆಯಿಲ್ಲದೆ ನಿರ್ಗುಣೋಪಾಸನೆಯು ಸಾಧ್ಯವಿಲ್ಲ. ಈ ಕಾರಣಗಳಿಗಾಗಿ ಅವ್ಯಕ್ತರೂಪನಾದ ಪರಮೇಶ್ವರನು ಆಗಾಗ ವ್ಯಕ್ತರೂಪವನ್ನು ಕೈಗೊಂಡು ಲೋಕವ್ಯವಹಾರದಂತೆ ಆಚರಿಸಿ ಅದ್ಭುತಲೀಲೆಗಳನ್ನೆಸಗುವನು. ಇಂತಹ ಪರಮಾತ್ಮನ ದಿವ್ಯಚರಿತ್ರೆಗಳನ್ನು ತಿಳಿದು ಮನನಮಾಡುವುದರಿಂದ ಪರಮೇಶ್ವರನಲ್ಲಿ ಭಕ್ತಿಯು ಹುಟ್ಟಿ ಆ ಭಕ್ತಿಯಿಂದ ಜ್ಞಾನವೈರಾಗ್ಯಗಳು ಉಂಟಾಗುವವು. ಕೊನೆಗೆ ಮುಕ್ತಿಯೂ ಲಭಿಸುವುದು.

ಈ ಖಂಡದಲ್ಲಿ ವರ್ಣಿಸಿರುವ ಸತೀಶರೀರತ್ಯಾಗ ಮೊದಲಾದ ಕೆಲವು ವಿಷಯಗಳು ಕೆಲವು ಭೇದಗಳೊಡನೆ ಇತರ ಪುರಾಣಗಳಲ್ಲಿ ವರ್ಣಿತವಾಗಿವೆ. ಒಂದೇ ವಿಷಯವು ಒಂದೊಂದು ಪುರಾಣದಲ್ಲಿ ಒಂದೊಂದು ವಿಧವಾಗಿರಲು ಕಾರಣವೇನೆಂದರೆ:—ಪ್ರತಿ ಕಲ್ಪದಲ್ಲಿಯೂ ಮುಖ್ಯವಾದ ಅವತಾರಾದಿಗಳು ನಡದೇ ನಡೆಯುವವು. ಆದರೆ ಒಂದು ಕಲ್ಪದಲ್ಲಿ ನಡೆದಂತೆ ಇನ್ನೊಂದು ಕಲ್ಪದಲ್ಲಿ ನಡೆಯುವುದಿಲ್ಲ. ಸ್ವಲ್ಪಮಟ್ಟಿಗಾದರೂ ಭೇದವಿದ್ದೇ ಇರುವುದು. ಈ ವಿಚಾರವು ಪುರಾಣಗಳಲ್ಲಿಯೇ ಸ್ಪಷ್ಟವಾಗಿ ಹೇಳಲ್ಪಟ್ಟಿರುವುದು.

ಇಂತಹ ಸದ್ಗ್ರಂಥಾವಲೋಕನದಿಂದ ಜನರು ದೈವಭಕ್ತರಾಗಿಯೂ ಸತ್ಪ್ರಜೆಗಳಾಗಿಯೂ ಆಗಲೆಂದು ಸತ್ಕರ್ಮನಿರತರೂ ವಿದ್ಯಾಭಿಮಾನಿಗಳೂ ಆದ ನಮ್ಮನ್ನಾಳುವ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಎಸ್.ಐ. ಮಹಾಪ್ರಭುಗಳವರು** ಉದಾರಾಶ್ರಯವನ್ನಿತ್ತು ಈ ಗ್ರಂಥಪ್ರಕಾಶನಕ್ಕೆ ಅಪ್ಪಣೆ ಮಾಡಿರುತ್ತಾರೆ. ಈ ಗ್ರಂಥಪಠನದಿಂದ ಜನರು ದೈವಭಕ್ತಿಯುತರಾಗಿ ಈಶ್ವರಾನುಗ್ರಹಕ್ಕೆ ಪಾತ್ರರಾದಲ್ಲಿ ನನ್ನ ಶ್ರಮವು ಸಾರ್ಥಕವಾಯಿತೆಂದು ಭಾವಿಸುತ್ತೇನೆ.

ಸರ್ವಸಮರ್ಥನಾದ ಜಗದೀಶ್ವರನು ನಮ್ಮನ್ನಾಳುವ ಮಹಾಪ್ರಭುಗಳವರಿಗೂ ಅವರ ರಾಷ್ಟ್ರಕ್ಕೂ, ಪ್ರಜಾವರ್ಗಕ್ಕೂ ಸಕಲ ಸನ್ಮಂಗಳಗಳನ್ನು ಕರುಣಿಸಲೆಂದು ಭಕ್ತಿಭಾವದಿಂದ ಪ್ರಾರ್ಥಿಸುವೆನು.

ಮೈಸೂರು
ಪಾರ್ಥಿವ ಸಂ॥ ಜ್ಯೇಷ್ಠ ಬ॥ ನವಮಿ
೪—೭—೪೫

ಅನುವಾದಕ:
**ಹಾಸನದ ಪಂಡಿತ್ ವೆಂಕಟರಾವ್.**



# ವಿಷಯಾನುಕ್ರಮಣಿಕೆ.

ಪುಟಸಂಖ್ಯೆ

ಪುಟಸಂಖ್ಯೆ

॥ ಶ್ರೀ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

# ಪ್ರಥಮೋಽಧ್ಯಾಯಃ

॥ ನಾರದ ಉವಾಚ ॥

ವಿಧೇ ಸರ್ವಂ ವಿಜಾನಾಸಿ ಕೃಪಯಾ ಶಂಕರಸ್ಯ ಚ ।
ತ್ವಯಾದ್ಭುತಾ ಹಿ ಕಥಿತಾಃ ಕಥಾ ಮೇ ಶಿವಯೋಶ್ಶುಭಾಃ ॥ ೧ ॥

ತ್ವನ್ಮುಖಾಂಭೋಜನಿರ್ವೃತ್ತಾಂ ಶ್ರುತ್ವಾ ಶಿವಕಥಾಂ ಪರಾಂ ।
ಅತೃಪ್ತೋ ಹಿ ಪುನಸ್ತಾಂ ವೈ ಶ್ರೋತುಮಿಚ್ಛಾಮ್ಯಹಂ ಪ್ರಭೋ ॥ ೨ ॥

## ಒಂದನೆಯ ಅಧ್ಯಾಯವು.

೧. ನಾರದಮುನಿಯು ಬ್ರಹ್ಮದೇವನನ್ನು ಕುರಿತು ಹೀಗೆ ಕೇಳಿದನು:—ಓ ಬ್ರಹ್ಮದೇವನೇ! ಈಗ ನೀನು ಶಿವಪಾರ್ವತಿಯರ ಅದ್ಭುತವಾದ ಅನೇಕ ಕಥೆಗಳನ್ನು ನನಗೆ ಹೇಳಿರುವೆಯಷ್ಟೆ?

೨. ನಿನ್ನ ಮುಖಕಮಲದಿಂದ ಹೊರಡುವ ಉತ್ತಮವಾದ ಶಿವಕಥೆಯನ್ನು ಕೇಳಿದಷ್ಟೂ ನನಗೆ ತೃಪ್ತಿಯೇ ಉಂಟಾಗಲಿಲ್ಲ. ಆದುದರಿಂದ ಈಗ ತಿರುಗಿ ಇನ್ನೂ ಶಿವಕಥೆಯನ್ನು ಕೇಳಲಪೇಕ್ಷಿಸುವೆನು.

ಪೂರ್ಣಾಂಶಃ ಶಂಕರಸ್ಯೈವ ಯೋ ರುದ್ರೋ ವರ್ಣಿತಃ ಪುರಾ ।
ವಿಧೇ ತ್ವಯಾ ಮಹೇಶಾನಃ ಕೈಲಾಸನಿಲಯೋ ವಶೀ ॥ ೩ ॥

ಸ ಯೋಗೀ ಸರ್ವವಿಷ್ಣ್ವಾದಿಸುರಸೇವ್ಯಸ್ಸತಾಂ ಗತಿಃ ।
ನಿರ್ದ್ವಂದ್ವಃ ಕ್ರೀಡತಿ ಸದಾ ನಿರ್ವಿಕಾರೀ ಮಹಾಪ್ರಭುಃ ॥ ೪ ॥

ಸೋಽಭೂತ್ಪುನರ್ಗೃಹಸ್ಥಶ್ಚ ವಿವಾಹ್ಯ ಪರಮಾಂ ಸ್ತ್ರಿಯಂ ।
ಹರಿಪ್ರಾರ್ಥನಯಾ ಪ್ರೀತ್ಯಾ ಮಂಗಲಾಂ ಸ್ವತಪಸ್ವಿನೀಂ ॥ ೫ ॥

ಪ್ರಥಮಂ ದಕ್ಷಪುತ್ರೀ ಸಾ ಪಶ್ಚಾತ್ಸಾ ಪರ್ವತಾತ್ಮಜಾ ।
ಕಥಮೇಕಶರೀರೇಣ ದ್ವಯೋರಪ್ಯಾತ್ಮಜಾ ಮತಾ ॥ ೬ ॥

ಕಥಂ ಸತೀ ಪಾರ್ವತೀ ಸಾ ಪುನಶ್ಶಿವಮುಪಾಗತಾ ।
ಏತತ್ಸರ್ವಂ ತಥಾನ್ಯಚ್ಚ ಬ್ರಹ್ಮನ್ ಗದಿತುಮರ್ಹಸಿ ॥ ೭ ॥

---

೩-೪. ನೀನು ಶಿವನ ಪೂರ್ಣಾಂಶಸ್ವರೂಪನೆಂದು ಯಾವ ರುದ್ರನನ್ನು ವರ್ಣಿಸಿರುವೆಯೋ ಆ ಕೈಲಾಸವಾಸಿಯೂ, ಮಹೇಶ್ವರನೂ, ವಿಷ್ಣು ಮುಂತಾದ ದೇವತೆಗಳಿಂದ ಸೇವಿಸಲ್ಪಡುವವನೂ, ಸತ್ಪುರುಷರಿಗೆ ಗತಿಯೂ ಆದ ಆ ಮಹಾಪ್ರಭು ರುದ್ರನು ಸದಾ ಕಾಮಿನೀ ಮುಂತಾದ ವಿಷಯಗಳಲ್ಲಿ ಅಭಿಲಾಷೆಯಿಲ್ಲದ ಯೋಗಿಯು. ವಿಕಾರವಿಲ್ಲದವನು, ಮತ್ತು ಮಹಾ ವಿರಕ್ತನು. ಯಾವಾಗಲೂ ಆತ್ಮಾರಾಮನಾಗಿ ವಿಹರಿಸುತ್ತಲಿರುವನು.

೫. ಅವನೂ ಸಹ ವಿಷ್ಣುವಿನ ಪ್ರಾರ್ಥನೆಯಿಂದ ಮಂಗಳರೂಪಳೂ, ತನ್ನನ್ನೇ ಕುರಿತು ತಪಸ್ಸನ್ನಾಚರಿಸುತ್ತಿರುವಳೂ ಆದಂತಹ ಉತ್ತಮ ಸ್ತ್ರೀಯೊಬ್ಬಳನ್ನು (ಸತೀದೇವಿಯನ್ನು) ಪ್ರೀತಿಯಿಂದ ಮದುವೆಯಾಗಿ ಗೃಹಸ್ಥಾಶ್ರಮವನ್ನು ಸ್ವೀಕರಿಸಿದನಷ್ಟೆ.

೬. ಆ ರುದ್ರನ ಸತಿಯು ಮೊದಲು ದಕ್ಷಪುತ್ರಿಯಾಗಿ ಜನಿಸಿ, ಬಳಿಕ ಹಿಮವಂತನ ಮಗಳಾಗಿ ಜನಿಸಿದಳು. ಆದರೆ ಆ ಸತಿಯು ಒಂದೇ ಶರೀರದಿಂದ ದಕ್ಷಹಿಮವಂತರೀರ್ವರ ಸುತೆಯಾಗಿ ಹೇಗೆ ಜನಿಸಿದಳು ?

೭. ಮತ್ತು ಆ ಸತಿದೇವಿಯು ಪಾರ್ವತಿಯಾಗಿ ಜನಿಸಿ ತಿರುಗಿ ಶಿವನನ್ನು ಹೇಗೆ ಮದುವೆಯಾದಳು ? ಇದೆಲ್ಲವನ್ನೂ, ಶಿವಕಥೆಗೆ ಸಂಬಂಧವಾದ ಇತರ ವಿಷಯಗಳಾವುದಾದರೂ ಇದ್ದರೆ ಅವುಗಳನ್ನೂ ಹೇಳು ಎಂದು ಕೇಳಿದನು.

॥ ಸೂತ ಉವಾಚ ॥

ಇತಿ ತಸ್ಯ ವಚಶ್ಶ್ರುತ್ವಾ ಸುರರ್ಷೇಃ ಶಂಕರಾತ್ಮನಃ ।
ಪ್ರಸನ್ನಮಾನಸೋ ಭೂತ್ವಾ ಬ್ರಹ್ಮಾ ವಚನಮಬ್ರವೀತ್ ॥ ೮ ॥

॥ ಬ್ರಹ್ಮೋವಾಚ ॥

ಶೃಣು ತಾತ ಮುನಿಶ್ರೇಷ್ಠ ಕಥಯಾಮಿ ಕಥಾಂ ಶುಭಾಂ ।
ಯಾಂ ಶ್ರುತ್ವಾ ಸಫಲಂ ಜನ್ಮ ಭವಿಷ್ಯತಿ ನ ಸಂಶಯಃ ॥ ೯ ॥

ಪುರಾಹಂ ಸ್ವಸುತಾಂ ದೃಷ್ಟ್ವಾ ಸಂಧ್ಯಾಹ್ವಾಂ ತನಯೈಃ ಸಹ ।
ಅಭವಂ ವಿಕೃತಸ್ತಾತ ಕಾಮಬಾಣಪ್ರಪೀಡಿತಃ ॥ ೧೦ ॥

ಧರ್ಮಸ್ಮೃತಸ್ತದಾ ರುದ್ರೋ ಮಹಾಯೋಗೀ ಪರಃ ಪ್ರಭುಃ ।
ಧಿಕ್ಕೃತ್ಯ ಮಾಂ ಸುತೈಸ್ತಾತ ಸ್ವಸ್ಥಾನಂ ಗತವಾನಯಂ ॥ ೧೧ ॥

ಯನ್ಮಾಯಾಮೋಹಿತಶ್ಚಾಹಂ ವೇದವಕ್ತಾ ವಿಮೂಢಧೀಃ ।
ತೇನಾಕಾರ್ಷಂ ಸಹಾಕಾರ್ಯಂ ಪರಮೇಶೇನ ಶಂಭುನಾ ॥ ೧೨ ॥

---

೮. ಸೂತಮುನಿಯು ಹೇಳಿದನು :—ಈರೀತಿಯಾಗಿ ಶಿವಭಕ್ತನೂ ದೇವ ಋಷಿಯೂ ಆದ ನಾರದನ ಮಾತುಗಳನ್ನು ಕೇಳಿ ಬ್ರಹ್ಮನು ಪ್ರಸನ್ನಮಾನಸನಾಗಿ ಹೇಳಲು ಉಪಕ್ರಮಿಸಿದನು.

೯. ಬ್ರಹ್ಮನು ಹೇಳಿದನು :—ಎಲೈ ವತ್ಸ! ಶುಭವಾದ ಶಿವಪಾರ್ವತಿಯರ ಕಥೆಯನ್ನು ಹೇಳುವೆನು. ಅದನ್ನು ಕೇಳಿದರೆ ಜನ್ಮವು ಸಫಲವಾಗುವುದು. ಇದರಲ್ಲಿ ಸಂಶಯವಿಲ್ಲ.

೧೦. ಎಲೈ ನಾರದ! ಹಿಂದೆ ನಾನು ನನ್ನ ಪುತ್ರಿಯಾದ ಸಂಧ್ಯಾದೇವಿಯನ್ನು ನೋಡಿ ಮನ್ಮಥಬಾಣಗಳಿಂದ ಪೀಡಿತನಾಗಿ ಚಿತ್ತಚಾಂಚಲ್ಯವನ್ನು ಹೊಂದಿದೆನು. ನನ್ನ ಸುತರಾದ ದಕ್ಷಬ್ರಹ್ಮ ಮೊದಲಾದವರೂ ಸಹ ಮನೋವಿಕಾರವುಳ್ಳವರಾದರು.

೧೧. ಆಗ ಜಗತ್ಪ್ರಭುವಾದ ರುದ್ರನು ಬಂದು ನನ್ನನ್ನೂ ದಕ್ಷಾದಿ ನನ್ನ ಪುತ್ರರನ್ನೂ ಧಿಕ್ಕರಿಸಿ ಧರ್ಮವನ್ನುಪದೇಶಿಸಿ ತನ್ನ ಸ್ಥಾನಕ್ಕೆ ತೆರಳಿದನು.

೧೨. ವೇದವಾದಿಯಾದ ನಾನೂ ಸಹ ತಿಳಿವಳಿಕೆಯಿಲ್ಲದೆ ಸ್ವಪುತ್ರಿಯಲ್ಲಿ ಮೋಹಗೊಳ್ಳುವಂತಹ ಅಕಾರ್ಯವನ್ನು ಮಾಡಿದುದರಿಂದ ಪರಮೇಶ್ವರನಾದ ಆ ರುದ್ರನು ನನ್ನನ್ನು ನಿಂದಿಸಿದನು.

ತದೀರ್ಷಯಾಹಮಾಕಾರ್ಷಂ ಬಹೂಪಾಯಾನ್ ಸುತೈಸ್ಸಹ ।
ಕರ್ತುಂ ತನ್ಮೋಹನಂ ಮೂಢಃ ಶಿವಮಾಯಾವಿಮೋಹಿತಃ ॥ ೧೩ ॥

ಅಭವಂಸ್ತೇಽಥ ವೈ ಸರ್ವೇ ತಸ್ಮಿನ್ ಶಂಭೌ ಪರಪ್ರಭೌ ।
ಉಪಾಯಾ ನಿಷ್ಫಲಾಸ್ತೇಷಾಂ ಮಮ ಚಾಪಿ ಮುನೀಶ್ವರ ॥ ೧೪ ॥

ತದಾಸ್ಮರಂ ರಮೇಶಾನಂ ವ್ಯರ್ಥೋಪಾಯಸ್ಸುತೈಸ್ಸಹ ।
ಅಬೋಧಯತ್ಸ ಆಗತ್ಯ ಶಿವಭಕ್ತಿರತಸ್ಸುಧೀಃ ॥ ೧೫ ॥

ಪ್ರಬೋಧಿತೋ ರಮೇಶೇನ ಶಿವತತ್ತ್ವಪ್ರದರ್ಶಿನಾ ।
ತದೀರ್ಷಾಮತ್ಯಜಂ ಸೋಽಹಂ ಹಠಂ ತಂ ನ ವಿಮೋಹಿತಃ ॥ ೧೬ ॥

ಶಕ್ತಿಂ ಸಂಸೇವ್ಯ ತತ್ಪ್ರೀತ್ಯೋತ್ಪಾದಯಾಮಾಸ ತಾಂ ತದಾ ।
ದಕ್ಷಾದಸಿಕ್ನ್ಯಾಂ ವೀರಿಣ್ಯಾಂ ಸ್ವಪುತ್ರಾದ್ಧರಮೋಹನೇ ॥ ೧೭ ॥

---

೧೩. ಆಗ ನಾನು ಕೋಪಗೊಂಡು ಶಿವಮಾಯೆಯಿಂದ ಮೋಹಿತನಾಗಿ, ಆ ಶಿವನನ್ನು ಮೋಹಗೊಳಿಸಬೇಕೆಂದು ದಕ್ಷನೇ ಮೊದಲಾದ ನನ್ನ ಪುತ್ರರೊಡನೆ ಆಲೋಚಿಸಿ ಅನೇಕ ಉಪಾಯಗಳನ್ನು ಮಾಡಿದೆನು.

೧೪. ಆ ದಕ್ಷಾದಿಗಳೂ ಸಹ ಪರಮೇಶ್ವರನಾದ ರುದ್ರನನ್ನು ಮೋಹಗೊಳಿಸಲು ಅನೇಕ ಉಪಾಯಗಳನ್ನು ಮಾಡಿದರು- ಆದರೆ ಆ ಉಪಾಯಗಳೆಲ್ಲವೂ ನಿಷ್ಫಲವಾದುವು.

೧೫. ಆಗ ನಾನು ಹರಿಯನ್ನು ಸ್ಮರಿಸಿದೆವು. ಶಿವಭಕ್ತನೂ, ಬುದ್ಧಿಶಾಲಿಯೂ ಆದ ಹರಿಯು ಬಂದು, ನನಗೂ ದಕ್ಷಾದಿಗಳಿಗೂ ಸಹ ಚನ್ನಾಗಿ ಉಪದೇಶ ಮಾಡಿದನು.

೧೬. ಆ ಹರಿಯು ಶಿವಸ್ವರೂಪವನ್ನು ನಮಗೆ ಚನ್ನಾಗಿ ತಿಳಿಯುವಂತೆ ಉಪದೇಶಿಸಲು ನಾನು ಶಿವನಲ್ಲಿಯ ದ್ವೇಷವನ್ನು ತ್ಯಜಿಸಿದೆನು. ಆದರೆ ತಿರುಗಿ ಶಿವನನ್ನು ಮೋಹಗೊಳಿಸುವ ಹಠವನ್ನು ಮಾತ್ರ ಬಿಡಲಿಲ್ಲ.

೧೭. ಮುಂದೆ ನಾನು ಆದಿಶಕ್ತಿಯನ್ನು ಪೂಜಿಸಿ ಆ ದೇವಿಯ ಅನುಗ್ರಹದಿಂದ ನನ್ನ ಪುತ್ರನಾದ ದಕ್ಷಬ್ರಹ್ಮನಿಂದ ಅವಳ ಪತ್ನಿಯಾದ ವೀರಿಣೀದೇವಿಯಲ್ಲಿ ಶಿವನನ್ನು ಮೋಹಗೊಳಿಸಲು ಆದಿಶಕ್ತಿಯು ಜನಿಸುವಂತೆ ಮಾಡಿದೆನು.

**ಸೋಮೋ ಭೂತ್ವಾ ದಕ್ಷಸುತಾ ತಪಃ ಕೃತ್ವಾ ತು ದುಸ್ಸಹಂ ।**
**ರುದ್ರಪತ್ನ್ಯಭವದ್ಭಕ್ತ್ಯಾ ಸ್ವಭಕ್ತಹಿತಕಾರಿಣೀ ॥ ೧೮ ॥**

**ಸೋಮೋ ರುದ್ರೋ ಗೃಹೀ ಭೂತ್ವಾಕಾರ್ಷೀಲ್ಲೀಲಾಂ ಜಗತ್ಪ್ರಭುಃ ।**
**ಮೋಹಯಿತ್ವಾಥ ಮಾಂ ತತ್ರ ಸ್ವವಿವಾಹೇಽವಿಕಾರಧೀಃ ॥ ೧೯ ॥**

**ವಿವಾಹ್ಯ ತಾಂ ಸ ಆಗತ್ಯ ಸ್ವಗಿರೌ ಸೂತಿಕೃತ್ತಯಾ ।**
**ರೇಮೇ ಬಹುವಿಮೋಹೋ ಹಿ ಸ್ವತಂತ್ರಸ್ಸ್ವಾತ್ತವಿಗ್ರಹಃ ॥ ೨೦ ॥**

**ತಯಾ ವಿಹರತಸ್ತಸ್ಯ ವ್ಯತೀಯಾಯ ಮಹಾನ್ಮನೇ ।**
**ಕಾಲಸ್ಸುಖಕರಃ ಶಂಭೋರ್ನಿರ್ವಿಕಾರಸ್ಯ ಸದ್ರತೇಃ ॥ ೨೧ ॥**

**ತತೋ ರುದ್ರಸ್ಯ ದಕ್ಷೇಣ ಸ್ಪರ್ಧಾ ಜಾತಾ ನಿಜೇಚ್ಛಯಾ ।**
**ಮಹಾಮೂಢಸ್ಯ ತನ್ಮಾಯಾಮೋಹಿತಸ್ಯ ಸುಗರ್ವಿಣಃ ॥ ೨೨ ॥**

---

೧೮. ಆ ದೇವಿಯು ತನ್ನ ಭಕ್ತರಾದ ನಮಗೂ ಮಿಕ್ಕವರಿಗೂ ಹಿತವನ್ನು ಮಾಡಲು, ದಕ್ಷಪುತ್ರಿಯಾಗಿ ಜನಿಸಿ ಅಸಾಧ್ಯವಾದ ತಪಸ್ಸನ್ನಾಚರಿಸಿ ರುದ್ರನ ಪತ್ನಿಯಾದಳು.

೧೯. ಆಗ ಜಗತ್ಪ್ರಭುವಾದ ರುದ್ರನೂ ಸಹ ತನ್ನ ವಿವಾಹದಲ್ಲಿ ನನ್ನನ್ನು ಮೋಹಗೊಳಿಸಿ, ಸತೀದೇವಿಯನ್ನು ಮದುವೆಯಾಗಿ ಆಪಕೊಡದೆ ಲೀಲಾವಿನೋದಗಳಿಂದ ವಿಹರಿಸುತ್ತಲಿದ್ದನು.

೨೦. ಆಮೇಲೆ ಶಿವನು ತನ್ನ ಪತ್ನಿಯಾದ ಸ್ವಶಕ್ತಿಯಿಂದ ಸುಂದರವಾದ ಶರೀರವುಳ್ಳವನಾಗಿ ಸತೀದೇವಿಯೊಡನೆ ಕೈಲಾಸಗಿರಿಗೆ ಬಂದು ಅಲ್ಲಿ ವಾಸಿಸುತ್ತಾ, ಆಕೆಯೊಡನೆ ಬಗೆಬಗೆಯಾಗಿ ವಿಹರಿಸುತ್ತಲಿದ್ದನು.

೨೧. ಹೀಗೆ ಸತೀದೇವಿಯೊಡನೆ ಶಿವನು ನಿರ್ವಿಕಾರವಾಗಿ ಸುಖಸಂಭೋಗವನ್ನನುಭವಿಸುತ್ತಲಿರಲು ಅನೇಕ ಕಾಲಗಳು ಸುಖವಾಗಿ ಕಳೆದುಹೋದುವು.

೨೨. ಆಮೇಲೆ ತಿಳಿವಳಿಕೆಯಿಲ್ಲದವನೂ ಶಿವಮಾಯಾಮೋಹಿತನೂ, ಗರ್ವಿಷ್ಠನೂ ಆದಂತಹ ದಕ್ಷಬ್ರಹ್ಮನೊಡನೆ ಆ ರುದ್ರನಿಗೆ ದ್ವೇಷವುಂಟಾಯಿತು. ಆ ರೀತಿ ದ್ವೇಷ ಉಂಟಾದುದು ಆ ಪರಮೇಶ್ವರನ ಇಚ್ಛೆಯಿಂದಲೇ ಹೊರತು ಬೇರೆಯಲ್ಲ.

**ತತ್ಪ್ರಭಾವಾದ್ಧರಂ ದಕ್ಷೋ ಮಹಾಗರ್ವೀ ವಿಮೂಢಧೀಃ ।**
**ಮಹಾಶಾಂತಂ ನಿರ್ವಿಕಾರಂ ನಿನಿಂದ ಬಹುಮೋಹಿತಃ ॥ ೨೩ ॥**

**ತತೋ ದಕ್ಷಃ ಸ್ವಯಂ ಯಜ್ಞಂ ಕೃತವಾನ್ ಗರ್ವಿತೋಽಪರಂ ।**
**ಸರ್ವಾನಾಹೂಯ ದೇವಾದೀನ್ ವಿಷ್ಣುಂ ಮಾಂ ಚಾಖಿಲಾಧಿಪಃ ॥ ೨೪ ॥**

**ನಾಜುಹಾವ ತಥಾಭೂತೋ ರುದ್ರಂ ರೋಷಸಮಾಕುಲಃ ।**
**ತಥಾ ತತ್ರ ಸತೀಂ ನಾಮ್ನಾ ಸ್ವಪುತ್ರೀಂ ವಿಧಿಮೋಹಿತಃ ॥ ೨೫ ॥**

**ಯದಾ ನಾಕಾರಿತಾ ಪಿತ್ರಾ ಮಾಯಾಮೋಹಿತಚೇತಸಾ ।**
**ಲೀಲಾಂ ಚಕಾರ ಸುಜ್ಞಾನಾ ಮಹಾಸಾಧ್ವೀ ಶಿವಾ ತದಾ ॥ ೨೬ ॥**

**ಅಥಾಽಽಗತಾ ಸತೀ ತತ್ರ ಶಿವಾಜ್ಞಾಮಧಿಗಮ್ಯ ಸಾ ।**
**ಅನಾಹೂತಾಽಪಿ ದಕ್ಷೇಣ ಗರ್ವಿಣಾ ಸ್ವಪಿತುರ್ಗೃಹಂ ॥ ೨೭ ॥**

---

೨೩. ಆಗ ದಕ್ಷನು ಶಿವಮಾಯೆಯಿಂದ ಮೋಹಿತನಾಗಿದ್ದುದರಿಂದ, ತಿಳಿವಳಿಕೆಯಿಲ್ಲದೆ ಅಹಂಕಾರದಿಂದ ಹೆಮ್ಮೆಪಡುತ್ತಿದ್ದನು. ಇದಲ್ಲದೆ ಗರ್ವೋನ್ಮತ್ತನಾಗಿ ತುಂಬಾಶಾಂತನೂ ವಿಕಾರವಿಲ್ಲದವನೂ ಆದಂತಹ ಶಿವನನ್ನು ನಿಷ್ಕಾರಣವಾಗಿ ನಿಂದಿಸುತ್ತಿದ್ದನು.

೨೪-೨೫. ಹೀಗಿರಲು ಕೆಲವು ಕಾಲದಮೇಲೆ ಒಂದು ಯಾಗವನ್ನು ಪ್ರಾರಂಭಿಸಿದನು. ಆ ಯಾಗಕ್ಕೆ ವಿಷ್ಣು ಮತ್ತು ನಾನು (ಬ್ರಹ್ಮ) ಮೊದಲುಗೊಂಡು ಎಲ್ಲಾ ದೇವತೆಗಳನ್ನೂ ಕರೆದನು. ಆದರೆ ಹರನ ಮೇಲಿನ ದ್ವೇಷದಿಂದ ಮೂಢನಾಗಿ ಆ ಹರನನ್ನೂ, ತನಗೆ ಪುತ್ರಿಯಾಗಿದ್ದರೂ ಹರನ ಪತ್ನಿ ಎಂಬ ಕಾರಣದಿಂದ ಸತೀದೇವಿಯನ್ನೂ ಕರೆಯಲಿಲ್ಲ.

೨೬. ತನ್ನ ತಂದೆಯಾದ ದಕ್ಷನು ತನ್ನನ್ನು ಯಜ್ಞಕ್ಕೆ ಕರೆಯದಿರಲು ಆಗ ಪತಿವ್ರತೆಯೂ ತುಂಬಾ ಬುದ್ಧಿಶಾಲಿನಿಯೂ ಆದ ಸತೀದೇವಿಯು ಒಂದು ಲೀಲೆಯನ್ನು ಆಚರಿಸಿದಳು.

೨೭. ಆಗ ಸತಿಯು ಗರ್ವಿಷ್ಠನಾದ ದಕ್ಷನು ತನ್ನನ್ನು ಯಜ್ಞಕ್ಕೆ ಕರೆಯದಿದ್ದರೂ ಸಹ ತಾನಾಗಿಯೇ ಪತಿಯಿಂದ ಅಪ್ಪಣೆಯನ್ನು ಪಡೆದು ತನ್ನ ತಂದೆಯ ಮನೆಗೆ ಬಂದಳು.

**ವಿಲೋಕ್ಯ ರುದ್ರಭಾಗಂ ನೋ ಪ್ರಾಪ್ಯಾವಜ್ಞಾಂ ಚ ತಾತತಃ ।**
**ವಿನಿಂದ್ಯ ತತ್ರ ತಾನ್ ಸರ್ವಾನ್ ದೇಹತ್ಯಾಗಮಥಾಕರೋತ್ ॥ ೨೮ ॥**

**ತಚ್ಛ್ರುತ್ವಾ ದೇವದೇವೇಶಃ ಕ್ರೋಧಂ ಕೃತ್ವಾ ತು ದುಸ್ಸಹಂ ।**
**ಜಟಾಮುತ್ಕೃತ್ಯ ಮಹತೀಂ ವೀರಭದ್ರಮಜೀಜನತ್ ॥ ೨೯ ॥**

**ಸಗಣಂ ತಂ ಸಮುತ್ಪಾದ್ಯ ಕಿಂ ಕುರ್ಯಾಮಿತಿ ವಾದಿನಂ ।**
**ಸರ್ವಾಪಮಾನಪೂರ್ವಂ ಹಿ ಯಜ್ಞಧ್ವಂಸಂ ದಿದೇಶ ಹ ॥ ೩೦ ॥**

**ತದಾಜ್ಞಾಂ ಪ್ರಾಪ್ಯ ಸ ಗಣಾಧೀಶೋ ಬಹುಬಲಾನ್ವಿತಃ ।**
**ಗತೋಽರಂ ತತ್ರ ಸಹಸಾ ಮಹಾಬಲಪರಾಕ್ರಮಃ ॥ ೩೧ ॥**

**ಮಹೋಪದ್ರವಮಾಚೇರುರ್ಗಣಾಸ್ತತ್ರ ತದಾಜ್ಞಯಾ ।**
**ಸರ್ವಾನ್ ಸ ದಂಡಯಾಮಾಸ ನ ಕಶ್ಚಿದವಶೇಷಿತಃ ॥ ೩೨ ॥**

---

೨೮. ಅಲ್ಲಿ ನಡೆಯುತ್ತಿದ್ದ ಯಜ್ಞದಲ್ಲಿ ತನ್ನ ಪತಿಯಾದ ರುದ್ರನಿಗೆ ಹವಿರ್ಭಾಗಕೊಡದಿರುವುದನ್ನು ನೋಡಿ ಖಿನ್ನಳಾದಳು. ದಕ್ಷನೂ ಸಹ ಆಕೆಯನ್ನು ಆದರಿಸದೆ ಅವಮಾನಮಾಡಲು, ಆ ಸತೀದೇವಿಯು ಅಲ್ಲಿ ಸೇರಿರುವ ರುದ್ರದ್ವೇಷಿಗಳನ್ನೆಲ್ಲಾ ನಿಂದಿಸಿ ಅಲ್ಲಿಯೇ ಯಜ್ಞಾಗ್ನಿಯಲ್ಲಿ ಶರೀರತ್ಯಾಗವನ್ನು ಮಾಡಿದಳು.

೨೯. ಹೀಗೆ ಸತಿಯು ದೇಹತ್ಯಾಗಮಾಡಿದುದನ್ನು ಕೇಳಿ ದೇವದೇವನಾದ ಶಿವನಿಗೆ ಮಹಾಕ್ರೋಧವುಂಟಾಯಿತು. ಮಹತ್ತಾದ ತನ್ನ ಜಟೆಯನ್ನು ಭೂಮಿಗೆ ಅಪ್ಪಳಿಸಿ ಅದರಿಂದ ವೀರಭದ್ರನನ್ನು ಸೃಜಿಸಿದನು.

೩೦. ಮತ್ತು ಆ ವೀರಭದ್ರನಿಗೆ ಪರಿವಾರವನ್ನೂ ಸೃಜಿಸಿದನು. ಆಗ ವೀರಭದ್ರನು ನಾನು ಮಾಡಬೇಕಾದ ಕಾರ್ಯವೇನು? ನನಗೇನಪ್ಪಣೆ ಎಂದು ಕೇಳಲು ಅವಕ್ಕೆ ರುದ್ರನು, ದಕ್ಷಯಜ್ಞಕ್ಕೆ ಹೋಗಿ ಅಲ್ಲಿ ಸೇರಿರುವವರೆಲ್ಲರಿಗೂ ಅಪಮಾನವನ್ನು ಮಾಡಿ ಯಜ್ಞನಾಶವನ್ನು ಮಾಡು ಎಂದು ಅಪ್ಪಣೆಮಾಡಿದನು.

೩೧. ಹೀಗೆ ಶಿವನ ಆಜ್ಞೆಯನ್ನು ಪಡೆದು ಮಹಾಬಲಶಾಲಿಯಾದ ಆ ವೀರಭದ್ರನು ತುಂಬಾ ಸೈನ್ಯ ಸಹಿತನಾಗಿ ದಕ್ಷನ ಯಜ್ಞಶಾಲೆಗೆ ಜಾಗ್ರತೆಯಾಗಿ ಹೋದನು.

೩೨. ಆ ವೀರಭದ್ರನ ಆಜ್ಞೆಯಂತೆ ಶಿವಗಣಗಳು ಯಜ್ಞಕ್ಕೆ ತುಂಬಾ ತೊಂದರೆಯನ್ನು ಮಾಡಿದರು. ಆ ವೀರಭದ್ರನು ಅಲ್ಲಿ ಸೇರಿರುವವರೆಲ್ಲರನ್ನೂ ಒಬ್ಬರನ್ನೂ ಬಿಡದೆ ಶಿಕ್ಷಿಸಿದನು.

ವಿಷ್ಣುಂ ಸಂಜಿತ್ಯ ಯತ್ನೇನ ಸಾಮರಂ ಗಣಸತ್ತಮಃ ।
ಚಕ್ರೇ ದಕ್ಷಶಿರಶ್ಛೇದಂ ತಚ್ಛಿರೋಽಗ್ನೌ ಜುಹಾವ ಚ ॥ ೩೩ ॥

ಯಜ್ಞಧ್ವಂಸಂ ಚಕಾರಾಶು ಮಹೋಪದ್ರವಮಾಚರರ್ನ್ ।
ತತೋ ಜಗಾಮ ಸ್ವಗಿರಿಂ ಪ್ರಣನಾಮ ಶಿವಂ ಪ್ರಭುಂ ॥ ೩೪ ॥

ಯಜ್ಞಧ್ವಂಸೋಽಭವಚ್ಚೇತ್ಥಂ ದೇವಲೋಕೇ ಪ್ರಪಶ್ಯತಿ ।
ರುದ್ರಸ್ಯಾನುಚರೈಸ್ತತ್ರ ವೀರಭದ್ರಾದಿಭಿಃ ಕೃತಃ ॥ ೩೫ ॥

ಮುನೇ ನೀತಿರಿಯಂ ಜ್ಞೇಯಾ ಶ್ರುತಿಸ್ಮೃತಿಷು ಸಮ್ಮತಾ ।
ರುದ್ರೇ ರುಷ್ಟೇ ಕಥಂ ಲೋಕೇ ಸುಖಂ ಭವತಿ ಸುಪ್ರಭೌ ॥ ೩೬ ॥

ತತೋ ರುದ್ರಃ ಪ್ರಸನ್ನೋಽಭೂತ್ಸ್ತುತಿಮಾಕರ್ಣ್ಯ ತಾಂ ಪರಾಂ ।
ವಿಜ್ಞಪ್ತಿಂ ಸಫಲಾಂ ಚಕ್ರೇ ಸರ್ವೇಷಾಂ ದೀನವತ್ಸಲಃ ॥ ೩೭ ॥

---

೩೩. ವಿಷ್ಣುವನ್ನೂ ದೇವತೆಗಳನ್ನೂ ಜಯಿಸಿದನು. ದಕ್ಷಬ್ರಹ್ಮನ ಶಿರಸ್ಸನ್ನು ಕತ್ತರಿಸಿ ಆ ಶಿರಸ್ಸನ್ನು ಅಲ್ಲಿಯ ಯಾಗಾಗ್ನಿಯಲ್ಲಿ ಹೋಮಮಾಡಿದನು.

೩೪. ಹೀಗೆ ಮಹತ್ತಾದ ಉಪದ್ರವವನ್ನು ಮಾಡಿ ಯಜ್ಞಧ್ವಂಸವನ್ನು ಮಾಡಿದನು. ಬಳಿಕ ಆ ವೀರಭದ್ರನು ಹೋಗಿ ಜಗತ್ಪ್ರಭುವಾದ ಶಿವನನ್ನು ನಮಸ್ಕರಿಸಿದನು.

೩೫. ಎಲೈ ನಾರದಮುನಿ! ಹೀಗೆ ವಿಷ್ಣುವೇ ಮೊದಲಾದ ದೇವತೆಗಳು ನೋಡುತ್ತಿದ್ದಂತೆಯೇ ಅವರನ್ನು ತಿರಸ್ಕರಿಸಿ ವೀರಭದ್ರನೇ ಮೊದಲಾದ ಶಿವಗಣಗಳು ದಕ್ಷಯಜ್ಞವನ್ನು ಧ್ವಂಸಮಾಡಿದರು.

೩೬. ಈ ದೃಷ್ಟಾಂತದಿಂದ ಜಗತ್ಪ್ರಭುವಾದ ರುದ್ರನು ಕೋಪಗೊಂಡರೆ ಎಂದಿಗೂ ಸುಖವಾಗುವುದಿಲ್ಲ ಎಂಬ ಶ್ರುತಿಸ್ಮೃತಿಪ್ರಸಿದ್ಧವಾದ ಒಂದು ನೀತಿಯನ್ನು ತಿಳಿದುಕೊಳ್ಳಬಹುದು.

೩೭. ಆಮೇಲೆ ದಕ್ಷನೇ ಮೊದಲಾದ ದೇವತೆಗಳು ರುದ್ರನನ್ನು ಸ್ತುತಿಸಲು ದೀನವತ್ಸಲನಾದ ಅವನು ಪ್ರಸನ್ನನಾಗಿ ಅವರೆಲ್ಲರ ವಿಜ್ಞಾಪನೆಯನ್ನು ಸಫಲವಾಗಿ ಮಾಡಿದನು.

ಪೂರ್ವವಚ್ಚ ಕೃತಂ ತೇನ ಕೃಪಾಲುತ್ವಂ ಮಹಾತ್ಮನಾ ।
ಶಂಕರೇಣ ಮಹೇಶೇನ ನಾನಾಲೀಲಾವಿಹಾರಿಣಾ ॥ ೩೮ ॥

ಜೀವಿತಸ್ತೇನ ದಕ್ಷೋ ಹಿ ತತ್ರ ಸರ್ವೇ ಹಿ ಸತ್ಕೃತಾಃ ।
ಪುನಸ್ಸ ಕಾರಿತೋ ಯಜ್ಞಃ ಶಂಕರೇಣ ಕೃಪಾಲುನಾ ॥ ೩೯ ॥

ರುದ್ರಶ್ಚ ಪೂಜಿತಸ್ತತ್ರ ಸರ್ವೈರ್ದೇವೈರ್ವಿಶೇಷತಃ ।
ಯಜ್ಞೇ ವಿಶ್ವಾದಿಭಿರ್ಭಕ್ತ್ಯಾ ಸುಪ್ರಸನ್ನಾತ್ಮಭಿರ್ಮುನೇ ॥ ೪೦ ॥

ಸತೀದೇಹಸಮುತ್ಪನ್ನಾ ಜ್ವಾಲಾ ಲೋಕಸುಖಾವಹಾ ।
ಪತಿತಾ ಪರ್ವತೇ ತತ್ರ ಪೂಜಿತಾ ಸುಖದಾಯಿನೀ ॥ ೪೧ ॥

ಜ್ವಾಲಾಮುಖೀತಿ ವಿಖ್ಯಾತಾ ಸರ್ವಕಾಮಫಲಪ್ರದಾ ।
ಬಭೂವ ಪರಮಾ ದೇವೀ ದರ್ಶನಾತ್ಪಾಪಹಾರಿಣೀ ॥ ೪೨ ॥

---

೩೮. ಅನೇಕ ಲೀಲಾಮಯನೂ, ಮಹಾತ್ಮನೂ ಆದಂಥ ಶಂಕರನು ಮೊದಲಿನಂತೆಯೇ ದೇವತೆಗಳಲ್ಲಿ ಕೃಪೆಯನ್ನು ತೋರಿಸಿದನು.

೩೯. ಕೃಪಾಮಯನಾದ ಶಂಕರನು ದಕ್ಷಬ್ರಹ್ಮನನ್ನು ಬದುಕಿಸಿದನು. ಮಿಕ್ಕವರನ್ನೆಲ್ಲಾ ಅನುಗ್ರಹಿಸಿ ತಿರುಗಿ ಆ ದಕ್ಷನ ಯಜ್ಞವನ್ನು ಆಗ ಮಾಡಿಸಿದನು.

೪೦. ವಿಶ್ವೆದೇವತೆಗಳೇ ಮೊದಲಾದ ದೇವತೆಗಳು ಆ ಯಜ್ಞದಲ್ಲಿ ಶಿವನನ್ನು ಪ್ರಸನ್ನವಾದ ಮನಸ್ಸಿನಿಂದ ವಿಶೇಷವಾಗಿ ಪೂಜಿಸಿದರು.

೪೧. ಯಜ್ಞಾಗ್ನಿಯಲ್ಲಿ ಬಿದ್ದು ದಹಿಸುತ್ತಿರುವ ಸತೀದೇಹದಿಂದ ಹೊರಹೊರಟ ಅಗ್ನಿಜ್ವಾಲೆಯು ಅಲ್ಲಿನ ಒಂದು ಪರ್ವತದಲ್ಲಿ ಬಿದ್ದಿತು. ಸಮಸ್ತ ಲೋಕಕ್ಕೂ ಸುಖವನ್ನುಂಟುಮಾಡುವ ಆ ಜ್ವಾಲೆಯನ್ನು ದೇವತೆಗಳು ಭಕ್ತಿಯಿಂದ ಪೂಜಿಸಿದರು.

೪೨. ಆ ಜ್ವಾಲೆಯು ಜ್ವಾಲಾಮುಖಿಯೆಂದು ಪ್ರಸಿದ್ಧಳಾದ ಪರಮೇಶ್ವರಿಯಾದಳು. ಆ ದೇವಿಯು ಸಕಲ ಇಷ್ಟಾರ್ಥಗಳನ್ನು ಕೊಡುವವಳೂ ಕೇವಲ ದರ್ಶನದಿಂದಲೇ ಪಾಪವನ್ನು ನಾಶಮಾಡುವವಳೂ ಆಗಿರುವಳು.

**ಇದಾನೀಂ ಪೂಜ್ಯತೇ ಲೋಕೇ ಸರ್ವಕಾಮಫಲಾಪ್ತಯೇ ।**
**ಸಂವಿಧಾಭಿರನೇಕಾಭಿರ್ಮಹೋತ್ಸವಪುರಸ್ಸರಂ ॥ ೪೩ ॥**

**ತತಶ್ಚ ಸಾ ಸತೀದೇವೀ ಹಿಮಾಲಯಸುತಾಽಭವತ್ ।**
**ತಸ್ಯಾಶ್ಚ ಪಾರ್ವತೀ ನಾಮ ಪ್ರಸಿದ್ಧಮಭವತ್ತದಾ ॥ ೪೪ ॥**

**ಸಾ ಪುನಶ್ಚ ಸಮಾರಾಧ್ಯ ತಪಸಾ ಕಠಿಣೇನ ವೈ ।**
**ತಮೇವ ಪರಮೇಶಾನಂ ಭರ್ತಾರಂ ಸಮುಪಾಶ್ರಿತಾ ॥ ೪೫ ॥**

**ಏತತ್ಸರ್ವಂ ಸಮಾಖ್ಯಾತಂ ಯತ್ಪೃಷ್ಟೋಽಹಂ ಮುನೀಶ್ವರ ।**
**ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೪೬ ॥**

**ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ**
**ಸತೀಖಂಡೇ ಪ್ರಥಮೋಽಧ್ಯಾಯಃ**

---

೪೩. ಈಗಲೂ ಜನಗಳು ಆಜ್ವಾಲಾಮುಖೀದೇವಿಯನ್ನು ಸಕಲೇಷ್ಟಸಿದ್ಧಿಗಾಗಿ ಅನೇಕ ವಿಧಗಳಿಂದ ಪೂಜಿಸಿ ಉತ್ಸವಗಳನ್ನಾಚರಿಸುವರು.

೪೪. ಆಮೇಲಾ ಸತೀದೇವಿಯು ಹಿಮವಂತನ ಪುತ್ರಿಯಾಗಿ ಜನಿಸಿದಳು. ಆಗ ಆ ಪರ್ವತಪುತ್ರಿಗೆ "ಪಾರ್ವತೀ" ಎಂದು ಪ್ರಸಿದ್ಧವಾದ ಹೆಸರಾಯಿತು.

೪೫. ಆ ಪಾರ್ವತಿಯು ಕಠಿಣವಾದ ತಪಸ್ಸನ್ನಾಚರಿಸಿ ಪರಮೇಶ್ವರನನ್ನೇ ತಿರುಗಿ ಪತಿಯಾಗಿ ಪಡೆದಳು.

೪೬. ಎಲೈ ನಾರದಮುನಿ! ಈ ರೀತಿಯಾಗಿ ನೀನು ಕೇಳಿದುದೆಲ್ಲವನ್ನೂ ಹೇಳಿರುವೆನು. ಈ ಆಖ್ಯಾನವನ್ನು ಕೇಳಿದರೆ ಸಕಲ ಪಾಪಗಳೂ ನಾಶವಾಗುವುವು. ಇದರಲ್ಲಿ ಸಂಶಯವಿಲ್ಲ ಎಂದನು.

ಇಲ್ಲಿಗೆ ಶಿವಪುರಾಣದಲ್ಲಿನ ರುದ್ರಸಂಹಿತೆಯ ಸತೀಖಂಡದಲ್ಲಿ ಒಂದನೆಯ
ಅಧ್ಯಾಯವು ಮುಗಿದದು.

---

*

॥ ಶ್ರೀಃ ॥

॥ ಓಂ ನಮಃ ಶಿವಾಯ ॥

## ಅಥ ಶ್ರೀ ಶಿವ ಮಹಾ ಪುರಾಣೇ

### ರುದ್ರಸಂಹಿತಾಯಾಂ ಸತೀಖಂಡೇ

## ದ್ವಿತೀಯೋಽಧ್ಯಾಯಃ

॥ ಸೂತ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ನೈಮಿಷಾರಣ್ಯವಾಸಿನಃ ।
ಪಪ್ರಚ್ಛ ಚ ಮುನಿಶ್ರೇಷ್ಠಃ ಕಥಾಂ ಪಾಪಪ್ರಣಾಶಿನೀಂ ॥ ೧ ॥

॥ ನಾರದ ಉವಾಚ ॥

ವಿಧೇ ವಿಧೇ ಮಹಾಭಾಗ ಕಥಾಂ ಶಂಭೋಶ್ಶುಭಾವಹಾಂ ।
ಶೃಣ್ವನ್ ಭವನ್ಮುಖಾಂಭೋಜಾನ್ನ ತೃಪ್ತೋಽಸ್ಮಿ ಮಹಾಪ್ರಭೋ ॥ ೨ ॥

---

### ಎರಡನೆಯ ಅಧ್ಯಾಯವು.

೧. ಸೂತಮುನಿಯು ಹೇಳಿದನು :—ನೈಮಿಷಾರಣ್ಯವಾಸಿಗಳಾದ ಎಲೈ ಮುನಿಗಳೇ! ಈ ರೀತಿಯಾಗಿ ಬ್ರಹ್ಮದೇವನು ಹೇಳಲು, ತಿರುಗಿ ನಾರದಮುನಿ ವರನು ಬ್ರಹ್ಮನನ್ನು ಕುರಿತು ಪಾಪನಾಶಕವಾದ ಶಿವಪಾರ್ವತಿಯರ ಕಥೆಯ ವಿಷಯವಾಗಿ ಹೀಗೆ ಪ್ರಶ್ನಿಸಿದನು.

೨. ನಾರದಮುನಿಯು ಕೇಳಿದನು :—ಮಹಾಮಹಿಮನಾದ ಓ ಬ್ರಹ್ಮನೇ! ಶುಭಕರವಾದ ಶಿವಕಥೆಯನ್ನು ನಿನ್ನ ಮುಖಕಮಲದಿಂದ ಕೇಳಿದಷ್ಟೂ ನನಗೆ ತೃಪ್ತಿ ಯಿಲ್ಲವಾಗಿದೆ.

ಅತಃ ಕಥಯ ತತ್ಸರ್ವಂ ಶಿವಸ್ಯ ಚರಿತಂ ಶುಭಂ ।
ಸತೀಕೀರ್ತ್ಯನ್ವಿತಂ ದಿವ್ಯಂ ಶ್ರೋತುಮಿಚ್ಛಾಮಿ ವಿಶ್ವಕೃತ್ ॥ ೩ ॥

ಸತೀ ಹಿ ಕಥಮುತ್ಪನ್ನಾ ದಕ್ಷದಾರೇಷು ಶೋಭನಾ ।
ಕಥಂ ಹರೋ ಮನಶ್ಚಕ್ರೇ ದಾರಾಹರಣಕರ್ಮಣಿ ॥ ೪ ॥

ಕಥಂ ವಾ ದಕ್ಷಕೋಪೇನ ತ್ಯಕ್ತದೇಹಾ ಸತೀ ಪುರಾ ।
ಹಿಮವತ್ತನಯಾ ಜಾತಾ ಭೂಯೋ ವಾಕಾಶಮಾಗತಾ ॥ ೫ ॥

ಪಾರ್ವತ್ಯಾಶ್ಚ ತಪೋಽತ್ಯುಗ್ರಂ ವಿವಾಹಶ್ಚ ಕಥಂ ತ್ವಭೂತ್ ।
ಕಥಮರ್ಧಶರೀರಸ್ಥಾ ಬಭೂವ ಸ್ಮರನಾಶಿನಃ ॥ ೬ ॥

ಏತತ್ಸರ್ವಂ ಸಮಾಚಕ್ಷ್ವ ವಿಸ್ತರೇಣ ಮಹಾಮತೇ ।
ನಾನ್ಯೋಽಸ್ತಿ ಸಂಶಯಚ್ಛೇತ್ತಾ ತ್ವತ್ಸಮೋ ನ ಭವಿಷ್ಯತಿ ॥ ೭ ॥

---

೩. ಆದುದರಿಂದ ಓ ಜಗತ್ಕರ್ತನೇ! ಸತೀದೇವಿಯ ಚರಿತ್ರೆಯಿಂದೊಡ ಗೂಡಿರುವ ಶಿವಕಥೆಯನ್ನು ಇನ್ನೂ ವಿಸ್ತಾರವಾಗಿ ನಾನು ಕೇಳಲಿಚ್ಛಿಸುವೆನು. ಅದೆಲ್ಲ ವನ್ನೂ ನನಗೆ ವಿವರಿಸಿ ಹೇಳು.

೪. ಮಂಗಳೆಯಾದ ಸತೀದೇವಿಯು ದಕ್ಷಪತ್ನಿಯಲ್ಲಿ ಹೇಗೆ ಜನಿಸಿದಳು? ಶಿವನು ಮದುವೆಯನ್ನು ಮಾಡಿಕೊಳ್ಳಲು ಹೇಗೆ ಮನಸ್ಸುಮಾಡಿದನು ?

೫. ದಕ್ಷನಮೇಲಿನ ಕೋಪದಿಂದ ಸತೀದೇವಿಯು ಶರೀರವನ್ನು ಬಿಟ್ಟು ಪರ ಬ್ರಹ್ಮನಲ್ಲಿ ಲಯವನ್ನು ಹೊಂದಿದ ಬಳಿಕ ತಿರುಗಿ ಹಿಮವಂತನ ಪುತ್ರಿಯಾಗಿ ಹೇಗೆ ಜನಿಸಿದಳು ?

೬. ಮತ್ತು ಆ ಪಾರ್ವತಿಯು ಕಠಿಣವಾಗಿ ತಪ್ಪಸ್ಸನ್ನು ಹೇಗೆ ಆಚರಿ ಸಿದಳು? ಅವಳ ಮದುವೆಯು ಹೇಗೆ ಆಯಿತು? ಮನ್ಮಥವೈರಿಯಾದ ಶಿವನ ಅರ್ಧಾಂಗಿಯಾದ ಬಗೆ ಹೇಗೆ?

೭. ಸರ್ವಜ್ಞನಾದ ಓ ಬ್ರಹ್ಮದೇವನೆ! ಈಗ ನಾನು ಕೇಳುವುದೆಲ್ಲವನ್ನೂ ವಿಸ್ತಾರವಾಗಿ ಹೇಳು. ನೀನು ಹೊರತು ನನ್ನ ಸಂಶಯಗಳನ್ನು ಹೋಗಲಾಡಿಸು ವವರು ಇನ್ನಾರೂ ಇಲ್ಲ ಎಂದು ಪ್ರಾರ್ಥಿಸಲು,

॥ ಬ್ರಹ್ಮೋವಾಚ ॥

ಶೃಣು ತ್ವಂ ಚ ಮುನೇ ಸರ್ವಂ ಸತೀಶಿವಯಶಃ ಶುಭಂ ।
ಪಾವನಂ ಪರಮಂ ದಿವ್ಯಂ ಗುಹಾದ್ಗುಹ್ಯತಮಂ ಪರಂ ॥ ೮ ॥

ಏತಚ್ಛಂಭುಃ ಪುರೋವಾಚ ಭಕ್ತವರ್ಯಾಯ ವಿಷ್ಣವೇ ।
ಪೃಷ್ಟಸ್ತೇನ ಮಹಾಭಕ್ತ್ಯಾ ಪರೋಪಕೃತಯೇ ಮುನೇ ॥ ೯ ॥

ತತಸ್ಸೋಽಪಿ ಮಯಾ ಪೃಷ್ಟೋ ವಿಷ್ಣುಃ ಶೈವವರಸ್ಸುಧೀಃ ।
ಪ್ರೀತ್ಯಾ ಮಹ್ಯಂ ಸಮಾಚಖ್ಯೌ ವಿಸ್ತರಾನ್ಮುನಿಸತ್ತಮ ॥ ೧೦ ॥

ಅಹಂ ತತ್ಕಥಯಿಷ್ಯಾಮಿ ಕಥಾಮೇತಾಂ ಪುರಾತನೀಂ ।
ಶಿವಾಶಿವಯಶೋಯುಕ್ತಾಂ ಸರ್ವಕಾಮಫಲಪ್ರದಾಂ ॥ ೧೧ ॥

---

೮. ಬ್ರಹ್ಮನು ಹೇಳಿದನು:—ಎಲೈ ನಾರದಮುನಿ! ಶಿವಪಾರ್ವತಿಯರ ಮಹಾಕಥೆಯನ್ನು ಹೇಳುವೆನು ಕೇಳು. ಈ ಕಥೆಯು ಶುಭವಾದುದು, ದಿವ್ಯ ವಾದುದು, ತುಂಬಾ ರಹಸ್ಯವಾದುದು.

೯. ಹಿಂದೆ ಈ ಕಥೆಯನ್ನು ಹೇಳಬೇಕೆಂದು ವಿಷ್ಣುವು ಭಕ್ತಿಯಿಂದ ಶಿವ ನನ್ನು ಪ್ರಶ್ನಿಸಿದನು. ಆಗ ಶಿವನು ಲೋಕೋಪಕಾರಕ್ಕಾಗಿ ಶಿವಭಕ್ತಶ್ರೇಷ್ಠನಾದ ವಿಷ್ಣುವಿಗೆ ಈ ತಮ್ಮ ಕಥೆಯನ್ನು ಹೇಳಿರುವನು.

೧೦. ಆಮೇಲೆ ಶೈವಶ್ರೇಷ್ಠನಾದ ಆ ವಿಷ್ಣುವನ್ನು ನಾನು ಕೇಳಲು ಆಗ ಅವನು ನನಗೆ ಆದರದಿಂದ ಈ ಶಿವಕಥೆಯನ್ನು ಹೇಳಿದನು.

೧೧. ವಿಷ್ಣುವು ಹೇಳಿದಂತಹ ಆ ಕಥೆಯನ್ನೇ ಈಗ ನಿನಗೆ ಹೇಳುವೆನು. ಅದು ತುಂಬಾ ಪುರಾತನವಾದುದು. ಸಕಲ ಇಷ್ಟಾರ್ಥಗಳನ್ನುಂಟುಮಾಡುವುದು. ಶಿವ ಮತ್ತು ಪಾರ್ವತಿಯರ ಯಶಸ್ಸನ್ನು ಪ್ರತಿಪಾದಿಸುವುದು. ಇಂತಹ ಪವಿತ್ರವಾದ ಆ ಕಥೆಯನ್ನು ಈಗ ನಿನಗೆ ಹೇಳುವೆನು.

ಪುರಾ ಯದಾ ಶಿವೋ ದೇವೋ ನಿರ್ಗುಣೋ ನಿರ್ವಿಕಲ್ಪಕಃ ।
ಅರೂಪಶ್ಶಕ್ತಿರಹಿತಶ್ಚಿನ್ಮಾತ್ರಸ್ಸದಸತ್ಪರಃ ॥ ೧೨ ॥

ಅಭವತ್ಸಗುಣಸ್ಸೋಽಪಿ ದ್ವಿರೂಪಃ ಶಕ್ತಿಮಾನ್ ಪ್ರಭುಃ ।
ಸೋಮೋ ದಿವ್ಯಾಕೃತಿರ್ವಿಪ್ರ ನಿರ್ವಿಕಾರೀ ಪರಾತ್ಪರಃ ॥ ೧೩ ॥

ತಸ್ಯ ವಾಮಾಂಗಜೋ ವಿಷ್ಣುರ್ಬ್ರಹ್ಮಾಹಂ ದಕ್ಷಿಣಾಂಗಜಃ ।
ರುದ್ರೋ ಹೃದಯತೋ ಜಾತೋಽಭವಚ್ಚ ಮುನಿಸತ್ತಮ ॥ ೧೪ ॥

ಸೃಷ್ಟಿಕರ್ತಾ ಭವಂಬ್ರಹ್ಮಾ ವಿಷ್ಣುಃ ಪಾಲನಕಾರಕಃ ।
ಲಯಕರ್ತಾ ಸ್ವಯಂ ರುದ್ರಸ್ತ್ರಿಧಾಭೂತಃ ಸದಾಶಿವಃ ॥ ೧೫ ॥

---

೧೨. ಹಿಂದೆ ಎಂದರೆ ಸೃಷ್ಟಿಗೆ ಪೂರ್ವದಲ್ಲಿ ಶಿವನು ನಿರ್ಗುಣವೂ, ನಿರಾಕಾರವೂ ಆದ ಪರಬ್ರಹ್ಮಸ್ವರೂಪದಿಂದ ಎಲ್ಲೆಲ್ಲಿಯೂ ವ್ಯಾಪಿಸಿದ್ದನು. ಆ ಬ್ರಹ್ಮಸ್ವರೂಪಕ್ಕೆ ಗುಣಸಂಬಂಧವಾಗಲಿ, ಆಕಾರಾದಿಗಳಾಗಲಿ, ಶಕ್ತಿಗಳಾಗಲೀ ಯಾವುದೂ ಇರಲಿಲ್ಲ. ಪ್ರಕೃತಿಪುರುಷಾದಿ ಭೇದಭಾವಗಳೂ ಇರಲಿಲ್ಲ. ಪರಬ್ರಹ್ಮವೆಂಬ ಹೆಸರಿನಿಂದ ಸಚ್ಚಿದಾನಂದಸ್ವರೂಪನಾಗಿ ಪ್ರಕಾಶಿಸುತ್ತಿದ್ದನು.

೧೩. ಅನಂತರ ಆ ಶಿವನು ಸೃಷ್ಟಿಕಾಲದಲ್ಲಿ ಯಾವ ವಿಕಾರವಿಲ್ಲದವನಾದರೂ ತನ್ನ ಮಾಯೆಯಿಂದ ಸಗುಣನೂ, ದಿವ್ಯವಾದ ಆಕಾರವುಳ್ಳವನೂ, ಸರ್ವೋತ್ಕೃಷ್ಟನೂ ಆದಂತಹ ಈಶ್ವರನಾದನು.

೧೪. ಎಲೈ ನಾರದಮುನಿ! ಆ ಈಶ್ವರನ ಶರೀರದ ಎಡಭಾಗದಿಂದ ವಿಷ್ಣುವು ಜನಿಸಿದನು. ಬಲಭಾಗದಿಂದ ಬ್ರಹ್ಮನಾದ ನಾನು ಜನಿಸಿದೆನು.

೧೫. ಬ್ರಹ್ಮನಾದ ನಾನು ಜಗತ್ತಿನ ಸೃಷ್ಟಿಕರ್ತನಾದೆನು. ವಿಷ್ಣುವು ಪಾಲನ ಕರ್ತನಾದನು. ರುದ್ರನು ಪ್ರಳಯಕರ್ತನಾದನು. ಹೀಗೆ ಶಿವನು ಮೂರು ರೂಪಗಳನ್ನು ಧರಿಸಿದನು.

ತತೋಽಹಂ ಸಮಾರಾಧ್ಯ ಬ್ರಹ್ಮಾ ಲೋಕಪಿತಾಮಹಃ ।
ಪ್ರಜಾಃ ಸಸರ್ಜ ಸರ್ವಾಸ್ತಾಸ್ಸುರಾಸುರನರಾದಿಕಾಃ ॥ ೧೬ ॥

ಸೃಷ್ಟ್ವಾ ಪ್ರಜಾಪತೀನ್ ದಕ್ಷಪ್ರಮುಖಾನ್ ಸುರಸತ್ತಮಾನ್ ।
ಅಮನ್ಯಂ ಸುಪ್ರಸನ್ನೋಽಹಂ ನಿಜಂ ಸರ್ವಮಹೋನ್ನತಂ ॥ ೧೭ ॥

ಮರೀಚಿಮತ್ರಿಂ ಪುಲಹಂ ಪುಲಸ್ತ್ಯಾಂಗಿರಸೌ ಕ್ರತಂ ।
ವಸಿಷ್ಠಂ ನಾರದಂ ದಕ್ಷಂ ಭೃಗುಂ ಚೇತಿ ಮಹಾಪ್ರಭೂನ್ ॥ ೧೮ ॥

ಬ್ರಹ್ಮಾಹಂ ಮಾನಸಾನ್ ಪುತ್ರಾನಸಸರ್ಜಂ ಚ ಯದಾ ಮುನೇ ।
ತದಾ ಮನ್ಮನಸೋ ಜಾತಾ ಚಾರುರೂಪಾ ವರಾಂಗನಾ ॥ ೧೯ ॥

ನಾಮ್ನಾ ಸಂಧ್ಯೇತಿ ವಿಖ್ಯಾತಾ ಸಾಯಂಸಂಧ್ಯಾ ಜಯಂತಿಕಾ ।
ಅತೀವ ಸುಂದರೀ ಸುಭ್ರೂರ್ಮುನಿಚೇತೋವಿಮೋಹನೀ ॥ ೨೦ ॥

---

೧೬. ಲೋಕಪಿತಾಮಹನೆನಿಸಿದ ನಾನು ಆ ಸದಾಶಿವನನ್ನು ಆರಾಧಿಸಿ ಅವನನುಗ್ರಹದಿಂದ ದೇವತೆಗಳು, ರಾಕ್ಷಸರು, ಮನುಷ್ಯರು ಮೊದಲಾದ ಪ್ರಜೆಗಳನ್ನು ಸೃಜಿಸಿದೆನು.

೧೭. ದಕ್ಷನೇ ಮೊದಲಾದ ಪ್ರಜಾಪತಿಗಳನ್ನೂ ದೇವತೆಗಳನ್ನೂ ಸೃಷ್ಟಿಸಿ ಅದರಿಂದ ನಾನೇ ಸರ್ವಶ್ರೇಷ್ಠನೆಂದು ಗರ್ವಿಷ್ಠನಾದೆನು.

೧೮. ಮರೀಚಿ, ಅತ್ರಿ, ಪುಲಹ, ಪುಲಸ್ತ್ಯ, ಅಂಗಿರಸ್ಸು, ಕ್ರತುಮುನಿ, ವಸಿಷ್ಠ, ನಾರದ, ದಕ್ಷ, ಭೃಗು ಇವರೇ ನಾನು ಸೃಷ್ಟಿಸಿದ ಒಂಭತ್ತು ಜನ ಪ್ರಜಾಪತಿಗಳು. ಮತ್ತು ನನ್ನ ಮಾನಸಪುತ್ರರು.

೧೯. ಎಲೈ ನಾರದಮುನಿ! ಹಿಂದೆ ಹೇಳಿದ ಮಾನಸಪುತ್ರರನ್ನು ಸೃಷ್ಟಿಸಿದ ಸಮಯದಲ್ಲಿಯೇ ನನ್ನ ಮನಸ್ಸಿನಿಂದ ಸುಂದರವಾದ ರೂಪವುಳ್ಳ ಓರ್ವ ಉತ್ತಮ ಸ್ತ್ರೀಯು ಜನಿಸಿದಳು.

೨೦. ಆ ಸ್ತ್ರೀಯು ಸಂಧ್ಯೆಯೆಂದು ಪ್ರಸಿದ್ಧಳಾಗಿರುವಳು. ಮತ್ತು ಅವಳಿಗೆ ಸಾಯಂಸಂಧ್ಯಾ'' "ಜಯಂತಿಕಾ" ಎಂಬ ಹೆಸರುಗಳೂ ಇರುವುವು. ಆ ರಮಣಿಯು ಮುನಿಗಳ ಮನಸ್ಸನ್ನೂ ಅಪಹರಿಸುವಂತಹ ಸುಂದರಿಯಾಗಿದ್ದಳು.

**ನ ತಾದೃಶೀ ದೇವಲೋಕೇ ನ ಮರ್ತ್ಯೇ ನ ರಸಾತಲೇ ।**
**ಕಾಲತ್ರಯೇಽಪಿ ವೈ ನಾರೀ ಸಂಪೂರ್ಣಗುಣಶಾಲಿನೀ ॥ ೨೧ ॥**

**ದೃಷ್ಟ್ವಾಹಂ ತಾಂ ಸಮುತ್ಥಾಯ ಚಿಂತಯನ್ ಹೃದಿ ಹೃದ್ಗತಂ ।**
**ದಕ್ಷಾದಯಶ್ಚ ಸ್ರಷ್ಟಾರೋ ಮರೀಚ್ಯಾದ್ಯಾಶ್ಚ ಮತ್ಸುತಾಃ ॥ ೨೨ ॥**

**ಏವಂ ಚಿಂತಯತೋ ಮೇ ಹಿ ಬ್ರಹ್ಮಣೋ ಮುನಿಸತ್ತಮ ।**
**ಮಾನಸಃ ಪುರುಷೋ ಮಂಜುರಾವಿರ್ಭೂತೋ ಮಹಾದ್ಭುತಃ ॥ ೨೩ ॥**

**ಕಾಂಚನೀಕೃತಜಾತಾಭಃ ಪೀನೋರಸ್ಕಃ ಸುನಾಸಿಕಃ ।**
**ಸುವೃತ್ತೋರುಕಟೀಜಂಘೋ ನೀಲವೇಲಿತಕೇಶರಃ ॥ ೨೪ ॥**

**ಲಗ್ನಭ್ರೂಯುಗಲೋ ಲೋಲಃ ಪೂರ್ಣಚಂದ್ರನಿಭಾನನಃ ।**
**ಕಪಾಟಾಯತಸದ್ವಕ್ಷೋ ರೋಮರಾಜಿವಿರಾಜಿತಃ ॥ ೨೫ ॥**

---

೨೧. ಸಕಲ ಸ್ತ್ರೀಗುಣಗಳಿಂದ ಕೂಡಿದ ಆ ಸಂಧ್ಯೆಯಂತಹ ಸುಂದರಿಯು ಸ್ವರ್ಗದಲ್ಲಿಯೂ ಭೂಲೋಕದಲ್ಲಿಯೂ ಪಾತಾಳ (ನಾಗ) ಲೋಕದಲ್ಲಿಯೂ ಸಹ ಇರುವುದಿಲ್ಲ. ಹಿಂದೂ ಇರಲಿಲ್ಲ. ಮುಂದೆಯೂ ಜನಿಸಲಾರಳು.

೨೨. ಅಷ್ಟು ಸುಂದರಿಯಾದ ಆ ಸಂಧ್ಯೆಯನ್ನು ನೋಡಿ ನಾನೂ ದಕ್ಷ ಮತ್ತು ಮರೀಚಿಯೇ ಮೊದಲಾದ ನನ್ನ ಪುತ್ರರೂ ಸಹ ಕಾಮಪರವಶರಾಗಿ ಮನಸ್ಸಿನಲ್ಲಿ ಚಿಂತಿಸತೊಡಗಿದೆವು.

೨೩. ಹಾಗೆ ನಾನು ಚಿಂತಿಸುತ್ತಲಿರಲು ನನ್ನ ಮನಸ್ಸಿನಿಂದ ತುಂಬಾ ಸುಂದರನೂ ಆಶ್ಚರ್ಯಕರನೂ ಆದಂತಹ ಪುರುಷನೋರ್ವನು ಜನಿಸಿದನು.

೨೪-೨೫. ಆ ಪುರುಷನು ಸುವರ್ಣದಂತೆ ಬೆಳಗುವ ಶರೀರಕಾಂತಿಯಿಂದ ಒಪ್ಪುತ್ತಿದ್ದನು. ಉನ್ನತವಾದ ಭುಜ, ಸುಂದರವಾದ ನಾಸಿಕೆ, ತುಂಬಿಕೊಂಡಿದ್ದು ದುಂಡನೆಯದಾಗಿರುವ ತೊಡೆ, ಸೊಂಟ, ಮೊಳಕಾಲು, ವಕ್ರವೂ ಕಪ್ಪನಾಗಿರುವುದೂ ಆದ ತಲೆಗೂದಲು, ಹುಣ್ಣಿಮೆಯ ಚಂದ್ರನಂತಿರುವ ಮುಖ ಹಲಗೆಯಂತೆ ವಿಶಾಲವೂ ದೃಢವೂ ಆದ ಎದೆ, ಆ ಎದೆಯಲ್ಲಿ ಸುಂದರವಾದ ರೋಮರಾಜಿಗಳು ಇವುಗಳಿಂದ ಬಹು ಸುಂದರಪುರುಷನಾಗಿ ಪ್ರಕಾಶಿಸುತ್ತಿದ್ದನು.

ಅಭ್ರಮಾತಂಗಕಾಕಾರಃ ಪೀನೋ ನೀಲಸುವಾಸಕಃ ।
ಆರಕ್ತಪಾಣಿನಯನಮುಖಪಾದಕರೋದ್ಭವಃ ॥ ೨೬ ॥

ಕ್ಷೀಣಮಧ್ಯಶ್ಚಾರುದಂತಃ ಪ್ರಮತ್ತಗಜಬಂಧನಃ ।
ಪ್ರಫುಲ್ಲಪದ್ಮಪತ್ರಾಕ್ಷಃ ಕೇಸರಘ್ರಾಣತರ್ಪಣಃ ॥ ೨೭ ॥

ಕಂಬುಗ್ರೀವೋ ಮೀನಕೇತುಃ ಪ್ರಾಂಶುರ್ಮಕರವಾಹನಃ ।
ಪಂಚಪುಷ್ಪಾಯುಧೋ ವೇಗೀ ಪುಷ್ಪಕೋದಂಡಮಂಡಿತಃ ॥ ೨೮ ॥

ಕಾಂತಃ ಕಟಾಕ್ಷಪಾತೇನ ಭ್ರಾಮಯನ್ನಯನದ್ವಯಂ ।
ಸುಗಂಧಿಮಾರುತೋ ತಾತ ಶೃಂಗಾರರಸಸೇವಿತಃ ॥ ೨೯ ॥

ತಂ ವೀಕ್ಷ್ಯ ಪುರುಷಂ ಸರ್ವೇ ದಕ್ಷಾದ್ಯಾ ಮತ್ಸುತಾಶ್ಚ ತೇ ।
ಔತ್ಸುಕ್ಯಂ ಪರಮಂ ಜಗ್ಮುರ್ವಿಸ್ಮಯಾವಿಷ್ಟಮಾನಸಾಃ ॥ ೩೦ ॥

---

೨೬-೨೮. ಅವನಿಗೆ ಐರಾವತದಂತೆ ಉನ್ನತವೂ ಶುಭ್ರವೂ ಆದ ಆಕಾರವಿದ್ದಿತು. ನೀಲವರ್ಣದ ಸುಂದರವಾದ ಬಟ್ಟೆಯನ್ನುಟ್ಟಿದ್ದನು. ಕೆಂಪಾದ ಅಂಗೈ, ಕಣ್ಣುಗಳು, ಮುಖ, ಅಂಗಾಲು ಮತ್ತು ಉಗುರುಗಳು ಚಿಕ್ಕದಾದ ನಡು, ಸುಂದರವಾದ ದಂತಪಂಕ್ತಿಗಳು, ಕೊಬ್ಬಿದ ಸಲಗಂತೆ ಉನ್ನತವಾದ ಶರೀರ, ಅರಳಿದ ಕಮಲಗಳಂತಿರುವ ಕಣ್ಣುಗಳು, ಸಂಪಿಗೆಯಂತಿರುವ ನಾಸಿಕಾ ಇವುಗಳು ಅವನ ಸೌಂದರ್ಯವನ್ನು ಮತ್ತಷ್ಟು ಹೆಚ್ಚಿಸುತ್ತಿದ್ದವು. ಸುವಾಸನೆಯಾದ ಕೇಸರಪುಷ್ಪವನ್ನು ಧರಿಸಿ ಅದರ ಸುವಾಸನೆಯನ್ನು ಸುತ್ತಲೂ ಹರಡುತ್ತಿದ್ದನು. ಶಂಖದಂತಿರುವ ಕಂಠ, ಎತ್ತರವಾದ ಶರೀರ, ಮೊಸಳೆ ಅಥವಾ ಮೀನಿನ ಧ್ವಜ, ವೇಗವಾದ ಕಾರ್ಯ ಇವುಗಳಿಂದ ಕೂಡಿ ಹೂವಿನ ಐದು ಬಾಣಗಳನ್ನೂ, ಧನುಸ್ಸನ್ನೂ ಧರಿಸಿದ್ದನು.

೨೯. ಅತ್ತಿತ್ತ ದೃಷ್ಟಿಗಳನ್ನು ಚಲಿಸುತ್ತ ಕಣ್ಣುಗಳೆರಡನ್ನು ಸುಂದರವಾಗಿ ತಿರುಗಿಸುತ್ತಲಿದ್ದನು. ಅವನ ಶ್ವಾಸವೂ ಸುವಾಸನೆಯಾಗಿತ್ತು. ಶೃಂಗಾರರಸಮಯನಾಗಿದ್ದನು.

೩೦. ಆ ಪುರುಷನನ್ನು ನೋಡಿ ದಕ್ಷನೇ ಮೊದಲಾದ ನನ್ನ ಪುತ್ರರು ತುಂಬಾ ಆಶ್ಚರ್ಯಗೊಂಡು ಪರಮ ಕುತೂಹಲವುಳ್ಳವರಾದರು.

ಅಭವದ್ವಿಕೃತಂ ತೇಷಾಂ ಮುತ್ಸುತಾನಾಂ ಮನೋ ದ್ರುತಂ ।
ಧೈರ್ಯಂ ನೈವಾಲಭತ್ತಾತ ಕಾಮಾಕುಲಿತಚೇತಸಾಂ ॥ ೩೧ ॥

ಮಾಂ ಸೋಽಪಿ ವೇಧಸಂ ವೀಕ್ಷ್ಯ ಸ್ರಷ್ಟಾರಂ ಜಗತಾಂ ಪತಿಂ ।
ಪ್ರಣಮ್ಯ ಪುರುಷಃ ಪ್ರಾಹ ವಿನಯಾನತಕಂಧರಃ ॥ ೩೨ ॥

॥ ಪುರುಷ ಉವಾಚ ॥

ಕಿಂ ಕರಿಷ್ಯಾಮ್ಯಹಂ ಕರ್ಮ ಬ್ರಹ್ಮನ್ ತತ್ರ ನಿಯೋಜಯ ।
ಮಾನ್ಯೋಽದ್ಯ ಪುರುಷೋ ಯಸ್ಮಾದುಚಿತಃ ಶೋಭತೇ ವಿಧೇ ॥ ೩೩ ॥

ಅಭಿಧಾನಂ ಯೋಗ್ಯಂ ಚ ಸ್ಥಾನಂ ಪತ್ನೀಂ ಚ ಯಾ ಮಮ ।
ತನ್ಮೇ ವದ ತ್ರಿಲೋಕೇಶ ತ್ವಂ ಸ್ರಷ್ಟಾ ಜಗತಾಂ ಪತಿಃ ॥ ೩೪ ॥

॥ ಬ್ರಹ್ಮೋವಾಚ ॥

ಏವಂ ತಸ್ಯ ವಚಃ ಶ್ರುತ್ವಾ ಪುರುಷಸ್ಯ ಮಹಾತ್ಮನಃ ।
ಕ್ಷಣಂ ನ ಕಿಂಚಿತ್ಪ್ರೋವಾಚ ಸ್ವಸ್ರಷ್ಟಾ ಚಾತಿವಿಸ್ಮಿತಃ ॥ ೩೫ ॥

---

೩೧. ಆಗ ಮನ್ಮಥಾವಸ್ಥೆಯಿಂದ ಕೂಡಿರುವ ಆ ದಕ್ಷಾದಿಗಳ ಮನಸ್ಸು ವಿಕಾರವನ್ನು ಹೊಂದಿ ತುಂಬಾ ಚಂಚಲವಾಯಿತು.

೩೨. ಆ ಪುರುಷನು ಜಗತ್ಕರ್ತನೂ ಜಗತ್ಪತಿಯೂ ಆದ ನನ್ನನ್ನು ನೋಡಿ ನಮಸ್ಕಾರಮಾಡಿ ವಿನಯದಿಂದ ಕತ್ತನ್ನು ಬಗ್ಗಿಸಿ ನಿಂತು ಹೀಗೆ ಹೇಳಿದನು.

೩೩. ಪುರುಷನು ಹೇಳಿದನು :— ಓ ಬ್ರಹ್ಮನೇ ! ನಾನು ಯಾವ ಕಾರ್ಯವನ್ನು ಮಾಡಬೇಕೋ ಅದರಲ್ಲಿ ನನ್ನನ್ನು ನಿಯಮಿಸು. ಪುರುಷನು ತನಗೆ ಉಚಿತವಾದ ಕೆಲಸದಲ್ಲಿ ನಿರತನಾಗಿದ್ದರೆ ಶೋಭಿಸುವನು. ಮತ್ತೂ ಅದೇ ನ್ಯಾಯವಾದುದು.

೩೪. ಮೂರು ಲೋಕಗಳೊಡೆಯನಾದ ಓ ಬ್ರಹ್ಮನೇ ! ನನಗೆ ಯೋಗ್ಯವಾದ ಹೆಸರನ್ನೂ ವಾಸಸ್ಥಾನವನ್ನೂ ಪತ್ನಿಯನ್ನೂ ಕಲ್ಪಿಸು. ಏಕೆಂದರೆ ನೀನು ಈ ಜಗತ್ತಿಗೆ ಸೃಷ್ಟಿಕರ್ತನೂ ಒಡೆಯನೂ ಆಗಿರುವೆ.

೩೫-೩೬. ಬ್ರಹ್ಮನು ಹೇಳಿದನು :— ಈರೀತಿಯಾದ ಆ ಪುರುಷನ ಮಾತುಗಳನ್ನು ಕೇಳಿ ತುಂಬಾ ಆಶ್ಚರ್ಯಗೊಂಡು ಸ್ವಲ್ಪ ಹೊತ್ತು ಏನನ್ನೂ ಹೇಳದೆ ಸುಮ್ಮ

ಅತೋ ಮನಸ್ಸುಸಂಯಮ್ಯ ಸಮ್ಯಗುತ್ಸೃಜ್ಯ ವಿಸ್ಮಯಂ ।
ಅಪೋಚತ್ಪುರುಷಂ ಬ್ರಹ್ಮಾ ತತ್ಕಾಮಂ ಚ ಸಮಾವಹ್ ॥ ೩೬ ॥

॥ ಬ್ರಹ್ಮೋವಾಚ ॥

ಅನೇನ ತ್ವಂ ಸ್ವರೂಪೇಣ ಪುಷ್ಪಬಾಣೈಶ್ಚ ಪಂಚಭಿಃ ।
ಮೋಹಯ್ನ್ ಪುರುಷಾಂಸ್ತ್ರೀಂಶ್ಚ ಕುರು ಸೃಷ್ಟಿಂ ಸನಾತನೀಂ ॥ ೩೭ ॥

ಅಸ್ಮಿನ್ ಜೀವಾಶ್ಚ ದೇವಾದ್ಯಾಸ್ತ್ರೈಲೋಕ್ಯೇ ಸಚರಾಚರೇ ।
ಏತೇ ಸರ್ವೇ ಭವಿಷ್ಯಂತಿ ನ ಕ್ಷಮಾಸ್ತ್ವ ವ ಲಂಘನೇ ೩೮ ॥

ಅಹಂ ವಾ ವಾಸುದೇವೋ ವಾ ಸ್ಥಾಣುರ್ವಾ ಪುರುಷೋತ್ತಮ ।
ಭವಿಷ್ಯಾಮಸ್ತವ ವಶೇ ಕಿಮನ್ಯೇ ಪ್ರಾಣಧಾರಕಾಃ ॥ ೩೯ ॥

ಪ್ರಚ್ಛನ್ನರೂಪೋ ಜಂತೂನಾಂ ಪ್ರವಿಶನ್ ಹೃದಯಂ ಸದಾ ।
ಸುಖಹೇತುಃ ಸ್ವಯಂ ಭೂತ್ವಾ ಸೃಷ್ಟಿಂ ಕುರು ಸನಾತನೀಂ ॥ ೪೦ ॥

---

ನಿಷ್ಟು, ಬಳಿಕ ಆಶ್ಚರ್ಯವನ್ನು ತ್ಯಜಿಸಿ ಮನಸ್ಸನ್ನು ಸ್ಥಿರವಾಗಿ ಮಾಡಿಕೊಂಡು ಆ ಪುರುಷನನ್ನು ಕುರಿತು ಹೀಗೆ ಹೇಳಿದೆನು.

೩೭. ಬ್ರಹ್ಮನು ಹೇಳಿದನು :—ಎಲೈ ಪುರುಷನೇ ! ನಿನ್ನ ಈ ಸ್ವರೂಪದಿಂದ ಈ ಐದು ಪುಷ್ಪಬಾಣಗಳೊಡನೆ ಸ್ತ್ರೀಪುರುಷರನ್ನು ಮೋಹಗೊಳಿಸುತ್ತಾ ಅನಾದಿಯಾದ ಈ ಸೃಷ್ಟಿಯನ್ನು ಬೆಳೆಸುವವನಾಗು.

೩೮. ಸ್ಥಾವರಜಂಗಮಾತ್ಮಕವಾಗಿರುವ ಈ ಜಗತ್ತಲ್ಲಿರುವ ದೇವತೆಗಳೇ ಮೊದಲಾದ ಜೀವರೆಲ್ಲರೂ ಸಹ ನಿನ್ನ ಅಧೀನರಾಗಿರುವರು.

೩೯. ನಾನೂ (ಬ್ರಹ್ಮನೂ) ವಾಸುದೇವನೂ, ಪುರುಷೋತ್ತಮನಾದ ರುದ್ರನೂ ಸಹ ನಿನ್ನ ಅಧೀನರಾಗಿರುವೆವು ಅಂದಮೇಲೆ ಮಿಕ್ಕ ಸಾಮಾನ್ಯ ಪ್ರಾಣಿಗಳ ಮಾತೇನು ?

೪೦. ಅದೃಶ್ಯವಾದ ರೂಪದಿಂದ ಪ್ರಾಣಿಗಳ ಹೃದಯವನ್ನು ಪ್ರವೇಶಿಸಿ ಯೋಗ್ಯವಾಗಿ ಅವರಿಗೆ ಕಾಮಸುಖದಲ್ಲಿ ಪ್ರವೃತ್ತಿಯನ್ನುಂಟುಮಾಡುತ್ತಾ ಆ ಮೂಲಕ ಅನಾದಿಯಾದ ಈ ಸೃಷ್ಟಿಯನ್ನು ವೃದ್ಧಿಗೊಳಿಸು.

ತ್ವತ್ಪುಷ್ಪಬಾಣಸ್ಯ ಸದಾ ಸುಖಲಕ್ಷ್ಯಂ ಮನೋ ದೃತಂ ।
ಸರ್ವೇಷಾಂ ಪ್ರಾಣಿನಾಂ ನಿತ್ಯಂ ಸದಾ ಮದಕರೋ ಭವಾನ್ ॥ ೪೧ ॥

ಇತಿ ತೇ ಕರ್ಮ ಕಥಿತಂ ಸೃಷ್ಟಿಪ್ರಾವರ್ತಕಂ ಪುನಃ ।
ನಾಮಾನ್ಯೇತೇ ವದಿಷ್ಯಂತಿ ಸುತಾ ಮೇ ತವ ತತ್ತ್ವತಃ ॥ ೪೨ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾಹಂ ಸುರಶ್ರೇಷ್ಠ ಸ್ವಸುತಾನಾಂ ಮುಖಾನಿ ಚ ।
ಆಲೋಕ್ಯ ಸ್ವಾಸನೇ ಪಾದ್ಮೇ ಪ್ರೋಪವಿಷ್ಟೋಽಭವಂ ಕ್ಷಣಂ ॥ ೪೩ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಸತೀಖಂಡೇ
ದ್ವಿತಿಯೋಽಧ್ಯಾಯಃ.



---

೪೧. ಜನಗಳ ಮನಸ್ಸೇ ನಿನ್ನ ಪುಷ್ಪಬಾಣಗಳಿಗೆ ಸುಖವಾದ ಗುರಿಯು. ಎಲ್ಲಾ ಪ್ರಾಣಿಗಳಿಗೆ ನಿತ್ಯವೂ ಕಾಮಸುಖವನ್ನುಂಟುಮಾಡುತ್ತಿರು.

೪೨. ಎಲೈ ಪುರುಷನೇ, ಈ ರೀತಿಯಾಗಿ ಸೃಷ್ಟಿಯನ್ನು ನಡೆಯಿಸುವ ನಿನ್ನ ಕಾರ್ಯವನ್ನು ಹೇಳಿರುವೆನು. ನಿನ್ನ ನಿಜವಾದ ಹೆಸರನ್ನು ನನ್ನ ಮಾನಸಪುತ್ರರಾದ ದಕ್ಷಾದಿಗಳು ಹೇಳುವರು.

೪೩. ಬ್ರಹ್ಮನು ಹೇಳಿದನು:— ಎಲೈ ದೇವಋಷಿಯೇ! ಈ ರೀತಿಯಾಗಿ ನಾನು ಹೇಳಿ, ದಕ್ಷನೇ ಮೊದಲಾದ ಮಾನಸ ಪುತ್ರರ ಮುಖವನ್ನು ನೋಡಿ ನನ್ನ ಆಸನವಾದ ಕಮಲದಲ್ಲಿ ಸ್ವಲ್ಪಹೊತ್ತು ಸುಮ್ಮನೆ ಕುಳಿತೆನು.

ಇಲ್ಲಿಗೆ ಶ್ರೀ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ
ಎರಡನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ತೃತೀಯೋಽಧ್ಯಾಯಃ

---

|| ಬ್ರಹ್ಮೋವಾಚ ||

ತತಸ್ತೇ ಮುನಯಸ್ಸರ್ವೇ ತದಭಿಪ್ರಾಯವೇದಿನಃ ।
ಚಕ್ರುಸ್ತದುಚಿತಂ ನಾಮ ಮರೀಚಿಪ್ರಮುಖಾಸ್ಸುತಾಃ || ೧ ||

ಮುಖಾವಲೋಕನಾದೇವ ಜ್ಞಾತ್ವಾ ವೃತ್ತಾಂತಮನ್ಯತಃ ।
ದಕ್ಷಾದಯಶ್ಚ ಸ್ರಷ್ಟಾರಃ ಸ್ಥಾನಂ ಪತ್ನೀಂ ಚ ತೇ ದದುಃ || ೨ ||

---

### ಮೂರನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು:— ಆಮೇಲೆ ಮರೀಚಿ ಮೊದಲಾದ ಬ್ರಹ್ಮ ಮಾನಸ ಪುತ್ರರು ನನ್ನ ಅಭಿಪ್ರಾಯವನ್ನು ತಿಳಿದು ಆ ಪುರುಷನಿಗೆ ಯೋಗ್ಯವಾದ ಹೆಸರನ್ನು ಕೊಟ್ಟರು.

೨. ಮತ್ತು ದಕ್ಷನೇ ಮೊದಲಾದ ಪ್ರಜಾಪತಿಗಳೂ ಸಹ ಬ್ರಹ್ಮನು ತಮ್ಮ ಮುಖವನ್ನು ನೋಡಿದುದರಿಂದಲೇ ಸಕಲ ವಿಚಾರವನ್ನೂ ತಿಳಿದು ಆ ಪುರುಷನಿಗೆ ಪತ್ನಿ ಮತ್ತು ಸ್ಥಾನ ಇವುಗಳನ್ನು ಕಲ್ಪಿಸಿದರು.

ತತೋ ನಿಶ್ಚಿತ್ಯ ನಾಮಾನಿ ಮರೀಚಿಪ್ರಮುಖಾ ದ್ವಿಜಾಃ ।
ಊಚುಸ್ಸಂಗತಮೇತಸ್ಮೈ ಪುರುಷಾಯ ಮಮಾತ್ಮಜಾಃ ॥ ೩ ॥

॥ ಋಷಯ ಊಚುಃ ॥

ಯಸ್ಮಾತ್ಪ್ರಮಥ್ಯ ಚೇತಸ್ತ್ವಂ ಜಾತೋಽಸ್ಮಾಕಂ ತಥಾ ವಿಧೇಃ ।
ತಸ್ಮಾನ್ಮನ್ಮಥನಾಮಾ ತ್ವಂ ಲೋಕೇ ಖ್ಯಾತೋ ಭವಿಷ್ಯಸಿ ॥ ೪ ॥

ಜಗತ್ಸು ಕಾಮರೂಪಸ್ತ್ವಂ ತ್ವತ್ಸಮೋ ನ ಹಿ ವಿದ್ಯತೇ ।
ಅತಸ್ತ್ವಂ ಕಾಮನಾಮಾಪಿ ಖ್ಯಾತೋ ಭವ ಮನೋಭವ ॥ ೫ ॥

ಮದನಾನ್ಮದನಾಖ್ಯಸ್ತ್ವಂ ಜಾತೋ ದರ್ಪಾತ್ಸದರ್ಪಕಃ ।
ತಸ್ಮಾತ್ಕಂದರ್ಪನಾಮಾಪಿ ಲೋಕೇ ಖ್ಯಾತೋ ಭವಿಷ್ಯಸಿ ॥ ೬ ॥

ತ್ವತ್ಸಮಂ ಸರ್ವದೇವಾನಾಂ ಯದ್ವೀರ್ಯಂ ನ ಭವಿಷ್ಯತಿ ।
ತತಃ ಸ್ಥಾನಾನಿ ಸರ್ವಾಣಿ ಜಗದ್ವ್ಯಾಪೀ ಭವಾಂಸ್ತತಃ ॥ ೭ ॥

---

೩. ಅನಂತರ ಮರೀಚಿ ಮೊದಲಾದ ಮುನಿಗಳು ಪರಸ್ಪರ ಸಮಾಲೋಚನೆಯನ್ನು ಮಾಡಿ ಆ ಪುರುಷನಿಗೆ ಯೋಗ್ಯವಾದ ಹೆಸರನ್ನು ಹೀಗೆ ನಿಶ್ಚಯಿಸಿದರು-

೪. ಮರೀಚಿ ಮೊದಲಾದ ಋಷಿಗಳು ಹೇಳಿದರು:-- ಎಲೈ ಪುರುಷನೇ, ನೀನು ಜನಿಸುವಾಗಲೇ ನಮ್ಮೆಲ್ಲರ ಮತ್ತೂ ಬ್ರಹ್ಮನ ಮನಸ್ಸನ್ನು ಪ್ರಮಥಿಸಿ (ವಿಕಾರಗೊಳಿಸಿ) ಜನಿಸಿದುದರಿಂದ ಇನ್ನು ಮುಂದೆ ನೀನು "ಮನ್ಮಥ" ನೆಂದು ಲೋಕದಲ್ಲಿ ಪ್ರಸಿದ್ಧಿಯನ್ನು ಹೊಂದುವೆ

೫. ಎಲೈ ಮನ್ಮಥನೇ, ಜಗತ್ತಿನಲ್ಲಿ ನಿನ್ನಂತಹ ಸುಂದರಪುರುಷನು ಮತ್ತೊಬ್ಬನಿಲ್ಲ. ಆದುದರಿಂದ ನೀನು "ಕಾಮ" ನೆಂದೂ ಲೋಕದಲ್ಲಿ ಪ್ರಸಿದ್ಧಿಯನ್ನು ಹೊಂದುವೆ!

೬. ನೀನು ಜನಗಳಿಗೆ ಕಾಮಮದವೇರುವಂತೆ ಮಾಡುವುದರಿಂದಲೂ, ಜನಿಸುವಾಗ ದರ್ಪಯುಕ್ತನಾಗಿ ಜನಿಸಿದುದರಿಂದಲೂ ಮದನ ಕಂದರ್ಪವೆಂಬ ಹೆಸರುಗಳಿಂದಲೂ ಪ್ರಸಿದ್ಧನಾಗುವೆ.

೭. ಯಾವ ದೇವತೆಗಳೂ ನಿನ್ನನ್ನು ವೀರ್ಯದಲ್ಲಿ ಸರಿಗಟ್ಟಲಾರರು. ಜಗತ್ತಿನ ಸ್ಥಾನಗಳೆಲ್ಲವೂ ನಿನ್ನ ವಶವೇ ಆಗಿರುವವು. ಆದುದರಿಂದ ನೀನು ಜಗತ್ತನ್ನು ವ್ಯಾಪಿಸಿ ಇರುವೆ.

ದಕ್ಷೋಽಯಂ ಭವತಃ ಪತ್ನೀಂ ಸ್ವಯಂ ದಾಸ್ಯತಿ ಕಾಮಿನೀಂ ।
ಆದ್ಯಃ ಪ್ರಜಾಪತಿರ್ಯೋೀ ಹಿ ಯಥೇಷ್ಟಂ ಪುರುಷೋತ್ತಮಃ ॥ ೮ ॥

ಏಷಾ ಚ ಕನ್ಯಕಾ ಚಾರುರೂಪಾ ಬ್ರಹ್ಮಮನೋಭವಾ ।
ಸಂಧ್ಯಾ ನಾಮ್ನೇತಿ ವಿಖ್ಯಾತಾ ಸರ್ವಲೋಕೇ ಭವಿಷ್ಯತಿ ॥ ೯ ॥

ಬ್ರಹ್ಮಣೋ ಧ್ಯಾಯತೋ ಯಸ್ಮಾತ್ಸಮ್ಯಗ್ಜಾತಾ ವರಾಂಗನಾ ।
ಅತಃ ಸಂಧ್ಯೇತಿ ವಿಖ್ಯಾತಾ ಕ್ರಾಂತಾಭಾ ತುಲ್ಯಮಲ್ಲಿಕಾ ॥ ೧೦ ॥

॥ ಬ್ರಹ್ಮೋವಾಚ ॥

ಕೌಸುಮಾನಿ ತಥಾಸ್ತ್ರಾಣಿ ಪಂಚಾಽಽದಾಯ ಮನೋಭವಃ ।
ಪ್ರಚ್ಛನ್ನರೂಪೀ ತತ್ರೈವ ಚಿಂತಯಾಮಾಸ ನಿಶ್ಚಯಂ ॥ ೧೧ ॥

ಹರ್ಷಣಂ ರೋಚನಾಖ್ಯಂ ಚ ಮೋಹನಂ ಶೋಷಣಂ ತಥಾ ।
ಮಾರಣಂ ಚೇತಿ ಪ್ರೋಕ್ತಾನಿ ಮುನಿಮೋಹಕರಾಣ್ಯಪಿ ॥ ೧೨ ॥

---

೮. ಪುರುಷಶ್ರೇಷ್ಠನೂ ಪ್ರಜಾಪತಿಗಳಲ್ಲಿ ಮೊದಲನೆಯವನೂ ಆದಂತಹ ಈ ದಕ್ಷಪ್ರಜಾಪತಿಯು ನಿನಗೆ ಯೋಗ್ಯಳಾದ ಪತ್ನಿಯನ್ನು ಕೊಡುವನು.

೯. ಬ್ರಹ್ಮನ ಮನಸ್ಸಿನಿಂದ ಜನಿಸಿದ ಈ ಸುಂದರಿಯಾದ ಕನ್ಯೆಯು "ಸಂಧ್ಯಾ" ಎಂಬ ಹೆಸರಿನಿಂದ ಲೋಕಗಳಲ್ಲಿ ಪ್ರಸಿದ್ಧಳಾಗುವಳು.

೧೦. ಮಲ್ಲಿಕಾಲತೆಯಂತೆ ತುಂಬಾ ಕಾಂತಿಮತಿಯೂ, ಸುಂದರಿಯೂ ಆದ ಈ ಕನ್ಯೆಯು ಬ್ರಹ್ಮನು ದೃಢವಾಗಿ ಧ್ಯಾನಿಸುತ್ತಿರುವಾಗ ಜನಿಸಿದುದರಿಂದ ಸಂಧ್ಯೆ ಎಂದು ಇನ್ನು ಮುಂದೆ ಪ್ರಸಿದ್ಧಳಾಗುವಳು.

೧೧. ಬ್ರಹ್ಮನು ಹೇಳಿದನು:— ಬಳಿಕ ಮನ್ಮಥನು ತನ್ನ ಐದು ಪುಷ್ಪಬಾಣಗಳನ್ನು ತೆಗೆದುಕೊಂಡು ಅಲ್ಲಿಯೇ ಅಂತರ್ಧಾನವಾಗಿದ್ದು ಹೀಗೆ ಆಲೋಚಿಸಿದನು.

೧೨. ಹರ್ಷಣ, ರೋಚನ, ಮೋಹನ, ಶೋಷಣ, ಮಾರಣಗಳೆಂದು ಹೆಸರುಳ್ಳ ಈ ಐದು ಕುಸುಮಬಾಣಗಳು ಮುನಿಗಳಿಗೂ ಮೋಹವನ್ನುಂಟುಮಾಡುವುವು.

ಬ್ರಹ್ಮಣಾ ಮಮ ಯತ್ಕರ್ಮ ಸಮುದ್ದಿಷ್ಟಂ ಸನಾತನಂ ।
ತದಿಹೈವ ಕರಿಷ್ಯಾಮಿ ಮುನಿನಾಂ ಸನ್ನಿಧೌ ವಿಧೇಃ ॥ ೧೩ ॥

ತಿಷ್ಠಂತಿ ಮುನಯಶ್ಚಾತ್ರ ಸ್ವಯಂ ಚಾಪಿ ಪ್ರಜಾಪತಿಃ ।
ಏತೇಷಾಂ ಸಾಕ್ಷಿಭೂತಂ ಮೇ ಭವಿಷ್ಯತ್ಯದ್ಯ ನಿಶ್ಚಯಂ ॥ ೧೪ ॥

ಸಂಧ್ಯಾಪಿ ಬ್ರಹ್ಮಣಾ ಪ್ರೋಕ್ತಾ ಚೇದಾನೀಮೇವ ಯದ್ವಚಃ ।
ಇಹ ಕರ್ಮ ಪರೀಕ್ಷ್ಯೈವ ಪ್ರಯೋಗಾನ್ಮೋಹಯಾಮ್ಯಹಂ ॥ ೧೫ ॥

॥ ಬ್ರಹ್ಮೋವಾಚ ॥

ಇತಿ ಸಂಚಿಂತ್ಯ ಮನಸಾ ನಿಶ್ಚಿತ್ಯ ಚ ಮನೋಭವಃ ।
ಪುಷ್ಪಜ್ಯಾಂ ಪುಷ್ಪಜಾತಸ್ಯ ಯೋಜಯಾಮಾಸ ಮಾರ್ಗಣೈಃ ॥ ೧೬ ॥

ಆಲೀಢಸ್ಥಾನಮಾಸಾದ್ಯ ಧನುರಾಕೃಷ್ಯ ಯತ್ನತಃ ।
ಚಕಾರ ವಲಯಾಕಾರಂ ಕಾಮೋ ಧನ್ವಿವರಸ್ತದಾ ॥ ೧೭ ॥

---

೧೩. ಬ್ರಹ್ಮನು - ಅನಾದಿಯಾದ ಯಾವ ಸೃಷ್ಟಿಪ್ರವರ್ತನಕರ್ಮವನ್ನು ನಿಯಮಿಸಿರುವನೋ ಆ ಕಾರ್ಯವನ್ನು ಇಲ್ಲಿಯೇ ಈ ಮುನಿಗಳ ಮತ್ತು ಬ್ರಹ್ಮನ ಎದುರಿನಲ್ಲಿ ಮಾಡಿ ನೋಡುವೆನು.

೧೪. ಇಲ್ಲಿ ಮರೀಚಿ ಮೊದಲಾದ ಮುನಿಗಳೂ ದಕ್ಷನೇ ಮೊದಲಾದ ಪ್ರಜಾ ಪತಿಗಳೂ ಸೇರಿರುವರು. ಇವರೆಲ್ಲರ ಸಾಕ್ಷಿಯಾಗಿ ನನ್ನ ಕಾರ್ಯವನ್ನು ಮಾಡುವೆನು.

೧೫. ಪರಮಸುಂದರಿಯಾದ ಸಂಧ್ಯೆಯೂ ಇಲ್ಲಿರುವಳು. ಬ್ರಹ್ಮನೂ ಸಹ ನಾನೂ, ವಾಸುದೇವನೂ, ರುದ್ರನೂ ಸಹ ನಿನ್ನ ಅಧೀನರಾಗಿರುವೆವೆಂದು ಈಗ ತಾನೆ ಹೇಳಿರುವನು ಇಂತಹ ನನ್ನ ಕಾರ್ಯವನ್ನು ಮೊದಲು ಇಲ್ಲಿಯೇ ಪರೀಕ್ಷಿಸಿನೋಡಿ ಮುಂದೆ ಎಲ್ಲರನ್ನೂ ಪ್ರಯೋಗಿಸಿ ಮೋಹಗೊಳಿಸುವೆನು.

೧೬. ಬ್ರಹ್ಮನು ಹೇಳಿದನು;—ಹೀಗೆ ಮನಸ್ಸಿನಲ್ಲಿ ಆಲೋಚಿಸಿ ಮನ್ಮಥನು ತನ್ನ ಪುಷ್ಪಧನುಸ್ಸಿನ ಹೆದೆಯನ್ನು ಸಜ್ಜುಗೊಳಿಸಿ ಅದರಲ್ಲಿ ಪುಷ್ಪ ಬಾಣಗಳನ್ನು ಹೂಡಿದನು:

೧೭. ಉತ್ತಮ ಬಿಲ್ಲುಗಾರನಾದ ಆ ಮನ್ಮಥನು ಬಾಣಪ್ರಯೋಗಕ್ಕೆ ಅನು ಕೂಲವಾಗುವಂತೆ ಮಂಡಿಯೂರಿ ನಿಂತು, ಧನುಸ್ಸನ್ನು ಹಿಡಿದೆಳೆದು ಅದನ್ನು ಮಂಡಲಾಕಾರವಾಗುವಂತೆ ಮಾಡಿದನು.

**ಸಂಹಿತೇ ತೇನ ಕೋದಂಡೇ ಮಾರುತಾಶ್ಚ ಸುಗಂಧಯಃ ।**
**ವವುಸ್ತತ್ರ ಮುನಿಶ್ರೇಷ್ಠ ಸಮ್ಯಗಾಹ್ಲಾದಕಾರಿಣಃ ॥ ೧೮ ॥**

**ತತಸ್ತಾನಪಿ ಧಾತ್ರಾದೀನ್ ಸರ್ವಾನೇವ ಚ ಮಾನಸಾನ್ ।**
**ಪೃಥಕ್ಪುಷ್ಪಶರೈಸ್ತೀಕ್ಷ್ಣೈರ್ಮೋಹಯಾಮಾಸ ಮೋಹನಃ ॥ ೧೯ ॥**

**ತತಸ್ತೇ ಮುನಯಸ್ಸರ್ವೇ ಮೋಹಿತಾಶ್ಚಾಪ್ಯಹಂ ಮುನೇ ।**
**ಸಂಹಿತೋ ಮನಸಾ ಕಂಚಿದ್ವಿಕಾರಂ ಪ್ರಾಪುರಾದಿತಃ ॥ ೨೦ ॥**

**ಸಂಧ್ಯಾಂ ಸರ್ವೇ ನಿರೀಕ್ಷಂತಃ ಸವಿಕಾರಂ ಮುಹುರ್ಮುಹುಃ ।**
**ಆಸನ್ ಪ್ರವೃದ್ಧಮದನಾಃ ಸ್ತ್ರೀ ಯಸ್ಮಾನ್ಮದನೈಧಿನೀ ॥ ೨೧ ॥**

**ತತಃ ಸರ್ವಾನ್ಸ ಮದನೋ ಮೋಹಯಿತ್ವಾ ಪುನಃ ಪುನಃ ।**
**ಯಥೇಂದ್ರಿಯವಿಕಾರಂ ತೇ ಪ್ರಾಪುಸ್ತಾನಕರೋತ್ತಥಾ ॥ ೨೨ ॥**

೧೮. ಓ ಮುನಿಶ್ರೇಷ್ಠನೇ, ಹೀಗೆ ಆ ಮನ್ಮಥನು ತನ್ನ ಧನುಸ್ಸಿನಲ್ಲಿ ಬಾಣ ಸಂಧಾನಮಾಡಲು, ಅಲ್ಲಿ ಒಳ್ಳೆಯ ಪರಿಮಳಯುಕ್ತವಾಗಿ ಮನಸ್ಸಿಗೆ ಸಂತೋಷ ವನ್ನುಂಟುಮಾಡುವಂತೆ ಮಂದಮಾರುತಗಳು ಬೀಸತೊಡಗಿದವು.

೧೯. ಆಮೇಲೆ ಮೋಹವನ್ನುಂಟುಮಾಡುವ ಮನ್ಮಥನು ಬ್ರಹ್ಮನೇ ಮೊದ ಲಾದವರನ್ನೂ, ಎಲ್ಲ ಮಾನಸಪುತ್ರರನ್ನೂ ಬೇರೆಬೇರೆಯಾಗಿ ತನ್ನ ಪುಷ್ಪಬಾಣ ಗಳಿಂದ ಹೊಡೆದು ಮೋಹಗೊಳಿಸಿದನು.

೨೦. ಆಮೇಲೆ ಆ ಎಲ್ಲ ಮುನಿಗಳೂ, ಚತುರ್ಮುಖನಾದ ಬ್ರಹ್ಮನೂ ಮೋಹಗೊಂಡವರಾಗಿ, ಮೊದಲು ಮನಸ್ಸಿನಲ್ಲಿ ಸ್ವಲ್ಪ ವಿಕಾರವುಳ್ಳವರಾದರು.

೨೧ ಹೀಗೆ ವಿಕಾರವನ್ನು ಹೊಂದಿದ ಅವರು ಸುಂದರಿಯಾದ ಆ ಸಂಧ್ಯೆಯನ್ನು ಮತ್ತೆ ಮತ್ತೆ ನೋಡುತ್ತಾ ಹೆಚ್ಚಾದ ಕಾಮವಿಕಾರವುಳ್ಳವರಾದರು. ಏಕೆಂದರೆ ಸ್ತ್ರೀಯರು ತಮ್ಮ ರೂಪಲಾವಣ್ಯಾದಿಗಳಿಂದ ಪುರುಷರಿಗೆ ಮದನವಿಕಾರ ವನ್ನು ಹೆಚ್ಚಿಸುವ ಸ್ವಭಾವವುಳ್ಳವರು.

೨೨. ಆಮೇಲೆ ಆ ಮನ್ಮಥನು ಅವರೆಲ್ಲರನ್ನೂ ಪುನಃಪುನಃ ಮೋಹಗೊಳಿಸಿ ಕಾಮವಿಕಾರದಿಂದ ಚಂಚಲರಾಗಿ ತಮ್ಮ ಇಂದ್ರಿಯಗಳನ್ನು ತೃಪ್ತಿಪಡಿಸಬೇಕೆಂಬ ಅಭಿಲಾಷೆಯುಳ್ಳವರಾಗುವ ಹಾಗೆ ಮಾಡಿದನು.

ಉದೀರಿತೇಂದ್ರಿಯೋ ಧಾತಾ ವೀಕ್ಷ್ಯಾಹಂ ಸ ಯದಾ ಚ ತಾಂ ।
ತದೈವ ಚೋನಪಂಚಾಶದ್ಭಾವಾ ಜಾತಾಃ ಶರೀರತಃ ॥ ೨೩ ॥

ಸಾಪಿ ತೈರ್ವೀಕ್ಷ್ಯಮಾಣಾಥ ಕಂದರ್ಪಶರಪಾತನಾತ್ ।
ಚಕ್ರೇ ಮುಹುರ್ಮುಹುರ್ಭಾವಾನ್ ಕಟಾಕ್ಷಾವರಣಾದಿಕಾನ್ ॥ ೨೪ ॥

ನಿಸರ್ಗಸುಂದರೀ ಸಂಧ್ಯಾ ತಾನ್ ಭಾವಾನ್ಮಾನಸೋದ್ಭವಾನ್ ।
ಕುರ್ವಂತ್ಯತಿತರಾಂ ರೇಜೇ ಸ್ವರ್ಣದೀವ ತನೂರ್ಮಿಭಿಃ ॥ ೨೫ ॥

ಅಥ ಭಾವಯುತಾಂ ಸಂಧ್ಯಾಂ ವೀಕ್ಷ್ಯಾಕಾರ್ಷೀತ್ ಪ್ರಜಾಪತಿಃ ।
ಧರ್ಮಾಭಿಲಾಪೂರಿತತನುರಭಿಲಾಷಮಹಂ ಮುನೇ ॥ ೨೬ ॥

---

೨೩. ಆಗ ಕಾಮೋಚ್ಛೆಯಿಂದ ಉದ್ರಿಕ್ತವಾಗಿ ಭೋಗಾತುರವಾದ ಇಂದ್ರಿಯಗಳುಳ್ಳವನಾಗಿ ಬ್ರಹ್ಮನು ಆ ಸಂಧ್ಯೆಯನ್ನು ಯಾವಾಗ ನೋಡಿದನೋ ಆಗಲೇ ಅವನ ಶರೀರದಿಂದ ಮನ್ಮಥವಿಕಾರಾವಸ್ಥೆಯಲ್ಲಿ ಆಗುವ ನಲವತ್ತೊಂಭತ್ತು ಮನೋವೃತ್ತಿವಿಶೇಷರೂಪವಾದ ವಿಕಾರಗಳು ಉತ್ಪನ್ನವಾದವು.

೨೪. ಆಗ ಆ ಸಂಧ್ಯೆಯೂ, ಅವರೆಲ್ಲರಿಂದಲೂ ನೋಡಲ್ಪಟ್ಟವಳಾಗಿ, ಮನ್ಮಥನ ಬಾಣಪ್ರಹಾರದಿಂದುಂಟಾದ ಕಡೆಗಣ್ಣಿನ ಕುಡಿನೋಟವುಳ್ಳವಳೂ ಮತ್ತು ಲಜ್ಜೆಯಿಂದ ಶರೀರವನ್ನು ಮುಚ್ಚಿಕೊಳ್ಳುವುದೇ ಮೊದಲಾದ ಶೃಂಗಾರಚೇಷ್ಟೆಯ ಭಾವಗಳನ್ನು ಪ್ರಕಟಮಾಡುವವಳೂ ಆದಳು.

೨೫. ಸ್ವಭಾವವಾಗಿ ಸುಂದರಿಯಾದ ಆ ಸಂಧ್ಯೆಯು ಮದನವಿಕಾರದಿಂದ ಉಂಟಾದ ಆ ಶೃಂಗಾರಚೇಷ್ಟೆಗಳನ್ನು ಮಾಡುತ್ತಾ ಸಣ್ಣಸಣ್ಣ ಅಲೆಗಳಿಂದ ಕೂಡಿದ ಗಂಗಾನದಿಯಂತೆ ಶೋಭಿಸುತ್ತಿದ್ದಳು.

೨೬. ಆಮೇಲೆ ಹೀಗೆ ಶೃಂಗಾರಚೇಷ್ಟೆಗಳಿಂದ ಕೂಡಿ ಒಪ್ಪುತ್ತಿರುವ ಆ ಸಂಧ್ಯೆಯನ್ನು ನೋಡುತ್ತಾ ಬ್ರಹ್ಮದೇವನು ಬೆವರಿನಿಂದ ಕೂಡಿದ ಶರೀರವುಳ್ಳವನಾಗಿ ಅವಳೊಡನೆ ಸಂಭೋಗದಲ್ಲಿ ಅಭಿಲಾಷೆಯುಳ್ಳವನಾದನು.

ತತಸ್ತೇ ಮುನಯಸ್ಸರ್ವೇ ಮರಿಚ್ಯತ್ರಿಮುಖಾ ಅಪಿ ।
ದಕ್ಷಾದ್ಯಾಶ್ಚ ಸುರಶ್ರೇಷ್ಠ ಪ್ರಾಪುರ್ವೈಕಾರಿಕೇಂದ್ರಿಯಂ ॥ ೨೭ ॥

ದೃಷ್ಟ್ವಾ ತಥಾವಿಧಾನ್ ದಕ್ಷಮರೀಚಿಪ್ರಮುಖಾಂಶ್ಚ ಮಾಂ ।
ಸಂಧ್ಯಾಂ ಚ ಕರ್ಮಣಿ ನಿಜೇ ಶ್ರದ್ಧಧೇ ಮದನಸ್ತದಾ ॥ ೨೮ ॥

ಯದಿದಂ ಬ್ರಹ್ಮಣಾ ಕರ್ಮ ಮಮೋದ್ದಿಷ್ಟಂ ಮಯಾಪಿ ತತ್ ।
ಕರ್ತುಂ ಶಕ್ಯಮಿತಿ ಹ್ಯದ್ಧಾ ಭಾವಿತಂ ಸ್ವಭುವಾ ತದಾ ॥ ೨೯ ॥

ಇತ್ಥಂ ಪಾಪಗತಿಂ ವೀಕ್ಷ್ಯ ಭ್ರಾತೃಣಾಂ ಚ ಪಿತುಸ್ತಥಾ ।
ಧರ್ಮಃ ಸಸ್ಮಾರ ಶಂಭುಂ ವೈ ತಥಾ ಧರ್ಮಾವನಂ ಪ್ರಭುಂ ॥ ೩೦ ॥

---

೨೭. ಆಮೇಲೆ ಆ ಮರೀಚಿಯೇ ಮೊದಲಾದ ಮುನಿಗಳೂ ದಕ್ಷನೇ ಮೊದಲಾದ ಪ್ರಜಾಪತಿಗಳೂ ಸಹ ಮದನವಿಕಾರವನ್ನು ಹೊಂದಿದ ಇಂದ್ರಿಯಗಳುಳ್ಳವರಾದರು.

೨೮. ಆಗ ಮನ್ಮಥನು, ಆ ರೀತಿ ದಕ್ಷ ಮತ್ತು ಮರೀಚಿಯೇ ಮೊದಲಾದವರೂ, ಬ್ರಹ್ಮನೂ, ಸಂಧ್ಯೆಯೂ ಸಹ ಮದನವಿಕಾರವುಳ್ಳವರಾದುದನ್ನು ನೋಡಿ ತಾನು ಮಾಡುವ ಕೆಲಸದಲ್ಲಿ ತನಗೆ ಸಾಮರ್ಥ್ಯವಿರುವುದೆಂದು ನಂಬಿಕೆಯುಳ್ಳವನಾದನು.

೨೯. ಬ್ರಹ್ಮನು ನನಗೆ ಯಾವ ಕೆಲಸವನ್ನು ಮಾಡಬೇಕೆಂದು ನಿಯಮಿಸಿರುವನೋ ಆ ಕೆಲಸವನ್ನು ನಿರ್ವಹಿಸಲು ನನಗೆ ಶಕ್ತಿಯಿದೆಯೆಂದು ಮನ್ಮಥನು ಆಗ ದೃಢವಾದ ನಂಬಿಕೆಯುಳ್ಳವನಾದನು.

೩೦. ಈರೀತಿ ಸಹೋದರರು ಸಹೋದರಿಯಲ್ಲಿಯೂ ತಂದೆಯು (ಬ್ರಹ್ಮನು) ಮಗಳ (ಸಂಧ್ಯೆ) ಲ್ಲಿಯೂ ಪಾಪದೃಷ್ಟಿಯುಳ್ಳವರಾಗಿರುವುದನ್ನು ಧರ್ಮಪುರುಷನು ನೋಡಿ ಧರ್ಮರಕ್ಷಕನೂ ಜಗತ್ಪ್ರಭುವೂ ಆದ ಶಿವನನ್ನು ಸ್ಮರಿಸಿದನು.

**ಸಂಸ್ಮರನ್ಮನಸಾ ಧರ್ಮಃ ಶಂಕರಂ ಧರ್ಮಪಾಲಕಂ ।**
**ತುಷ್ಟಾವ ವಿವಿಧೈರ್ವಾಕ್ಯೈರ್ದೀನೋ ಭೂತ್ವಾಜಸಂಭವಃ**

**॥ ಧರ್ಮ ಉವಾಚ ॥**

**ದೇವದೇವ ಮಹಾದೇವ ಧರ್ಮಪಾಲ ನಮೋಽಸ್ತು ತೇ ।**
**ಸೃಷ್ಟಿಸ್ಥಿತಿವಿನಾಶಾನಾಂ ಕರ್ತಾ ಶಂಭೋ ತ್ವಮೇವ ಹಿ ॥ ೩೨ ॥**

**ಸೃಷ್ಟೌ ಬ್ರಹ್ಮಾ ಸ್ಥಿತೌ ವಿಷ್ಣುಃ ಪ್ರಳಯೇ ಹರರೂಪಧೃಕ್ ।**
**ರಜಸ್ಸತ್ತ್ವತಮೋಭಿಶ್ಚ ತ್ರಿಗುಣೈರಗುಣಃ ಪ್ರಭೋ ॥ ೩೩ ॥**

**ನಿಸ್ತ್ರೈಗುಣ್ಯಃ ಶಿವಸ್ಸಾಕ್ಷಾತ್ತುರ್ಯಶ್ಚ ಪ್ರಕೃತೇಃ ಪರಃ ।**
**ನಿರ್ಗುಣೋ ನಿರ್ವಿಕಾರೀ ತ್ವಂ ನಾನಾಲೀಲಾವಿಶಾರದಃ ॥ ೩೪ ॥**

---

೩೧. ಧರ್ಮಪುರುಷನು ಧರ್ಮರಕ್ಷಕನಾದ ಶಂಕರನನ್ನು ಮನಸ್ಸಿನಲ್ಲಿ ಸ್ಮರಿಸುತ್ತಾ ದೀನನಾಗಿ ಅನೇಕ ವಾಕ್ಯಗಳಿಂದ ಹೀಗೆ ಸ್ತುತಿಸಿದನು.

೩೨. ಧರ್ಮಪುರುಷನು ಹೇಳಿದನು :—ದೇವದೇವನೂ, ಧರ್ಮರಕ್ಷಕನೂ ಆದಂತಹ ಓ ಮಹಾದೇವನೇ! ನಿನಗೆ ನಮಸ್ಕಾರವು. ಜಗತ್ತಿನ ಸೃಷ್ಟಿ, ಸ್ಥಿತಿ, ಪ್ರಳಯಗಳಿಗೆ ನೀನೇ ಕರ್ತನು.

೩೩. ಓ ಪ್ರಭುವೇ! ನೀನು ಮಾಯಾಮಯವಾದ ರಜಸ್ಸು, ಸತ್ತ್ವ ಮತ್ತು ತಮಸ್ಸು ಈ ಮೂರು ಗುಣಗಳಿಂದ ಬ್ರಹ್ಮ, ವಿಷ್ಣು, ಮತ್ತು ರುದ್ರ ಈ ರೂಪಗಳನ್ನು ಧರಿಸಿ ಜಗತ್ತಿನ ಸೃಷ್ಟಿ, ಸ್ಥಿತಿ ಮತ್ತು ನಾಶಗಳನ್ನು ನಡೆಯಿಸುತ್ತಲಿರುವೆ. ಹೀಗಿದ್ದರೂ ಪಾರಮಾರ್ಥಿಕವಾಗಿ ನೀನು ನಿರ್ಗುಣನು, ಯಾವ ಗುಣಗಳೂ ಇಲ್ಲದವನು.

೩೪. ಓ ಪರಮೇಶ್ವರನೇ! ನೀನು ಪಾರಮಾರ್ಥಿಕವಾಗಿ ಸತ್ತ್ವರಜಸ್ಸು ತಮಸ್ಸು ಈ ಮೂರು ಗುಣಗಳಿಲ್ಲದವನು, ಮಂಗಳರೂಪನು, ಜಡವಾದ ಪ್ರಕೃತಿಯ ಸಂಬಂಧವಿಲ್ಲದ ಚೇತನಸ್ವರೂಪನು, ಆದುದರಿಂದಲೇ ಪ್ರಕೃತಿ ಸಂಬಂಧವಾದ ಯಾವ ಗುಣಗಳೂ ಇಲ್ಲದವನು. ಜನ್ಮ, ಸ್ಥಿತಿ, ನಾಶ ಮುಂತಾದ ವಸ್ತುವಿಕಾರಗಳಿಲ್ಲದೇ ನಿತ್ಯನಾದವನು ಮತ್ತು ನೀನು ಮಾಯಾಮಯವಾದ ಅನೇಕ ಲೀಲೆಗಳನ್ನು ಮಾಡುವೆ.

ರಕ್ಷ ರಕ್ಷ ಮಹಾದೇವ ಪಾಪಾನ್ನಾಂ ದುಸ್ತರಾದಿತಃ ।
ಮತ್ಪಿತಾಯಂ ತಥಾ ಚೇಮೇ ಭ್ರಾತರಃ ಪಾಪಬುದ್ಧಯಃ ॥ ೩೫ ॥

॥ ಬ್ರಹ್ಮೋವಾಚ ॥

ಇತಿ ಸ್ತುತೋ ಮಹೇಶಾನೋ ಧರ್ಮೇಣೈವ ಪರಃ ಪ್ರಭುಃ ।
ತತ್ರಾಜಗಾಮ ಶೀಘ್ರಂ ವೈ ರಕ್ಷಿತುಂ ಧರ್ಮಮಾತ್ಮಭೂಃ ॥ ೩೬ ॥

ಜಾತೋ ವಿಯದ್ಗತಶ್ಶಂಭುರ್ವಿಧಿಂ ದೃಷ್ಟ್ವಾ ತಥಾವಿಧಂ ।
ಮಾಂ ದಕ್ಷಾದ್ಯಾಂಶ್ಚ ಮನಸಾ ಜಹಾಸೋಪಜಹಾಸ ಚ ॥ ೩೭ ॥

ಸ ಸಾಧುವಾದಂ ತಾನ್ ಸರ್ವಾನ್ವಿಹಸ್ಯ ಚ ಪುನಃ ಪುನಃ ।
ಉವಾಚೇದಂ ಮುನಿಶ್ರೇಷ್ಠ ಲಜ್ಜಯನ್ ವೃಷಭಧ್ವಜಃ ॥ ೩೮ ॥

---

೩೫. ಓ ಮಹಾದೇವನೇ! ಕಾಪಾಡು, ಮಹತ್ತಾದ ಈ ಪಾಪದಿಂದ ಉದ್ಧರಿಸು. ಈ ನನ್ನ ತಂದೆ (ಬ್ರಹ್ಮ) ಯೂ ಸಹೋದರರೂ ಸಹ (ಸಂಧ್ಯೆಯಲ್ಲಿ) ಪಾಪ ಬುದ್ಧಿಯುಳ್ಳವರಾಗಿರುವರು.

೩೬. ಬ್ರಹ್ಮನು ಹೇಳಿದನು:—ಹೀಗೆ ಧರ್ಮಪುರುಷನು ಸ್ತುತಿಸಲು ಪರಮೇಶ್ವರನೂ ಸ್ವಯಂಭುವೂ ಆದಂತಹ ಮಹಾದೇವನು ಧರ್ಮವನ್ನು ರಕ್ಷಿಸಲು ಜಾಗ್ರತೆಯಾಗಿ ನಾವಿದ್ದಲ್ಲಿಗೆ ಧಾವಿಸಿಬಂದನು.

೩೭. ಆಮೇಲೆ ಪರಮೇಶ್ವರನು ಆಕಾಶದಲ್ಲಿ ಬಂದು ದಕ್ಷಪ್ರಜಾಪತಿಯೇ ಮೊದಲಾದ ಮಾನಸಪುತ್ರರೂ ನಾನೂ ಸಹ ಆ ರೀತಿ ಮದನವಿಕಾರವುಳ್ಳವರಾಗಿರುವುದನ್ನು ನೋಡಿ ತುಂಬಾ ನಕ್ಕು ಹಾಸ್ಯಮಾಡಿದನು.

೩೮. ಈಶ್ವರನು ಅವರನ್ನು ಕುರಿತು "ಬಹು ಚೆನ್ನಾಗಿದೆ, ಒಳ್ಳೆಯ ಕೆಲಸವನ್ನು ಮಾಡುತ್ತಲಿರುವಿರಿ" ಎಂದು ಮತ್ತಷ್ಟು ಹಾಸ್ಯವನ್ನು ಮಾಡಿ ಅವರಿಗೆ ನಾಚಿಕೆಯನ್ನುಂಟುಮಾಡುತ್ತಾ ಹೀಗೆ ಹೇಳಿದನು:—

॥ ಶಿವ ಉವಾಚ ॥

**ಅಹೋ ಬ್ರಹ್ಮನ್ ತವ ಕಥಂ ಕಾಮಭಾವಸ್ಸಮುದ್ಗತಃ ।**
**ದೃಷ್ಟ್ವಾ ಚ ತನಯಾಂ ನೈವ ಯೋಗ್ಯಂ ವೇದಾನುಸಾರಿಣಾಂ ॥ ೩೯ ॥**

**ಯಥಾ ಮಾತಾ ಚ ಭಗಿನೀ ಭ್ರಾತೃಪತ್ನೀ ತಥಾ ಸುತಾ ।**
**ಏತಾಃ ಕುದೃಷ್ಟ್ಯಾ ದ್ರಷ್ಟವ್ಯಾ ನ ಕದಾಪಿ ವಿಪಶ್ಚಿತಾ ॥ ೪೦ ॥**

**ಏಷ ವೈ ವೇದಮಾರ್ಗಸ್ಯ ನಿಶ್ಚಯಸ್ತ್ವನ್ಮುಖೇ ಸ್ಥಿತಃ ।**
**ಕಥಂ ತು ಕಾಮಮಾತ್ರೇಣ ಸ ತೇ ವಿಸ್ಮಾರಿತೋ ವಿಧೇ ॥ ೪೧ ॥**

**ಧೈರ್ಯೇ ಜಾಗರಿತಂ ಬ್ರಹ್ಮನ್ಮನಸ್ತೇ ಚತುರಾನನ ।**
**ಕಥಂ ಕ್ಷುದ್ರೇಣ ಕಾಮೇನ ರಂತು ವಿಘಟಿತಂ ವಿಧೆ ॥ ೪೨ ॥**

**ಏಕಾಂತಯೋಗಿನಸ್ತಸ್ಮಾತ್ಸರ್ವದಾ ದಿವ್ಯದರ್ಶಿನಃ ।**
**ಕಥಂ ದಕ್ಷಮರೀಚ್ಯಾದ್ಯಾ ಲೋಲುಪಾಃ ಸ್ತ್ರೀಷು ಮಾನಸಾಃ ॥ ೪೩ ॥**

---

೩೯. ಎಲೈ ಬ್ರಹ್ಮನೇ, ಇದೇನಾಶ್ಚರ್ಯವು? ನಿನಗೂ ಈ ಮದನವಿಕಾರ ವುಂಟಾಯಿತೇ? ತನ್ನ ಸ್ವಂತ ಮಗಳನ್ನು ನೋಡಿ ಈ ರೀತಿ ಭೋಗಾಭಿಲಾಷೆಯುಳ್ಳವ ರಾಗುವುದು ವೇದಮಾರ್ಗವನ್ನನುಸರಿಸಿ ನಡೆಯುವ ನಿಮ್ಮಂಥವರಿಗೆ ಯೋಗ್ಯವಲ್ಲವು.

೪೦-೪೧. ತಾಯಿ, ತಂಗಿ, ಸಹೋದರಪತ್ನಿ, ಮಗಳು ಇವರನ್ನು ಕಾಮದೃಷ್ಟಿ ಯಿಂದ ತಿಳಿವಳಿಕೆಯಿದ್ದವನು ನೋಡಬಾರದು. ಈ ವೇದಮಾರ್ಗ ನಿರ್ಣಯವನ್ನು ನೀನೇ ಉಪದೇಶಿಸಿಯಿರುವಿಯಲ್ಲವೇ? ಎಲೈ ಬ್ರಹ್ಮನೇ! ಕಾಮವಶನಾಗಿ ನಿನ್ನ ಲ್ಲಿಯೇ ಇರುವ ಆ ನಿರ್ಣಯವನ್ನು ಹೇಗೆ ಮರೆತಿರುವೆ?

೪೨. ಎಲೈ ಚತುರ್ಮುಖನೇ! ನಿನ್ನ ಮನಸ್ಸು ತುಂಬಾ ಧೈರ್ಯಯುತ ವಾದುದು. ಇಂತಹ ಮನಸ್ಸನ್ನು ನೀಚನಾದ ಕಾಮನು ಹೇಗೆ ಚಂಚಲಗೊಳಿ ಸಿದನು.

೪೩-೪೪. ಆದುದರಿಂದಲೆ ದಿವ್ಯದೃಷ್ಟಿಯುಳ್ಳ ಯೋಗಿಗಳು, ನಿರ್ಜನವಾದ ಅರಣ್ಯದಲ್ಲಿ ವಾಸಿಸುವರು. ದಕ್ಷ, ಮರೀಚಿ ಮುಂತಾದ ಈ ನಿನ್ನ ಪುತ್ರರೂ ಸಹ ಸ್ತ್ರೀಯಲ್ಲಿ ಹೇಗೆ ಅಭಿಲಾಷೆಯುಳ್ಳವರಾದರು? ಮೂಢನಾದ ಮನ್ಮಥನಾದರೂ ತಿಳಿ

ಕಥಂ ಕಾಮೋಽಪಿ ಮಂದಾತ್ಮಾ ಪ್ರಾಬಲ್ಯಾತ್ಸೋಽಧುನೈವ ಹಿ ।
ವಿಕೃತಾನ್ ಬಾಣೈಃ ಕೃತವಾನ್ ಕಾಲಜ್ಞೋಽಲ್ಪಚೇತನಃ　॥ ೪೪ ॥

ಧಿಕ್ತಂ ಶ್ರುತಂ ತಸ್ಯ ಸದಾ ಕಾಂತಾ ಯಸ್ಯ ಮನೋಽಹರತ್ ।
ಧೈರ್ಯಾದಾಕೃಷ್ಯ ಲೌಲ್ಯೇಷು ಮಜ್ಜಯತ್ಯಪಿ ಮಾನಸಂ　॥ ೪೫ ॥

॥ ಬ್ರಹ್ಮೋವಾಚ ॥

ಇತಿ ತಸ್ಯ ವಚಃ ಶ್ರುತ್ವಾ ಲೋಕೇ ಸೋಽಹಂ ಶಿವಸ್ಯ ಚ ।
ವ್ರೀಡಯಾ ದ್ವಿಗುಣೀಭೂತಸ್ಸ್ವೇದಾರ್ದ್ರಸ್ತ್ವಭವಂ ಕ್ಷಣಾತ್　॥ ೪೬ ॥

ತತೋ ನಿಗೃಹ್ಯೇಂದ್ರಿಯಕಂ ವಿಕಾರಂ ಚಾತ್ಮಜಂ ಮುನೇ ।
ಜಿಘೃಕ್ಷುರಪಿ ತದ್ಭೀತ್ಯಾ ತಾಂ ಸಂಧ್ಯಾಂ ಕಾಮರೂಪಿಣೀಂ　॥ ೪೭ ॥

---

ವಳಿಕೆಯಿಲ್ಲದೆ, ದೇಶಕಾಲಗಳನ್ನು ತಿಳಿಯದೇ ಉದ್ಧತತನವನ್ನಾಶ್ರಯಿಸಿ ಈಗಲೇ ನಿಮ್ಮೆಲ್ಲರನ್ನೂ ತನ್ನ ಬಾಣಗಳಿಂದ ಕಾಮವಿಕಾರವುಳ್ಳವರನ್ನಾಗಿ ಏಕೆ ಮಾಡಿದನು?

೪೫. ಶಾಸ್ತ್ರಜ್ಞಾನಿಯಾಗಿದ್ದರೂ ಸಹ ಯಾವನ ಮನಸ್ಸನ್ನು ಕಾಮಿನಿಯು ಅಪಹರಿಸಿ ಧೈರ್ಯವನ್ನು ನಾಶಮಾಡಿ ಅಸ್ಥಿರವಾದ ವಿಷಯಕೂಪದಲ್ಲಿ ಮುಳುಗಿಸುವಳೋ ಅಂತಹ ಮನಸ್ಸುಳ್ಳವನ ಶಾಸ್ತ್ರಜ್ಞಾನಕ್ಕೆ ಧಿಕ್ಕಾರವಿರಲಿ, ಅವನು ತಿಳಿದಿದ್ದರೂ ವ್ಯರ್ಥವು.

೪೬. ಬ್ರಹ್ಮನು ಹೇಳಿದನು:—ಈ ರೀತಿಯಾಗಿ ಶಿವನ ಮಾತುಗಳನ್ನು ಕೇಳಿ ನಾನು ನಾಚಿಕೆಯಿಂದ ಮತ್ತಷ್ಟು ಹೆಚ್ಚಾದ ಬೆವರುಗಳುಳ್ಳವನಾಗಿ ಆದೆನು. ತುಂಬಾ ಲಜ್ಜೆಗೊಂಡೆನು.

೪೭. ಬಳಿಕ ನಾನು ಕಾಮೇಚ್ಛೆಯಿಂದ ಸುಂದರಿಯಾದ ಸಂಧ್ಯೆಯನ್ನು ಕ್ರೀಡೆಗಾಗಿ ಸ್ವೀಕರಿಸಬೇಕೆಂಬ ಇಚ್ಛೆಯುಳ್ಳವನಾಗಿದ್ದರೂ ಸಹ ಆ ಶಿವನ ಹೆದರಿಕೆಯಿಂದ ಮನಸ್ಸನ್ನು ಬಿಗಿಹಿಡಿದು ಆ ಕಾಮವಿಕಾರವನ್ನು ತ್ಯಜಿಸಿದೆನು.

**ಮಚ್ಛರೀರಾತ್ತು ಘರ್ಮಾಂಭೋ ಯತ್ಪಪಾತ ದ್ವಿಜೋತ್ತಮ ।**
**ಅಗ್ನಿಷ್ವಾತ್ತಾಃ ಪಿತೃಗಣಾ ಜಾತಾಃ ಪಿತೃಗಣಾಸ್ತತಃ ॥ ೪೮ ॥**

**ಭಿನ್ನಾಂಜನನಿಭಾಸ್ಸರ್ವೇ ಫುಲ್ಲರಾಜೀವಲೋಚನಾಃ ।**
**ನಿತಾಂತಯತಯಃ ಪುಣ್ಯಾಸ್ಸಂಸಾರವಿಮುಖಾಃ ಪರೇ ॥ ೪೯ ॥**

**ಸಹಸ್ರಾಣಾಂ ಚತುಷ್ಷಷ್ಟಿರಗ್ನಿಷ್ವಾತ್ತಾಃ ಪ್ರಕೀರ್ತಿತಾಃ ।**
**ಷಡಶೀತಿ ಸಹಸ್ರಾಣಿ ತಥಾ ಬರ್ಹಿಷದೋ ಮುನೇ ॥ ೫೦ ॥**

**ಘರ್ಮಾಂಭಃ ಪತಿತಂ ಭೂಮೌ ತದಾ ದಕ್ಷಶರೀರತಃ ।**
**ಸಮಸ್ತಗುಣಸಂಪನ್ನಾ ತಸ್ಮಾಜ್ಜಾತಾ ವರಾಂಗನಾ ॥ ೫೧ ॥**

**ತನ್ವಂಗೀ ಸಮಮಧ್ಯಾ ಚ ತನುರೋಮಾವಳೀ ಶ್ರುತಾ ।**
**ಮೃದ್ವಂಗೀ ಚಾರುದಶನಾ ನವಕಾಂಚನಸುಪ್ರಭಾ ॥ ೫೨ ॥**

---

೪೮. ಎಲೈ ಬ್ರಾಹ್ಮಣೋತ್ತಮನಾದ ನಾರದ! ಆಗ ನನ್ನ ಶರೀರದಿಂದ (ಕಾಮತಾಪವನ್ನು ನಿಗ್ರಹಿಸಿದುದರಿಂದ) ಬೆವರು ನೀರು ಕೆಳಗೆ ಬಿದ್ದಿತು. ಅದರಿಂದ ಅಗ್ನಿಷ್ವಾತ್ತರೆಂಬ ಪಿತೃದೇವತೆಗಳೂ ಬರ್ಹಿಷದರೆಂಬ ಪಿತೃಗಣಗಳೂ ಜನಿಸಿದುವು.

೪೯. ಆ ಪಿತೃದೇವತೆಗಳೆಲ್ಲರೂ ಸಹ ಅಂಜನಖಂಡದಂತೆ ಕಪ್ಪುವರ್ಣದವರಾಗಿಯೂ ಅರಳಿದ ಕಮಲದಂತಿರುವ ಕಣ್ಣುಗಳುಳ್ಳವರಾಗಿಯೂ ಇದ್ದರು. ಅವರಲ್ಲಿ ಕೆಲವರು ಸಂಸಾರದಲ್ಲಿ ವಿರಕ್ತರಾದ ಮಹಾಯೋಗಿಗಳೂ ಕೆಲವರು ಕರ್ಮಯೋಗಿಗಳೂ ಆಗಿದ್ದರು.

೫೦. ಅವರಲ್ಲಿ ಅಗ್ನಿಷ್ವಾತ್ತರು ಅರವತ್ತುನಾಲ್ಕು ಸಾವಿರ ಜನಗಳು. ಬರ್ಹಿಷದರೆಂಬ ಪಿತೃದೇವತೆಗಳು ಎಂಭತ್ತಾರು ಸಾವಿರ ಜನಗಳು.

೫೧. ಆಗ ದಕ್ಷಪ್ರಜಾಪತಿಯ ಶರೀರದಿಂದಲೂ ಬೆವರುನೀರು ಬಿದ್ದಿತು. ಅದರಿಂದ ಸಕಲ ಗುಣಪರಿಪೂರ್ಣಳಾದ ಓರ್ವ ಉತ್ತಮಸ್ತ್ರೀಯು ಜನಿಸಿದಳು.

೫೨-೫೩. ಅವಳು ಕೃಶವಾದ ತೆಳ್ಳನೆ ಬಳುಕುತ್ತಿರುವ ಶರೀರವುಳ್ಳವಳೂ, ಸಣ್ಣದಾದ ನಡುವುಳ್ಳವಳೂ, ಸೂಕ್ಷ್ಮವಾದರೋಮಪಂಕ್ತಿಯಿಂದ ಮನೋಹರಳಾಗಿ

ಸರ್ವಾವಯರಮ್ಯಾ ಚ ಪೂರ್ಣಚಂದ್ರನಿಭಾನನಾ ।
ನಾಮ್ನಾ ರತಿರಿತಿ ಖ್ಯಾತಾ ಮುನೀನಾಮಪಿ ಮೋಹಿನೀ　　॥ ೫೩ ॥

ಮರೀಚಿಪ್ರಮುಖಾಃ ಷಡ್ವೈ ನಿಗೃಹೀತೇಂದ್ರಿಯಕ್ರಿಯಾಃ ।
ಋತೇ ಕ್ರತುಂ ವಸಿಷ್ಠಂ ಚ ಪುಲಸ್ತ್ಯಾಂಗಿರಸೌ ತಥಾ　　॥ ೫೪ ॥

ಕ್ರತ್ವಾದೀನಾಂ ಚತುರ್ಣಾಂ ಚ ಬೀಜಂ ಭೂಮೌ ಪಪಾತ ಹ ।
ತೇಭ್ಯಃ ಪಿತೃಗಣಾ ಜಾತಾ ಅಪರೇ ಮುನಿಸತ್ತಮ　　॥ ೫೫ ॥

ಸೋಮಪಾ ಆಜ್ಯಪಾ ನಾಮ್ನಾ ತಥೈವಾನ್ಯೇ ಸುಕಾಲಿನಃ ।
ಹವಿಷ್ಮಂತಸ್ಸುತಾಸ್ಸರ್ವೇ ಕವ್ಯವಾಹಾಃ ಪ್ರಕೀರ್ತಿತಾಃ　　॥ ೫೬ ॥

ಕ್ರತೋಸ್ತು ಸೋಮಪಾಃ ಪುತ್ರಾ ವಸಿಷ್ಠಾತ್ಕಾಲಿನಸ್ತಥಾ ।
ಆಜ್ಯಪಾಖ್ಯಾಃ ಪುಲಸ್ತ್ಯಸ್ಯ ಹವಿಷ್ಮಂತೋಂಗಿರಸ್ಸುತಾಃ　　॥ ೫೭ ॥

---

ಒಪ್ಪುತ್ತಿರುವಳೂ, ಕೋಮಲವಾದ ಶರೀರವುಳ್ಳವಳೂ, ಸುಂದರವಾದ ದಂತಪಂಕ್ತಿಯುಳ್ಳವಳೂ, ಪುಟಕ್ಕೆ ಹಾಕಿದ ಚಿನ್ನದಂತೆ ಶರೀರಕಾಂತಿಯುಳ್ಳವಳೂ ಆಗಿದ್ದಳು. ಅವಳ ಹೆಸರು ರತಿದೇವಿಯೆಂದು. ಅವಳು ವಿರಕ್ತರಾದ ಮುನಿಗಳನ್ನೂ ಮೋಹಗೊಳಿಸುವಷ್ಟು ಸುಂದರಿಯಾಗಿದ್ದಳು.

೫೪. ಕ್ರತುಮುನಿ, ವಸಿಷ್ಠ, ಪುಲಸ್ತ್ಯ, ಅಂಗಿರಸ್ಸು ಇವರನ್ನು ಹೊರತು ಮಿಕ್ಕ ಮರೀಚಿಯೇ ಮೊದಲಾದ ಆರು ಜನ ಮುನಿಗಳು, ತಮ್ಮ ತಮ್ಮ ಇಂದ್ರಿಯಗಳನ್ನು ನಿಗ್ರಹಿಸಿ ಕಾಮವಿಕಾರವನ್ನು ತಡೆದರು.

೫೫-೫೬. ಮಿಕ್ಕ ಕ್ರತುಮುನಿ ಮುಂತಾದ ನಾಲ್ಕು ಜನಗಳ ವೀರ್ಯವು ಆಗ ಭೂಮಿಯಲ್ಲಿ ಬಿದ್ದಿತು. ಆ ವೀರ್ಯದಿಂದ ಸೋಮಪರು ಆಜ್ಯಪರು, ಸುಕಾಲಿ, ಹವಿಷ್ಮಂತ ಎಂಬ ನಾಲ್ಕು ವಿಧರಾದ ಇನ್ನು ಕೆಲವು ಪಿತೃದೇವತೆಗಳೂ ಜನಿಸಿದರು; ಅವರೆಲ್ಲರೂ ಶ್ರಾದ್ಧದಲ್ಲಿನ ಕವ್ಯ (ಹವಿಸ್ಸು) ವನ್ನು ಸೇವಿಸುವರು.

೫೭. ಕ್ರತುಮುನಿಯಿಂದ ಆಗ ಸೋಮಪರೆಂಬ ಪಿತೃಗಳು ಜನಿಸಿದರು. ಸುಕಾಲಿಪಿತೃಗಳು ವಸಿಷ್ಠನ ಪುತ್ರರು ಆಜ್ಯಪರು, ಪುಲಸ್ತ್ಯನ ಪುತ್ರರು. ಹವಿಷ್ಮಂತರೆಂಬ ಪಿತೃಗಳು ಅಂಗಿರಸ್ಸುಮುನಿಯ ಪುತ್ರರು.

**ಜಾತೇಷು ತೇಷು ವಿಪ್ರೇಂದ್ರ ಅಗ್ನಿಷ್ವಾತ್ತಾದಿಕೇಷ್ವಥ ।**
**ಲೋಕಾನಾಂ ಪಿತೃವರ್ಗೇಷು ಕವ್ಯವಾಟ್ಸು ಸಮಂತತಃ ॥ ೫೮ ॥**

**ಸಂಧ್ಯಾ ಪಿತೃಪ್ರಸೂಭೂರ್ತ್ವಾ ತದುದ್ದೇಶಯುತಾಭವತ್ ।**
**ನಿರ್ದೋಷಾ ಶಂಭುಸಂದೃಷ್ಟ್ವಾ ಧರ್ಮಕರ್ಮಪರಾಯಣಾ ॥ ೫೯ ॥**

**ಏತಸ್ಮಿನ್ನಂತರೇ ಶಂಭುರನುಗೃಹ್ಯಾಖಿಲಾನ್ ದ್ವಿಜಾನ್ ।**
**ಧರ್ಮಂ ಸಂರಕ್ಷ್ಯ ವಿಧಿವದಂತರ್ಧಾನಂ ಗತೋ ದ್ರುತಂ ॥ ೬೦ ॥**

**ಅಥ ಶಂಕರವಾಕ್ಯೇನ ಲಜ್ಜಿತೋಽಹಂ ಪಿತಾಮಹಃ ।**
**ಕಂದರ್ಪಾಯಾಕೋಪಿಷಂ ಹಿ ಭೃಕುಟೀಕುಟಿಲಾನನಃ ॥ ೬೧ ॥**

**ದೃಷ್ಟ್ವಾ ಮುಖಮಭಿಪ್ರಾಯಂ ವಿದಿತ್ವಾ ಸೋಽಪಿ ಮನ್ಮಥಃ ।**
**ಸ್ವಬಾಣಾನ್ ಸಂಜಹಾರಾಶು ಭೀತಃ ಪಶುಪತೇರ್ಮನೇ ॥ ೬೨ ॥**

---

೫೮-೫೯. ಎಲೈ ನಾರದಮುನಿ, ಅಗ್ನಿಷ್ವಾತ್ತರೇ ಮೊದಲಾದ ಶ್ರಾದ್ಧಗಳಲ್ಲಿ ಹವಿಸ್ಸನ್ನು ಭುಜಿಸುವ ಪಿತೃದೇವತೆಗಳು ಜನಿಸಲು ಸಂಧ್ಯೆಯೇ ಅವರಿಗೆ ಮಾತೃವಾದಳು. ಕಾರಣವೇನೆಂದರೆ ? ಆ ಸಂಧ್ಯೆಯು ನಿಮಿತ್ತವಾಗಿಯೇ ಮಾನಸಪುತ್ರರಿಂದ ಪಿತೃದೇವತೆಗಳು ಜನಿಸಿದುದರಿಂದ ಆ ಸಂಧ್ಯೆಯೇ ಪಿತೃಗಳಿಗೆ ತಾಯಿಯಾದಳು. ಮತ್ತು ಶಂಕರನಿಂದ ಅನುಗ್ರಹಿಸಲ್ಪಟ್ಟವಳಾಗಿ ಧರ್ಮಕರ್ಮಗಳಲ್ಲಿ ನಿರತಳೂ ಪರಿಶುದ್ಧಳೂ ಆದಳು.

೬೦. ಹೀಗೆ ಶಂಕರನು ನಮ್ಮೆಲ್ಲರನ್ನೂ ಅನುಗ್ರಹಿಸಿ ವಿಧಿವತ್ತಾಗಿ ಧರ್ಮವನ್ನು ರಕ್ಷಿಸಿ ಆ ಕೂಡಲೇ ಅಂತರ್ಧಾನನಾದನು.

೬೧. ಆಮೇಲೆ ಜಗತ್ಪಿತಾಮಹನಾದ ನಾನು (ಬ್ರಹ್ಮನು) ಹುಬ್ಬನ್ನು ಗಂಟಿಕ್ಕಿ ನಮ್ಮನ್ನು ವಿಕಾರಕ್ಕೊಳಗಾಗುವಂತೆ ಮಾಡಿದ ಮನ್ಮಥನ ಮೇಲೆ ಕೋಪಗೊಂಡೆನು.

೬೨. ಆಗ ಮನ್ಮಥನು ನನ್ನ ಮುಖವನ್ನು ನೋಡಿ ಅಭಿಪ್ರಾಯವನ್ನು ತಿಳಿದವನಾಗಿ ಜಗತ್ಪತಿಯಾದ ನನಗೆ ಹೆದರಿ ಕೂಡಲೇ ಬಾಣಗಳನ್ನು ಉಪಸಂಹರಿಸಿದನು.

ತತಃ ಕೋಪಸಮಾಯುಕ್ತಃ ಪದ್ಮಯೋನಿರಹಂ ಮುನೇ
ಅಜ್ವಲಂ ಚಾತಿಬಲವಾನ್ ದಿಧಕ್ಷುರಿವ ಪಾವಕಃ ॥ ೬೩ ॥

ಭವನೇತ್ರಾಗ್ನಿನಿರ್ದಗ್ಧಃ ಕಂದರ್ಪೋ ದರ್ಪಮೋಹಿತಃ ।
ಭವಿಷ್ಯತಿ ಮಹಾದೇವೇ ಕೃತ್ವಾ ಕರ್ಮ ಸುದುಷ್ಕರಂ ॥ ೬೪ ॥

ಇತಿ ವೇಧಾಸ್ತ್ವಹಂ ಕಾಮಮಶಪಂ ದ್ವಿಜಸತ್ತಮ ।
ಸಮಕ್ಷಂ ಪಿತೃಸಂಘಸ್ಯ ಮುನೀನಾಂ ಚ ಯತಾತ್ಮನಾಂ ॥ ೬೫ ॥

ಇತಿ ಭೀತೋ ರತಿಪತಿಸ್ತತ್‌ಕ್ಷಣಾತ್ತ್ಯಕ್ತಮಾರ್ಗಣಃ ।
ಪ್ರಾದುರ್ಭಭೂವ ಪ್ರತ್ಯಕ್ಷಂ ಶಾಪಂ ಶ್ರುತ್ವಾತಿದಾರುಣಂ ॥ ೬೬ ॥

ಬ್ರಹ್ಮಾಣಂ ಮಾಮುವಾಚೇದಂ ಸದಕ್ಷಾದಿಸುತಂ ಮುನೇ ।
ಶೃಣ್ವತಾಂ ಪಿತೃಸಂಘಾನಾಂ ಸಂಧ್ಯಾಯಾಶ್ಚ ವಿಗರ್ವಧೀಃ ॥ ೬೭ ॥

---

೬೩. ಎಲೈ ನಾರದ! ಆಮೇಲೆ ನಾನು ದಹಿಸುತ್ತಿರುವ ಅಗ್ನಿಯಂತೆ ಕೋಪದಿಂದ ಉರಿಯುತ್ತಾ ಮನ್ಮಥನನ್ನು ಕುರಿತು ಹೀಗೆ ಹೇಳಿ ಶಪಿಸಿದೆನು.

೬೪. ದರ್ಪದಿಂದ ಕೊಬ್ಬಿದ ಈ ಮನ್ಮಥನು ಮಹಾದೇವನಲ್ಲಿ ತನ್ನ ಬಾಣಗಳನ್ನು ಪ್ರಯೋಗಿಸತೊಡಗಿ ಆ ದೇವನ ಮೂರನೆಯ ನೇತ್ರಾಗ್ನಿಯಿಂದ ಸುಟ್ಟುಹೋಗುವನು.

೬೫. ಎಲೈ ನಾರದ! ಹೀಗೆ ನಾನು ಪಿತೃದೇವತೆಗಳ ಮತ್ತು ಜಿತೇಂದ್ರಿಯರಾದ ಮರೀಚಿಯೇ ಮೊದಲಾದ ಮುನಿಗಳ ಎದುರಿನಲ್ಲಿ ಶಪಿಸಿದೆನು.

೬೬. ಆಗ ಮನ್ಮಥನು ನನ್ನ ಶಾಪವನ್ನು ಕೇಳಿ ತುಂಬಾ ಭಯಗೊಂಡವನಾಗಿ ಆ ಕೂಡಲೇ ಬಾಣಗಳನ್ನು ಬಿಟ್ಟು ನಮ್ಮೆದುರಿನಲ್ಲಿ ಪ್ರತ್ಯಕ್ಷನಾದನು.

೬೭. ಆಮೇಲೆ ಆ ಮನ್ಮಥನು ದಕ್ಷನೇ ಮೊದಲಾದವರೊಡನಿರುವ ನನ್ನನ್ನು ಕುರಿತು ಪಿತೃದೇವತೆಗಳ ಮತ್ತು ಸಂಧ್ಯೆಯ ಎದುರಿನಲ್ಲಿ ವಿನಯದಿಂದ ಹೀಗೆ ಹೇಳಿದನು.

॥ ಕಾಮ ಉವಾಚ ॥

**ಕಿಮರ್ಥಂ ಭವತಾ ಬ್ರಹ್ಮನ್ ಶಪ್ತೋಽಹಮಿತಿ ದಾರುಣಂ ।**
**ಅನಾಗಾಸ್ತವ ಲೋಕೇಶ ನ್ಯಾಯಮಾರ್ಗಾನುಸಾರಿಭಿಃ ॥ ೧೮ ॥**

**ತ್ವಯಾ ಚೋಕ್ತಂ ತು ಮತ್ಕರ್ಮ ಯತ್ತದ್ಬ್ರಹ್ಮನ್ ಕೃತಂ ಮಯಾ ।**
**ತವ ಯೋಗ್ಯೋ ನ ಶಾಪೋ ಮೇ ಯತೋ ನಾನ್ಯತ್ಕೃತಂ ಮಯಾ ॥**

**ಅಹಂ ವಿಷ್ಣುಸ್ತಥಾ ಶಂಭುಃ ಸರ್ವೇ ತ್ವಚ್ಛರಗೋಚರಾಃ ।**
**ಇತಿ ಯದ್ಭವತಾ ಪ್ರೋಕ್ತಂ ತನ್ಮಯಾಪಿ ಪರೀಕ್ಷಿತಂ ॥ ೨೦ ॥**

**ನಾಪರಾಧೋ ಮಮಾಪ್ಯತ್ರ ಬ್ರಹ್ಮನ್ಮಯಿ ನಿರಾಗಸಿ ।**
**ದಾರುಣಃ ಸಮಯಶ್ಚೈಷ ಶಾಪೋ ದೇವ ಜಗತ್ಪತೇ ॥ ೨೧ ॥**

**ಇತಿ ತಸ್ಯ ವಚಃ ಶ್ರುತ್ವಾ ಬ್ರಹ್ಮಾಹಂ ಜಗತಾಂ ಪತಿಃ ।**
**ಪ್ರತ್ಯವೋಚಂ ಯತಾತ್ಮಾನಂ ಮದನಂ ದಮಯನ್ಮುಹುಃ ॥ ೨೨ ॥**

---

೧೮. ಮನ್ಮಥನು ಹೇಳಿದನು :—ಓ ಬ್ರಹ್ಮದೇವನೇ! ನೀನು ನ್ಯಾಯ ಮಾರ್ಗದಲ್ಲಿಯೇ ನಡೆಯುವವನು. ಇಂತಹವನು ನಿರಪರಾಧಿಯಾದ ನನ್ನನ್ನು ಕ್ರೂರ ವಾಗಿ ಏಕೆ ಶಪಿಸಿದೆ ?

೧೯. ನೀನು ನನಗೆ ಯಾವ ಕಾರ್ಯವನ್ನು ನಿಯಮಿಸಿರುವೆಯೋ ಅದನ್ನೇ ನಾನು ಮಾಡಿರುವೆನು. ಇನ್ನಾವ ತಪ್ಪನ್ನೂ ನಾನು ಆಚರಿಸಿಲ್ಲ. ಹೀಗಿದ್ದು ನೀನು ನನ್ನನ್ನು ಶಪಿಸುವುದು ಯೋಗ್ಯವಲ್ಲ.

೨೦. ನಾನೂ (ಬ್ರಹ್ಮನೂ) ವಿಷ್ಣುವೂ, ರುದ್ರನೂ, ನಿನ್ನ (ಮನ್ಮಥನ) ಬಾಣ ಗಳಿಗೆ ಅಧೀನರಾಗಿರುವೆವೆಂದು ನೀನೆ ಈಗ ಹೇಳಿರುವೆಯಷ್ಟೆ ಈ ನಿನ್ನ ವಾಕ್ಕು ನಿಜವೋ ಅಲ್ಲವೋ ಎಂದು ಪರೀಕ್ಷಿಸಿದೆನು.

೨೧. ಆದುದರಿಂದ ಜಗದೊಡೆಯನಾದ ಓ ವಿಧಿಯೆ ! ನನ್ನಲ್ಲಿ ಅಪರಾಧ ವಿಲ್ಲ. ನಿರಪರಾಧಿಯಾದ ನನ್ನಲ್ಲಿ ನಿನ್ನ ಕ್ರೂರವಾದ ಶಾಪವು ಯುಕ್ತವಾದುದಲ್ಲ.

೨೨. ಈ ರೀತಿಯಾಗಿರುವ ಆ ಮನ್ಮಥನ ವಾಕ್ಯಗಳನ್ನು ಕೇಳಿ ಜಗದೊಡೆಯ ನಾದ ನಾನು ವಿನೀತನಾಗಿ ನಿಂತಿರುವ ಮನ್ಮಥನನ್ನು ಕುರಿತು ಉಪದೇಶಿಸಲು ಹೀಗೆ ಹೇಳಿದೆನು.

॥ ಬ್ರಹ್ಮೋವಾಚ ॥

ಆತ್ಮಜಾ ಮಮ ಸಂಧ್ಯೇಯಂ ಯಸ್ಮಾದೇತತ್ಸಕಾಮತಃ ।
ಲಕ್ಷ್ಯೀಕೃತೋಽಹಂ ಭವತಾ ತತಃ ಶಾಪೋ ಮಯಾ ಕೃತಃ ॥ ೭೩ ॥

ಅಧುನಾ ಶಾಂತರೋಷೋಽಹಂ ತ್ವಾಂ ವದಾಮಿ ಮನೋಭವ ।
ಶೃಣುಷ್ವ ಗತಸಂದೇಹಸ್ಸುಖೀ ಭವ ಭಯಂ ತ್ಯಜ ॥ ೭೪ ॥

ತ್ವಂ ಭಸ್ಮ ಭೂತ್ವಾ ಮದನ ಭರ್ಗಲೋಚನವಹ್ನಿನಾ ।
ತಥೈವಾಶು ಸಮಂ ಪಶ್ಚಾಚ್ಛರೀರಂ ಪ್ರಾಪಯಿಷ್ಯಸಿ ॥ ೭೫ ॥

ಯದಾ ಕರಿಷ್ಯತಿ ಹರೋಂಜಸಾ ದಾರಪರಿಗ್ರಹಂ ।
ತದಾ ಸ ಏವ ಭವತಶ್ಶರೀರಂ ಪ್ರಾಪಯಿಷ್ಯತಿ ॥ ೭೬ ॥

ಏವಮುಕ್ತ್ವಾಥ ಮದನಮಹಂ ಲೋಕಪಿತಾಮಹಃ ।
ಅಂತರ್ಗತೋ ಮುನೀಂದ್ರಾಣಾಂ ಮಾನಸಾನಾಂ ಪ್ರಪಶ್ಯತಾಂ ॥ ೭೭ ॥

---

೭೩. ಎಲೈ ಕಾಮನೇ ! ಈ ಸಂಧ್ಯೆಯು ನನ್ನ ಪುತ್ರಿಯು ಇವಳಲ್ಲಿ ನನಗೆ ಅನುರಾಗ ಬರುವಂತೆ ನೀನು ಬಾಣವನ್ನು ಪ್ರಯೋಗಿಸಿರುವೆ ? ಇದು ನ್ಯಾಯವಲ್ಲ. ಆದುದರಿಂದ ನಿನ್ನನ್ನು ಶಪಿಸಿರುವೆನು.

೭೪. ಈಗ ನಾನು ಕೋಪವಿಲ್ಲದೆ ಶಾಂತನಾಗಿರುವೆನು. ಈಗ ನಿನಗೆ ಹಿತವಾದುದನ್ನು ಹೇಳುವೆನು ಕೇಳು. ಸಂದೇಹವನ್ನು ಬಿಟ್ಟು ನಿಶ್ಚಿಂತನಾಗಿರು. ಭಯವನ್ನು ತ್ಯಜಿಸು.

೭೫. ಎಲೈ ಮನ್ಮಥ ! ಮುಂದೆ ನೀನು ಶಂಕರನ ತೃತೀಯ ನೇತ್ರಾಗ್ನಿಯಿಂದ ದಗ್ಧನಾಗಿ ಸ್ವಲ್ಪ ಕಾಲದಲ್ಲಿಯೇ ಪುನಃ ಶರೀರವನ್ನು ಪಡೆಯುವೆ

೭೬. ಶಂಕರನು ಯಾವಾಗ ಮದುವೆಯನ್ನು ಮಾಡಿಕೊಳ್ಳುವನೋ ಆಗ ಆ ಶಂಕರನೇ ನಿನಗೆ ತಿರುಗಿ ಶರೀರವನ್ನು ಕರುಣಿಸುವನು.

೭೭. ಬ್ರಹ್ಮನು ಹೇಳಿದನು :—ಹೀಗೆ ಮನ್ಮಥನಿಗೆ ಹೇಳಿ ಲೋಕಕ್ಕೆ ತಾತನಾದ ನಾನು ಮರೀಚಿಯೇ ಮೊದಲಾದ ಮಾನಸಪುತ್ರರು ನೋಡುತ್ತಿರುವಂತೆ ಅಲ್ಲಿಯೇ ಅಂತರ್ಧಾನನಾದೆನು.

ಇತ್ಯೇವಂ ಮೇ ವಚಃ ಶ್ರುತ್ವಾ ಮದನಸ್ತೇಽಪಿ ಮಾನಸಾಃ ।
ಸಂಬಭೂವುಸ್ಸುತಾಸ್ಸರ್ವೇ ಸುಖಿನೋಽರಂ ಕ್ಷಯಂ ಗತಾಃ ॥ ೭೮ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ
ಸತೀಖಂಡೇ ತೃತೀಯೋಽಧ್ಯಾಯಃ.



---

೭೮. ಈ ರೀತಿಯಾದ ನನ್ನ ಮಾತುಗಳನ್ನು ಕೇಳಿ ಮನ್ಮಥನೂ ಮಾನಸ ಪುತ್ರರೂ ಸಹ ಸಂತೋಷಗೊಂಡು ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಮೂರನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಚತುರ್ಥೋಽಧ್ಯಾಯಃ

॥ ನಾರದ ಉವಾಚ ॥

ವಿಷ್ಣುಶಿಷ್ಯ ಮಹಾಪ್ರಾಜ್ಞ ವಿಧೇ ಲೋಕಕರ ಪ್ರಭೋ ।
ಅದ್ಭುತೇಯಂ ಕಥಾ ಪ್ರೋಕ್ತಾ ಶಿವಲೀಲಾಮೃತಾನ್ವಿತಾ ॥ ೧ ॥

ತತಃ ಕಿಮಭವತ್ತಾತ ಚರಿತಂ ತದ್ವದಾಧುನಾ ।
ಅಹಂ ಶ್ರದ್ಧಾನ್ವಿತಃ ಶ್ರೋತುಂ ಸಿದ್ಧಃ ಶಂಭುಕಥಾಶ್ರಯಂ ॥ ೨ ॥

---

## ನಾಲ್ಕನೆಯ ಅಧ್ಯಾಯವು.

೧. ನಾರದನು ಹೇಳಿದನು :—ಓ ಬ್ರಹ್ಮನೇ ! ನೀನು ವಿಷ್ಣುವಿನ ಶಿಷ್ಯನೂ, ತುಂಬಾ ಪ್ರಾಜ್ಞನೂ, ಸೃಷ್ಟಿಕರ್ತನೂ ಜಗದೊಡೆಯನೂ ಆಗಿರುವೆ. ಶಿವನ ಲೀಲೆಯೆಂಬ ಅಮೃತಸಮಾನವಾದ ಅದ್ಭುತವಾದ ಶಿವಕಥೆಯನ್ನು ಹೇಳಿರುವೆ.

೨. ಓ ತಂದೆಯೇ ! ಮುಂದೆ ಏನಾಯಿತೆಂಬುದನ್ನು ಈಗ ಹೇಳು. ನಾನು ಶ್ರದ್ಧೆಯಿಂದ ಶಿವಕಥೆಯನ್ನು ಕೇಳಲು ಸಿದ್ಧನಾಗಿರುವೆನು ಎನ್ನಲು

॥ ಬ್ರಹ್ಮೋವಾಚ ॥

ಶಂಭೌ ಗತೇ ನಿಜಸ್ಥಾನೇ ವೇಧಸ್ಯಂತರ್ಹಿತೇ ಮಯಿ ।
ದಕ್ಷಃ ಪ್ರಾಹಾಥ ಕಂದರ್ಪಂ ಸಂಸ್ಮರ್ನ್ ಮಮ ತದ್ವಚಃ ॥ ೩ ॥

॥ ದಕ್ಷ ಉವಾಚ ॥

ಮದ್ದೇಹಜೇಯಂ ಕಂದರ್ಪ ಸದ್ರೂಪಗುಣಸಂಯುತಾ ।
ಏನಾಂ ಗೃಹ್ಣೀಷ್ವ ಭಾರ್ಯಾರ್ಥಂ ಭವತಸ್ಸದೃಶೀಂ ಗುಣೈಃ ॥ ೪ ॥

ಏಷಾ ತವ ಮಹಾತೇಜಾಸ್ಸರ್ವದಾ ಸಹಚಾರಿಣೀ ।
ಭವಿಷ್ಯತಿ ಯಥಾಕಾಮಂ ಧರ್ಮತೋ ವಶವರ್ತಿನೀ ॥ ೫ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಪ್ರದದೌ ತಸ್ಮೈ ದೇಹಸ್ವೇದಾಂಬುಸಂಭವಾಂ ।
ಕಂದರ್ಪಾಯಾಗ್ರತಃ ಕೃತ್ವಾ ನಾಮ ಕೃತ್ವಾ ರತೀತಿ ತಾಂ ॥ ೬ ॥

---

೩. ಬ್ರಹ್ಮನು ಹೇಳಿದನು :—ಮುಂದೆ ಶಂಕರನು ಸ್ವಸ್ಥಾನಕ್ಕೆ ತೆರಳಲು ನಾನೂ ಸಹ ಅಂತರ್ಧಾನನಾದ ಮೇಲೆ ದಕ್ಷಬ್ರಹ್ಮನು ಹಿಂದಿನ ನನ್ನ ಮಾತನ್ನು ಸ್ಮರಿಸಿ ಕೊಂಡು ಮನ್ಮಥನನ್ನು ಕುರಿತು

೪. ದಕ್ಷಬ್ರಹ್ಮನು ಹೇಳಿದನು :—ಎಲೈ ಮನ್ಮಥನೆ ! ಈ ನನ್ನ ಮುಂದಿ ರುವ ಸಕಲ ಗುಣಪೂರ್ಣಳಾದ ಸುಂದರಿಯು ನನ್ನ ಪುತ್ರಿಯು, ನಿನಗೆ ಅನುರೂಪ ಳಾದ ಇವಳನ್ನು ನೀನು ಪತ್ನಿಯಾಗಿ ಸ್ವೀಕರಿಸು.

೫. ತುಂಬಾ ಕಾಂತಿಮತಿಯಾದ ಇವಳು ಸದಾ ನಿನ್ನೊಡನೆಯೇ ಇದ್ದು ನಿನ್ನ ಆಜ್ಞೆಯಂತೆ ನಡೆಯುತ್ತಾ ನಿನ್ನ ಅಧೀನಳಾಗಿರುವಳು ಎಂದನು.

೬. ಬ್ರಹ್ಮನು ಹೇಳಿದನು ;—ಹೀಗೆ ಹೇಳಿ ದಕ್ಷನು ತನ್ನ ಶರೀರದ ಬೆವರಿ ನಿಂದ ಜನಿಸಿದ ಆ ಕನ್ಯೆಗೆ " ರತಿ " ಯೆಂದು ಹೆಸರನ್ನಿಟ್ಟು ಮನ್ಮಥನಿಗೆ ಮದುವೆ ಮಾಡಿಕೊಟ್ಟನು.

ವಿವಾಹ್ಯ ತಾಂ ಸ್ಮರಸ್ಸೋಽಪಿ ಮುಮೋದಾತೀವ ನಾರದ ।
ದಕ್ಷಜಾಂ ತನಯಾಂ ರಮ್ಯಾಂ ಮುನೀನಾಮಪಿ ಮೋಹಿನೀಂ ॥ ೭ ॥

ಅಥ ತಾಂ ವೀಕ್ಷ್ಯ ಮದನೋ ರತ್ಯಾಖ್ಯಾಂ ಸ್ವಸ್ತ್ರಿಯಂ ಶುಭಾಂ ।
ಆತ್ಮಬಾಣೇನ ವಿದ್ಧೋಽಸೌ ಮುಮೋಹ ರತಿರಂಜಿತಃ ॥ ೮ ॥

ಕ್ಷಣಪ್ರದಾಽಭವತ್ಕಾಂತಾ ಗೌರೀ ಮೃಗದೃಶೀ ಮುದಾ ।
ಲೋಲಾಪಾಂಗ್ಯಥ ತಸ್ಯೈವ ಭಾರ್ಯಾ ಚ ಸದೃಶೀ ರತೌ ॥ ೯ ॥

ತಸ್ಯಾ ಭ್ರೂಯುಗಲಂ ವೀಕ್ಷ್ಯ ಸಂಶಯಂ ಮದನೋಽಕರೋತ್ ।
ಉನ್ಮಾದನಂ ಮತ್ಕೋದಂಡಂ ವಿಧಾತ್ರಾಸ್ಯಾ ನಿವೇಶಿತಂ ॥ ೧೦ ॥

ಕಟಾಕ್ಷಾಣಾಮಾಶುಗತಿಂ ದೃಷ್ಟ್ವಾ ತಸ್ಯಾ ದ್ವಿಜೋತ್ತಮ ।
ಆಶುಗತ್ವಂ ನಿಜಾಸ್ತ್ರಾಣಾಂ ಶ್ರದ್ದಧೇ ನ ಚ ಚಾರುತಾಂ ॥ ೧೧ ॥

---

೭. ಎಲೈ ನಾರದ! ಮನ್ಮಥನು, ಸುಂದರಿಯೂ ಮುನಿಗಳ ಮನಸ್ಸನ್ನೂ ಮೋಹಗೊಳಿಸುವವಳೂ ಆದಂತ ಆ ದಕ್ಷಪುತ್ರಿ ರತೀದೇವಿಯನ್ನು ಮದುವೆಯಾಗಿ ತುಂಬಾ ಹರ್ಷಗೊಂಡನು.

೮. ಬಳಿಕ ಆ ತನ್ನ ಪತ್ನಿಯಾದ ರತಿಯನ್ನು ನೋಡಿ ತನ್ನ ಕಾಮಬಾಣಗಳಿಂದಲೇ ಹೊಡೆಯಲ್ಪಟ್ಟವನಾಗಿ ರತಿಯಲ್ಲಿ ಹೆಚ್ಚಾದ ಅನುರಾಗದಿಂದ ಮೋಹಗೊಂಡನು.

೯. ಆ ರತಿಯೂ ಸಹ ಸುಂದರಿಯೂ ಜಿಂಕೆಯಂತೆ ಚಂಚಲವಾದ ನೋಟಗಳುಳ್ಳವಳಾಗಿಯೂ, ಮನೋಹರವಾಗಿಯೂ ಸುಖವನ್ನುಂಟುಮಾಡುವವಳಾಗಿಯೂ ಇದ್ದು ಮನ್ಮಥನಿಗೆ ರತಿಕ್ರೀಡೆಯಲ್ಲಿ ಅನುಕೂಲಳಾಗಿದ್ದಳು.

೧೦. ಆ ರತಿಯ ಸುಂದರವಾದ ಹುಬ್ಬುಗಳೆರಡನ್ನು ನೋಡಿ ಮನ್ಮಥನು "ಬ್ರಹ್ಮನು ನನ್ನ (ಮನ್ಮಥನ) ಉನ್ಮಾದನ (ಮದಗೊಳಿಸುವ) ವೆಂಬ ಧನುಸ್ಸನ್ನೇನಾದರೂ ಈ ರತಿಯಲ್ಲಿರಿಸಿರುವನೆ ? ಎಂಬ ಸಂಶಯಕ್ಕೊಳಗಾದನು.

೧೧. ಮತ್ತು ಆ ರತೀದೇವಿಯ ಕಟಾಕ್ಷಗಳ ವೇಗವನ್ನೂ ಸೌಂದರ್ಯವನ್ನೂ ನೋಡಿ ಮದನನು ತನ್ನ ಬಾಣಗಳಲ್ಲಿ ವೇಗವೂ ಸುಂದರತೆಯೂ ಇಲ್ಲವೆಂದು ತಿಳಿದನು.

ತಸ್ಯಾಃ ಸ್ವಭಾವಸುರಭಿಧೀರಶ್ವಾಸಾನಿಲಂ ತಥಾ ।
ಆಘ್ರಾಯ ಮದನಃ ಶ್ರದ್ಧಾಂ ತ್ಯಕ್ತ್ವಾನ್ ಮಲಯಾನಿಲೇ ॥ ೧೨ ।

ಪೂರ್ಣೇಂದುಸದೃಶಂ ವಕ್ತ್ರಂ ದೃಷ್ಟ್ವಾ ಲಕ್ಷ್ಮಸುಲಕ್ಷಿತಂ ।
ನ ನಿಶ್ಚಿಕಾಯ ಮದನೋ ಭೇದಂ ತನ್ಮುಖಚಂದ್ರಯೋಃ ॥ ೧೩ ।

ಸುವರ್ಣಪದ್ಮಕಲಿಕಾತುಲ್ಯಂ ತಸ್ಯಾಃ ಕುಚದ್ವಯಂ ।
ರೇಜೇ ಚೂಚುಕಯುಗ್ಮೇನ ಭ್ರಮರೇಣೇವ ವೇಷ್ಟಿತಂ ॥ ೧೪ ।

ದೃಢಪೀನೋನ್ನತಘನಸ್ತನಮಧ್ಯಾದ್ವಿಲಂಬಿನೀಂ ।
ಆನಾಭಿತೋ ರೋಮರಾಜಿಂ ತನ್ವೀಂ ಚಾರ್ವಾಯತಾಂ ಶುಭಾಂ ॥ ೧೫ ।

ಜ್ಯಾಂ ಪುಷ್ಪಧನುಷಃ ಕಾಮಃ ಷಟ್ಪದಾವಳಿಸಂಯುತಾಂ ।
ವಿಸಸ್ಮಾರ ಚ ಯಸ್ಮಾತ್ತಾಂ ವಿಸೃಜ್ಯೈನಾಂ ನಿರೀಕ್ಷತೇ ॥ ೧೬ ।

---

೧೨. ಆ ರತಿಯ ಮಂದವೂ ಸುವಾಸನೆಯುಳ್ಳದುದೂ ಆದ ನಿಶ್ವಾಸ ವಾಯುವನ್ನು ಆಘ್ರಾಣಿಸಿ ಮನ್ಮಥನು ಮಲಯಪರ್ವತದ ಗಂಧದ ಗಾಳಿಯು ಉಪಯೋಗವಿಲ್ಲದುದೆಂದು ತಿಳಿದನು.

೧೩. ಆ ರತಿಯ ಹುಣ್ಣಿಮೆಯ ಚಂದಿರನಂತೆ ತುಂಬಿರುವ, ಕುಂಕುಮದ ಬೊಟ್ಟಿನಿಂದ ರಾರಾಜಿಸುತ್ತಿರುವ ಮುಖವನ್ನು ನೋಡಿ ಕಾಮನು, ಅವಳಮುಖಕ್ಕೂ ಚಂದ್ರನಿಗೂ ಭೇದವನ್ನೇ ತಿಳಿಯದವನಾದನು.

೧೪. ನೀಲವಾದ ಅಗ್ರಭಾಗದಿಂದ ಕೂಡಿದ ಆ ರತಿಯ ಸ್ತನಗಳೆರಡ ದುಂಬಿಯೊಡನಿರುವ ಸುವರ್ಣಮಯವಾದ ಕಮಲದ ಮೊಗ್ಗಿನಂತೆ ರಮಣೀಯವಾ ತೋರುತ್ತಿತ್ತು.

೧೫-೧೬ ಕಠಿಣವೂ, ಉಬ್ಬಿದುಂಡಾಗಿಯೂ ಆಗಿ ಒಂದಕ್ಕೊಂದು ಸೇ ಕೊಂಡಿರುವ ಕುಚಗಳ ಮಧ್ಯಪ್ರದೇಶದಿಂದ ಹೊರಟು, ನಾಭಿಯವರೆಗೂ ಹೋಗಿ ಆಳವಾದ ಆ ನಾಭಿರಂಧ್ರದಲ್ಲಿ ನಾಲ್ಕು ಕಡೆಗಳಲ್ಲಿ ಚರ್ಮದಿಂದ ಕೂಡಿದ ಸೂಕ್ಷ್ಮವೂ ಸುಂದರವೂ, ನೀಳವೂ, ಮನೋಹರವೂ ಆದ ರೋಮಪಂಕ್ತಿಯನ್ನು ನೋ ಮನ್ಮಥನು ದುಂಬಿಗಳಿಂದ ಮುತ್ತಿರುವ ತನ್ನ ಕುಸುಮ ಧನುಸ್ಸಿನ ಮೌರ್ವಿಯೆಂದ

ಗಂಭೀರನಾಭಿರಂಧ್ರಾಂತಶ್ಚ ತುಃಪಾರ್ಶ್ವತ್ವಗಾವೃತಂ ।
ಆನನಾಬ್ಜೇಕ್ಷಣದ್ವಂದ್ವಮಾರಕ್ತಕಮಲಂ ಯಥಾ　　　॥ ೧೭ ॥

ಕ್ಷೀಣಮಧ್ಯೇನ ವಪುಷಾ ನಿಸರ್ಗಾಷ್ಟಾಪದಪ್ರಭಾ ।
ರುಕ್ಮವೇದೀವ ದದೃಶೇ ಕಾಮೇನ ರಮಣೀ ಹಿ ಸಾ　　　॥ ೧೮ ॥

ರಂಭಾಸ್ತಂಭಾಯತಂ ಸ್ನಿಗ್ಧಂ ಯದೂರುಯುಗಲಂ ಮೃದು ।
ನಿಜಶಕ್ತಿಸಮಂ ಕಾಮೋ ವೀಕ್ಷಾಂಚಕ್ರೇ ಮನೋಹರಂ　　　॥ ೧೯ ॥

ಆರಕ್ತಪಾರ್ಷ್ಣಿಪಾದಾಗ್ರಪ್ರಾಂತಭಾಗಂ ಪದದ್ವಯಂ ।
ಅನುರಾಗಮಿವಾನೇನೇ ಮಿತ್ರಂ ತಸ್ಯಾ ಮನೋಭವಃ　　　॥ ೨೦ ॥

ತಸ್ಯಾಃ ಕರಯುಗಂ ರಕ್ತಂ ನಖರೈಃ ಕಿಂಶುಕೋಪಮೈಃ ।
ವೃತ್ತಾಭಿರಂಗುಳೀಭಿಶ್ಚ ಸೂಕ್ಷ್ಮಾಗ್ರಾಭಿರ್ಮನೋಹರಂ　　　॥ ೨೧ ॥

---

ತಿಳಿದು ಅದನ್ನೇ ಎಡಬಿಡದೆ ನೋಡುತಿದ್ದನು. ಆ ರತಿಯ ಕಮಲದಂತಿರುವ ಮುಖದಲ್ಲಿರುವ ಕಣ್ಣುಗಳು ರಕ್ತಕಮಲಗಳಂತೆ ಪ್ರಕಾಶಿಸುತ್ತಿದ್ದವು.

೧೭. ಮತ್ತು ಅವಳ ಮುಖಕಮಲದಲ್ಲಿನ ನಯನಗಳು ರಕ್ತಕಮಲದಂತೆ ಶೋಭಿಸುತ್ತಲಿದ್ದವು.

೧೮. ಚಿಕ್ಕದಾದ ನಡುವುಳ್ಳವಳೂ ಶರಭಮೃಗದಂತಿರುವ ಶರೀರವುಳ್ಳವಳೂ ಆದ ಆ ರತೀದೇವಿಯು ಸುವರ್ಣವೇದಿಕೆಯಂತೆ ಮನ್ಮಥನಿಗೆ ಕಾಣಿಸಿದಳು.

೧೯. ಆ ರತಿಯು ಬಾಳೆಯಮರದಂತೆ ನಯವೂ, ನೀಳವೂ, ವರ್ತುಲವೂ, ಮೃದುವೂ ತನ್ನ ಶಕ್ತಿಗೆ ಅನುರೂಪವೂ ಆಗಿದ್ದ ಮನೋಹರವಾದಂತಹ ತೊಡೆಗಳೆರಡನ್ನು ಮನ್ಮಥನು ನೋಡಿದನು.

೨೦. ತುಂಬಾ ಕೆಂಪಾದ ಹಿಮ್ಮಡಿ ಮತ್ತು ಮುಂಭಾಗಗಳುಳ್ಳಂತಹ ಹೆಜ್ಜೆಗಳನ್ನು ನೋಡಿ ತನ್ನಲ್ಲಿರುವ ಅವಳ ಅನುರಾಗವು ಅಲ್ಲಿ (ಪಾದಗಳಲ್ಲಿ) ಪ್ರಕಟವಾಗಿರುವುದೆ? ಎಂದು ಊಹಿಸಿದನು.

೨೧. ಅವಳ ಕೈಗಳು ಮುರಕೊನ್ನೆಯ ಚಿಗುರಿನಂತೆ ನಸುಗೆಂಪಾದ ಉಗುರುಗಳುಗಳಿಂದ ಕೆಂಪಾಗಿತ್ತು. ಬೆರಳುಗಳು ದುಂಡನೆಯವಾಗಿಯೂ ಚಿಕ್ಕದಾದ ಕೊನೆಯ ಭಾಗವುಳ್ಳವುಗಳಾಗಿ ಕೈಗಳನ್ನು ಅಲಂಕರಿಸಿದ್ದವು.

ತದ್ಬಾಹುಯುಗಲಂ ಕಾಂತಂ ಮೃಣಾಲಯುಗಲಾಯತಂ ।
ಮೃದು ಸ್ನಿಗ್ಧಂ ಚಿರಂ ರಾಜತ್ಕಾಂತಿತೋಯಪ್ರವಾಹವತ್ ॥ ೨೨ ॥

ನೀಲನೀರದಸಂಕಾಶಃ ಕೇಶಪಾಶೋ ಮನೋಹರಃ ।
ಚಮರೀಬಾಲಭರವದ್ವಿಭಾತಿ ಸ್ಮ ಸ್ಮರಪ್ರಿಯಃ ॥ ೨೩ ॥

ಏತಾದೃಶೀಂ ರತಿಂ ನಾಮ್ನಾ ಪ್ರಾಲೇಯಾದ್ರಿಸಮುದ್ಭವಾಂ ।
ಗಂಗಾಮಿವ ಮಹಾದೇವೋ ಜಗ್ರಾಹೋತ್ಫುಲ್ಲಲೋಚನಃ ॥ ೨೪ ॥

ವಕ್ತ್ರಪದ್ಮಾಂ ಚಾರುಬಾಹುಮೃಣಾಲಶಕಲಾನ್ವಿತಾಂ ।
ಭ್ರೂಯುಗ್ಮವಿಭ್ರಮವ್ರಾತತನೂರ್ಮಿಪರಿರಾಜಿತಾಂ ॥ ೨೫ ॥

ಕಟಾಕ್ಷಪಾತಭೃಂಗೌಘಾಂ ನೇತ್ರನೀಲೋತ್ಪಲಾನ್ವಿತಾಂ ।
ತನುರೋಮಾಲಿಶೈವಾಲಾಂ ಮನೋದ್ರುಮವಿಲಾಸಿನೀಂ ॥ ೨೬ ॥

---

೨೨. ಆ ರತಿಯ ಬಾಹುಗಳು ತಾವರೆದಂಟಿನಂತೆ ಮೃದುವೂ, ನಯವೂ, ನೀಳವೂ, ಸುಂದರವೂ, ಆಗಿದ್ದ ಸೌಂದರ್ಯಪ್ರವಾಹವನ್ನು ಸುರಿಸುತ್ತಲಿದ್ದಿತು.

೨೩. ಕಾಳಮೇಘದಂತೆ ಕಪ್ಪಾದ ಮತ್ತು ಮನೋಹರವಾದ ಅವಳ ಸುಂದರ ಕೇಶಪಾಶವು ಚಮರೀಮೃಗದ ಚೌರಿಗಳಂತೆ ಮನೋಹರವಾಗಿಯೂ ತುಂಬಾ ಪ್ರಿಯವಾಗಿಯೂ ಮನ್ಮಥನಿಗೆ ಕಾಣಿಸಿತು.

೨೪. ಹೀಗೆ ತುಂಬಾ ಸುಂದರಿಯಾಗಿರುವ ರತಿಯನ್ನು, ಹಿಮಾಲಯದಿಂದ ಜನಿಸಿದ ಗಂಗೆಯನ್ನು ಮಹಾದೇವನು ಸ್ವೀಕರಿಸಿದಂತೆ, ಮನ್ಮಥನೂ ಸಹ ಸಂತೋಷದಿಂದ ಸ್ವೀಕರಿಸಿದನು.

೨೫-೨೬. ಮತ್ತು ಆ ಕಾಂತಿಜಲದಲ್ಲಿ ಇವಳ ಕುಡಿನೋಟಗಳೇ ದುಂಬಿಗಳಾಗಿಯೂ, ನೇತ್ರಗಳೇ ಕನ್ನೈದಿಲೆಗಳಾಗಿಯೂ, ಸೂಕ್ಷ್ಮವಾದ ರೋಮಪಂಕ್ತಿಯೇ ಪಾಚಿಯಾಗಿಯೂ, ಮನಸ್ಸೇ ದಡದಲ್ಲಿದ್ದು ನಾಶವಾಗುವ ವೃಕ್ಷಗಳಾಗಿಯೂ ಇದ್ದವು. ಆಳವಾದ ಇವಳ ನಾಭಿಯೇ ಆ ಕಾಂತಿಜಲದಲ್ಲಿ ಮಡುವು. ದಕ್ಷಪ್ರಜಾಪತಿಯೇ ಹಿಮವತ್ಪರ್ವತವು. ಈ ರೀತಿ ಗಂಗಾನದಿಯಲ್ಲಿರುವ ಗುಣಗಳಿಂದ ಶೋಭಿಸುವ ಆ ರತಿದೇವಿಯನ್ನು ಮದನನು ನೋಡಿ, ಈಶ್ವರನು ಗಂಗಾನದಿಯನ್ನು ಸ್ವೀಕರಿಸಿದಂತೆ ಆ ರತಿಯನ್ನು ಆನಂದದಿಂದ ಸ್ವೀಕರಿಸಿದನು.

ನಿಮ್ನನಾಭಿಹ್ರದಾಂ ಕ್ಷಾಮಾಂ ಸರ್ವಾಂಗರಮಣೀಯಿಕಾಂ ।
ಸರ್ವಲಾವಣ್ಯಸದನಾಂ ಶೋಭಮಾನಾಂ ರಮಾಮಿವ ॥ ೨೭ ॥

ದ್ವಾದಶಾಭರಣೈರ್ಯುಕ್ತಾಂ ಶೃಂಗಾರೈಃ ಷೋಡಶೈರ್ಯುತಾಂ ।
ಮೋಹಿನೀಂ ಸರ್ವಲೋಕಾನಾಂ ಭಾಸಯಂತೀಂ ದಿಶೋ ದಶ ॥ ೨೮ ॥

ಇತಿ ತಾಂ ಮದನೋ ವೀಕ್ಷ್ಯ ರತಿಂ ಜಗ್ರಾಹ ಸೋತ್ಸುಕಃ ।
ರಾಗಾದುಪಸ್ಥಿತಾಂ ಲಕ್ಷ್ಮೀಂ ಹೃಷೀಕೇಶ ಇವೋತ್ತಮಾಂ ॥ ೨೯ ॥

ನೋವಾಚ ಚ ತದಾ ದಕ್ಷಂ ಕಾಮೋ ಮೋದಭವಾತ್ತತಃ ।
ವಿಸ್ಮೃತ್ಯ ದಾರುಣಂ ಶಾಪಂ ವಿಧಿದತ್ತಂ ವಿಮೋಹಿತಃ ॥ ೩೦ ॥

ಕಾನೋऽತೀವ ಸುಖಂ ಪ್ರಾಪ್ಯ ಸರ್ವದುಃಖಕ್ಷಯಂ ಗತಃ ।
ದಕ್ಷಜಾಪಿ ರತಿಃ ಕಾಮಂ ಪ್ರಾಪ್ಯ ಚಾಪಿ ಜಹರ್ಷ ಹ ॥ ೩೧ ॥

---

೨೭-೨೮. ಮತ್ತು ಆ ರತಿಯು ಸರ್ವಾಂಗಲಾವಣ್ಯವುಳ್ಳವಳಾಗಿದ್ದು ಲಕ್ಷ್ಮಿ ಯಂತೆ ಶೋಭಿಸುತ್ತಲಿದ್ದಳು. ಹನ್ನೆರಡು ಅಲಂಕಾರಗಳಿಂದಲೂ ಹದಿನಾರು ಶೃಂಗಾರ ವಸ್ತುಗಳಿಂದಲೂ ಶೋಭಿಸುತ್ತಲಿದ್ದಳು. ಸಕಲ ಜನಗಳನ್ನೂ ತನ್ನ ಸೌಂದರ್ಯ ದಿಂದ ಮೋಹಗೊಳಿಸುವಂತಿದ್ದು ತನ್ನ ಶರೀರದ ಕಾಂತಿಯಿಂದ ಹತ್ತುದಿಕ್ಕುಗಳನ್ನೂ ಬೆಳಗುತ್ತಲಿದ್ದಳು.

೨೯. ಹೀಗೆ ಲಾವಣ್ಯವತಿಯಾದ ಆ ರತೀದೇವಿಯನ್ನು ನೋಡಿ ಮನ್ಮಥನು, ಉತ್ತಮಳಾದ ಲಕ್ಷ್ಮಿಯನ್ನು ವಿಷ್ಣುವು ಪರಿಗ್ರಹಿಸಿದಂತೆ ಅನುರಾಗದಿಂದ ಪರಿಗ್ರಹಿ ಸಿದನು.

೩೦. ಆಗ ಮನ್ಮಥನು ರತಿಯನ್ನು ಪಡೆದು ತುಂಬಾ ಹರ್ಷಗೊಂಡವನಾಗಿ ದಕ್ಷನನ್ನು ಕುರಿತು ಏನೂ ಹೇಳಲಿಲ್ಲ. ಬ್ರಹ್ಮನು ಕೊಟ್ಟ ಕ್ರೂರ ಶಾಪವನ್ನೂ ಮರೆತು ಆ ರತಿಯಲ್ಲಿ ಮೋಹಗೊಂಡನು.

೩೧. ಕಾಮನು ರತಿಯಿಂದ ತುಂಬಾ ಸುಖವನ್ನು ಪಡೆದವನಾಗಿ ದುಃಖ ವೇನೂ ಇಲ್ಲದವನಾದನು. ದಕ್ಷಪುತ್ರಿಯಾದ ರತಿಯೂ ಸಹ ಮನ್ಮಥನನ್ನು ಪತಿಯಾಗಿ ಪಡೆದು ತುಂಬಾ ಹರ್ಷಗೊಂಡಳು.

ತದಾ ಮಹೋತ್ಸವಸ್ತತ್ರ ಬಭೂವ ಸುಖವರ್ಧನಃ ।
ದಕ್ಷಃ ಪ್ರೀತತರಶ್ಚಾಸೀನ್ಮುಮುದೇ ತನಯಾ ಮಮ ॥ ೩೨ ॥

ರರಾಜ ಸ ತಯಾ ಸಾರ್ಧಂ ಭಿನ್ನಶ್ಚಾರುವಚಃ ಸ್ಮರಃ ।
ಘನಃ ಯಥಾ ಇವ ಸಂಧ್ಯಾಯಾಂ ಸೌದಾಮಿನ್ಯಾ ಮನೋಜ್ಞಯಾ ॥ ೩೩ ॥

ಇತಿ ರತಿಪತಿರುಚ್ಚೈರ್ಮೋದಯುಕ್ತೋ ರತಿಂ ತಾಂ
ಹೃದುಪರಿ ಜಗೃಹೇ ವೈ ಯೋಗದರ್ಶೀವ ವಿದ್ಯಾಂ ।
ರತಿರಪಿ ಪತಿಮಗ್ರ್ಯಂ ಪ್ರಾಪ್ಯ ಸಾ ಚಾಪಿ ರೇಜೇ
ಹರಿಮಿವ ಕಮಲಾ ವೈ ಪೂರ್ಣಚಂದ್ರೋಪಮಾಸ್ಯಾ ॥ ೩೪ ॥

ಇತಿ ಶ್ರೀ ಶಿವಪುರಾಣೇ ರುದ್ರಸಂಹಿತಾಯಾಂ
ಸತೀಖಂಡೇ ಚತುರ್ಥೋಽಧ್ಯಾಯಃ

೩೨. ಎಲೈ ನಾರದ! ಆಗ ರತಿಮನ್ಮಥರಿಗೆವಿವಾಹಮಹೋತ್ಸವವು ಅತ್ಯಂತ ವಿಜೃಂಭಣೆಯಿಂದ ನಡೆಯಿತು. ದಕ್ಷನು ತನ್ನ ಪುತ್ರಿಯು ಸುಖವನ್ನು ಪಡೆದವಳೆಂದು ತಿಳಿದು ತುಂಬಾ ಸಂತೋಷಗೊಂಡನು.

೩೩. ಆ ರತೀದೇವಿಯೊಡನೆ ಮದನನು ಪ್ರಿಯವಾದ ಮಾತುಗಳನ್ನಾಡುತ್ತಾ ವಿಹರಿಸುತ್ತಲಿದ್ದು ಸಂಜೆಕಾಲದಲ್ಲಿ ಮೇಘವು ಮನೋಹರವಾದ ಮಿಂಚಿನಿಂದ ಪ್ರಕಾಶಿಸುವಂತೆ ಆ ರತಿಯಿಂದ ಪ್ರಕಾಶಿಸಿದನು.

೩೪. ಹೀಗೆ ಮನ್ಮಥನು, ಯೋಗಿಯು ಯೋಗವಿದ್ಯೆಯನ್ನು ಹೃದಯದಲ್ಲಿ ಧರಿಸುವಂತೆ ರತೀದೇವಿಯನ್ನು ಸಂತೋಷದಿಂದ ತನ್ನ ಹೃದಯದಲ್ಲಿ ಧರಿಸಿದನು. ಎಂದರೆ ಆ ರತಿಯಲ್ಲಿ ತುಂಬಾ ಅನುರಾಗವುಳ್ಳವನಾದನು. ರತೀದೇವಿಯೂ ಸಹ ಶ್ರೇಷ್ಠನಾದ ಮನ್ಮಥನನ್ನು ಪತಿಯಾಗಿ ಪಡೆದು, ಶ್ರೀ ಹರಿಯನ್ನು ಪಡೆದ ಚಂದ್ರಮುಖಿಯಾದ ಲಕ್ಷ್ಮೀದೇವಿಯಂತೆ ಪ್ರಕಾಶಿಸಿದಳು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಪಂಚಮೋಽಧ್ಯಾಯಃ

॥ ಸೂತ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ಬ್ರಹ್ಮಣೋ ಮುನಿಸತ್ತಮಃ ।
ಸ ಮುದೋವಾಚ ಸಂಸ್ಮೃತ್ಯ ಶಂಕರಂ ಪ್ರೀತಮಾನಸಃ ॥ ೧ ॥

॥ ನಾರದ ಉವಾಚ ॥

ಬ್ರಹ್ಮನ್ ವಿಧೇ ಮಹಾಭಾಗ ವಿಷ್ಣುಶಿಷ್ಯ ಮಹಾಮತೇ ।
ಅದ್ಭುತಾ ಕಥಿತಾ ಲೀಲಾ ತ್ವಯಾ ಚ ಶಶಿಮೌಲಿನಃ ॥ ೨ ॥

---

### ಐದನೆಯ ಅಧ್ಯಾಯವು.

೧. ಸೂತಮುನಿಯು ಹೇಳಿದನು :—ಎಲೈ ಶೌನಕಾದಿಮುನಿಗಳೆ ! ಈರೀತಿಯಾಗಿ ಬ್ರಹ್ಮನು ಹೇಳಿದ ರತಿಮನ್ಮಥರ ವಿವಾಹವನ್ನು ಕೇಳಿ ಮುನಿಶ್ರೇಷ್ಠನಾದ ನಾರದಮುನಿಯು ಸಂತೋಷಗೊಂಡು ಶಂಕರನನ್ನು ಸ್ಮರಿಸಿ ಬ್ರಹ್ಮನನ್ನು ಪುನಃ ಪ್ರಶ್ನೆಮಾಡಿದನು.

೨. ನಾರದಮುನಿಯು ಕೇಳಿದನು :—ಸರ್ವಜ್ಞನೂ ವಿಷ್ಣುವಿನ ಶಿಷ್ಯನೂ ಮಹಾಮಹಿಮನೂ ಆದ ಓ ವಿಧಿಯೇ, ನೀನು ಶಿವನ ಸಂಬಂಧವಾದ ಅದ್ಭುತವಾದ ಲೀಲೆಯನ್ನು ಚನ್ನಾಗಿ ಹೇಳಿರುವೆಯಷ್ಟೆ ?

ಗೃಹೀತದಾರೇ ಮದನೇ ಹೃಷ್ಟೇ ಹಿ ಸ್ವಗೃಹಂ ಗತೇ ।
ದಕ್ಷೇ ಚ ಸ್ವಗೃಹಂ ಯಾತೇ ತಥಾ ಹಿ ತ್ವಯಿ ಕರ್ತರಿ ॥ ೩ ॥

ಮಾನಸೇಷು ಚ ಪುತ್ರೇಷು ಗತೇಷು ಸ್ವಸ್ವಧಾಮಸು ।
ಸಂಧ್ಯಾ ಕುತ್ರ ಗತಾ ಸಾ ಚ ಬ್ರಹ್ಮಪುತ್ರೀ ಪಿತೃಪ್ರಸೂಃ ॥ ೪ ॥

ಕಿಂ ಚಕಾರ ಚ ಕೇನೈವ ಪುರುಷೇಣ ವಿವಾಹಿತಾ ।
ಏತತ್ಸರ್ವಂ ವಿಶೇಷೇಣ ಸಂಧ್ಯಾಯಾಶ್ಚರಿತಂ ವದ ॥ ೫ ॥

॥ ಸೂತ ಉವಾಚ ॥
ಇತ್ಯಾಕರ್ಣ್ಯ ವಚಸ್ತಸ್ಯ ಬ್ರಹ್ಮಪುತ್ರಸ್ಯ ಧೀಮತಃ ।
ಸಂಸ್ಮೃತ್ಯ ಶಂಕರಂ ಭಕ್ತ್ಯಾ ಬ್ರಹ್ಮಾ ಪ್ರೋವಾಚ ತತ್ತ್ವವಿತ್ ॥ ೬ ॥

॥ ಬ್ರಹ್ಮೋವಾಚ ॥
ಶೃಣು ತ್ವಂ ಚ ಮುನೇ ಸರ್ವಂ ಸಂಧ್ಯಾಯಾಶ್ಚರಿತಂ ಶುಭಂ ।
ಯಚ್ಛ್ರುತ್ವಾ ಸರ್ವಕಾಮಿನ್ಯಃ ಸಾಧ್ವ್ಯಃ ಸ್ಯುಸ್ಸರ್ವದಾ ಮುನೇ ॥ ೭ ॥

---

೩-೫. ಮನ್ಮಥನು ರತಿಯನ್ನು ಮದುವೆಯಾಗಿ ತನ್ನ ಸ್ಥಾನಕ್ಕೆ ತೆರಳಿದ ಬಳಿಕ ದಕ್ಷಬ್ರಹ್ಮ ಮತ್ತು ಸೃಷ್ಟಿಕರ್ತವಾದ ನಾನೂ, ಮಾನಸಪುತ್ರರೂ ಇವರೆಲ್ಲರೂ ಸಹ ತಮ್ಮತಮ್ಮ ಸ್ಥಾನಕ್ಕೆ ತೆರಳಲು, ಬ್ರಹ್ಮಪುತ್ರಿಯೂ ಪಿತೃಗಳಿಗೆ ಮಾತೆಯೂ ಆದ ಸಂಧ್ಯಾದೇವಿಯು ಎಲ್ಲಿಗೆ ಹೋದಳು ? ಮುಂದೇನು ಮಾಡಿದಳು ? ಯಾವ ಪುರುಷನನ್ನು ಮದುವೆಯಾದಳು ? ಓ ವಿಧಿಯೇ ! ಈ ಸಂಧ್ಯೆಯ ಚರಿತವನ್ನೆಲ್ಲಾ ಹೇಳು ಎಂದನು.

೬. ಸೂತಮುನಿಯು ಹೇಳಿದನು :—ಈರೀತಿಯಾಗಿ ಬುದ್ಧಿಶಾಲಿಯಾದ ನಾರದಮುನಿಯ ಪ್ರಶ್ನೆಯನ್ನು ಕೇಳಿ ತತ್ವವಿತ್ತಾದ ಬ್ರಹ್ಮನು ಶಂಕರನನ್ನು ಭಕ್ತಿಯಿಂದ ಧ್ಯಾನಿಸಿ ಹೇಳಲುಪಕ್ರಮಿಸಿದನು.

೭. ಬ್ರಹ್ಮನು ಹೇಳಿದನು :—ಎಲೈ ನಾರದಮುನಿ ! ಸಂಧ್ಯಾದೇವಿಯ ಚರಿತ್ರೆಯೆಲ್ಲವನ್ನೂ ಹೇಳುವೆನು ಈ ಚರಿತ್ರೆಯನ್ನು ಕೇಳಿದರೆ ಸ್ತ್ರೀಯರೆಲ್ಲರೂ ಸದಾ ಪತಿವ್ರತೆಯರಾಗುವರು.

ಸಾ ಚ ಸಂಧ್ಯಾ ಸುತಾ ಮೇ ಹಿ ಮನೋಜಾತಾ ಪುರಾಭವತ್ ।
ತಪಸ್ತಪ್ತ್ವಾ ತನುಂ ತ್ಯಕ್ತ್ವಾ ಸೈವ ಜಾತಾ ತ್ವರುಂಧತೀ ॥ ೮ ॥

ಮೇಧಾತಿಥೇಸ್ಸುತಾ ಭೂತ್ವಾ ಮುನಿಶ್ರೇಷ್ಠಸ್ಯ ಧೀಮತೀ ।
ಬ್ರಹ್ಮವಿಷ್ಣುಮಹೇಶಾನವಚನಾಚ್ಚರಿತವ್ರತಾ ॥ ೯ ॥

ಪತಿಂ ವವ್ರೇ ಮಹಾತ್ಮಾನಂ ವಸಿಷ್ಠಂ ಶಂಸಿತವ್ರತಂ ।
ಪತಿವ್ರತಾ ಚ ಮುಖ್ಯಾಭೂತ್ಪೂಜ್ಯಾ ವಂದ್ಯಾ ತ್ವಭೀಷಣಾ ॥ ೧೦ ॥

॥ ನಾರದ ಉವಾಚ ॥

ಕಥಂ ತಯಾ ತಪಸ್ತಪ್ತಂ ಕಿಮರ್ಥಂ ಕುತ್ರ ಸಂಧ್ಯಯಾ ।
ಕಥಂ ಶರೀರಂ ಸಾ ತ್ಯಕ್ತ್ವಾಽಭವನ್ಮೇಧಾತಿಥೇಸ್ಸುತಾ ॥ ೧೧ ॥

ಕಥಂ ವಾ ವಿಹಿತಂ ದೇವೈರ್ಬ್ರಹ್ಮವಿಷ್ಣುಶಿವೈಃ ಪತಿಂ ।
ವಸಿಷ್ಠಂ ತು ಮಹಾತ್ಮಾನಂ ಸಂವವ್ರೇ ಶಂಸಿತವ್ರತಂ ॥ ೧೨ ॥

---

೮ ಆ ಸಂಧ್ಯೆಯು ನನ್ನ ಮನಸ್ಸಿನಿಂದ ಜನಿಸಿದ ಪುತ್ರಿಯು. ಅವಳು ತಪಸ್ಸನ್ನಾಚರಿಸಿ ಶರೀರವನ್ನು ಬಿಟ್ಟು ಮುಂದೆ ಅರುಂಧತಿಯಾಗಿ ಜನಿಸಿದಳು.

೯-೧೦. ಆ ಸಂಧ್ಯೆಯು ಮುನಿಶ್ರೇಷ್ಠನಾದ ಮೇಧಾತಿಥಿಯ ಮಗಳಾಗಿ ಜನಿಸಿ ಬ್ರಹ್ಮವಿಷ್ಣುಮಹೇಶ್ವರರ ಅಪ್ಪಣೆಯಂತೆ ತಪಸ್ಸನ್ನಾಚರಿಸಿ, ಮಹಾತ್ಮನೂ ಮಹಾತಪಸ್ವಿಯೂ ಆದಂತಹ ವಸಿಷ್ಠಮುನಿಯನ್ನು ಪತಿಯಾಗಿ ವರಿಸಿ ಮದುವೆಯಾದಳು. ಮುಂದೆ ಅವಳು ಪತಿವ್ರತೆಯರಲ್ಲಿ ಉತ್ತಮಳೂ ಪೂಜಿಸಲು ಮತ್ತು ನಮಸ್ಕರಿಸಲು ಯೋಗ್ಯಳೂ, ಶಾಂತಳೂ ಆದ ಮಹಾಪತಿವ್ರತೆಯಾದಳು.

೧೧. ನಾರದಮುನಿಯು ಪುನಃ ಪ್ರಶ್ನಿಸಿದನು :—ಆ ಸಂಧ್ಯೆಯು ತಪಸ್ಸನ್ನು ಹೇಗೆ ಆಚರಿಸಿದಳು ? ಎಲ್ಲಿ ಏತಕ್ಕಾಗಿ ಆಚರಿಸಿದಳು ? ಅವಳು ಹೇಗೆ ಶರೀರವನ್ನು ತ್ಯಜಿಸಿ ಮೇಧಾತಿಥಿಮುನಿಯ ಸುತೆ ಅರುಂಧತಿಯಾಗಿ ಜನಿಸಿದಳು ?

೧೨. ಬ್ರಹ್ಮವಿಷ್ಣುಮಹೇಶ್ವರರ ಮಾತಿನಂತೆ ತಪಸ್ವಿಯೂ ಮಹಾತ್ಮನೂ ಆದ ವಸಿಷ್ಠಮುನಿಯನ್ನು ಪತಿಯನ್ನಾಗಿ ಹೇಗೆ ವರಿಸಿದಳು ?

**ಏತನ್ಮೇ ಶ್ರೋಷ್ಯಮಾಣಾಯ ವಿಸ್ತರೇಣ ಪಿತಾಮಹ ।**
**ಕೌತೂಹಲಮರುಂಧತ್ಯಾಶ್ಚರಿತಂ ಬ್ರೂಹಿ ತತ್ತ್ವತಃ ॥ ೧೩ ॥**

**॥ ಬ್ರಹ್ಮೋವಾಚ ॥**

**ಅಹಂ ಸ್ವತನಯಾಂ ಸಂಧ್ಯಾಂ ದೃಷ್ಟ್ವಾ ಪೂರ್ವಮಥಾತ್ಮನಃ ।**
**ಕಾಮಾಯಾಶು ಮನೋsಕಾರ್ಷಂ ತ್ಯಕ್ತ್ವಾ ಶಿವಭಯಾಚ್ಚ ಸಾ ॥ ೧೪ ॥**

**ಸಂಧ್ಯಾಯಾಶ್ಚಲಿತಂ ಚಿತ್ತಂ ಕಾಮಬಾಣವಿಲೋಡಿತಂ ।**
**ಋಷೀಣಾಮಪಿ ಸಂರುದ್ಧಮಾನಸಾನಾಂ ಮಹಾತ್ಮನಾಂ ॥ ೧೫ ॥**

**ಭರ್ಗಸ್ಯ ವಚನಂ ಶ್ರುತ್ವಾ ಸೋಪಹಾಸಂ ಚ ಮಾಂ ಪ್ರತಿ ।**
**ಆತ್ಮನಶ್ಚಲಿತತ್ವಂ ವೈ ಹ್ಯಮರ್ಯಾದಮೃಷೀನ್ ಪ್ರತಿ ॥ ೧೬ ॥**

**ಕಾಮಸ್ಯ ತಾದೃಶಂ ಭಾವಂ ಮುನಿಮೋಹಕರಂ ಮುಹುಃ ।**
**ದೃಷ್ಟ್ವಾ ಸಂಧ್ಯಾ ಸ್ವಯಂ ತತ್ರೋಪಯಮಾಯಾತಿದುಃಖಿತಾ ॥ ೧೭ ॥**

---

೧೩. ಓ ಜಗತ್ತಿಗೆ ಪಿತಾಮಹನೆನಿಸಿದ ಬ್ರಹ್ಮನೇ! ಈ ಅರುಂಧತಿಯ ಚರಿತ್ರವನ್ನು ಕೇಳಬೇಕೆಂಬ ಕುತೂಹಲವು ನನಗೆ ಅಧಿಕವಾಗಿರುವುದು. ಅದನ್ನು ನನಗೆ ವಿಸ್ತಾರವಾಗಿ ಹೇಳು ಎಂದು ಕೇಳಿದನು.

೧೪. ಬ್ರಹ್ಮನು ಹೇಳಿದನು ;—ಹಿಂದೆ ನಾನು ನನ್ನ ಮಾನಸಪುತ್ರಿಯಾದ ಸಂಧ್ಯೆಯನ್ನು ನೋಡಿ ಕಾಮಸುಖವನ್ನು ಹೊಂದುವ ಮನಸ್ಸುಳ್ಳವನಾಗಿದ್ದೆನು. ಶಿವನ ಭಯದಿಂದ ಅವಳನ್ನು ಬಿಟ್ಟುಬಿಟ್ಟೆನು.

೧೫. ಮತ್ತೂ ಆಗ ಮನ್ಮಥಬಾಣಗಳಿಂದ ಸಂಧ್ಯೆಯ ಮನಸ್ಸೂ ಚಂಚಲವಾಗಿ ಕಾಮವಿಕಾರವನ್ನು ಹೊಂದಿತು.

೧೬-೧೭. ಆಮೇಲೆ ಆ ಶಿವನು ನನ್ನನ್ನು ಕುರಿತು ಹಾಸ್ಯಪೂರ್ವಕವಾಗಿ ಹೇಳಿದುದನ್ನೂ, ತಾನೂ ಸಹ ಋಷಿಗಳ ಎದುರಿನಲ್ಲಿ ಮರ್ಯಾದೆಯಿಲ್ಲದೆ ಕಾಮವಿಕಾರವನ್ನು ಪ್ರಕಟಿಸಿದುದನ್ನೂ, ಮುನಿಗಳನ್ನೂ ಮೋಹಗೊಳಿಸುವ ಮನ್ಮಥನ ಚೇಷ್ಟೆಗಳನ್ನೂ ನೋಡಿ ತನ್ನ ಅಕಾರ್ಯದ ವಿಷಯದಲ್ಲಿ ಪಶ್ಚಾತ್ತಾಪಪಟ್ಟು ತುಂಬಾ ದುಃಖಿಸಿದಳು.

ತಸ್ತು ಬ್ರಹ್ಮಣಾ ಶಪ್ತೇ ಮದನೇ ಚ ಮಯಾ ಮುನೇ ।
ಂತರ್ಭೂತೇ ಮಯಿ ಶಿವೇ ಗತೇ ಚಾಪಿ ನಿಜಾಸ್ಪದೇ　　　॥ ೧೮ ॥

ಮರ್ಷವಶಮಾಪನ್ನಾ ಸಾ ಸಂಧ್ಯಾ ಮುನಿಸತ್ತಮ ।
ಮ ಪುತ್ರೀ ವಿಚಾರ್ಯೈವಂ ತದಾ ಧ್ಯಾನಪರಾಽಭವತ್　　　॥ ೧೯ ॥

ಧ್ಯಾಯಂತೀ ಕ್ಷಣಮೇವಾಶು ಪೂರ್ವಂ ವೃತ್ತಂ ಮನಸ್ವಿನೀ ।
ದಂ ವಿಮಮೃಶೇ ಸಂಧ್ಯಾ ತಸ್ಮಿನ್ ಕಾಲೇ ಯಥೋಚಿತಂ　　　॥ ೨೦ ॥

॥ ಸಂಧ್ಯೋವಾಚ ॥

ಉತ್ಪನ್ನಮಾತ್ರಾಂ ಮಾಂ ದೃಷ್ಟ್ವಾ ಯುವತೀಂ ಮದನೇರಿತಃ ।
ಅಕಾರ್ಷೀತ್ಸಾನುರಾಗೋಽಯಮಭಿಲಾಷಂ ಪಿತಾ ಮಮ　　　॥ ೨೧ ॥

ಶ್ಯತಾಂ ಮಾನಸಾನಾಂ ಚ ಮುನೀನಾಂ ಭಾವಿತಾತ್ಮನಾಂ ।
ದೃಷ್ಟ್ವೈವ ಮಾಮರ್ಯಾದಂ ಸಕಾಮಮಭವನ್ಮನಃ　　　॥ ೨೨ ॥

೧೮-೧೯. ಎಲೈ ನಾರದ! ಆಮೇಲೆ ನಾನು ಮನ್ಮಥನನ್ನು ಶಪಿಸಿ ಶಾಪ ವೃತ್ತಿಯನ್ನು ಹೇಳಿ ಅಂತರ್ಧಾನನಾಗಲು ಶಿವನೂ ಸಹ ತನ್ನ ಸ್ಥಾನಕ್ಕೆ ತೆರಳಿದನು. ಃಖಿತಳಾದ ನನ್ನ ಪುತ್ರಿ ಸಂಧ್ಯೆಯು ತುಂಬಾ ಚಿಂತಿಸುತ್ತಾ ಧ್ಯಾನಪರವಶ ಾದಳು.

೨೦. ಹೀಗೆ ಸ್ವಲ್ಪಹೊತ್ತು ಧ್ಯಾನಿಸುತ್ತಾ ಆ ಸಂಧ್ಯೆಯು ಹಿಂದೆ ನಡೆದು ನ್ನು ಯಥಾಯೋಗ್ಯವಾಗಿ ಆಕಾಲದಲ್ಲಿ ಹೀಗೆ ವಿಮರ್ಶಿಸಿದಳು.

೨೧. ಸಂಧ್ಯೆಯು ಹೀಗೆ ಯೋಚಿಸಿದಳು :—ಇನ್ನೂ ಆಗತಾನೇ ಜನಿಸಿದ ಯುವತಿಯಾದ ನನ್ನನ್ನು ನೋಡಿ ಕಾಮಪೀಡಿತನಾಗಿ ನನ್ನ ತಂದೆಯಾದ ಬ್ರಹ್ಮನು ನನ್ನಲ್ಲಿ ಅನುರಾಗದಿಂದ ಅಭಿಲಾಷೆಯುಳ್ಳವನಾದನು.

೨೨. ಅಲ್ಲದೆ ನನ್ನನ್ನು ನೋಡಿ ಮಾನಸಪುತ್ರರಾದ ಮರೀಚಿ ಮುಂತಾದ ಜಿತೇಂದ್ರಿಯರಾದ ಮುನಿಗಳಿಗೂ ಕಾಮವಿಕಾರವು ಮರ್ಯಾದೆಯಿಲ್ಲದೆ ಉಂಟಾ ಯಿತು.

ಮಮಾಪಿ ಮಥಿತಂ ಚಿತ್ತಂ ಮದನೇನ ದುರಾತ್ಮನಾ ।
ಯೇನ ದೃಷ್ಟ್ವಾ ಮುನೀನ್ ಸರ್ವಾಂಶ್ಚಲಿತಂ ಮನ್ಮನೋ ಭೃಶಂ ॥ ೨೩ ॥

ಫಲಮೇತಸ್ಯ ಪಾಪಸ್ಯ ಮದನಃ ಸ್ವಯಮಾಪ್ತವಾನ್ ।
ಯಸ್ತಂ ಶಶಾಪ ಕುಪಿಃ ತಶಂಭೋರಗ್ರೇ ಪಿತಾಮಹಃ ॥ ೨೪ ॥

ಪ್ರಾಪ್ನುಯಾಂ ಫಲಮೇತಸ್ಯ ಪಾಪಸ್ಯ ಸ್ವಘಕಾರಿಣೀ ।
ತಚ್ಛೋಧನಫಲಮಹಮಾಶು ಚೇಚ್ಛಾಮಿ ಸಾಧನಂ ॥ ೨೫ ॥

ಯನ್ಮಾಂ ಪಿತಾ ಭ್ರಾತರಶ್ಚ ಸಕಾಮಾಮುಪರೋಕ್ಷತಃ ।
ದೃಷ್ಟ್ವಾ ಚಕ್ರುಃಸ್ಪೃಹಾಂ ತಸ್ಮಾನ್ನ ಮತ್ತಃ ಪಾಪಕೃತ್ಪರಾ ॥ ೨೬ ॥

ಮಮಾಪಿ ಕಾಮಭಾವೋऽಭೂದಮರ್ಯಾದಂ ಸಮೀಕ್ಷ್ಯ ತಾನ್ ।
ಪತ್ಯಾವಿವ ಸ್ವಕೇ ತಾತೇ ಸರ್ವೇಷು ಸಹಜೇಷ್ವಪಿ ॥ ೨೭ ॥

---

೨೩. ದುರಾತ್ಮನಾದ ಮನ್ಮಥನು ನನ್ನ ಮನಸ್ಸನ್ನೂ ಹಾಳುಮಾಡಿದನು. ಆದ್ದರಿಂದಲೇ ನನ್ನ ಮನಸ್ಸು ಮುನಿಗಳನ್ನು ದೋಡಿ ತುಂಬಾ ಕಾಮವಿಕಾರವುಳ್ಳದ್ದಾಗಿ ಚಂಚಲವಾಯಿತು.

೨೪. ಮನ್ಮಥನು ತಾನು ಮಾಡಿದ ಪಾಪಕ್ಕೆ ಯೋಗ್ಯವಾದ ಫಲವನ್ನು ಪಡೆದನು. ಬ್ರಹ್ಮನು ಕೋಪಗೊಂಡು ಶಿವನ ಎದುರಿನಲ್ಲಿಯೇ ಮನ್ಮಥನನ್ನು ಶಪಿಸಿದನು.

೨೫. ಅದರಂತೆ ನಾನೂ ಸಹ ನಾನು ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಪಡೆಯಲೇಬೇಕು. ಆ ಪಾಪವನ್ನು ಶೋಧಿಸುವಂತಹ ಉಪಾಯವನ್ನು ಈಗ ಅಪೇಕ್ಷಿಸುವೆನು. ಅಂತಹ ಉಪಾಯವು ಯಾವದಿರುವುದು ?

೨೬. ನನ್ನನ್ನು ನೋಡಿ ನನ್ನ ತಂದೆ ಮತ್ತು ಸಹೋದರರೇ ಪ್ರತ್ಯಕ್ಷವಾಗಿ ಕಾಮೇಚ್ಛೆಯುಳ್ಳವರಾದರು. ಆದುದರಿಂದ ನನಗಿಂತಲೂ ಪಾಪಿಷ್ಠೆಯು ಇನ್ನಾರೂ ಇಲ್ಲ.

೨೭. ನನಗೂ ಸಹ ಪ್ರಿಯನಲ್ಲಿ ಉಂಟಾಗುವಂತೆ ನನ್ನ ತಂದೆ ಮತ್ತೂ ಸಹೋದರರಲ್ಲಿ ಸಹಜವಲ್ಲದ ಕಾಮವಿಕಾರವು ಉಂಟಾಯಿತು.

ಕರಿಷ್ಯಾಮ್ಯದ್ಯ ಪಾಪಸ್ಯ ಪ್ರಾಯಶ್ಚಿತ್ತಮಹಂ ಸ್ವಯಂ ।
ಆತ್ಮಾನಮಗ್ನೌ ಹೋಷ್ಯಾಮಿ ವೇದಮಾರ್ಗಾನುಸಾರತಃ ॥ ೨೮ ॥

ಕಿಂ ತ್ವೇಕಾಂ ಸ್ಥಾಪಯಿಷ್ಯಾಮಿ ಮರ್ಯಾದಾಮಿಹ ಭೂತಲೇ ।
ಉತ್ಪನ್ನಮಾತ್ರಾ ನ ಯಥಾ ಸಕಾಮಾಸ್ಸ್ಯುಃ ಶರೀರಿಣಃ ॥ ೨೯ ॥

ಏತದರ್ಥಮಹಂ ಕೃತ್ವಾ ತಪಃ ಪರಮದಾರುಣಂ ।
ಮರ್ಯಾದಾಂ ಸ್ಥಾಪಯಿಷ್ಯಾಮಿ ಪಶ್ಚಾತ್ತ್ಯಕ್ಷ್ಯಾಮಿ ಜೀವಿತಂ ॥ ೩೦ ॥

ಯಸ್ಮಿನ್ ಶರೀರೇ ಪಿತ್ರಾ ಮೇ ಹ್ಯಭಿಲಾಷಃ ಸ್ವಯಂ ಕೃತಃ ।
ಭ್ರಾತೃಭಿಸ್ತೇನ ಕಾಯೇನ ಕಿಂಚಿನ್ನಾಸ್ತಿ ಪ್ರಯೋಜನಂ ॥ ೩೧ ॥

ಮಯಾ ಯೇನ ಶರೀರೇಣ ತಾತೇಷು ಸಹಜೇಷು ಚ ।
ಉದ್ಭಾವಿತಃ ಕಾಮಭಾವೋ ನ ತತ್ಸುಕೃತಸಾಧನಂ ॥ ೩೨ ॥

---

೨೮. ಈ ನನ್ನ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ನಾನೇ ಮಾಡಿಕೊಳ್ಳುವೆನು. ನನ್ನ ಶರೀರವನ್ನು ಅಗ್ನಿಯಲ್ಲಿ ವೇದೋಕ್ತವಿಧಿಯಿಂದ ಹೋಮ ಮಾಡುವೆನು.

೨೯. ಅಲ್ಲದೆ, ಇನ್ನುಮುಂದೆ ಭೂಮಿಯಲ್ಲಿ ಹುಟ್ಟಿದೊಡನೆಯೇ ಪ್ರಾಣಿಗಳು ಕಾಮವಿಕಾರಕ್ಕೊಳಗಾಗಬಾರದೆಂಬ ಮರ್ಯಾದೆಯು (ನಿಯಮ) ನ್ನು ಸ್ಥಾಪಿಸುವೆನು.

೩೦. ಇದಕ್ಕಾಗಿಯೇ ನಾನು ಭಯಂಕರವಾದ ತಪಸ್ಸನ್ನಾಚರಿಸಿ, ಮರ್ಯಾದೆಯನ್ನು ಸ್ಥಾಪಿಸುವೆನು. ಆಮೇಲೆ ಪ್ರಾಣವನ್ನು ಬಿಡುವೆನು.

೩೧. ಯಾವ ನನ್ನ ಶರೀರದಲ್ಲಿ ನನ್ನ ತಂದೆ (ಬ್ರಹ್ಮನಿ)ಗೂ ಸಹೋದರರಾದ ಮಾನಸಪುತ್ರರಿಗೂ ಸಹ ಕಾಮಾಭಿಲಾಷೆಯುಂಟಾಯಿತೋ ಇಂತಹ ಈ ಶರೀರದಿಂದ ಪ್ರಯೋಜನವಿಲ್ಲ.

೩೨. ಯಾವ ಶರೀರದಿಂದ ನಾನು ತಂದೆ ಮತ್ತು ಸಹೋದರರಲ್ಲಿ ಕಾಮವಿಕಾರವುಳ್ಳವಳಾದೆನೋ ಆ ಶರೀರವು ದೂಷಿತವಾದುದು. ಪುಣ್ಯಕ್ಕೆ ಸಾಧನವಾಗಲಾರದು. ಪುಣ್ಯವನ್ನು ಸಂಪಾದಿಸಲಾರದು.

ಇತಿ ಸಂಚಿಂತ್ಯ ಮನಸಾ ಸಂಧ್ಯಾ ಶೈಲವರಂ ತತಃ ।
ಜಗಾಮ ಚಂದ್ರಭಾಗಾಖ್ಯಂ ಚಂದ್ರಭಾಗಾಪಗಾ ಯತಃ ॥ ೩೩ ॥

ಅಥ ತತ್ರ ಗತಾಂ ಜ್ಞಾತ್ವಾ ಸಂಧ್ಯಾಂ ಗಿರಿವರಂ ಪ್ರತಿ ।
ತಪಸೇ ನಿಯತಾತ್ಮಾನಂ ಬ್ರಹ್ಮಾವೋಚಮಹಂ ಸುತಂ ॥ ೩೪ ॥

ವಸಿಷ್ಠಂ ಸಂಯತಾತ್ಮಾನಂ ಸರ್ವಜ್ಞಂ ಜ್ಞಾನಯೋಗಿನಂ ।
ಸಮೀಪೇ ಸ್ವೇ ಸಮಾಸೀನಂ ವೇದವೇದಾಂಗಪಾರಗಂ ॥ ೩೫ ॥

॥ ಬ್ರಹ್ಮೋವಾಚ ॥

ವಸಿಷ್ಠ ಪುತ್ರ ಗಚ್ಛ ತ್ವಂ ಸಂಧ್ಯಾಂ ಜಾತಾಂ ಮನಸ್ವಿನೀಂ ।
ತಪಸೇ ಧೃತಕಾಮಾಂ ಚ ದೀಕ್ಷಸ್ವೈನಾಂ ಯಥಾವಿಧಿ ॥ ೩೬ ॥

ಮಂದಾಕ್ಷಮಭವತ್ತಸ್ಯಾಃ ಪುರಾ ದೃಷ್ಟ್ವೈವ ಕಾಮುಕಾನ್ ।
ಯುಷ್ಮಾನ್ ಮಾಂ ಚ ತಥಾತ್ಮಾನಂ ಸಕಾಮಾಂ ಮುನಿಸತ್ತಮ ॥ ೩೭ ॥

---

೩೩. ಹೀಗೆ ಆಲೋಚಿಸಿ ಆ ಸಂಧ್ಯೆಯು ಆಮೇಲೆ ಚಂದ್ರಭಾಗಾನದಿಯು ಹುಟ್ಟಿರುವಂತಹ ಚಂದ್ರಭಾಗಪರ್ವತಕ್ಕೆ ತೆರಳಿದಳು.

೩೪-೩೫. ಸಂಧ್ಯೆಯು ತಪಸ್ಸಿಗಾಗಿ ಚಂದ್ರ ಭಾ ಗ ಪ ರ್ವ ತ ಕ್ಕೆ ಹೋದುದನ್ನು ತಿಳಿದು ನಾನು (ಬ್ರಹ್ಮನು) ಜಿತೇಂದ್ರಿಯನೂ ತಪಸ್ವಿಯೂ ಸರ್ವಜ್ಞನೂ ಬ್ರಹ್ಮಜ್ಞಾನಿಯೂ ವೇದ ಮತ್ತು ವೇದಾಂಗಗಳನ್ನು ಬಲ್ಲವನೂ ಆದಂತಹ ನನ್ನ ಸಮೀಪದಲ್ಲಿಯೇ ಕುಳಿತಿರುವ ನನ್ನ ಪುತ್ರ ವಸಿಷ್ಠಮುನಿಯನ್ನು ಕುರಿತು ಹೀಗೆ ಹೇಳಿದೆನು.

೩೬. ಅಪ್ಪ ವಸಿಷ್ಠ ! ಸಂಧ್ಯೆಯು ತಪಸ್ಸುಮಾಡುವುದಕ್ಕಾಗಿ ಚಂದ್ರಭಾಗ ಪರ್ವತಕ್ಕೆ ಹೋಗಿರುವಳು. ತಪಸ್ಸುಮಾಡುವ ವಿಧಾನವು ಅವಳಿಗೆ ತಿಳಿಯದು.

೩೭. ಹಿಂದೆ ನೀವೆಲ್ಲ ಮಾನಸಪುತ್ರರೂ ನಾನೂ ತಾನೂ (ಸಂಧ್ಯೆಯೂ) ಕಾಮುಕರಾದುದನ್ನು ನೋಡಿ ಸಂಧ್ಯೆಗೆ ತುಂಬಾ ಲಜ್ಜೆಯುಂಟಾಗಿದೆ.

ಅನುಕ್ತ್ವಮೂರ್ತಂ ತತ್ಕರ್ಮ ಪೂರ್ವಮ್ಮೃತ್ಯುಂ ವಿಮೃಶ್ಯ ಸಾ ।
ಯುಷ್ಮಾಕಮಾತ್ಮನಶ್ಚಾಪಿ ಪ್ರಾಣಾನ್ ಸಂತ್ಯಕ್ತುಮಿಚ್ಛತಿ ॥ ೩೮ ॥

ಅಮರ್ಯಾದೇಷು ಮರ್ಯಾದಾಂ ತಪಸಾ ಸ್ಥಾಪಯಿಷ್ಯತಿ ।
ತಪಃ ಕರ್ತುಂ ಗತಾ ಸಾಧ್ವೀ ಚಂದ್ರಭಾಗಾಖ್ಯಭೂಧರೇ ॥ ೩೯ ॥

ನ ಭಾವಂ ತಪಸಸ್ತಾತ ಸಾನುಜಾನಾತಿ ಕಂಚನ ।
ತಸ್ಮಾದ್ಯಥೋಪದೇಶಾತ್ಸಾ ಪ್ರಾಪ್ನೋತ್ವಿಷ್ಟಂ ತಥಾ ಕುರು ॥ ೪೦ ॥

ಇದಂ ರೂಪಂ ಪರಿತ್ಯಜ್ಯ ನಿಜಂ ರೂಪಾಂತರಂ ಮುನೇ ।
ಪರಿಗೃಹ್ಯಾಂತಿಕೇ ತಸ್ಯಾಸ್ತಪಶ್ಚರ್ಯಾಂ ನಿದರ್ಶಯ ॥ ೪೧ ॥

ಇದಂ ಸ್ವರೂಪಂ ಭವತೋ ದೃಷ್ಟ್ವಾ ಪೂರ್ವಂ ಯಥಾತ್ರ ವಾಂ ।
ನಾಪ್ನುಯಾತ್ಸಾಥ ಕಿಂಚಿದ್ವೈ ತತೋ ರೂಪಾಂತರಂ ಕುರು ॥ ೪೨ ॥

---

೩೮. ಮುಂದೆ ಆ ಸಂಧ್ಯೆಯು ತಾನು ಮಾಡಿದ ಮತ್ತು ನಿಮ್ಮ ಆ ಅಕಾರ್ಯವನ್ನೆಲ್ಲಾ ವಿಮರ್ಶಿಸಿ ತಾನಾಚರಿಸಿದ ಪಾಪದ ಪ್ರಾಯಶ್ಚಿತ್ತಕ್ಕಾಗಿ ಪ್ರಾಣಗಳನ್ನು ಬಿಡಬೇಕೆಂದಿರುವಳು.

೩೯. ಅಲ್ಲದೆ ಈ ಸಂಧ್ಯೆಯು ತಪಸ್ಸುಮಾಡಿ, ಜನಗಳು ಹುಟ್ಟಿದೊಡನೆಯೇ ಕಾಮೇಚ್ಛೆಯುಳ್ಳವರಾಗಬಾರದೆಂಬ ಮರ್ಯಾದೆಯನ್ನು ಸ್ಥಾಪಿಸುವಳು. ಅದಕ್ಕಾಗಿಯೇ ಆ ಸಾಧ್ವಿಯು ತಪಸ್ಸನ್ನಾಚರಿಸಲು ಚಂದ್ರಭಾಗಾಪರ್ವತಕ್ಕೆ ತೆರಳಿರುವಳು.

೪೦. ಆದರೆ ಆ ಸಂಧ್ಯೆಗೆ ತಪಸ್ಸನ್ನಾಚರಿಸುವ ಯಾವ ಕ್ರಮವೂ ತಿಳಿಯದು. ಆದುದರಿಂದ ಎಲೈ ವಸಿಷ್ಠ ! ಆ ಸಂಧ್ಯೆಯು ವಿಧಿವತ್ತಾಗಿ ತಪವನ್ನಾಚರಿಸಿ ತನ್ನ ಇಷ್ಟಾರ್ಥವನ್ನು ಪಡೆಯುವಂತೆ ಉಪದೇಶಿಸು.

೪೧. ನಿನ್ನ ಈ ನಿಜರೂಪವನ್ನು ಬಿಟ್ಟು ಬೇರೆ ರೂಪವನ್ನು ಧರಿಸಿ ಆ ಸಂಧ್ಯೆಯ ಬಳಿಗೆ ಹೋಗಿ ಅವಳಿಗೆ ತಪಸ್ಸಿನ ವಿಧಾನವನ್ನು ಉಪದೇಶಿಸು.

೪೨. ನಿನ್ನ ಈ ರೂಪವನ್ನು ಹಿಂದೆ ಕಾಮವಿಕಾರವನ್ನು ಹೊಂದಿದಾಗ ನೋಡಿರುವಳು. ಈ ರೂಪದಿಂದಲೇ ಅವಳ ಬಳಿಗೆ ನೀನು ಹೋದರೆ ಆ ಸಂಧ್ಯೆಯು ಲಜ್ಜೆಗೊಂಡು ನಿನ್ನಬಳಿಗೇ ಬರಲಾರಳು. ಆದುದರಿಂದ ಬೇರೆ ರೂಪವನ್ನು ಧರಿಸು.

॥ ಬ್ರಹ್ಮೋವಾಚ ॥

ನಾರದೇತ್ಥಂ ಸಮಾಜ್ಞಪ್ತೋ ವಸಿಷ್ಠೋ ಮೇ ದಯಾವತಾ ।
ತಥಾಸ್ತ್ವಿತಿ ಚ ಮಾಂ ಪ್ರೋಚ್ಯ ಯಯೌ ಸಂಧ್ಯಾಂತಿಕಂ ಮುನಿಃ॥ ೪೩ ॥

ತತ್ರ ದೇವಸರಃ ಪೂರ್ಣಂ ಗುಣೈರ್ಮಾನಸಸಮ್ಮಿತಂ ।
ದದರ್ಶ ಸ ವಸಿಷ್ಠೋಽಥ ಸಂಧ್ಯಾಂ ತತ್ತೀರಗಾಮಪಿ ॥ ೪೪ ॥

ತೀರಸ್ಥಯಾ ತಯಾ ರೇಜೇ ತತ್ಸರಃ ಕಮಲೋಜ್ಜ್ವಲಂ ।
ಉದ್ಯದಿಂದುಸನಕ್ಷತ್ರಂ ಪ್ರದೋಷೇ ಗಗನಂ ಯಥಾ ॥ ೪೫ ॥

ಮುನಿರ್ದೃಷ್ಟ್ವಾತು ತಾಂ ತತ್ರ ಸುಸಂಭಾವಾಂ ತು ಕೌತುಕೀ ।
ವೀಕ್ಷಾಂ ಚಕ್ರೇ ಸರಸ್ತತ್ರ ಬೃಹಲ್ಲೋಹಿತಸಂಜ್ಞಕಂ ॥ ೪೬ ॥

ಚಂದ್ರಭಾಗಾ ನದೀ ತಸ್ಮಾತ್ಪ್ರಾಕಾರಾದ್ದಕ್ಷಿಣಾಂಬುಧಿಂ ।
ಯಾಂತೀ ಸಾ ಚೈವ ದದೃಶೇ ತೇನ ಸಾನು ಗಿರೇರ್ಮಹತ್ ॥ ೪೭ ॥

---

೪೩. ಬ್ರಹ್ಮನು ಹೇಳಿದನು:—ಎಲೈ ನಾರದ ! ಹೀಗೆ ನಾನು ಸಂಧ್ಯೆಯಲ್ಲಿನ ಅನುಗ್ರಹಬುದ್ಧಿಯಿಂದ ವಸಿಷ್ಠಮುನಿಗೆ ಅಪ್ಪಣೆಮಾಡಲು ಅವನು ಹಾಗೆಯೇ ಆಗ ಲೆಂದು ಬ್ರಹ್ಮಚಾರಿರೂಪವನ್ನು ಧರಿಸಿ ಸಂಧ್ಯೆಯ ಬಳಿಗೆ ಹೋದನು.

೪೪. ಸಂಧ್ಯೆಯು ಇರುವ ಆ ಚಂದ್ರಭಾಗಗಿರಿಯಲ್ಲಿ ಮಾನಸಸರೋವರದಂತೆ ಸಕಲಗುಣಪರಿಪೂರ್ಣವಾದ ಒಂದು ಸರೋವರವನ್ನು ವಸಿಷ್ಠನು ನೋಡಿದನು. ಮತ್ತು ಆದರ ತೀರದಲ್ಲಿ ಸಂಧ್ಯೆಯಿದ್ದಳು.

೪೫. ತೀರದಲ್ಲಿರುವ ಆ ಸಂಧ್ಯೆಯಿಂದ ಆ ಬೃಹಲ್ಲೋಹಿತವೆಂಬ ಕಮಲ ಪರಿಪೂರ್ಣವಾದ ಸರಸ್ಸು, ಉದಯಿಸುತ್ತಿರುವ ಚಂದ್ರ ಮತ್ತು ನಕ್ಷತ್ರಗಳುಳ್ಳ ಪ್ರದೋ ಷಕಾಲದ ಆಕಾಶದಂತೆ ಕಾಣಿಸಿತು.

೪೬. ವಸಿಷ್ಠಮುನಿಯು ಸರೋವರತೀರದಲ್ಲಿ ಆ ಸಂಧ್ಯೆಯನ್ನೂ ಬೃಹಲ್ಲೋಹಿತವೆಂಬ ಆ ಸರಸ್ಸನ್ನೂ ಕುತೂಹಲದಿಂದ ನೋಡಿದನು.

೪೭. ಆ ಸರಸ್ಸಿನಿಂದ ಚಂದ್ರಭಾಗವೆಂಬ ನದಿಯು ಹೊರಟು ಆ ಗಿರಿಯ ದೊಡ್ಡತಪ್ಪಲಿನ ಮಾರ್ಗವಾಗಿ ದಕ್ಷಿಣಸಮುದ್ರದೆಡೆಗೆ ಹರಿಯುತ್ತಿರುವುದು. ವಸಿಷ್ಠನು ಆ ನದಿಯನ್ನು ನೋಡಿದನು.

ನಿರ್ಭಿದ್ಯ ಪಶ್ಚಿಮಂ ಸಾನುಂ ಚಂದ್ರಭಾಗಸ್ಯ ಸಾ ನದೀ ।
ಯಥಾ ಹಿಮವತೋ ಗಂಗಾ ತಥಾ ಗಚ್ಛತಿ ಸಾಗರಂ ॥ ೪೮ ॥

ತಸ್ಮಿನ್ ಗಿರೌ ಚಂದ್ರಭಾಗೇ ಬೃಹಲ್ಲೋಹಿತತೀರಗಾಂ ।
ಸಂಧ್ಯಾಂ ದೃಷ್ಟ್ವಾಥ ಪಪ್ರಚ್ಛ ವಸಿಷ್ಠಸ್ಸಾದರಂ ತದಾ ॥ ೪೯ ॥

॥ ವಸಿಷ್ಠ ಉವಾಚ ॥

ಕಿಮರ್ಥಮಾಗತಾ ಭದ್ರೇ ನಿರ್ಜನಂ ತ್ವಂ ಮಹೀಧರಂ ।
ಕಸ್ಯ ವಾ ತನಯಾ ಕಿಂ ವಾ ಭವತ್ಯಾ ಚ ಚಿಕೀರ್ಷಿತಂ ॥ ೫೦ ॥

ಏತದಿಚ್ಛಾಮ್ಯಹಂ ಶ್ರೋತುಂ ವದ ಗುಹ್ಯಂ ನ ಚೇದ್ಭವೇತ್ ।
ವದನಂ ಪೂರ್ಣಚಂದ್ರಾಭಂ ನಿಶ್ಶ್ರೀಕಂ ವಾ ಕಥಂ ತವ ॥ ೫೧ ॥

॥ ಬ್ರಹ್ಮೋವಾಚ ॥

ತಚ್ಛ್ರುತ್ವಾ ವಚನಂ ತಸ್ಯ ವಸಿಷ್ಠಸ್ಯ ಮಹಾತ್ಮನಃ ।
ದೃಷ್ಟ್ವಾ ಚ ತಂ ಮಹಾತ್ಮಾನಂ ಜ್ವಲಂತಮಿವ ಪಾವಕಂ ॥ ೫೨ ॥

---

೪೮. ಆ ಚಂದ್ರಭಾಗಾನದಿಯು ಚಂದ್ರಭಾಗಪರ್ವತದ ಪಶ್ಚಿಮಶಿಖರವನ್ನು ಒಡೆದು ಗಂಗೆಯಂತೆ ಸಮುದ್ರವೆಡೆಗೆ ಹರಿಯುತ್ತಿರುವುದು.

೪೯. ಆ ಚಂದ್ರಭಾಗಗಿರಿಯಲ್ಲಿ ಬೃಹಲ್ಲೋಹಿತಸರಸ್ಸಿನ ದಡದಲ್ಲಿರುವ ಸಂಧ್ಯೆಯನ್ನು ನೋಡಿ ವಸಿಷ್ಠಮುನಿಯು ಆದರದಿಂದ ಹೀಗೆ ಪ್ರಶ್ನಿಸಿದನು.

೫೦-೫೧. ವಸಿಷ್ಠಮುನಿಯಿಂತೆಂದನು :— ಎಲೌ ಮಂಗಳಸ್ವರೂಪಳೇ ! ಜನಸುಳಿವೇ ಇಲ್ಲದಿರುವ ಈ ಪರ್ವತಕ್ಕೆ ಏನು ಕಾರ್ಯಾರ್ಥವಾಗಿ ಬಂದಿರುವೆ ? ನೀನಾರ ಮಗಳು ? ಇಲ್ಲಿ ನೀನು ಏನುಮಾಡಬೇಕೆಂದಿರುವೆ ? ಇದೆಲ್ಲವನ್ನೂ ಕೇಳಿ ತಿಳಿದುಕೊಳ್ಳಬೇಕೆಂದಿರುವೆನು. ರಹಸ್ಯವಾದುದಲ್ಲವಾದರೆ ಹೇಳು. ಪೂರ್ಣಚಂದ್ರನಂತಿರುವ ಈ ನಿನ್ನ ಮುಖವು ಕಾಂತಿಯಿಲ್ಲದೆ ಬಾಡಿರುವುದೇಕೆ ?

೫೨-೫೩. ಬ್ರಹ್ಮನು ಹೇಳಿದನು :—ಮಹಾತ್ಮನಾದ ವಸಿಷ್ಠನ ಈರೀತಿಯಾದ ಮಾತನ್ನು ಕೇಳಿ ಆ ಸಂಧ್ಯೆಯು ಮಹಾತ್ಮನೂ, ಜ್ವಲಿಸುತ್ತಿರುವ ಅಗ್ನಿಯಂತೆ ತೇಜಸ್ಸುಳ್ಳವನೂ, ಶರೀರವನ್ನು ಧರಿಸಿಬಂದ ಬ್ರಹ್ಮಚರ್ಯವಂತಿರುವವನೂ, ಜಟೆಯನ್ನು ಧರಿಸಿ ಮಹಾತಪಸ್ವಿಯೂ ಆದ ಆ ವಸಿಷ್ಠಮುನಿಯನ್ನು ನೋಡಿ, ಭಕ್ತಿಯಿಂದನಮಸ್ಕರಿಸಿ ಅವನನ್ನು ಕುರಿತು ಹೀಗೆ ಹೇಳಿದಳು.

ಶರೀರಧೃಗ್ಬ್ರಹ್ಮಚರ್ಯೇಣ ವಿಲಸಂತಂ ಜಟಾಧರಂ ।
ಸಾದರಂ ಪ್ರಣಿಪತ್ಯಾಽಥ ಸಂಧ್ಯೋವಾಚ ತಪೋಧನಂ ॥ ೫೩ ॥

॥ ಸಂಧ್ಯೋವಾಚ ॥

ಯದರ್ಥಮಾಗತಾ ಶೈಲಂ ಸಿದ್ಧಂ ತನ್ಮೇ ನಿಬೋಧ ಮೇ ।
ತವ ದರ್ಶನಮಾತ್ರೇಣ ಯನ್ಮೇ ಸೇತ್ಸ್ಯತಿ ವಾತಿ ಭೋ ॥ ೫೪ ॥

ತಪಶ್ಚರ್ತುಮಹಂ ಬ್ರಹ್ಮನ್ನಿರ್ಜನಂ ಶೈಲಮಾಗತಾ ।
ಬ್ರಹ್ಮಣೋಽಹಂ ಸುತಾ ಜಾತಾ ನಾಮ್ನಾ ಸಂಧ್ಯೇತಿ ವಿಶ್ರುತಾ ॥ ೫೫ ॥

ಯದಿ ತೇ ಯುಜ್ಯತೇ ಸಹ್ಯಂ ಮಾಂ ತ್ವಂ ಸಮುಪದೇಶಯ ।
ಏತಚ್ಚಿಕೀರ್ಷಿತಂ ಗುಹ್ಯಂ ನಾನ್ಯತ್ಕಿಂಚನ ವಿದ್ಯತೇ ॥ ೫೬ ॥

ಅಜ್ಞಾತ್ವಾ ತಪಸೋ ಭಾವಂ ತಪೋವನಮುಪಾಶ್ರಿತಾ ।
ಚಿಂತಯಾ ಪರಿಶುಷ್ಯೇಽಹಂ ವೇಪತೇ ಹಿ ಮನೋ ಮಮ ॥ ೫೭ ॥

॥ ಬ್ರಹ್ಮೋವಾಚ ॥

ಆಕರ್ಣ್ಯ ತಸ್ಯಾ ವಚನಂ ವಸಿಷ್ಠೋ ಬ್ರಹ್ಮವಿತ್ತಮಃ ।
ಸ್ವಯಂ ಚ ಸರ್ವಕೃತ್ಯಜ್ಞೋ ನಾನ್ಯತ್ಕಿಂಚನ ಪೃಷ್ಟವಾನ್ ॥ ೫೮ ॥

---

೫೪-೫೭. ಓ ಬ್ರಾಹ್ಮಣೋತ್ತಮನೇ! ನಿನ್ನನ್ನು ನೋಡಿದ ಮಾತ್ರದಿಂದಲೇ ನಾನು ಈ ಪರ್ವತಕ್ಕೆ ಬಂದ ಕಾರ್ಯವು ನೆರವೇರಿದಂತಾಯಿತು. ತಪಸ್ಸನ್ನು ಮಾಡಲೋಸುಗ ಜನಸಂಚಾರವಿಲ್ಲದ ಈ ಪರ್ವತಕ್ಕೆ ಬಂದಿರುವೆನು. ನಾನು ಬ್ರಹ್ಮನ ಮನಸ್ಸಿನಿಂದ ಜನಿಸಿದವಳು. ಸಂಧ್ಯೆಯೆಂದು ನನ್ನ ಹೆಸರು. ಓ ಮುನಿಶ್ರೇಷ್ಠನೇ! ತಪಸ್ಸನ್ನು ಮಾಡುವ ಕ್ರಮವು ನನಗೆ ತಿಳಿಯದು. ನಿನಗೆ ಯುಕ್ತವಾಗಿ ತೋರಿದರೆ ಆ ತಪಸ್ಸನ್ನು ಮಾಡುವ ರಹಸ್ಯವನ್ನು ನನಗೆ ಉಪದೇಶಮಾಡು. ಇದೇ ನಾನು ಮಾಡಬೇಕೆಂದಿರುವ ರಹಸ್ಯಕಾರ್ಯವು, ಇನ್ನೇನೂ ಇಲ್ಲ. ತಪಸ್ಸನ್ನು ಮಾಡುವ ಕ್ರಮವನ್ನೂ ತಿಳಿಯದೆ ತಪೋವನಕ್ಕೆ ಹೊರಟುಬಂದಿರುವೆನು. ಅದೇ ಚಿಂತೆಯಿಂದ ಪರಿತಪಿಸುತ್ತಿರುವೆನು ಎಂದು ನುಡಿದಳು.

೫೮. ಬ್ರಹ್ಮನು ಹೇಳಿದನು :—ಸಂಧ್ಯೆಯ ಮಾತನ್ನು ಕೇಳಿ ಬ್ರಹ್ಮಜ್ಞಾನಿಯಾದ ವಸಿಷ್ಠನು ಮಿಕ್ಕ ಸಮಾಚಾರವನ್ನೆಲ್ಲಾ ತಾನು ತಿಳಿದವನಾದುದರಿಂದ ಸಂಧ್ಯೆಯನ್ನು ಕುರಿತು ಇನ್ನೇನನ್ನೂ ಕೇಳಲಿಲ್ಲ.

ಅಥ ತಾಂ ನಿಯತಾತ್ಮಾನಂ ತಪಸೇತಿ ಧೃತೋದ್ಯಮಾಂ ।
ಪ್ರೋವಾಚ ಮನಸಾ ಸ್ಮೃತ್ವಾ ಶಂಕರಂ ಭಕ್ತವತ್ಸಲಂ ॥ ೫೯ ॥

॥ ವಸಿಷ್ಠ ಉವಾಚ ॥

ಪರಮಂ ಯೋ ಮಹತ್ತೇಜಃ ಪರಮಂ ಯೋ ಮಹತ್ತಪಃ ।
ಪರಮಃ ಪರಮಾರಾಧ್ಯಃ ಶಂಭುರ್ಮನಸಿ ಧಾರ್ಯತಾಂ ॥ ೬೦ ॥

ಧರ್ಮಾರ್ಥಕಾಮಮೋಕ್ಷಾಣಾಂ ಯ ಏಕಸ್ತ್ವಾದಿಕಾರಣಂ ।
ತಮೇಕಂ ಜಗತಾಮಾದ್ಯಂ ಭಜಸ್ವ ಪುರುಷೋತ್ತಮಂ ॥ ೬೧ ॥

ಮಂತ್ರೇಣಾನೇನ ದೇವೇಶಂ ಶಂಭುಂ ಭಜ ಶುಭಾನನೇ ।
ತೇನ ತೇ ಸಕಲಾವಾಪ್ತಿರ್ಭವಿಷ್ಯತಿ ನ ಸಂಶಯಃ ॥ ೬೨ ॥

ಓಂ ನಮಶ್ಶಂಕರಾಯೇತಿ ಓಮಿತ್ಯಂತೇನ ಸಂತತಂ ।
ಮೌನತಪಸ್ಯಾಪ್ರಾರಂಭಂ ತನ್ಮೇ ನಿಗದತಃ ಶೃಣು ॥ ೬೩ ॥

---

೫೯. ಆ ಮೇಲಾ ಮುನಿಯು ಜಿತೇಂದ್ರಿಯಳಾಗಿದ್ದು ತಪಸ್ಸಿಗೆ ಉದ್ಯುಕ್ತಳಾಗಿರುವ ಆ ಸಂಧ್ಯೆಯನ್ನು ಕುರಿತು ಮನಸ್ಸಿನಲ್ಲಿ ಭಕ್ತವತ್ಸಲನಾದ ಶಂಕರನನ್ನು ಸ್ಮರಿಸಿ ಹೀಗೆ ಹೇಳಿದನು.

೬೦. ವಸಿಷ್ಠಮುನಿಯು ಹೇಳಿದನು :—ಎಲೌ ಸಂಧ್ಯೆ! ಮಹತ್ತಾದ ತೇಜಸ್ಸ್ವರೂಪನೂ, ಮಹಾತಪಸ್ಸ್ವರೂಪನೂ, ತಪಸ್ಸಿನಿಂದ ಮಾತ್ರ ಪಡೆಯಲ್ಪಡತಕ್ಕವನೂ, ಆರಾಧಿಸಲು ಯೋಗ್ಯರಾದ ದೇವತೆಗಳಲ್ಲಿ ಉತ್ತಮನೂ, ಪರಮಪೂಜ್ಯನೂ ಆದಂತಹ ಶಂಕರನನ್ನು ಮನಸ್ಸಿನಲ್ಲಿ ಭಕ್ತಿಯಿಂದ ಧ್ಯಾನಮಾಡು.

೬೧. ಆ ಶಿವನೇ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳಿಗೆ ಆದಿಕಾರಣವು. ಅವನೊಬ್ಬನೇ ಜಗತ್ತಿಗೆ ಆದಿಕಾರಣನು. ಇಂತಹ ಪುರುಷಶ್ರೇಷ್ಠನಾದ ಆ ಶಿವನನ್ನು ಭಜಿಸು.

೬೨. ಎಲೌ ಮಂಗಳರೂಪಳೆ! "ಓಂ ನಮಶ್ಶಿವಾಯ ಓಂ" ಎಂಬ ಈ ಮಂತ್ರದಿಂದ ಆ ಶಿವನನ್ನು ಭಜನೆಮಾಡು. ಅದರಿಂದ ನಿನಗೆ ಬೇಕಾದುದೆಲ್ಲವೂ ಲಭಿಸುವುದು.

೬೩. ಮೌನವಾದ ತಪಸ್ಸನ್ನು ಹೇಳುವನು ಕೇಳು. ಸ್ನಾನವನ್ನೂ, ಶಿವಪೂಜೆಯನ್ನೂ, ಮೌನವಾಗಿಯೇ ಮಾಡಬೇಕು.

ಸ್ನಾನಂ ಮೌನೇನ ಕರ್ತವ್ಯಂ ಮೌನೇನ ಹರಪೂಜನಂ ।
ದ್ವಯೋಃ ಪರ್ಣಜಲಾಹಾರಂ ಪ್ರಥಮಂ ಷಷ್ಠಕಾಲಯೋಃ ॥ ೬೪ ॥

ತೃತೀಯೇ ಷಷ್ಠಕಾಲೇ ತು ಹ್ಯುಪವಾಸಪರಾ ಭವೇತ್ ।
ಏವಂ ತಪಸ್ಸಮಾಪ್ತೌ ತು ಷಷ್ಠೇ ಕಾಲೇ ಕ್ರಿಯಾ ಭವೇತ್ ॥ ೬೫ ॥

ಏವಂ ಮೌನತಪಸ್ಯಾಖ್ಯಾ ಬ್ರಹ್ಮಚರ್ಯಫಲಪ್ರದಾ ।
ಸರ್ವಾಭೀಷ್ಟಪ್ರದಾ ದೇವಿ ಸತ್ಯಂ ಸತ್ಯಂ ನ ಸಂಶಯಃ ॥ ೬೬ ॥

ಏವಂ ಚಿತ್ತೇ ಸಮುದ್ದಿಶ್ಯ ಕಾಮಂ ಚಿಂತಯ ಶಂಕರಂ ।
ಸ ತೇ ಪ್ರಸನ್ನ ಇಷ್ಟಾರ್ಥಮಚಿರಾದೇವ ದಾಸ್ಯತಿ ॥ ೬೭ ॥

---

೬೪-೬೫. ಒಂದು ದಿನವನ್ನು ಎಂದರೆ ಹಗಲಿನ ಪ್ರಮಾಣವನ್ನು ಆರುಭಾಗವಾಗಿ ವಿಭಾಗಿಸಿದರೆ ಆಗುವ ಒಂದುಭಾಗಕ್ಕೆ ಷಷ್ಠಕಾಲವೆಂದು ಹೆಸರು. ಮೊದಲಿನ ಎರಡು ಷಷ್ಠಕಾಲಗಳಲ್ಲಿ ಕ್ರಮವಾಗಿ ಎಲೆಗಳನ್ನೂ, ಜಲವನ್ನೂ ಆಹಾರವನ್ನಾಗಿ ತೆಗೆದುಕೊಳ್ಳಬೇಕು. ಮೂರನೇ ಷಷ್ಠಕಾಲದಲ್ಲಿ ಆಹಾರವನ್ನು ತೆಗೆದುಕೊಳ್ಳದೆ ಉಪವಾಸವನ್ನೇ ಮಾಡಬೇಕು. ಈರೀತಿ ದಿನವನ್ನು ತಪಸ್ಸಿನ ಆಚರಣೆಯಿಂದ ಕಳೆದು ಅಂತ್ಯದಲ್ಲಿ ಬಹಿರ್ವ್ಯಾಪಾರಾದಿಗಳಲ್ಲಿ ತೊಡಗಬಹುದು.

೬೬. ಎಲೌ ಸಂಧ್ಯಾದೇವಿ! ಹೀಗೆ ಮೌನತಪಸ್ಸನ್ನಾಚರಿಸಿದರೆ ಬ್ರಹ್ಮಚರ್ಯವು ಸಿದ್ಧಿಸುವುದು. ಸಕಲ ಇಷ್ಟಾರ್ಥಗಳೂ ನಿಜವಾಗಿಯೂ ಸಿದ್ಧಿಸುವುವು. ಸಂಶಯವಿಲ್ಲ.

೬೭. ಈರೀತಿಯಾಗಿ ಮನಸ್ಸಿನಲ್ಲಿ ಉದ್ದೇಶಿಸಿ ಶಂಕರನನ್ನು ಚಿಂತಿಸು. ಆ ಶಿವನು ಪ್ರಸನ್ನನಾಗಿ ನಿನ್ನ ಇಷ್ಟಾರ್ಥವನ್ನು ಜಾಗ್ರತೆ ಅನುಗ್ರಹಿಸುವನು ಎಂದು ಉಪದೇಶಿಸಿದನು.

॥ ಬ್ರಹ್ಮೋವಾಚ ॥
ಉಪವಿಶ್ಯ ವಸಿಷ್ಠೋಽಥ ಸಂಧ್ಯಾಯೈ ತಪಸಃ ಕ್ರಿಯಾಂ ।
ತಾಮಾಭಾಷ್ಯ ಯಥಾನ್ಯಾಯಂ ತತ್ರೈವಾಂತರ್ದಧೇ ಮುನಿಃ ॥ ೬೮ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ
ಸತೀಖಂಡೇ ಪಂಚಮೋಽಧ್ಯಾಯಃ



---

೬೮. ಬ್ರಹ್ಮನು ಹೇಳಿದನು:—ಆಮೇಲೆ ವಸಿಷ್ಠಮುನಿಯು ಸಂಧ್ಯೆಗೆ ತಪಸ್ಸನ್ನಾಚರಿಸುವ ವಿಧಾನವನ್ನುಪದೇಶಿಸಿ ಅವಳಿಂದ ಯೋಗ್ಯವಾಗಿ ಬೀಳ್ಕೊಂಡು ಅಲ್ಲಿಯೇ ಅಂತರ್ಧಾನನಾದನು.

ಇಲ್ಲಿಗೆ ಶಿವಪುರಾಣದಲ್ಲಿನ ರುದ್ರಸಂಹಿತೆಯಲ್ಲಿ ಸತೀಖಂಡದಲ್ಲಿ ಐದನೆಯ
ಅಧ್ಯಾಯವು ಮುಗಿದದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಷಷ್ಠೋಽಧ್ಯಾಯಃ

---

॥ ಬ್ರಹ್ಮೋವಾಚ ॥

**ಸುತವರ್ಯ ಮಹಾಪ್ರಾಜ್ಞ ಶೃಣು ಸಂಧ್ಯಾತಪೋ ಮಹತ್ ।**
**ಯಚ್ಛ್ರುತ್ವಾ ನಶ್ಯತೇ ಪಾಪಸಮೂಹಸ್ತತ್ಕ್ಷಣಾದ್ಧ್ರುವಂ ॥ ೧ ॥**

**ಉಪವಿಷ್ಯ ತಪೋಭಾವಂ ವಸಿಷ್ಠೇ ಸ್ವಗೃಹಂ ಗತೇ ।**
**ಸಂಧ್ಯಾಪಿ ತಪಸೋ ಭಾವಂ ಜ್ಞಾತ್ವಾ ಮೋದಮವಾಪ ಹ ॥ ೨ ॥**

---

### ಅರನೆಯ ಅಧ್ಯಾಯವು.

೧. ಬ್ರಹ್ಮದೇವನು ಹೇಳಿದನು :— ಮಹಾಬುದ್ಧಿಶಾಲಿಯಾದ ಎಲೈ ನಾರದ ಮುನಿಯೇ! ಸಂಧ್ಯೆಯು ತಪವನ್ನಾಚರಿಸಿದುದನ್ನು ಹೇಳುವೆನು ಕೇಳು, ಅದನ್ನು ಕೇಳಿದರೆ ಆ ಕೂಡಲೇ ಪಾಪವು ನಾಶವಾಗುವುದು.

೨. ವಸಿಷ್ಠಮುನಿಯು ತಪಸ್ಸಿನ ಸ್ವರೂಪವನ್ನು ಉಪದೇಶಿಸಿ ತನ್ನ ಸ್ಥಾನಕ್ಕೆ ತೆರಳಲು, ಸಂಧ್ಯೆಯು ತಪಸ್ಸಿನ ಸ್ವರೂಪವನ್ನು ತಿಳಿದು ತುಂಬಾ ಸಂತೋಷಗೊಂಡಳು.

ತತಸ್ಸಾನಂದಮನಸಾ ವೇಷಂ ಕೃತ್ವಾ ತು ತಾದೃಶಂ ।
ತಪಶ್ಚರ್ತುಂ ಸಮಾರೇಭೇ ಬೃಹಲ್ಲೋಹಿತತೀರಗಾ ॥ ೩ ॥

ಯಥೋಕ್ತಂ ತು ವಸಿಷ್ಠೇನ ಮಂತ್ರಂ ತಪಸಿ ಸಾಧನಂ ।
ಮಂತ್ರೇಣ ತೇನ ಸದ್ಭಕ್ತ್ಯಾ ಪೂಜಯಾಮಾಸ ಶಂಕರಂ ॥ ೪ ॥

ಏಕಾಂತಮನಸಸ್ತಸ್ಯಾಃ ಕುರ್ವಂತ್ಯಾಸ್ಸುಮಹತ್ತಪಃ ।
ಶಂಭೌ ವಿನ್ಯಸ್ತಚಿತ್ತಾಯಾ ಗತಮೇಕಂ ಚತುರ್ಯುಗಂ ॥ ೫ ॥

ಪ್ರಸನ್ನೋಽಭೂತ್ತದಾ ಶಂಭುಸ್ತಪಸಾ ತೇನ ತೋಷಿತಃ ।
ಅಂತರ್ಬಹಿಸ್ತಥಾಽಕಾಶೇ ದರ್ಶಯಿತ್ವಾ ನಿಜಂ ವಪುಃ ॥ ೬ ॥

ಯದ್ರೂಪಂ ಚಿಂತಯಂತೀ ಸಾ ತೇನ ಪ್ರತ್ಯಕ್ಷತಾಂ ಗತಃ ।
ಅಥ ಸಾ ಪುರತೋ ದೃಷ್ಟ್ವಾ ಮನಸಾ ಚಿಂತಿತಂ ಪ್ರಭುಂ ॥ ೭ ॥

---

೩. ಬಳಿಕ ಆ ಸಂಧ್ಯೆಯು ಆನಂದದಿಂದ ತಪಸ್ಸಿಗೆ ಯೋಗ್ಯವಾದ ವೇಷವನ್ನು ಧರಿಸಿ ಬೃಹಲ್ಲೋಹಿತ ಸರಸ್ಸಿನ ತೀರದಲ್ಲಿ ತಪಸ್ಸನ್ನಾಚರಿಸಲು ಪ್ರಾರಂಭಿಸಿದಳು.

೪. ವಸಿಷ್ಠನು ಉಪದೇಶಿಸಿದಂತೆ ತಪಸ್ಸಿಗೆ ಸಾಧನವಾದ ಶಿವಪಂಚಾಕ್ಷರೀ ಮಂತ್ರದಿಂದ ಭಕ್ತಿಪೂರ್ವಕವಾಗಿ ಶಂಕರನನ್ನು ಪೂಜಿಸಿದಳು.

೫. ಸ್ಥಿರವಾದ ಮನಸ್ಸುಳ್ಳವಳಾಗಿ ಶಂಕರನಲ್ಲಿಯೇ ಬುದ್ಧಿಯನ್ನಿರಿಸಿ, ಆ ಸಂಧ್ಯೆಯು ಮಹತ್ತಾದ ತಪವನ್ನಾಚರಿಸುತ್ತಲಿರಲು ನಾಲ್ಕು ಯುಗಗಳು ಕಳೆದುವು.

೬. ಆಗ ಶಂಕರನು ಆ ಸಂಧ್ಯೆಯ ತಪಸ್ಸಿಗೆ ಮೆಚ್ಚಿ ಪ್ರಸನ್ನನಾಗಿ ಅವಳು ಧ್ಯಾನಿಸುತ್ತಿರುವಂತಹ ಸ್ವರೂಪದಿಂದಲೇ ಆಕಾಶದ ಒಳಗೂ ಹೊರಗೂ ಪ್ರಕಟಿಸಿ ಅವಳೆದುರಿಗೆ ಪ್ರತ್ಯಕ್ಷನಾದನು.

೭. ಬಳಿಕ ಸಂಧ್ಯೆಯು ತಾನು ಮನಸ್ಸಿನಲ್ಲಿ ಚಿಂತಿಸುವಂತಹ ಶಿವನೇ ಪ್ರಸನ್ನವಾದ ಮುಖವುಳ್ಳವನಾಗಿಯೂ ಶಾಂತನಾಗಿಯೂ ಪ್ರತ್ಯಕ್ಷನಾದುದನ್ನು ನೋಡಿ ತುಂಬಾ ಹರ್ಷಗೊಂಡಳು.

ಪ್ರಸನ್ನವದನಂ ಶಾಂತಂ ಮುನೋಽಪಾತೀವ ಶಂಕರಂ ।
ಸಸಾಧ್ವಸಮುಖಂ ವಕ್ಷ್ಯೇ ಕಿಂ ಕಥಂ ಸ್ತೌಮಿ ವಾ ಹರಂ ॥ ೮ ॥

ಇತಿ ಚಿಂತಾಪರಾ ಭೂತ್ವಾ ನ್ಯಮೀಲಯುತ ಚಕ್ಷುಷೀ ।
ನಿಮೀಲಿತಾಕ್ಷ್ಯಾಸ್ತಸ್ಯಾಸ್ತು ಪ್ರವಿಶ್ಯ ಹೃದಯಂ ಶಿವಃ ॥ ೯ ॥

ದಿವ್ಯಜ್ಞಾನಂ ದದೌ ತಸ್ಯೈ ವಾಚಂ ದಿವ್ಯೇ ಚ ಚಕ್ಷುಷೀ ।
ದಿವ್ಯಂ ಜ್ಞಾನಂ ದಿವ್ಯಚಕ್ಷುರ್ದಿವ್ಯಾಂ ವಾಚಮವಾಪ್ಯ ಸಾ ॥ ೧೦ ॥

ಪ್ರತ್ಯಕ್ಷಂ ವೀಕ್ಷ್ಯ ದುರ್ಗೇಶಂ ತುಷ್ಟಾವ ಜಗತಾಂ ಪತಿಂ । ॥ ೧೧ ॥

॥ ಸಂಧ್ಯೋವಾಚ ॥

ನಿರಾಕಾರಂ ಜ್ಞಾನಗಮ್ಯಂ ಪರಂ ಯ-
ನ್ನೈವ ಸ್ಥೂಲಂ ನಾಪಿ ಸೂಕ್ಷ್ಮಂ ನ ಚೋಚ್ಚಂ ।
ಅಂತಶ್ಚಿಂತ್ಯಂ ಯೋಗಿಭಿಸ್ತಸ್ಯ ರೂಪಂ
ತಸ್ಮೈ ತುಭ್ಯಂ ಲೋಕಕರ್ತ್ರೇ ನಮೋಽಸ್ತು ॥ ೧೨ ॥

---

೮. ಮತ್ತು ಅವಳು ಆಗ ತುಂಬಾ ಗಾಬರಿಗೊಂಡು ಏನು ಹೇಳಲಿ? ಶಿವನನ್ನು ಹೇಗೆ ಸ್ತುತಿಸಲಿ? ಎಂದು ತಿಳಿಯದೆ ಚಿಂತಿಸುತ್ತಾ ಕಣ್ಣುಗಳನ್ನು ಮುಚ್ಚಿಕೊಂಡಳು.

೯. ಹೀಗೆ ಸಂಧ್ಯೆಯು ಗಾಬರಿಯಿಂದ ಕಣ್ಣುಗಳನ್ನು ಮುಚ್ಚಲು ಶಿವನು ಅವಳ ಹೃದಯವನ್ನು ಪ್ರವೇಶಿಸಿ ಅವಳಿಗೆ ದಿವ್ಯಜ್ಞಾನವನ್ನೂ, ದಿವ್ಯವಾಕ್ಕನ್ನೂ, ದಿವ್ಯವಾದ ದೃಷ್ಟಿಯನ್ನೂ ಅನುಗ್ರಹಿಸಿದನು.

೧೦-೧೧. ದಿವ್ಯಜ್ಞಾನ, ದಿವ್ಯದೃಷ್ಟಿ, ದಿವ್ಯವಾಕ್ಕುಗಳನ್ನು ಪಡೆದು ಸಂಧ್ಯೆಯು ಪ್ರತ್ಯಕ್ಷನಾದಂತಹ ಜಗದೊಡೆಯನಾದ ಉಮಾಪತಿಯನ್ನು ನೋಡಿ ಅವನನ್ನು ಹೀಗೆ ಸ್ತುತಿಸಿದಳು.

೧೨. ಸಂಧ್ಯೆಯು ಹೀಗೆ ಸ್ತುತಿಸಿದಳು:—ಆಕಾರವಿಲ್ಲದುದೂ, ಜ್ಞಾನದಿಂದ ಪಡೆಯಲ್ಪಡುವುದೂ, ಉತ್ಕೃಷ್ಟವಾದುದೂ, ಸ್ಥೂಲತ್ವ, ಸೂಕ್ಷ್ಮತ್ವ, ದೀರ್ಘತ್ವ ಮುಂತಾದ ವಿಕಾರವಿಲ್ಲದುದೂ, ಯೋಗಿಗಳಿಂದ ಹೃದಯದಲ್ಲಿ ಧ್ಯಾನಿಸಲ್ಪಡುತಕ್ಕುದುದೂ ಆದ ಯಾವ ಪರಬ್ರಹ್ಮಸ್ವರೂಪವುಂಟೋ ಅಂತಹ ಬ್ರಹ್ಮಸ್ವರೂಪನಾದ ನಿನಗೆ ನಮಸ್ಕಾರವು.

ಶರ್ವಂ ಶಾಂತಂ ನಿರ್ಮಲಂ ನಿರ್ವಿಕಾರಂ
ಜ್ಞಾನಾಗಮ್ಯಂ ಸ್ವಪ್ರಕಾಶೇऽವಿಕಾರಂ ।
ಖಾಧ್ವಪ್ರಖ್ಯಂ ಧ್ವಾಂತಮಾರ್ಗಾತ್ಪರಸ್ತಾತ್
ರೂಪಂ ಯಸ್ಯ ತ್ವಾಂ ನಮಾಮಿ ಪ್ರಸನ್ನಂ　　　　॥ ೧೩ ॥

ಏಕಂ ಶುದ್ಧಂ ದೀಪ್ಯಮಾನಂ ವಿನಾಜಾಂ
ಚಿದಾನಂದಂ ಸಹಜಂ ಚಾಪಿಕಾರಿ ।
ನಿತ್ಯಾನಂದಂ ಸತ್ಯಭೂತಿಪ್ರಸನ್ನಂ
ಯಸ್ಯ ಶ್ರೀದಂ ರೂಪಮಸ್ಮೈ ನಮಸ್ತೇ　　　　॥ ೧೪ ॥

ವಿದ್ಯಾಕಾರೋದ್ಭಾವನೀಯಂ ಪ್ರಭಿನ್ನಂ
ಸತ್ತ್ವಚ್ಛಂದಂ ಧ್ಯೇಯಮಾತ್ಮಸ್ವರೂಪಂ ।

---

೧೩. ಮಂಗಳಕರವೂ, ಶಾಂತವೂ, ನಿರ್ಮಲವೂ, ಉತ್ಪತ್ತಿಯೇ ಮೊದಲಾದ ವಿಕಾರಗಳಿಲ್ಲದುದೂ, ಲೌಕಿಕಜ್ಞಾನದಿಂದ ತಿಳಿಯಲಸಾಧ್ಯವಾದುದೂ, ಪ್ರಕಾಶ ಸ್ವರೂಪವಾದುದೂ, ಎಲ್ಲೆಡೆಯಲ್ಲಿಯೂ ವ್ಯಾಪಿಸಿರುವುದೂ, ಸೂರ್ಯನಂತೆ ಪ್ರಕಾಶಿಸುವುದೂ, ಅಜ್ಞಾನಸಂಬಂಧವಿಲ್ಲದುದೂ ಆದ ಯಾವ ಪರಸ್ವರೂಪವಿರುವುದೋ ಅಂತಹ ಸ್ವರೂಪನಾಗಿಯೂ, ಪ್ರಸನ್ನನಾಗಿಯೂ ಇರುವ ನಿನ್ನನ್ನು ನಮಸ್ಕರಿಸುವೆನು.

೧೪. ತನಗೆ ಸದೃಶವಾದ ಯಾವ ವಸ್ತುವೂ ಇಲ್ಲದುದರಿಂದ ಅದ್ವಿತೀಯವಾಗಿಯೂ ಎಂದರೆ ಎಲ್ಲೆಡೆಯಲ್ಲಿಯೂ ತಾನೇತಾನಾಗಿ ವ್ಯಾಪಿಸಿ ಇರುವುದೂ, ಶುದ್ಧವೂ, ಪ್ರಕಾಶಸ್ವರೂಪವೂ, ಆನಂದಸ್ವರೂಪವೂ, ಸತ್ಯಗುಣಪ್ರಧಾನವಾದುದೂ, ಪಾಪವನ್ನು ನಾಶಮಾಡತಕ್ಕುದೂ, ಸದಾಕಾಲದಲ್ಲಿಯೂ ಆನಂದಸ್ವರೂಪವೇ ಆಗಿರುವುದೂ, ಎಲ್ಲೆಡೆಯಲ್ಲಿಯೂ ವ್ಯಾಪಿಸಿರುವುದೂ, ಉಪಾಸನೆ ಮಾಡುವವರಿಗೆ ಮಂಗಳವನ್ನುಂಟುಮಾಡುವುದೂ ಆದ ಯಾವ ನಿನ್ನ ಪ್ರಸನ್ನರೂಪವುಂಟೋ ಅದಕ್ಕೆ ನಮಸ್ಕಾರವು.

೧೫. ಜ್ಞಾನಸ್ವರೂಪವಾದುದರಿಂದ ಜ್ಞಾನದಿಂದ ಮಾತ್ರ ತಿಳಿಯಲ್ಪಡತಕ್ಕುದೂ, ಒಂದೇ ವಸ್ತುವಾದರೂ ಅನೇಕ ರೂಪಗಳಾಗಿ ತೋರುತ್ತಿರುವುದೂ, ಸತ್ತ್ವಗುಣಪ್ರಧಾನವಾಗಿ ಧ್ಯಾನಿಸಲ್ಪಡತಕ್ಕುದೂ, ಪರಮಾತ್ಮಸ್ವರೂಪವೂ, ಶ್ರೇಷ್ಠ

ಸಾರಂ ಸಾರಂ ಪಾವನಾನಾಂ ಪವಿತ್ರಂ
ತಸ್ಮೈ ರೂಪಂ ಯಸ್ಯ ಚೈವಂ ನಮಸ್ತೇ ॥ ೧೫ ॥

ಯತ್ತ್ವಾಕಾರಂ ಶುದ್ಧರೂಪಂ ಮನೋಜ್ಞಂ
ರತ್ನಾಕಲ್ಪಂ ಸ್ವಚ್ಛಕರ್ಪೂರ ಗೌರಂ ।
ಇಷ್ಟಾಭೀತೀ ಶೂಲಮುಂಡಂ ದಧಾನಂ
ಹಸ್ತೈರ್ನಮೋ ಯೋಗಯುಕ್ತಾಯ ತುಭ್ಯಂ ॥ ೧೬ ॥

ಗಗನಂ ಭೂರ್ದಿಶಶ್ಚೈವ ಸಲಿಲಂ ಜ್ಯೋತಿರೇವ ಚ ।
ಪುನಃ ಕಾಲಶ್ಚ ರೂಪಾಣಿ ಯಸ್ಯ ತುಭ್ಯಂ ನಮೋಽಸ್ತು ತೇ ॥ ೧೭ ॥

ಪ್ರಧಾನಪುರುಷೌ ಯಸ್ಯ ಕಾಯತ್ವೇನ ವಿನಿರ್ಗತೌ ।
ತಸ್ಮಾದವ್ಯಕ್ತರೂಪಾಯ ಶಂಕರಾಯ ನಮೋ ನಮಃ ॥ ೧೮ ॥

ಯೋ ಬ್ರಹ್ಮಾ ಕುರುತೇ ಸೃಷ್ಟಿಂ ಯೋ ವಿಷ್ಣುಃ ಕುರುತೇ ಸ್ಥಿತಿಂ ।
ಸಂಹರಿಷ್ಯತಿ ಯೋ ರುದ್ರಸ್ತಸ್ಮೈ ತುಭ್ಯಂ ನಮೋ ನಮಃ ॥ ೧೯ ॥

---

ವಾದುದೂ, ಪವಿತ್ರವಾದ ವಸ್ತುಗಳಲ್ಲಿಯೂ ಅತ್ಯಂತ ಪವಿತ್ರವಾದುದೂ ಆದ ಯಾವ ನಿನ್ನ ರೂಪವುಂಟೋ ಅದಕ್ಕೆ ನಮಸ್ಕಾರಮಾಡುವೆನು.

೧೬. ಶುದ್ಧವೂ, ಸುಂದರವೂ, ರತ್ನಗಳಿಂದ ಅಲಂಕರಿಸಲ್ಪಟ್ಟಿದುದೂ, ಶುಭ್ರವಾದ ಕರ್ಪೂರದಂತೆ ಬಿಳಿಯದಾದುದೂ, ಅಭಯಮುದ್ರೆ, ವರದಮುದ್ರೆ, ತ್ರಿಶೂಲ, ನರಶಿರಸ್ಸು ಇವುಗಳನ್ನು ಧರಿಸಿರುವುದೂ ಆದಂತಹ ಸ್ವರೂಪವುಳ್ಳ ಮಹಾಯೋಗಿಯಾದ ಶಿವನಿಗೆ ನಮಸ್ಕಾರವು.

೧೭. ಆಕಾಶ, ಭೂಮಿ, ದಿಕ್ಕುಗಳು, ಜಲ, ತೇಜಸ್ಸು, ವಾಯು, ಕಾಲ ಇವುಗಳೆಲ್ಲವೂ ನಿನ್ನ ರೂಪಗಳೇ! ಇಂತಹ ರೂಪಗಳುಳ್ಳ ನಿನಗೆ ನಮಸ್ಕಾರವು.

೧೮. ನೀನು ಅವ್ಯಕ್ತ ಎಂದರೆ ಚರ್ಮಚಕ್ಷುಸ್ಸಿಗೆ ಅಗೋಚರನಾದರೂ ಸೃಷ್ಟಿಕಾರ್ಯಕ್ಕಾಗಿ ಪ್ರಕೃತಿ, ಪುರುಷ ಎಂಬ ಸಾಧನಗಳನ್ನು ಉಪಯೋಗಿಸಿ ವ್ಯಕ್ತರೂಪನಾಗಿ ಗೋಚರಿಸುವೆಯೋ ಅಂತಹ ನಿನಗೆ ನಮಸ್ಕಾರವು.

೧೯. ಜಗತ್ತನ್ನು ಸೃಷ್ಟಿಸುವ ಬ್ರಹ್ಮನೂ ನೀನೆ, ಪಾಲಿಸುವ ವಿಷ್ಣುವೂ ನೀನೆ, ಸಂಹರಿಸುವ ರುದ್ರನೂ ನೀನೆ. ಇಂತಹ ನಿನಗೆ ನಮಿಸುವೆನು.

ನಮೋ ನಮಃ ಕಾರಣಕಾರಣಾಯ
ದಿವ್ಯಾಮೃತಜ್ಞಾನವಿಭೂತಿದಾಯ ।
ಸಮಸ್ತಲೋಕಾಂತರಭೂತಿದಾಯ
ಪ್ರಕಾಶರೂಪಾಯ ಪರಾತ್ಪರಾಯ ॥ ೨೦ ॥

ಯಸ್ಯಾಪರಂ ನೋ ಜಗದುಚ್ಯತೇ ಪದಾತ್
ಕ್ಷಿತಿರ್ದಿಶಃ ಸೂರ್ಯ ಇಂದುರ್ಮನೋಜಃ ।
ಬಹಿರ್ಮುಖಾ ನಾಭಿತಶ್ಚಾಂತರಿಕ್ಷಂ
ತಸ್ಮೈ ತುಭ್ಯಂ ಶಂಭವೇ ಮೇ ನಮೋಽಸ್ತು ॥ ೨೧ ॥

ತ್ವಂ ಪರಃ ಪರಮಾತ್ಮಾ ಚ ತ್ವಂ ವಿದ್ಯಾ ವಿವಿಧಾ ಹರಃ ।
ಸದ್ಬ್ರಹ್ಮ ಚ ಪರಂ ಬ್ರಹ್ಮ ವಿಚಾರಣಪರಾಯಣಃ ॥ ೨೨ ॥

---

೨೦. ಜಗತ್ತಿಗೆ ಕಾರಣರಾದ ಬ್ರಹ್ಮನೇ ಮೊದಲಾದವರಿಗೆ ಕಾರಣನೂ (ಆದಿ ಕಾರಣನೂ), ಶ್ರೇಷ್ಠವಾದ ಅಮೃತ, ಜ್ಞಾನ, ಐಶ್ವರ್ಯಗಳನ್ನು ಕೊಡುವವನೂ, ಎಲ್ಲಾ ಪ್ರಾಣಿಗಳನ್ನು ಮೋಹಗೊಳಿಸುವವನೂ, ಪ್ರಕಾಶಸ್ವರೂಪನೂ, ಅತ್ಯಂತ ಉತ್ಕೃಷ್ಟನೂ ಆದ ನಿನಗೆ ನಮಸ್ಕಾರವಿರಲಿ.

೨೧. ಭೂಮಿ, ದಿಕ್ಕುಗಳು, ಸೂರ್ಯ, ಚಂದ್ರ, ಮನಸ್ಸು, ಬ್ರಹ್ಮ, (ಮನ್ಮಥ) ದೇವತೆಗಳು ಮುಂತಾದ ಈ ಜಗತ್ತು ಯಾವ ಈಶ್ವರನಿಗಿಂತಲೂ ಭಿನ್ನವಾಗಿಲ್ಲವೆಂದು "ಸರ್ವಂಖಲ್ವಿದಂ ಬ್ರಹ್ಮ" ಮುಂತಾದ ಶ್ರುತಿಗಳು ಹೇಳುವವೋ ಯಾವನ ನಾಭಿಯಿಂದ ಆಕಾಶವೂ ಜನಿಸಿರುವುದೋ ಅಂತಹ ಶಂಕರನಿಗೆ ನನ್ನ ನಮಸ್ಕಾರವು.

೨೨. ಓ ಹರನೇ! ನೀನೇ ಪರಮಾತ್ಮನು. ಅನೇಕ ಬಗೆಯ ವಿದ್ಯೆಯೂ ನೀನೆ. ಶಬ್ದವೇ ಬ್ರಹ್ಮ ಎಂದರೆ ನಾದಬ್ರಹ್ಮವೇ ಬ್ರಹ್ಮಸ್ವರೂಪವು. ಈ ವಿಚಾರವನ್ನು ಜ್ಞಾನಿಗಳು ಧ್ಯಾನದಿಂದಲೂ, ವಿಮರ್ಶೆಯಿಂದಲೂ ತಿಳಿಯುವರು.

ಯಸ್ಯ ನಾದಿರ್ನ ಮಧ್ಯಂ ಚ ನಾಂತಮಸ್ತಿ ಜಗದ್ಯತಃ ।
ಕಥಂ ಸ್ತೋಷ್ಯಾಮಿ ತಂ ದೇವಂ ವಾಙ್ಮನೋಗೋಚರಂ ಹರಂ ॥ ೨೩ ॥

ಯಸ್ಯ ಬ್ರಹ್ಮಾದಯೋ ದೇವಾ ಮುನಯಶ್ಚ ತಪೋಧನಾಃ ।
ನ ವಿಪ್ರಣ್ವಂತಿ ರೂಪಾಣಿ ವರ್ಣನೀಯಃ ಕಥಂ ಸ ಮೇ ॥ ೨೪ ॥

ಸ್ತ್ರಿಯಾ ಮಯಾ ತೇ ಕಿಂ ಜ್ಞೇಯಾ ನಿರ್ಗುಣಸ್ಯ ಗುಣಾಃ ಪ್ರಭೋ ।
ನೈವ ಜಾನಂತಿ ಯದ್ರೂಪಂ ಸೇಂದ್ರಾ ಅಪಿ ಸುರಾಸುರಾಃ ॥ ೨೫ ॥

ನಮಸ್ತುಭ್ಯಂ ಮಹೇಶಾನ ನಮಸ್ತುಭ್ಯಂ ತಪೋಮಯ ।
ಪ್ರಸೀದ ಶಂಭೋ ದೇವೇಶ ಭೂಯೋ ಭೂಯೋ ನಮೋಽಸ್ತು ತೇ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯಾಸ್ಸಂಸ್ತುತಃ ಪರಮೇಶ್ವರಃ ।
ಸುಪ್ರಸನ್ನತರಶ್ಚಾಭೂಚ್ಛಂಕರೋ ಭಕ್ತವತ್ಸಲಃ ॥ ೨೭ ॥

---

೨೩. ಜಗದೊಡೆಯನಾದ ನಿನಗೆ ಆದಿಯೂ, ಮಧ್ಯವೂ, ಕೊನೆಯೂ ಇಲ್ಲ. ವಾಕ್ಕು ಮತ್ತು ಮನಸ್ಸುಗಳಿಗೆ ಅಗೋಚರನಾದ (ತಿಳಿಯಲಸಾಧ್ಯನಾದ) ಪ್ರಕಾಶ ಸ್ವರೂಪನಾದ ನಿನ್ನನ್ನು ಹೇಗೆ ತಾನೇ ಸ್ತುತಿಸಲಿ?

೨೪. ಯಾವನ ರೂಪವನ್ನು ಬ್ರಹ್ಮನೇ ಮೊದಲಾದ ದೇವತೆಗಳೂ, ಮಹಾ ತಪಸ್ವಿಗಳಾದ ಋಷಿಗಳೂ ಸಹ ವರ್ಣಿಸಲಾರರೋ ಅಂತಹ ನಿನ್ನನ್ನು ನಾನು ಹೇಗೆ ವರ್ಣಿಸಲಿ?

೨೫. ನಿರ್ಗುಣನಾದ ನಿನ್ನ ಮಾಯಾಮಯವಾದ ಗುಣಗಳನ್ನು ಇಂದ್ರ ಮೊದಲಾದ ದೇವದಾನವರೂ ತಿಳಿಯಲಾರರು. ಎಂದಮೇಲೆ ಸ್ತ್ರೀಮಾತ್ರಳಾದ ನಾನು ಹೇಗೆ ನಿನ್ನ ಗುಣಗಳನ್ನು ತಿಳಿಯಬಲ್ಲೆನು?

೨೬. ಓ ಮಹೇಶ್ವರನೇ! ನಿನಗೆ ನಮಸ್ಕಾರವು. ಓ ಜ್ಞಾನಸ್ವರೂಪನೇ! ನಿನಗೆ ನಮಿಸುವೆನು. ದೇವದೇವನಾದ ಓ ಶಿವನೆ! ಪ್ರಸನ್ನನಾಗು. ಪುನಃಪುನಃ ನಿನಗೆ ನಮಸ್ಕಾರವು.

೨೭. ಬ್ರಹ್ಮನು ಹೇಳಿದನು:—ಸಂಧ್ಯೆಯ ಈ ರೀತಿಯಾದ ಸ್ತೋತ್ರವನ್ನು ಕೇಳಿ ಭಕ್ತವತ್ಸಲನಾದ ಪರಮೇಶ್ವರನು ತುಂಬಾ ಪ್ರಸನ್ನನಾದನು.

ಅಥ ತಸ್ಯಾಃ ಶರೀರಂ ತು ವಲ್ಕಲಾಜಿನಸಂಯುತಂ ।
ಪರಿಚ್ಛನ್ನಂ ಜಟಾವ್ರಾತೈಃ ಪವಿತ್ರೇ ಮೂರ್ಧ್ನಿ ರಾಜಿತೈಃ ॥ ೨೮ ॥

ಹಿಮಾನೀತರ್ಜಿತಾಂಭೋಜಸದೃಶಂ ವದನಂ ತದಾ
ನಿರೀಕ್ಷ್ಯ ಕೃಪಯಾವಿಷ್ಟೋ ಹರಃ ಪ್ರೋವಾಚ ತಾಮಿದಂ ॥ ೨೯ ॥

॥ ಮಹೇಶ್ವರ ಉವಾಚ ॥

ಪ್ರೀತೋಽಸ್ಮಿ ತಪಸಾ ಭದ್ರೇ ಭವತ್ಯಾಃ ಪರಮೇಣ ವೈ ।
ಸ್ತವೇನ ಚ ಶುಭಪ್ರಾಜ್ಞೇ ವರಂ ವರಯ ಸಾಂಪ್ರತಂ ॥ ೩೦ ॥

ಯೇನ ತೇ ವಿದ್ಯತೇ ಕಾರ್ಯಂ ವರೇಣಾಸ್ಮಿನ್ ಮನೋಗತಂ ।
ತತ್ಕರಿಷ್ಯೇ ಚ ಭದ್ರಂ ತೇ ಪ್ರಸನ್ನೋಽಹಂ ತವ ವ್ರತೈಃ ॥ ೩೧ ॥

॥ ಬ್ರಹ್ಮೋವಾಚ ॥

ಇತಿ ಶ್ರುತ್ವಾ ಮಹೇಶಸ್ಯ ಪ್ರಸನ್ನಮನಸಸ್ತದಾ ।
ಸಂಧ್ಯೋವಾಚ ಸುಪ್ರಸನ್ನಾ ಪ್ರಣಮ್ಯ ಚ ಮುಹುರ್ಮುಹುಃ ॥ ೩೨ ॥

---

೨೮-೨೯. ಬಳಿಕ ಶಿವನು ಸಂಧ್ಯೆಯು ಉಟ್ಟಿರುವ ನಾರುಬಟ್ಟೆ, ಮತ್ತು ಕೃಷ್ಣಾಜಿನಗಳನ್ನೂ ಶಿರಸ್ಸಿನಲ್ಲಿ ಧರಿಸಿರುವ ಜಟೆಗಳನ್ನು ಹಿಮದ ತುಂತುರುಗಳಿಂದ ಮಲಿನವಾದ ಶರೀರವನ್ನೂ ಕಮಲದಂತಿರುವ ಮುಖವನ್ನೂ ನೋಡಿ ದಯೆಯುಳ್ಳವನಾಗಿ ಆ ಸಂಧ್ಯೆಯನ್ನು ಕುರಿತು ಹೀಗೆ ಹೇಳಿದನು.

೩೦. ಮಹೇಶ್ವರನು ಹೇಳಿದನು:—ಎಲೌ ಮಂಗಳರೂಪಿಯಾದ ಸಂಧ್ಯೆಯೇ! ನಿನ್ನ ಮಹತ್ತಾದ ತಪಸ್ಸಿನಿಂದಲೂ ಸ್ತೋತ್ರದಿಂದಲೂ ಪ್ರಸನ್ನನಾಗಿರುವೆನು. ಎಲೌ ಬುದ್ಧಿಶಾಲಿನಿಯೇ, ಬೇಕಾದ ವರವನ್ನು ಕೇಳು.

೩೧. ನಿನ್ನ ಮನಸ್ಸಿನಲ್ಲಿ ಯಾವ ಕಾರ್ಯವು ಆಗಬೇಕೆಂದಿರುವುದೋ ಅದನ್ನು ಹೇಳು, ನಡೆಯಿಸಿ ಕೊಡುವೆನು. ನಿನಗೆ ಮಂಗಳವಾಗಲಿ ! ನಿನ್ನ ವ್ರತಗಳಿಂದ ನಾನು ಸಂತುಷ್ಟನಾಗಿರುವೆನು ಎಂದನು.

೩೨. ಬ್ರಹ್ಮನು ಹೇಳಿದನು :—ಈ ರೀತಿಯಾಗಿ ಪ್ರಸನ್ನನಾದ ಮಹೇಶ್ವರನು ಹೇಳಿದ ಮಾತುಗಳನ್ನು ಕೇಳಿ ಸಂಧ್ಯೆಯು ತುಂಬಾ ಹರ್ಷಗೊಂಡು ಶಿವನನ್ನು ಪುನಃ ಪುನಃ ನಮಸ್ಕರಿಸಿ ಹೀಗೆ ಹೇಳಿದಳು.

**॥ ಸಂಧ್ಯೋವಾಚ ॥**

**ಯದಿ ದೇಯೋ ಪರಃ ಪ್ರೀತ್ಯಾ ವರಯೋಗ್ಯಾಸ್ಮ್ಯಹಂ ಯದಿ ।**
**ಯದಿ ಶುದ್ಧಾಸ್ಮ್ಯಹಂ ಜಾತಾ ತಸ್ಮಾತ್ಪಾಪಾನ್ಮಹೇಶ್ವರ ॥ ೩೩ ॥**

**ಯದಿ ದೇವ ಪ್ರಸನ್ನೋಽಸಿ ತಪಸಾ ಮಮ ಸಾಂಪ್ರತಂ ।**
**ವೃತ್ತಸ್ತದಾಯಂ ಪ್ರಥಮಂ ವರೋ ಮಮ ವಿಧೀಯತಾಂ ॥ ೩೪ ॥**

**ಉತ್ಪನ್ನಮಾತ್ರಾ ದೇವೇಶ ಪ್ರಾಣಿನೋಽಸ್ಮಿನ್ನಭಸ್ಥಲೇ ।**
**ನ ಭವಂತು ಸಮೇನೈವ ಸಕಾಮಾಸ್ಸಂಭವಂತು ವೈ ॥ ೩೫ ॥**

**ಯದಿ ವೃತ್ತಾಂ ಹಿ ಲೋಕೇಷು ತ್ರಿಷ್ವಪಿ ಪ್ರಥಿತಾ ಯಥಾ ।**
**ಭವಿಷ್ಯಾಮಿ ತಥಾ ನಾನ್ಯಾ ವರ ಏಕೋ ವೃತೋ ಮಯಾ ॥ ೩೬ ॥**

**ಸಕಾಮಾ ಮಮ ದೃಷ್ಟಿಸ್ತು ಕುತ್ರಚಿನ್ನ ಪತಿಷ್ಯತಿ ।**
**ಯೋ ಮೇ ಪತಿರ್ಭವೇನ್ನಾಥ ಸೋಽಪಿ ಮೇಽತಿಸುಹೃಚ್ಚ ವೈ ॥ ೩೭ ॥**

---

೩೩-೩೪. ಸಂಧ್ಯೆಯು ಹೇಳಿದಳು :— ಓ ಶಂಕರನೆ! ದೇವದೇವನಾದ ನೀನು ನನ್ನಲ್ಲಿ ಅನುಗ್ರಹವುಳ್ಳವನಾಗಿದ್ದರೆ, ನಿನ್ನಿಂದ ವರವನ್ನು ಪಡೆಯಲು ನಾನು ಯೋಗ್ಯಳಾಗಿದ್ದರೆ ಮತ್ತು ನಾನು ಪಾಪದಿಂದ ಪರಿಶುದ್ಧಳಾಗಿದ್ದರೆ, ನನ್ನ ತಪಸ್ಸಿನಿಂದ ನೀನು ಪ್ರಸನ್ನನೂ ಆಗಿದ್ದರೆ ಮೊದಲು ಈ ವರನ್ನು ಅನುಗ್ರಹಿಸು.

೩೫. ಓ ದೇವ ದೇವ! ಈ ಪ್ರಪಂಚದಲ್ಲಿ ಪ್ರಾಣಿಗಳು ಜನಿಸಿದೊಡನೆಯೇ ಕಾಮವಿಕಾರವನ್ನು ಹೊಂದಬಾರದು. ಆ ರೀತಿಯಾಗಿ ಅನುಗ್ರಹಿಸು.

೩೬. ಮತ್ತು ನನ್ನ ವೃತ್ತಾಂತವು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗಿ ಅದರಿಂದ ನಾನೂ ಪ್ರಸಿದ್ಧಳಾಗುವಂತೆ ಮತ್ತೊಂದು ವರವನ್ನು ಅನುಗ್ರಹಿಸು.

೩೭. ನನ್ನ ದೃಷ್ಟಿಯು ನನ್ನ ಪತಿಯಲ್ಲಿ ಹೊರತು ಇನ್ನೆಲ್ಲಿಯೂ ಕಾಮ ವಿಕಾರವುಳ್ಳದ್ದಾಗಬಾರದು. ನನ್ನ ಪತಿಯಾಗುವವನು ನನ್ನಲ್ಲಿ ತುಂಬಾ ಪ್ರೇಮ ವುಳ್ಳವನಾಗಬೇಕು.

ಯೋ ದ್ರಕ್ಷ್ಯತಿ ಸಕಾಮೋ ಮಾಂ ಪುರುಷಸ್ತಸ್ಯ ಪೌರುಷಂ ।
ನಾಶಂ ಗಮಿಷ್ಯತಿ ತದಾ ಸ ಚ ಕ್ಲೀಬೋ ಭವಿಷ್ಯತಿ　　॥ ೩೮ ॥

॥ ಬ್ರಹ್ಮೋವಾಚ ॥

ಇತಿ ಶ್ರುತ್ವಾ ವಚಸ್ತಸ್ಯಾಶ್ಶಂಕರೋ ಭಕ್ತವತ್ಸಲಃ ।
ಉವಾಚ ಸುಪ್ರಸನ್ನಾತ್ಮಾ ನಿಷ್ಪಾಪಾಯಾಸ್ತಯೇರಿತೇ　　॥ ೩೯ ॥

॥ ಮಹೇಶ್ವರ ಉವಾಚ ॥

ಶೃಣು ದೇವಿ ಚ ಸಂಧ್ಯೇ ತ್ವಂ ತ್ವತ್ಪಾಪಂ ಭಸ್ಮತಾಂ ಗತಂ ।
ತ್ವಯಿ ತ್ಯಕ್ತೋ ಮಯಾ ಕ್ರೋಧಃ ಶುದ್ಧಾ ಜಾತಾ ತಪಃಕರಾತ್ ॥

ಯದ್ಯದ್ವೃತಂ ತ್ವಯಾ ಭದ್ರೇ ದತ್ತಂ ಕದಖಿಲಂ ಮಯಾ ।
ಸುಪ್ರಸನ್ನೇನ ತಪಸಾ ತವ ಸಂಧ್ಯೇ ವರೇಣ ಹಿ　　॥ ೪೧ ॥

ಪ್ರಥಮಂ ಶೈಶವೋ ಭಾವಃ ಕೌಮಾರಾಖ್ಯೋ ದ್ವಿತೀಯಕಃ ।
ತೃತೀಯೋ ಯೌವನೋ ಭಾವಶ್ಚತುರ್ಥೋ ವಾರ್ಧಕಸ್ತಥಾ　　॥ ೪೨ ॥

---

೩೮. ನನ್ನನ್ನು ಯಾವನಾದರೂ ಪುರುಷನು ಕಾಮದೃಷ್ಟಿಯಿಂದ ನೋಡಿದರೆ ಅವನ ಪೌರುಷವೂ ನಾಶವಾಗಿ ಅವನು ನಪುಂಸಕನಾಗಬೇಕು ಈರೀತಿ ವರವನ್ನು ಕೊಡು ಎಂದು ಪ್ರಾರ್ಥಿಸಿದಳು.

೩೯. ಬ್ರಹ್ಮನು ಹೇಳಿದನು :—ಈ ರೀತಿಯಾದ ಸಂಧ್ಯೆಯ ಮಾತುಗಳನ್ನು ಕೇಳಿ ಭಕ್ತವತ್ಸಲನಾದ ಶಿವನು ಮತ್ತೂ ಪ್ರಸನ್ನನಾಗಿ ಪರಿಶುದ್ಧಳಾದ ಅವಳನ್ನು ಕುರಿತು,

೪೦. ಮಹೇಶ್ವರನು ಹೇಳಿದನು :—ಎಲೌ ಸಂಧ್ಯಾದೇವಿ ಕೇಳು, ನಿನ್ನ ಪಾಪವೆಲ್ಲವೂ ಭಸ್ಮವಾಯಿತು. ನಿನ್ನಲ್ಲಿನ ನನ್ನ ಕೋಪವು ಶಾಂತವಾಯಿತು. ತಪಸ್ಸಿನಿಂದ ನೀನು ಪರಿಶುದ್ಧಳಾಗಿರುವೆ.

೪೧. ಎಲೌ ಮಂಗಳರೂಪಳೆ ! ನೀನು ಕೇಳಿದ ವರಗಳನ್ನೆಲ್ಲಾ ಕೊಟ್ಟಿರುವೆನು. ನಿನ್ನ ಮಹತ್ತಾದ ತಪಸ್ಸಿನಿಂದ ನಾನು ಪ್ರಸನ್ನನಾಗಿರುವೆನು.

೪೨. ಪ್ರಾಣಿಗಳಿಗೆ ಮೊದಲನೆಯದು ಬಾಲ್ಯಾವಸ್ಥೆಯು, ಎರಡನೆಯದು ಕೌಮಾರಾವಸ್ಥೆಯು, ಆಮೇಲೆ ಯೌವನಾವಸ್ಥೆಯು ಬರುವುದು. ವಾರ್ಧಕ್ಯಾವಸ್ಥೆಯು ನಾಲ್ಕನೆಯ ಅವಸ್ಥೆಯು.

**ತೃತೀಯೇ ತ್ವಥ ಸಂಪ್ರಾಪ್ತೇ ವಯೋಭಾಗೇ ಶರೀರಿಣಃ ।**
**ಸಕಾಮಾಃ ಸ್ಯುರ್ದ್ವಿತೀಯಾಂತೇ ಭವಿಷ್ಯಂತಿ ಕ್ವಚಿತ್ ಕ್ವಚಿತ್ ॥ ೪೩ ॥**

**ತಪಸಾ ತವ ಮರ್ಯಾದಾ ಜಗತಿ ಸ್ಥಾಪಿತಾ ಮಯಾ ।**
**ಉತ್ಪನ್ನಮಾತ್ರಾ ನ ಯಥಾ ಸಕಾಮಾಃ ಸ್ಯುಃ ಶರೀರಿಣಃ ॥ ೪೪ ॥**

**ತ್ವಂ ಚ ಲೋಕೇ ಸತೀಭಾವಂ ತಾದೃಶಂ ಸಮವಾಪ್ನುಹಿ ।**
**ತ್ರಿಷು ಲೋಕೇಷು ನಾನ್ಯಸ್ಯಾ ಯಾದೃಶಂ ಸಂಭವಿಷ್ಯತಿ ॥ ೪೫ ॥**

**ಯಃ ಪಶ್ಯತಿ ಸಕಾಮಸ್ತ್ವಾಂ ಪಾಣಿಗ್ರಾಹಮೃತೇ ತವ ।**
**ಸ ಸದ್ಯಃ ಕ್ಲೀಬತಾಂ ಪ್ರಾಪ್ಯ ದುರ್ಬಲತ್ವಂ ಗಮಿಷ್ಯತಿ ॥ ೪೬ ॥**

**ಪತಿಸ್ತವ ಮಹಾಭಾಗಸ್ತಪೋರೂಪಸಮನ್ವಿತಃ ।**
**ಸಪ್ತಕಲ್ಪಾಂತಜೀವೀ ಚ ಭವಿಷ್ಯತಿ ಸಹ ತ್ವಯಾ ॥ ೪೭ ॥**

---

೪೩. ಮೂರನೆಯದಾದ ಯೌವನಾವಸ್ಥೆಯಲ್ಲಿಯೇ ಪ್ರಾಣಿಗಳು ಕಾಮೇಚ್ಛೆಯುಳ್ಳವರಾಗುವರು. ಕೆಲವೆಡೆ ಕೌಮಾರಾವಸ್ಥೆಯ ಕೊನೆಯಲ್ಲಿಯೂ ಕಾಮವಿಕಾರವುಂಟಾಗುವುದು.

೪೪. ನಿನ್ನ ತಪಸ್ಸಿಗೆ ಮೆಚ್ಚಿ ನಾನು ಪ್ರಾಣಿಗಳು ಜನಿಸಿದೊಡನೆಯೇ ಕಾಮವಿಕಾರಕ್ಕೊಳಗಾಗಬಾರದೆಂಬ ಮರ್ಯಾದೆಯನ್ನು ಸ್ಥಾಪಿಸಿರುವೆನು.

೪೫. ನೀನೂ ಸಹ ಲೋಕದಲ್ಲಿ ಶ್ರೇಷ್ಠಪತಿವ್ರತೆಯಾಗುವೆ. ನಿನ್ನಂತ ಪತಿವ್ರತೆಯು ಮತ್ತೊಬ್ಬಳು ಯಾರೂ ಆಗಲಾರರು.

೪೬. ನಿನ್ನ ಪತಿಯ ಹೊರತು ಮಿಕ್ಕ ಯಾವ ಪುರುಷನಾದರೂ ಸರಿಯೆ ಕಾಮದೃಷ್ಟಿಯಿಂದ ನಿನ್ನನ್ನು ನೋಡಿದರೆ ಆವನು ನಪುಂಸಕನಾಗಿ ಪೌರುಷವಿಲ್ಲದವನಾಗುವನು.

೪೭. ನಿನ್ನ ಪತಿಯು ಮಹಾಮಹಿಮನೂ, ತಪಸ್ವಿಯೂ. ಸುಂದರನೂ ಆಗಿದ್ದು ಏಳು ಕಲ್ಪಗಳವರೆಗೆ ನಿನ್ನೊಡನೆ ಜೀವಿಸಿರುವನು.

ಇತಿ ತೇ ಯೇ ವರಾ ಮತ್ತಃ ಪ್ರಾರ್ಥಿತಾಸ್ತೇ ಕೃತಾ ಮಯಾ ।
ಅನ್ಯಚ್ಚ ತೇ ವದಿಷ್ಯಾಮಿ ಪೂರ್ವಜನ್ಮನಿ ಸಂಸ್ಥಿತಂ ॥ ೪೮ ॥

ಅಗ್ನೌ ಶರೀರತ್ಯಾಗಸ್ತೇ ಪೂರ್ವಮೇವ ಪ್ರತಿಶ್ರುತಃ ।
ತದುಪಾಯಂ ವದಿಷ್ಯಾಮಿ ತತ್ಕುರುಷ್ವ ನ ಸಂಶಯಃ ॥ ೪೯ ॥

ಸ ಚ ಮೇಧಾತಿಥೇರ್ಯಜ್ಞೋ ಮುನೇರ್ದ್ವಾದಶವಾರ್ಷಿಕೇ ।
ಕೃತ್ಸ್ನಪ್ರಜ್ವಲಿತೇ ವಹ್ನಾವಚಿರಾತ್ಕ್ರಿಯತಾಂ ತ್ವಯಾ ॥ ೫೦ ॥

ಏತಚ್ಛೈಲೋಪತ್ಯಕಾಯಾಂ ಚಂದ್ರಭಾಗಾನದೀತಟೇ ।
ಮೇಧಾತಿಥಿರ್ಮಹಾಯಜ್ಞಂ ಕುರುತೇ ತಾಪಸಾಶ್ರಮೇ ॥ ೫೧ ॥

ತತ್ರ ಗತ್ವಾ ಸ್ವಯಂ ಛನ್ನಂ ಮುನಿಭಿರ್ನೋಪಲಕ್ಷಿತಾ ।
ಮತ್ಪ್ರಸಾದಾದ್ವಹ್ನಿಜಾತಾ ತಸ್ಯ ಪುತ್ರೀ ಭವಿಷ್ಯತಿ ॥ ೫೨ ॥

೪೮. ಹೀಗೆ ನೀನು ಪ್ರಾರ್ಥಿಸಿದ ವರಗಳನ್ನೆಲ್ಲಾ ಅನುಗ್ರಹಿಸಿರುವೆನು. ಅಲ್ಲದೆ ಈ ಜನ್ಮದಲ್ಲಿಯೇ ಮಾಡಬೇಕಾದ ಇನ್ನೊಂದು ವಿಷಯವನ್ನು ಹೇಳುವೆನು.

೪೯. ಹಿಂದೆ ನೀನು ಅಗ್ನಿಯಲ್ಲಿ ಶರೀರತ್ಯಾಗಮಾಡುವೆನೆಂದು ಸಂಕಲ್ಪಿಸಿರುವೆಯಷ್ಟೆ. ಆ ದೇಹತ್ಯಾಗಕ್ಕೆ ಉಪಾಯವನ್ನು ಹೇಳುವೆನು. ಅದರಂತೆ ಸಂಶಯವಿಲ್ಲದೆ ನಡೆಸು.

೫೦. ಈಗ ಮೇಧಾತಿಥಿಯೆಂಬ ಮುನಿಯು ಹನ್ನೆರಡು ವರ್ಷ ಪರ್ಯಂತ ನಡೆಯುವಂತಹ ಒಂದು ಯಾಗವನ್ನು ಮಾಡುತ್ತಲಿರುವನು. ಆ ಯಾಗದ ಉರಿಯುತ್ತಿರುವ ಅಗ್ನಿಯಲ್ಲಿ ಶರೀರತ್ಯಾಗವನ್ನು ಮಾಡು.

೫೧. ಈ ಬೆಟ್ಟದ ಕೆಳತಪ್ಪಲಲ್ಲಿಯೇ ಚಂದ್ರಭಾಗಾನದಿಯ ದಡದಲ್ಲಿರುವ ತಾಪಸಾಶ್ರಮದಲ್ಲಿ ಮೇಧಾತಿಥಿಮುನಿಯು ಆ ಯಾಗವನ್ನು ಮಾಡುತ್ತಲಿರುವನು.

೫೨. ಮುನಿಗಳಿಗೆ ಕಾಣಿಸದಂತೆ ಆ ಯಾಗಶಾಲೆಗೆ ಮರೆಯಾಗಿ ಹೋಗಿ ಅಗ್ನಿಯಲ್ಲಿ ಶರೀರವನ್ನು ತ್ಯಜಿಸು. ಮುಂದೆ ನನ್ನ ಅನುಗ್ರಹದಿಂದ ಅಗ್ನಿಯಲ್ಲಿ ಜನಿಸಿ ನೀನು ಮೇಧಾತಿಥಿಮುನಿಯ ಪುತ್ರಿಯಾಗುವೆ.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿ ವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಸಪ್ತಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

**ವರಂ ದತ್ವಾ ಮುನೇ ತಸ್ಮಿನ್ ಶಂಭಾವಂತರ್ಹಿತೇ ತದಾ ।**
**ಸಂಧ್ಯಾಪ್ಯಗಚ್ಛತ್ತತ್ರೈವ ಯತ್ರ ಮೇಧಾತಿಥಿರ್ಮುನಿಃ ॥ ೧ ॥**

**ತತ್ರ ಶಂಭೋಃ ಪ್ರಸಾದೇನ ನ ಕೇನಾಪ್ಯುಪಲಕ್ಷಿತಾ ।**
**ಸಸ್ಮಾರ ವರ್ಣಿನಂ ತಂ ವೈ ಸ್ವೋಪದೇಶಕರಂ ತಪಃ ॥ ೨ ॥**

---

### ಏಳನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು :—ಹೀಗೆ ಸಂಧ್ಯೆಗೆ ವರವನ್ನು ಕೊಟ್ಟು ಶಂಕರನು ಅಂತರ್ಧಾನನಾಗಲು, ಬಳಿಕ ಸಂಧ್ಯಾದೇವಿಯು ಮೇಧಾತಿಥಿಮುನಿಯ ಯಜ್ಞ ಶಾಲೆಗೆ ಹೋದಳು.

೨. ಆ ಯಜ್ಞಶಾಲೆಯಲ್ಲಿ ಶಂಕರನ ಅನುಗ್ರಹದಿಂದ ಯಾರಿಗೂ ಆ ಸಂಧ್ಯೆಯು ಕಾಣಿಸಲಿಲ್ಲ. ಆಗ ಅವಳು, ತನಗೆ ತಪೋವಿಧಿಯನ್ನು ಉಪದೇಶಿಸಿದ ಬ್ರಹ್ಮಚಾರಿ ವಸಿಷ್ಠಮುನಿಯನ್ನು ಮನಸ್ಸಿನಲ್ಲಿ ಸ್ಮರಿಸಿದಳು.

ವಸಿಷ್ಠೇನ ಪುರಾ ಸಾ ತು ವರ್ಣೀರೂಪೇಣ ವೈ ಮುನೇ ।
ಉಪದಿಷ್ಟಾ ತಪಶ್ಚರ್ತುಂ ವಚನಾತ್ಪರಮೇಷ್ಠಿನಃ ॥ ೩ ॥

ತಮೇವ ಕೃತ್ವಾ ಮನಸಾ ತಪಶ್ಚರ್ಯೋಪದೇಶಕಂ ।
ಪತಿತ್ವೇನ ತದಾ ಸಂಧ್ಯಾ ಬ್ರಾಹ್ಮಣಂ ಬ್ರಹ್ಮಚಾರಿಣಂ ॥ ೪ ॥

ಸಮಿದ್ಧೇಽಗ್ನೌ ಮಹಾಯಜ್ಞೇ ಮುನಿಭಿರ್ನೋಪಲಕ್ಷಿತಾ ।
ಹೃಷ್ಟಾ ಶಂಭುಪ್ರಸಾದೇನ ಸಾ ವಿವೇಶ ವಿಧೇಸ್ಸುತಾ ॥ ೫ ॥

ತಸ್ಯಾಃ ಪುರೋಡಾಶಮಯಂ ಶರೀರಂ ತತ್ಕ್ಷಣಾತ್ತತಃ ।
ದಗ್ಧಂ ಪುರೋಡಾಶಗಂಧಂ ತಸ್ತಾರ ಯದಲಕ್ಷಿತಂ ॥ ೬ ॥

ವಹ್ನಿಸ್ತಸ್ಯಾಃ ಶರೀರಂ ತು ದಗ್ಧ್ವಾ ಸೂರ್ಯಸ್ಯ ಮಂಡಲಂ ।
ಶುದ್ಧಂ ಪ್ರವೇಶಯಾಮಾಸ ಶಂಭೋರೇವಾಜ್ಞಯಾ ಪುನಃ ॥ ೭ ॥

---

೩. ಹಿಂದೆ ಬ್ರಹ್ಮನ ಅಪ್ಪಣೆಯಂತೆ ವಸಿಷ್ಠಮುನಿಯೇ ಬ್ರಹ್ಮಚಾರಿರೂಪವನ್ನು ಧರಿಸಿ ಆ ಸಂಧ್ಯೆಗೆ ತಪಸ್ಸನ್ನಾಚರಿಸುವ ವಿಧಾನವನ್ನುಪದೇಶಿಸಿದ್ದನಷ್ಟೆ.

೪-೫. ತಪಸ್ಸನ್ನುಪದೇಶಿಸಿದ ಬ್ರಹ್ಮಚಾರಿರೂಪನಾದ ವಸಿಷ್ಠಮುನಿಯೆಂಬ ಬ್ರಾಹ್ಮಣನನ್ನೇ ಮನಸ್ಸಿನಲ್ಲಿ ಮುಂದೆ ತನ್ನ ಪತಿಯಾಗಬೇಕೆಂದು ಸ್ಮರಿಸಿ, ಆ ಮಹಾಯಾಗದ ಉರಿಯುತ್ತಿರುವ ಅಗ್ನಿಯಲ್ಲಿ ಶಂಕರನ ಅನುಗ್ರಹದಿಂದ ಯಾರಿಗೂ ಕಾಣಿಸದಂತೆ ಹವಿಸ್ಸಿನ ರೂಪದಿಂದ ಪ್ರವೇಶಿಸಿದಳು.

೬. ಪುರೋಡಾಶ (ಹವಿಸ್ಸು) ರೂಪವಾದ ಅವಳ ಶರೀರವು ಆಕ್ಷಣವಲ್ಲಿಯೇ ಭಸ್ಮವಾಗಿ ಆ ಪುರೋಡಾಶದ ಸುವಾಸನೆಯು ಅಲ್ಲೆಲ್ಲಾ ಹರಡಿತು.

೭. ಅಗ್ನಿಯು ಆ ಸಂಧ್ಯೆಯ ಶರೀರವನ್ನು ಸುಟ್ಟು ಮುಂದೆ ಶಂಕರನ ಅಪ್ಪಣೆಯಂತೆ ಪವಿತ್ರವಾದ ಅವಳ ದಿವ್ಯಶರೀರವನ್ನು ಸೂರ್ಯಮಂಡಲಕ್ಕೆ ಪ್ರವೇಶಮಾಡಿಸಿದನು.

ಸೂರ್ಯೋ ದ್ವಿಧಾ ವಿಭಜ್ಯಾಥ ತಚ್ಛರೀರಂ ತದಾ ರಥೇ ।
ಸ್ವಕೇ ಸಂಸ್ಥಾಪಯಾಮಾಸ ಪ್ರೀತಯೇ ಪಿತೃದೇವಯೋಃ ॥ ೮ ॥

ತದೂರ್ಧ್ವಭಾಗಸ್ತಸ್ಯಾಸ್ತು ಶರೀರಸ್ಯ ಮುನೀಶ್ವರ ।
ಪ್ರಾತಸ್ಸಂಧ್ಯಾಭವತ್ಸಾ ತು ಅಹೋರಾತ್ರಾದಿಮಧ್ಯಗಾ ॥ ೯ ॥

ತಚ್ಛೇಷಭಾಗಸ್ತಸ್ಯಾಸ್ತು ಅಹೋರಾತ್ರಾಂತಮಧ್ಯಗಾ ।
ಸಾ ಸಾಯಮಭವತ್ಸಂಧ್ಯಾ ಪಿತೃಪ್ರೀತಿಪ್ರದಾ ಸದಾ ॥ ೧೦ ॥

ಸೂರ್ಯೋದಯಾತ್ತು ಪ್ರಥಮಂ ಯದಾ ಸ್ಯಾದರುಣೋದಯಃ ।
ಪ್ರಾತಸ್ಸಂಧ್ಯಾ ತದೋದೇತಿ ದೇವಾನಾಂ ಪ್ರೀತಿಕಾರಿಣೀ ॥ ೧೧ ॥

ಅಸ್ತಂ ಗತೇ ತತಸ್ಸೂರ್ಯೇ ಶೋಣಪದ್ಮನಿಭೇ ತದಾ ।
ಉದೇತಿ ಸಾಯಂಸಂಧ್ಯಾಪಿ ಪಿತೄಣಾಂ ಮೋದಕಾರಿಣೀ ॥ ೧೨ ॥

---

೮. ಆ ಶರೀರವನ್ನು ಸೂರ್ಯನು ಎರಡು ಭಾಗವಾಗಿ ವಿಭಾಗಿಸಿ ತನ್ನ ರಥದಲ್ಲಿ ಪಿತೃ ಮತ್ತು ದೇವತೆಗಳ ಪ್ರೀತಿಗಾಗಿ ಸ್ಥಾಪಿಸಿದನು.

೯. ಆ ಸಂಧ್ಯೆಯು ಶರೀರದ ಮೇಲುಭಾಗವು ರಾತ್ರಿ ಮತ್ತು ಹಗಲಿನ ಮಧ್ಯದಲ್ಲಿರುವ ಪ್ರಾತಸ್ಸಂಧ್ಯೆಯೆನಿಸಿತು.

೧೦. ಆ ಶರೀರದ ಮಿಕ್ಕಭಾಗವು ಎಂದರೆ ಕೆಳಭಾಗವು ಹಗಲು ರಾತ್ರಿಗಳ ಮಧ್ಯಭಾಗದಲ್ಲಿ ಬರುವ ಸಾಯಂಸಂಧ್ಯೆಯಾಯಿತು. ಆ ಸಾಯಂಸಂಧ್ಯೆಯು ಪಿತೃಗಳಿಗೆ ತುಂಬಾ ಪ್ರಿಯವಾದುದು. ಅಲ್ಲದೆ ಸಾಯಂಸಂಧ್ಯೆಯು ಪಿತೃಗಳಿಗೆ ಜನನೀ ಎಂತಲೂ ಪ್ರಸಿದ್ಧಳಾಗಿರುವಳು.

೧೧. ಸೂರ್ಯೋದಯಕ್ಕಿಂತ ಮೊದಲು ಅರುಣನು ಉದಯಿಸುವ ಕಾಲದಲ್ಲಿ ಪ್ರಾತಸ್ಸಂಧ್ಯೆಯು ಉದಯಿಸುವುದು. ಅದು ದೇವತೆಗಳಿಗೆ ಪ್ರಿಯವಾದುದು.

೧೨. ಬಳಿಕ ಸೂರ್ಯನು ರಕ್ತಕಮಲದಂತೆ ಕೆಂಬಣ್ಣವುಳ್ಳವನಾಗಿ ಅಸ್ತನಾಗುತ್ತಿರಲು ಆಗ ಪಿತೃಗಳಿಗೆ ಪ್ರಿಯವಾದ ಸಾಯಂಸಂಧ್ಯೆಯು ಉದಯಿಸುವುದು.

ತಸ್ಯಾಃ ಪ್ರಾಣಾಸ್ತು ಮನಸಾ ಶಂಭುನಾಥ ದಯಾಲುನಾ ।
ದಿವ್ಯೇನ ತು ಶರೀರೇಣ ಚಕ್ರಿರೇ ಹಿ ಶರೀರಿಣಃ ॥ ೧೩ ॥

ಮುನೇರ್ಯಜ್ಞಾವಸಾನೇ ತು ಸಂಪ್ರಾಪ್ತೇ ಮುನಿನಾ ತು ಸಾ ।
ಪ್ರಾಪ್ತಾ ಪುತ್ರೀ ವಹ್ನಿಮಧ್ಯೇ ತಪ್ತಕಾಂಚನಸುಪ್ರಭಾ ॥ ೧೪ ॥

ತಾಂ ಜಗ್ರಾಹ ತದಾ ಪುತ್ರೀಂ ಮುನಿರಾಮೋದಸಂಯುತಃ ।
ಯಜ್ಞಾರ್ಥಂ ತಾಂ ತು ಸಂಸ್ನಾಪ್ಯ ನಿಜಕ್ರೋಡೇ ದಧೌ ಮುನೇ ॥ ೧೫ ॥

ಅರುಂಧತೀತಿ ತಸ್ಯಾಸ್ತು ನಾಮ ಚಕ್ರೇ ಮಹಾಮುನಿಃ ।
ಶಿಷ್ಯೈಃ ಪರಿವೃತಸ್ತತ್ರ ಮಹಾಮೋದಮವಾಪ ಹ ॥ ೧೬ ॥

ನ ರುಣದ್ಧಿ ಯತೋಧರ್ಮಂ ಸ ಕಸ್ಮಾದಪಿ ಕಾರಣಾತ್ ।
ಅತಸ್ತ್ರಿಲೋಕೇ ವಿದಿತಂ ನಾಮ ಸಂಪ್ರಾಪ ತತ್ಸ್ವಯಂ ॥ ೧೭ ॥

---

೧೩. ಆ ಸಂಧ್ಯೆಯ ಪ್ರಾಣಗಳನ್ನೂ ಮನಸ್ಸನ್ನೂ ದಯಾಲುವಾದ ಶಂಕರನು ದಿವ್ಯವಾದ ಶರೀರವುಳ್ಳವುಗಳನ್ನಾಗಿಮಾಡಿದನು.

೧೪. ಅತ್ತಲಾಗಿ ಮೇಧಾತಿಥಿಯ ಯಜ್ಞವು ಮುಗಿಯುತ್ತಲಿರಲು ಅಗ್ನಿಯಿಂದ ಪುಟಕ್ಕೆ ಹಾಕಿದ ಚಿನ್ನದಂತಿರುವ ಕನ್ಯೆಯೋರ್ವಳು ಎದ್ದುಬಂದಳು.

೧೫. ಎಲೈ ನಾರದಮುನಿಯೇ! ಅಗ್ನಿಯಿಂದ ಬಂದ ಆ ಕನ್ಯೆಯನ್ನು ಮೇಧಾತಿಥಿಮುನಿಯು ಸ್ವೀಕರಿಸಿ, ಅವಭೃಥಸ್ನಾನವನ್ನು ಮಾಡಿಸಿ ಎರಡು ಕೈಗಳಿಂದಲೂ ಎತ್ತಿಕೊಂಡನು.

೧೬. ಆ ಬಾಲಿಕೆಗೆ "ಅರುಂಧತೀ" ಎಂಬ ಹೆಸರನ್ನು ಆ ಮುನಿಯು ಇಟ್ಟನು. ಅವಳು ಲಭಿಸಿದುದರಿಂದ ಶಿಷ್ಯರೊಡನೆ ತುಂಬಾ ಸಂತೋಷಗೊಂಡನು.

೧೭. ಆ ಅರುಂಧತಿಯು ಯಾವ ಕಾರಣದಿಂದಲಾದರೂ ಉಂಟಾಗುವ ಅಧರ್ಮವನ್ನು ತಡೆಯುವ ಸಾಮರ್ಥ್ಯವುಳ್ಳವಳಾದುದರಿಂದ "ಅರುಂಧತೀ" ಎಂದು ಹೆಸರನ್ನು ಪಡೆದಳು.

ಯಜ್ಞಂ ಸಮಾಪ್ಯ ಸ ಮುನಿಃ ಕೃತಕೃತ್ಯಭಾವ
ಮಾಸಾದ್ಯ ಸಂಪದಯುತಸ್ತನಯಾಪ್ರಲಂಭಾತ್ ।
ತಸ್ಮಿನ್ನಿಜಾಶ್ರಮಪದೇ ಸಹ ಶಿಷ್ಯವರ್ಗೈ-
ಸ್ತಾಮೇವ ಸಂತತಮಸೌ ದಯತೇ ಸುರರ್ಷೇ ॥ ೧೮ ॥

ಅಥ ಸಾ ವವೃಧೇ ದೇವೀ ತಸ್ಮಿನ್ಮುನಿವರಾಽಽಶ್ರಮೇ ।
ಚಂದ್ರಭಾಗಾನದೀತೀರೇ ತಾಪಸಾಽಽರಣ್ಯಸಂಜ್ಞಕೇ ॥ ೧೯ ॥

ಸಂಪ್ರಾಪ್ತೇ ಪಂಚಮೇ ವರ್ಷೇ ಚಂದ್ರಭಾಗಾಂ ತದಾ ಗುಣೈಃ ।
ತಾಪಸಾರಣ್ಯಮಪಿ ಸಾ ಪವಿತ್ರಮಕರೋತ್ಸತೀ ॥ ೨೦ ॥

ವಿವಾಹಂ ಕಾರಯಾಮಾಸುಸ್ತಸ್ಯಾ ಬ್ರಹ್ಮಸುತೇನ ವೈ ।
ವಸಿಷ್ಠೇನ-ಹ್ಯರುಂಧತ್ಯಾ ಬ್ರಹ್ಮವಿಷ್ಣುಮಹೇಶ್ವರಾಃ ॥ ೨೧ ॥

---

೧೮. ಎಲೈ ನಾರದ! ಬಳಿಕ ಆ ಮೇಧಾತಿಥಿಯು ಯಾಗವನ್ನು ಮುಗಿಯಿಸಿ ಕೃತಕೃತ್ಯನಾಗಿ ಪುತ್ರಿಯು ಲಭಿಸಿದುದರಿಂದ ಮತ್ತಷ್ಟು ಸಂತೋಷಗೊಂಡು ತನ್ನ ಆಶ್ರಮದಲ್ಲಿ ಶಿಷ್ಯರೊಡನೆ ವಾಸಿಸುತ್ತಾ ಆ ಅರುಂಧತಿಯಲ್ಲಿ ತುಂಬಾ ವಾತ್ಸಲ್ಯವುಳ್ಳವನಾಗಿದ್ದನು.

೧೯. ಆ ಮೇಲಾ ಅರುಂಧತಿಯು ಚಂದ್ರಭಾಗಾ ನದೀತೀರದಲ್ಲಿರುವ ಆ ಮೇಧಾತಿಥಿಯ ತಾಪಸಾರಣ್ಯವೆಂಬ ಆಶ್ರಮದಲ್ಲಿ ದಿನದಿನವೂ ಬೆಳೆಯತೊಡಗಿದಳು.

೨೦. ಐದನೆಯ ವರ್ಷವು ಪ್ರಾಪ್ತವಾಗಲು ಸಾಧ್ವಿಯಾದ ಆ ಅರುಂಧತಿಯು ತನ್ನ ಗುಣಗಳಿಂದ ಚಂದ್ರಭಾಗಾನದಿಯನ್ನೂ ಆ ತಾಪಸಾರಣ್ಯವನ್ನೂ ಪವಿತ್ರವಾಗಿ ಮಾಡಿದಳು.

೨೧. ಮುಂದೆ ಬ್ರಹ್ಮ ವಿಷ್ಣು ಮತ್ತು ಮಹೇಶ್ವರರು ಆ ಅರುಂಧತಿಗೆ ಬ್ರಹ್ಮಪುತ್ರನಾದ ವಸಿಷ್ಠಮುನಿಯೊಡನೆ ಮದುವೆಯನ್ನು ಮಾಡಿಸಿದರು.

ತದ್ವಿವಾಹೇ ಮಹೋತ್ಸಾಹೋ ಬಭೂವ ಸುಖವರ್ಧನಃ ।
ಸರ್ವೇ ಸುರಾಶ್ಚ ಮುನಯಸ್ಸುಖಮಾಪುಃ ಪರಂ ಮುನೇ ॥ ೨೨ ॥

ಬ್ರಹ್ಮವಿಷ್ಣುಮಹೇಶಾನಾಂ ಕರನಿಃಸೃತತೋಯತಃ ।
ಸಪ್ತನದ್ಯಃ ಸಮುತ್ಪನ್ನಾಃ ಶಿಪ್ರಾದ್ಯಾಸ್ಸುಪವಿತ್ರಕಾಃ ॥ ೨೩ ॥

ಅರುಂಧತೀ ಮಹಾಸಾಧ್ವೀ ಸಾಧ್ವೀನಾಂ ಪ್ರವರೋತ್ತಮಾ ।
ವಸಿಷ್ಠಂ ಪ್ರಾಪ್ಯ ಸಂರೇಜೇ ಮೇಧಾತಿಥಿಸುತಾ ಮುನೇ ॥ ೨೪ ॥

ಯಸ್ಯಾಃ ಪುತ್ರಾಸ್ಸಮುತ್ಪನ್ನಾಃ ಶ್ರೇಷ್ಠಾಶ್ಶಕ್ತ್ಯಾದಯಃ ಶುಭಾಃ ।
ವಸಿಷ್ಠಂ ಪ್ರಾಪ್ಯ ತಂ ಕಾಂತಂ ಸಂರೇಜೇ ಮುನಿಸತ್ತಮ ॥ ೨೫ ॥

ಏವಂ ಸಂಧ್ಯಾಚರಿತ್ರಂ ತೇ ಕಥಿತಂ ಮುನಿಸತ್ತಮ ।
ಪವಿತ್ರಂ ಪಾವನಂ ದಿವ್ಯಂ ಸರ್ವಕಾಮಫಲಪ್ರದಂ ॥ ೨೬ ॥

---

೨೩. ಆಗ ಬ್ರಹ್ಮ, ವಿಷ್ಣು, ಮಹೇಶ್ವರರು ಅರುಂಧತೀ ವಸಿಷ್ಠರ ಶಿರಸ್ಸಿನಲ್ಲಿ ಪ್ರೋಕ್ಷಿಸಿದ ಆಶೀರ್ವಾದ ಜಲದಿಂದ "ಶೀಪ್ರಾನದೀ" ಮೊದಲಾದ ಏಳು ಪವಿತ್ರವಾದ ನದಿಗಳು ಜನಿಸಿದುವು.

೨೪. ಮಹಾಸತಿಯೂ, ಪತಿವ್ರತೆಯರಲ್ಲಿ ಶ್ರೇಷ್ಠಳೂ ಆದ ಮೇಧಾತಿಥಿಪುತ್ರಿ ಅರುಂಧತಿಯು ವಸಿಷ್ಠಮುನಿಯನ್ನು ಪತಿಯಾಗಿ ಪಡೆದು ತುಂಬಾ ಪ್ರಕಾಶಿಸಿದಳು. ಅವಳಿಂದಲೇ ಮುಂದೆ ಶಕ್ತಿಮುನಿ ಮುಂತಾದ ಶ್ರೇಷ್ಠಪುತ್ರರು ಜನಿಸಿದರು. ಆ ಅರುಂಧತಿಯು ಸುಂದರನಾದ ವಸಿಷ್ಠಮುನಿಯನ್ನು ಪತಿಯಾಗಿ ಪಡೆದು ರಾರಾಜಿಸಿದಳು.

೨೫. ಎಲೈ ನಾರದಮುನಿ! ಹೀಗೆ ನಿನಗೆ ಸಂಧ್ಯಾದೇವಿಯ ಪವಿತ್ರವೂ, ಶ್ರೇಷ್ಠವೂ, ಸಕಲ ಇಷ್ಟಾರ್ಥಗಳನ್ನುಂಟುಮಾಡುವಂತಹುದೂ ಆದಂತಹ ದಿವ್ಯಚರಿತ್ರೆಯನ್ನು ಹೇಳಿರುವೆನು.

೨೬. ಆ ಅರುಂಧತೀ ವಸಿಷ್ಠರ ಮದುವೆಯಲ್ಲಿ ಆನಂದಪ್ರದವಾದ ಮಹೋತ್ಸವವು ಬಹು ವಿಜೃಂಭಣೆಯಿಂದ ಜರುಗಿತು. ಎಲ್ಲಾ ದೇವತೆಗಳೂ ಮತ್ತು ಮುನಿಗಳೂ ಸಹ ತುಂಬಾ ಆನಂದವನ್ನು ಹೊಂದಿದರು.

ಯ ಇದಂ ಶೃಣುಯಾನ್ನಾರೀ ಪುರುಷೋ ವಾ ಶುಭವ್ರತಃ ।
ಸರ್ವಾನ್ ಕಾಮಾನವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೨೭ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ
ಸತೀಖಂಡೇ ಸಪ್ತಮೋಽಧ್ಯಾಯಃ



೨೭. ಈ ಕಥೆಯನ್ನು ಶ್ರದ್ಧೆಯಿಂದ ಸ್ತ್ರೀಯರಾಗಲೀ, ಪುರುಷರಾಗಲೀ ಕೇಳಿದರೆ ಅವರು ಸಕಲ ಇಷ್ಟಾರ್ಥಗಳನ್ನೂ ಪಡೆಯುವರು. ಇದರಲ್ಲಿ ಸಂಶಯವಿಲ್ಲ ಎಂದನು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ
ಏಳನೆಯ ಅಧ್ಯಾಯವು ಮುಗಿದುದು.



|| ಶ್ರೀ ||

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮಹಾಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಅಷ್ಟಮೋಽಧ್ಯಾಯಃ

|| ಸೂತ ಉವಾಚ ||

ಇತ್ಯಾಕರ್ಣ್ಯ ವಚಸ್ತಸ್ಯ ಬ್ರಹ್ಮಣೋ ಹಿ ಪ್ರಜಾಪತೇಃ ।
ಪ್ರಸನ್ನಮಾನಸೋ ಭೂತ್ವಾ ತಂ ಪ್ರೋವಾಚ ಸ ನಾರದಃ || ೧ ||

|| ನಾರದ ಉವಾಚ ||

ಬ್ರಹ್ಮನ್ ವಿಧೇ ಮಹಾಭಾಗ ವಿಷ್ಣುಶಿಷ್ಯ ಮಹಾಮತೇ ।
ಧನ್ಯಸ್ತ್ವಂ ಶಿವಭಕ್ತೋ ಹಿ ಪರತತ್ತ್ವಪ್ರದರ್ಶಕಃ || ೨ ||

---

## ಎಂಟನೆಯ ಅಧ್ಯಾಯವು.

೧. ಸೂತಮುನಿಯು ಹೇಳಿದನು :—ಬ್ರಹ್ಮನು ಹೇಳಿದ ಆರೀತಿಯಾದ ಸಂಧ್ಯೆಯ ಚರಿತ್ರೆಯನ್ನು ಕೇಳಿ ಸಂತೋಷಗೊಂಡು ನಾರದಮುನಿಯು ಬ್ರಹ್ಮನನ್ನು ಕುರಿತು ಮತ್ತೆ ಪ್ರಶ್ನೆ ಮಾಡಿದನು.

೨. ನಾರದಮುನಿಯು ಕೇಳಿದನು :—ಓ ಮಹಾಮಹಿಮನೇ ! ನೀನು ಎಲ್ಲವನ್ನೂ ತಿಳಿದವನು. ವಿಷ್ಣುವಿನ ಶಿಷ್ಯನೂ ಶಿವಭಕ್ತನೂ ಆದ ನೀನೇ ಧನ್ಯನು. ನೀನು ಶ್ರೇಷ್ಠತತ್ವವನ್ನು ತಿಳಿದಿರುವೆ ಮತ್ತು ಪ್ರದರ್ಶಿಸುವೆ.

ಶ್ರಾವಿತಾ ಸುಕಥಾ ದಿವ್ಯಾ ಶಿವಭಕ್ತಿವಿವರ್ಧಿನೀ ।
ಅರುಂಧತ್ಯಾಸ್ತಥಾ ತಸ್ಯಾಃ ಸ್ವರೂಪಾಯಾಃ ಪರೇ ಭವೇ ॥ ೩ ॥

ಇದಾನೀಂ ಬ್ರೂಹಿ ಧರ್ಮಜ್ಞ ಪವಿತ್ರಂ ಚರಿತಂ ಪರಂ ।
ಶಿವಸ್ಯ ಪರಪಾಪಘ್ನಂ ಮಂಗಲಪ್ರದಮುತ್ತಮಂ ॥ ೪ ॥

ಗೃಹೀತದಾರೇ ಕಾಮೇ ಚ ದೃಷ್ಟೇ ತೇಷು ಗತೇಷು ಚ ।
ಸಂಧ್ಯಾಯಾಂ ಕಿಂ ತಪಸ್ತಪ್ತುಂ ಗತಾಯಾಮಭವತ್ತತಃ ॥ ೫ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯ ಋಷೇರ್ವೈ ಭಾವಿತಾತ್ಮನಃ ।
ಸುಪ್ರಸನ್ನತರೋ ಬ್ರಹ್ಮಾ ಭೂತ್ವಾ ವಚನಮಬ್ರವೀತ್ ॥ ೬ ॥

---

೩. ಇದುವರೆಗೆ ಶಿವಭಕ್ತಿಯನ್ನು ಹೆಚ್ಚಿಸುವ ದಿವ್ಯವಾದ ಸಂಧ್ಯೆಯ ಕಥೆಯನ್ನೂ ಮತ್ತು ಅವಳ ಮುಂದಿನ ಜನ್ಮವಾದ ಅರುಂಧತಿಯ ಕಥೆಯನ್ನೂ ಹೇಳಿರುವೆ.

೪. ಈಗ ಸಕಲ ಪಾಪಗಳನ್ನೂ ನಾಶಮಾಡುವಂತಹ ಮತ್ತು ತುಂಬಾ ಪವಿತ್ರವಾದ ಶಿವನ ಮಂಗಳಮಯವಾದ ಚರಿತ್ರೆಯನ್ನು ಹೇಳು.

೫. ಕಾಮನು ರತಿಯನ್ನು ಮದುವೆಯಾದ ಬಳಿಕ ಮಾನಸಪುತ್ರರೆಲ್ಲರೂ ತಮ್ಮತಮ್ಮ ಸ್ಥಾನಕ್ಕೆ ತೆರಳಲು, ಸಂಧ್ಯೆಯೂ ಸಹ ತಪಸ್ಸನ್ನಾಚರಿಸಲು ಹೊರಟು ಹೋದಮೇಲೆ ಮುಂದೇನಾಯಿತು ಎಂಬುದನ್ನು ಹೇಳು ಎಂದು ಕೇಳಿದನು.

೬. ಸೂತನು ಹೇಳಿದನು :--ಈರೀತಿಯಾಗಿ ಜಿತೇಂದ್ರಿಯನಾದ ನಾರದ ಮುನಿಯ ಮಾತುಗಳನ್ನು ಕೇಳಿ ಬ್ರಹ್ಮನು ತುಂಬಾ ಪ್ರಸನ್ನನಾಗಿ ಹೀಗೆ ಹೇಳಿದನು.

॥ ಬ್ರಹ್ಮೋವಾಚ ॥

ಶೃಣು ನಾರದ ವಿಪ್ರೇಂದ್ರ ತದೇವ ಚರಿತಂ ಶುಭಂ ।
ಶಿವಲೀಲಾನ್ವಿತಂ ಭಕ್ತ್ಯಾ ಧನ್ಯಸ್ತ್ವಂ ಶಿವಸೇವಕಃ ॥ ೭ ॥

ಅಹಂ ವಿಮೋಹಿತಸ್ತಾತ ಯದ್ವೈವಾಂತರ್ಹಿತಃ ಪುರಾ ।
ಅಚಿಂತಯಂ ತದಾಹಂ ತಚ್ಛಂಭುವಾಕ್ಯವಿಷಾರ್ದಿತಃ ॥ ೮ ॥

ಚಿಂತಯಿತ್ವಾ ಚಿರಂ ಚಿತ್ತೇ ಶಿವಮಾಯಾವಿಮೋಹಿತಃ ।
ಶಿವೇ ಚೇರ್ಷ್ಯಾಮಕಾರ್ಷಂ ಹಿ ತಚ್ಛೃಣುಷ್ವ ವದಾಮಿ ತೇ ॥ ೯ ॥

ಅಥಾಽಹಮಗಮಂ ತತ್ರ ಯತ್ರ ದಕ್ಷಾದಯಃ ಸ್ಥಿತಾಃ ।
ಸರತಿಂ ಮದನಂ ದೃಷ್ಟ್ವಾ ಸಮದೋಽಹಂ ಹಿ ಕಿಂಚನ ॥ ೧೦ ॥

---

೭. ಬ್ರಹ್ಮನು ಹೇಳಿದನು:—ಬ್ರಾಹ್ಮಣೋತ್ತಮನಾದ ಎಲೈ ನಾರದ ! ಶಿವನ ಲೀಲಾಮಯವಾದ ಶುಭಚರಿತ್ರೆಯನ್ನು ಹೇಳುವೆನು ಕೇಳು. ಶಿವಭಕ್ತರಲ್ಲಿ ನೀನು ಶ್ರೇಷ್ಠನಾದುದರಿಂದ ಧನ್ಯನು.

೮. ಹಿಂದೆ ಸಂಧ್ಯೆಯಲ್ಲಿ ಮೋಹಗೊಂಡ ನಾನು ಯಾವಾಗ ಅಂತರ್ಧಾನ ನಾದೆನೋ ಆ ಮೊದಲುಗೊಂಡು ಸದಾ ಶಂಕರನು ಆಡಿದ ಹಾಸ್ಯವಾಕ್ಯಗಳನ್ನು ಸ್ಮರಿಸುತ್ತಾ ಚಿಂತಿಸತೊಡಗಿದೆನು.

೯. ಹಾಗೆ ಬಹಳಹೊತ್ತು ಚಿಂತಿಸುತ್ತಾ ಶಿವನ ಮಾಯೆಯಿಂದ ಮೋಹ ಗೊಂಡು ಶಿವನಲ್ಲಿ ಅಸೂಯೆಯುಳ್ಳವನಾದೆನು. ಅದರಿಂದ ಮುಂದೆ ನಾನೇನು ಮಾಡಿದೆನೆಂಬುದನ್ನು ಹೇಳುವೆನು ಕೇಳು.

೧೦. ಬಳಿಕ ನಾನು ದಕ್ಷಬ್ರಹ್ಮ ಮೊದಲಾದವರು ಇರುವಲ್ಲಿಗೆ ಹೋದೆನು. ಅಲ್ಲಿ ರತಿಯೊಡನಿರುವ ಮನ್ಮಥನನ್ನು ನೋಡಿ ನಾನು ಇವನಿಂದ ಶಿವನನ್ನು ಮೋಹ ಗೊಳಿಸಬಹುದೆಂದು ಯೋಚಿಸಿ ಗರ್ವವುಳ್ಳವನಾದೆನು.

ದಕ್ಷಮಾಭಾಷ್ಯ ಸುಪ್ರೀತ್ಯಾ ಪರಾನ್ ಪುತ್ರಾಂಶ್ಚ ನಾರದ ।
ಅವೋಚಂ ವಚನಂ ಸೋಽಹಂ ಶಿವಮಾಯಾವಿಮೋಹಿತಃ ॥ ೧೧ ॥

॥ ಬ್ರಹ್ಮೋವಾಚ ॥

ಹೇ ದಕ್ಷ ಹೇ ಮರೀಚ್ಯಾದ್ಯಾಸ್ಸುತಾಃ ಶೃಣುತ ಮದ್ವಚಃ ।
ಶ್ರುತ್ವೋಪಾಯಂ ವಿಧೇಯಂ ಹಿ ಮಮ ಕಷ್ಟಾಪನುತ್ತಯೇ ॥ ೧೨ ॥

ಕಾಂತಾಭಿಲಾಷಮಾತ್ರಂ ಮೇ ದೃಷ್ಟ್ವಾ ಶಂಭುರಗರ್ಹಯತ್ ।
ಮಾಂ ಚ ಯುಷ್ಮಾನ್ ಮಹಾಯೋಗೀ ಧಿಕ್ಕಾರಂ ಕೃತವಾನ್ ಬಹು ॥ ೧೩ ॥

ತೇನ ದುಃಖಾಭಿತಪ್ತೋಽಹಂ ಲಭೇಽಹಂ ಶರ್ಮ ನ ಕ್ವಚಿತ್ ।
ಯಥಾ ಗೃಹ್ಣಾತು ಕಾಂತಾಂ ಸ ಸ ಯತ್ನಃ ಕಾರ್ಯ ಏವ ಹಿ ॥ ೧೪ ॥

---

೧೧. ಎಲೈ ನಾರದ ! ಶಿವಮಾಯೆಯಿಂದ ಮೋಹಿತನಾದ ನಾನು ಅಲ್ಲಿ ದಕ್ಷನೇ ಮೊದಲಾದ ಮಾನಸಪುತ್ರರನ್ನು ಕುರಿತು ಕ್ಷೇಮಸಮಾಚಾರವನ್ನು ಪ್ರೀತಿಯಿಂದ ವಿಚಾರಿಸಿ, ಹೀಗೆ ಹೇಳಿದೆನು.

೧೨. ಬ್ರಹ್ಮನು ಹೇಳಿದನು :—ಎಲೈ ದಕ್ಷ ಮತ್ತು ಮರೀಚಿಯೇ ಮೊದಲಾದ ಪುತ್ರರೇ ! ನನ್ನ ಮಾತನ್ನು ಕೇಳಿರಿ. ಕೇಳಿ ನನ್ನ ಕಷ್ಟವು ಹೋಗುವುದಕ್ಕಾಗಿ ಏನಾದರೊಂದು ಉಪಾಯವನ್ನು ಯೋಚಿಸಿ ಹೇಳಿ.

೧೩. ಹಿಂದೆ ಶಂಕರನು ನನಗೆ ಕೇವಲ ಸ್ತ್ರೀಯಲ್ಲಿ ಉಂಟಾದ ಕಾಮೇಚ್ಛೆಯನ್ನು ನೋಡಿ ನನ್ನನ್ನೂ ನಿಮ್ಮನ್ನೂ ಸಹ ಮಹಾಯೋಗಿಯಾದ ಅವನು ತುಂಬಾ ಧಿಕ್ಕರಿಸಿದನಷ್ಟೆ.

೧೪. ಆ ಶಂಕರನ ಧಿಕ್ಕಾರದಿಂದ ತುಂಬಾ ದುಃಖಗೊಂಡು ನಾನು ಎಲ್ಲಿಯೂ ಮನಶ್ಶಾಂತಿಯನ್ನು ಪಡೆಯದೆ ಚಿಂತೆಗೊಳಗಾಗಿರುವೆನು. ಆದುದರಿಂದ ಆ ಶಿವನೂ ಸಹ ಕಾಮಾಭಿಲಾಷೆಯಿಂದ ತಾನೇ ಕಾಂತೆಯನ್ನು ಸ್ವೀಕರಿಸುವಂತೆ ನಾವುಗಳು ಯತ್ನವನ್ನು ಮಾಡಲೇಬೇಕಾಗಿದೆ.

ಯಥಾ ಗೃಹ್ಣಾತು ಕಾಂತಾಂ ಸ ಸುಖೀ ಸ್ಯಾಂ ದುಃಖವರ್ಜಿತಃ ।
ದುರ್ಲಭಸ್ಸ ತು ಕಾಮೋ ಮೇ ಪರಂ ಮನ್ಯೇ ವಿಚಾರತಃ ॥ ೧೫ ॥

ಕಾಂತಾಭಿಲಾಷಮಾತ್ರಂ ಮೇ ದೃಷ್ಟ್ವಾ ಶಂಭುರಗರ್ಹಯತ್ ।
ಮುನೀನಾಂ ಪುರತಃ ಕಸ್ಮಾತ್ಸ ಕಾಂತಾಂ ಸಂಗ್ರಹೀಷ್ಯತಿ ॥ ೧೬ ॥

ಕಾ ವಾ ನಾರೀ ತ್ರಿಲೋಕೇಽಸ್ಮಿನ್ ಯಾ ಭವೇತ್ತನ್ಮನಃಸ್ಥಿತಾ ।
ಯೋಗಮಾರ್ಗಮವಜ್ಞಾಪ್ಯ ತಸ್ಯ ಮೋಹಂ ಕರಿಷ್ಯತಿ ॥ ೧೭ ॥

ಮನ್ಮಥೋಽಪಿ ಸಮರ್ಥೋ ನೋ ಭವಿಷ್ಯತ್ಯಸ್ಯ ಮೋಹನೇ ।
ನಿತಾಂತಯೋಗೀ ರಾಮಾಣಾಂ ನಾಮಾಪಿ ಸಹತೇ ನ ಸಃ ॥ ೧೮ ॥

ಅಗೃಹೀತೇಷು ದಾರೇಷು ಹರೇಣ ಕಥಮಾದಿಮಾ ।
ಮಧ್ಯಮಾ ಚ ಭವೇತ್ಸೃಷ್ಟಿಸ್ತದ್ವಧೋ ನಾನ್ಯಕಾರಿತಾ ॥ ೧೯

೧೫. ಆ ಶಿವನು ಪತ್ನಿಯನ್ನು ಪರಿಗ್ರಹಿಸಿದರೆ ನಾನು ದುಃಖವಿಲ್ಲದೇ ಸುಖಿಯಾಗುವೆನು. ಆದರೆ ವಿಚಾರಮಾಡಿದರೆ ಮಾಯಾಯೋಗಿಯಾದ ಆ ಶಿವನು ಸ್ತ್ರೀಯನ್ನು ಸ್ವೀಕರಿಸುವುದು ಅಸಾಧ್ಯವೆಂದೇ ತೋರುವುದು.

೧೬. ನನ್ನಲ್ಲಿ ಉಂಟಾದ ಕೇವಲ ಕಾಮವಿಕಾರವನ್ನು ನೋಡಿ ಮುನಿಗಳ ಎದುರಿನಲ್ಲಿ ಆ ಶಿವನು ನನ್ನನ್ನು ನಿಂದಿಸಿರುವನು. ಎಂದಮೇಲೆ ತಾನೇ ಸ್ತ್ರೀಯನ್ನು ಹೇಗೆ ಪರಿಗ್ರಹಿಸಿಯಾನು ?

೧೭. ಮೂರು ಲೋಕಗಳಲ್ಲಿ ಯಾವ ಸ್ತ್ರೀಯು ತಾನೇ ಅವನ ಮನಸ್ಸನ್ನಪಹರಿಸಿ ಅವನ ಯೋಗಮಾರ್ಗವನ್ನು ತಪ್ಪಿಸಿ ಮೋಹವನ್ನುಂಟುಮಾಡಿಯಾಳು ?

೧೮. ಆ ಶಿವನನ್ನು ಮನ್ಮಥನೂ ಮೋಹಗೊಳಿಸಲಾರನು. ಮಹಾವಿರಕ್ತ ಯೋಗಿಯಾದ ಅವನು ಸ್ತ್ರೀಯರ ಹೆಸರನ್ನೂ ಸಹಿಸುವುದಿಲ್ಲ.

೧೯. ಹರನು ಪತ್ನಿಯನ್ನು ಪರಿಗ್ರಹಿಸದಿದ್ದಲ್ಲಿ ಅವನಿಂದ ಸೃಷ್ಟಿಯು ಮೊದಲಿನಲ್ಲಿಯೂ ಮಧ್ಯದಲ್ಲಿ ಪಾಲನೆಯೂ ಬೆಳೆಯಲಾರದು. ಕೊನೆಯಲ್ಲಿ ಪ್ರಳಯವೂ ಆಗಲಾರದು. ಆದರೆ ಪ್ರಳಯವನ್ನು ಆ ಶಿವನೇ ಮಾಡಬೇಕಾಗಿರುವುದು.

ಭುವಿ ಕೇಚಿದ್ಭವಿಷ್ಯಂತಿ ಮಯಾ ವಧ್ಯಾ ಮಹಾಸುರಾಃ ।
ವಧ್ಯಾಃ ಕೇಚಿದ್ಧರೇನರ್ಾನಂ ಕೇಚಿಚ್ಛಂಭೋರುಪಾಯುತಃ ॥ ೨೦ ॥

ಸಂಸಾರವಿಮುಖೇ ಶಂಭೌ ತಥೈಕಾಂತವಿರಾಗಿಣಿ ।
ಅಸ್ಮಾದೃತೇ ನ ಕರ್ಮಾಣ್ಯತ್ಕರಿಷ್ಯತಿ ನ ಸಂಶಯಃ ॥ ೨೧ ॥

ಇತ್ಯುಕ್ತ್ವಾ ತನಯಾಂಶ್ಚಾಹಂ ದಕ್ಷಾದೀನ್ ಸುನಿರೀಕ್ಷ್ಯ ಚ ।
ಸರತಿಂ ಮದನಂ ತತ್ರ ಸಾನಂದಮಗದಂ ತತಃ ॥ ೨೨ ॥

॥ ಬ್ರಹ್ಮೋವಾಚ ॥

ಮತ್ಪುತ್ರ ವರ ಕಾಮ ತ್ವಂ ಸರ್ವಥಾ ಸುಖದಾಯಕಃ ।
ಮದ್ವಚಃ ಶೃಣು ಸುಪ್ರೀತ್ಯಾ ಸ್ವಪತ್ನ್ಯಾ ಪಿತೃವತ್ಸಲ ॥ ೨೩ ॥

---

೨೦. ಮುಂದೆ ಭೂಲೋಕದಲ್ಲಿ ಕೆಲವರು ರಾಕ್ಷಸರು ಜನಿಸುವರು. ಅವರಲ್ಲಿ ಕೆಲವರನ್ನು ನಾನೂ, ಕೆಲವರನ್ನು ಹರಿಯೂ, ಕೆಲವರನ್ನು ಶಂಕರನೂ ಸಂಹರಿಸಬೇಕಾಗುವುದು.

೨೧. ಹೀಗೆ ಶಂಕರನು ಸಂಸಾರದಲ್ಲಿ ಆಸಕ್ತಿಯಿಲ್ಲದವನಾಗಿ ವೈರಾಗ್ಯದಿಂದ ಯೋಗಮಾರ್ಗನಿರತನಾಗಿದ್ದರೆ, ಅವನು ಅದನ್ನು ಹೊರತು ಇನ್ನಾವ ಕಾರ್ಯವನ್ನೂ ಮಾಡಲಾರನು. ಇದರಲ್ಲಿ ಸಂಶಯವಿಲ್ಲ.

೨೨. ಹೀಗೆ ದಕ್ಷನೇ ಮೊದಲಾದ ಮಾನಸಪುತ್ರರಿಗೆ ಹೇಳಿ ಬಳಿಕ ನಾನು ರತಿಯೊಡನಿರುವ ಮನ್ಮಥನನ್ನು ನೋಡಿ ಆನಂದದಿಂದ ಅವನನ್ನು ಕುರಿತು ಹೀಗೆ ಹೇಳಿದೆನು.

೨೩. ಬ್ರಹ್ಮನು ಹೇಳಿದನು :—ಎಲೈ ಮನ್ಮಥನೇ ! ನೀನು ನನ್ನ ಪುತ್ರನು. ತಂದೆಯಾದ ನನ್ನಲ್ಲಿ ನಿನಗೆ ಭಕ್ತಿಯಿದೆ. ನೀನು ಎಲ್ಲರಿಗೂ ಸುಖವನ್ನುಂಟುಮಾಡುವವನು. ಇಂತಹ ನಿನಗೆ ನಾನೊಂದು ಮಾತನ್ನು ಹೇಳುವೆನು. ನಿನ್ನ ಪತ್ನಿಯೊಡನೆ ಪ್ರೀತಿಯಿಂದ ಕೇಳು.

ಅನಯಾ ಸಹಚಾರಿಣ್ಯಾ ರಾಜಸೇ ತ್ವಂ ಮನೋಭವ ।
ಏಷಾ ಚ ಭವತಾ ಪತ್ಯಾ ಯುಕ್ತಾ ಸಂಶೋಭತೇ ಭೃಶಂ ॥ ೨೪ ॥

ಯಥಾ ಸ್ರಿಯಾ ಹೃಷೀಕೇಶೋ ಹರಿಣಾ ಸಾ ಯಥಾ ರಮಾ ।
ಕ್ಷಣದಾ ವಿಧುನಾ ಯುಕ್ತಾ ತಯಾ ಯುಕ್ತೋ ಯಥಾ ವಿಧುಃ ॥ ೨೫ ॥

ತಥೈವ ಯುವಯೋಶ್ಯೋಭಾ ದಾಂಪತ್ಯಂ ಚ ಪುರಸ್ಕೃತಂ ।
ಅತಸ್ತ್ವಂ ಜಗತಃ ಕೇತುರ್ವಿಶ್ವಕೇತುರ್ಭವಿಷ್ಯತಿ ॥ ೨೬ ॥

ಜಗದ್ಧಿತಾಯ ವತ್ಸ ತ್ವಂ ಮೋಹಯಸ್ವ ಪಿನಾಕಿನಂ ।
ಯಥಾಽಽಶು ಸುಮನಸ್ಶಂಭುಃ ಕುರ್ಯಾದ್ದಾರಪರಿಗ್ರಹಂ ॥ ೨೭ ॥

ವಿಜನೇ ಸ್ನಿಗ್ಧದೇಶೇ ತು ಪರ್ವತೇಷು ಸರಸ್ಸು ಚ ।
ಯತ್ರ ಯತ್ರ ಪ್ರಯಾತೀಶಸ್ತತ್ರ ತತ್ರಾನಯಾ ಸಹ ॥ ೨೮ ॥

೨೪. ನಿನ್ನ ಕಾಂತೆಯಾದ ಈ ರತಿಯಿಂದ ನೀನು ತುಂಬಾ ಶೋಭಿಸುತ್ತಲಿರುವೆ. ಈ ರತಿಯೂ ಸಹ ನಿನ್ನಂತಹ ಪುರುಷನನ್ನು ಪತಿಯಾಗಿ ಪಡೆದು ತುಂಬಾ ರಾಜಿಸುತ್ತಲಿರುವಳು.

೨೫-೨೬. ಲಕ್ಷ್ಮಿಯಿಂದ ಹರಿಯೂ ಹರಿಯಿಂದ ಲಕ್ಷ್ಮಿಯೂ ಸಹ ಹೇಗೆ ಶೋಭಿಸುವರೋ, ಮತ್ತು ರಾತ್ರಿಯಿಂದ ಚಂದ್ರನೂ ಚಂದ್ರನಿಂದ ರಾತ್ರಿಯೂ ಹೇಗೆ ಶೋಭಿಸುವದೋ ಅದರಂತೆ ನಿವಿಬ್ಬರ ಪತಿಪತ್ನೀಭಾವವು ಉತ್ತಮವಾಗಿದೆ. ಆದಕಾರಣ ನೀನು ಜಗತ್ತಿಗೇ ಅಲಂಕಾರಪ್ರಾಯನಾಗಿರುವೆ. ಮುಂದೂ ಆಗುವೆ.

೨೭ ಎಲೈ ವತ್ಸ ! ಮನ್ಮಥ ! ಈಗ ನಾನು ಹೇಳುವ ಮಾತನ್ನು ಕೇಳು. ಜಗತ್ತಿನ ಕ್ಷೇಮಕ್ಕಾಗಿ ಶಂಕರನನ್ನು ಮೋಹಗೊಳಿಸು. ಅವನು ಜಾಗ್ರತೇ ಸಂಸಾರ ಸುಖದಲ್ಲಿ ಮನಸ್ಸುಳ್ಳವನಾಗಿ ಪತ್ನಿಯನ್ನು ಪರಿಗ್ರಹಿಸುವಂತೆ ಮಾಡು.

೨೮. ನಿರ್ಜನವಾದ ಪ್ರದೇಶ, ಸುಂದರವಾದ ಪ್ರದೇಶ, ಪರ್ವತ, ಮತ್ತು ರಮಣೀಯವಾದ ಸರಸ್ಸಿನ ತೀರ ಮೊದಲಾದ ಯಾವಯಾವ ಸ್ಥಳಗಳಿಗೆ ಶಿವನು ಹೋಗುವನೋ ಅಲ್ಲೆಲ್ಲಾ ಅವನನ್ನು ನೀನು ಈ ರತಿಯೊಡನೆ ಹಿಂಬಾಲಿಸು.

ಮೋಹಯ ತ್ವಂ ಯತಾತ್ಮಾನಂ ವನಿತಾವಿಮುಖಂ ಹರಂ
ತ್ವದೃತೇ ವಿದ್ಯತೇ ನಾನ್ಯಃ ಕಶ್ಚಿದಸ್ಯ ವಿಮೋಹಕಃ ॥ ೨೯ ॥

ಭೂತೇ ಹರೇ ಸಾನುರಾಗೇ ಭವತೋऽಪಿ ಮನೋಭವ ।
ಶಾಪೋಪಶಾಂತಿರ್ಭವಿತಾ ತಸ್ಮಾದಾತ್ಮಹಿತಂ ಕುರು ॥ ೩೦ ॥

ಸಾನುರಾಗೋ ವರಾರೋಹಾಂ ಯದೀಚ್ಛತಿ ಮಹೇಶ್ವರಃ ।
ತದಾ ತವೋಪಭೋಗಾಯ ಸ ತ್ವಾಂ ಸಂಭಾವಯಿಷ್ಯತಿ ॥ ೩೧ ॥

ತಸ್ಮಾಜ್ಜಾಯಾದ್ವಿತೀಯಸ್ತ್ವಂ ಯತಸ್ವ ಹರಮೋಹನೇ ।
ವಿಶ್ವಸ್ಯ ಭವ ಕೇತುಸ್ತ್ವಂ ಮೋಹಯಿತ್ವಾ ಮಹೇಶ್ವರಂ ॥ ೩೨ ॥

॥ ಬ್ರಹ್ಮೋವಾಚ ॥

ಇತಿ ಶ್ರುತ್ವಾ ವಚೋ ಮೇ ಹಿ ಜನಕಸ್ಯ ಜಗತ್ಪ್ರಭೋಃ ।
ಉವಾಚ ಮನ್ಮಥಸ್ತಥ್ಯಂ ತದಾ ಮಾಂ ಜಗತಾಂ ಪತಿಂ ॥ ೩೩ ॥

---

೨೯. ಸ್ತ್ರೀಯಲ್ಲಿ ಆಸಕ್ತಿಯಿಲ್ಲದವನೂ ಜಿತೇಂದ್ರಿಯನೂ ಆದಂತಹ ಶಿವನನ್ನು ಮೋಹಗೊಳಿಸು. ನಿನ್ನ ಹೊರತು ಅವನನ್ನು ಮೋಹಗೊಳಿಸುವವರು ಯಾರೂ ಇಲ್ಲ.

೩೦. ಎಲೈ ಮನ್ಮಥ ! ಈಶ್ವರನು ಸ್ತ್ರೀಯನ್ನು ಪರಿಗ್ರಹಿಸಿದರೆ ನಿನಗೆ ಶಾಪ ನಿವೃತ್ತಿಯೂ ಆಗುವುದು. ಆದುದರಿಂದ ನಿನಗೂ ಹಿತವಾದ ಈ ಕಾರ್ಯವನ್ನು ಮಾಡು.

೩೧. ಆ ಶಿವನು ಅನುರಾಗವುಳ್ಳವನಾಗಿ ತನಗನುರೂಪಳಾದ ಸುಂದರಿಯನ್ನು ವರಿಸಲು ಯಾವಾಗ ಅಪೇಕ್ಷಿಸುವನೋ ಆಗ ನಿನಗೆ ಶಾಪನಿವೃತ್ತಿಯನ್ನು ಮಾಡಿ ನಿನ್ನನ್ನು ಸಂತೋಷಗೊಳಿಸುವನು.

೩೨. ಆದುದರಿಂದ ಎಲೈ ಮನ್ಮಥ, ನಿನ್ನ ಕಾಂತೆಯೊಡನೆ ಶಿವನನ್ನು ಮೋಹಗೊಳಿಸಲು ಪ್ರಯತ್ನಿಸು. ಹಾಗೆ ಶಿವನನ್ನು ಮೋಹಗೊಳಿಸಿ ಜಗತ್ತಿಗೇ ಅಲಂಕಾರಪ್ರಾಯನಾಗು ಎಂದನು.

೩೩. ಬ್ರಹ್ಮನು ಹೇಳಿದನು :—ಈರೀತಿಯಾಗಿ ತಂದೆಯೂ, ಜಗದೊಡೆಯನೂ ಆದ ನನ್ನ (ಬ್ರಹ್ಮನ) ಮಾತುಗಳನ್ನು ಕೇಳಿ ಯಥಾರ್ಥಸಂಗತಿಯನ್ನು ತಿಳಿಸಲು,

॥ ಮನ್ಮಥ ಉವಾಚ ॥

ಕರಿಷ್ಯೇಽಹಂ ತವ ವಿಭೋ ವಚನಾಚ್ಛಂಭುಮೋಹನಂ ।
ಕಿಂತು ಯೋಷಿನ್ಮಹಾಸ್ತ್ರಂ ಮೇ ತತ್ಕಾಂತಾಂ ಭಗವನ್ ಸೃಜ ॥ ೩೪ ॥

ಮಯಾ ಸಮ್ಮೋಹಿತೇ ಶಂಭೌ ತಯಾ ತಸ್ಯಾನುಮೋಹನಂ ।
ಕರ್ತವ್ಯಮಧುನಾ ಧಾತಸ್ತತ್ರೋಪಾಯಂ ತಥಾ ಕುರು ॥ ೩೫ ॥

॥ ಬ್ರಹ್ಮೋವಾಚ ॥

ಏವಂ ವಾದಿನಿ ಕಂದರ್ಪೇ ಧಾತಾಹಂ ಸ ಪ್ರಜಾಪತಿಃ ।
ಕಯಾ ಸಮ್ಮೋಹನೀಯೋಽಸಾವಿತಿ ಚಿಂತಾಂ ಜಗಾಮ ಹ ॥ ೩೬ ॥

ಚಿಂತಾವಿಷ್ಟಸ್ಯ ಮೇ ತಸ್ಯ ನಿಃಶ್ವಾಸೋ ಯೋ ವಿನಿಃಸೃತಃ ।
ತಸ್ಮಾದ್ವಸಂತಸ್ಸಂಜಾತಃ ಪುಷ್ಪವ್ರಾತವಿಭೂಷಿತಃ ॥ ೩೭ ॥

---

೩೪. ಮನ್ಮಥನು ಹೇಳಿದನು :—ಎಲೈ ಸ್ವಾಮಿಯೆ, ನಿನ್ನ ಮಾತಿನಂತೆ ಶಂಭುವನ್ನು ಮೋಹಗೊಳಿಸುವೆನು. ಆದರೆ ನನಗೆ ಸ್ತ್ರೀಯೇ ದೊಡ್ಡ ಆಯುಧವು. ಆದುದರಿಂದ ಶಿವನು ಅನುರಾಗಗೊಳ್ಳುವಂತಹ ಸುಂದರಿಯನ್ನು ಮಾತ್ರ ನೀನು ಸೃಷ್ಟಿಮಾಡಬೇಕು.

೩೫. ನಾನು ಶಂಭುವನ್ನು ಮೋಹಗೊಳಿಸುತ್ತಿರಲು ಆ ಸುಂದರಿಯೂ ಸಹ ಶಿವನು ಮತ್ತಷ್ಟು ಮೋಹಗೊಳ್ಳುವಂತೆ ಮಾಡಬೇಕು. ಓ ಬ್ರಹ್ಮನೇ, ಈ ವಿಷಯ ದಲ್ಲಿ ಒಂದು ಉಪಾಯವನ್ನು ಯೋಚಿಸು ಎನ್ನಲು,

೩೬. ಬ್ರಹ್ಮನು ಹೇಳಿದನು :—ಹೀಗೆ ಮನ್ಮಥನು ಹೇಳಲು ಪ್ರಜೆಗಳಿಗೊ ಡೆಯನಾದ ನಾನು (ಬ್ರಹ್ಮನು) ಯಾವ ಸುಂದರಿಯು ಶಿವನನ್ನು ಮೋಹಗೊಳಿಸಲು ಶಕ್ತಳು ಎಂದು ಚಿಂತೆಗೊಳಗಾದೆನು.

೩೭. ಹೀಗೆ ಚಿಂತಿಸುತ್ತಿರಲು ನನ್ನ ಮುಖದಿಂದ ನಿಟ್ಟುಸಿರೊಂದು ಹೊರ ಟಿತು. ಅದರಿಂದ ವಸಂತನು (ವಸಂತಋತುವು) ಪುಷ್ಪಗಳಿಂದ ಅಲಂಕೃತನಾಗಿ ಜನಿಸಿದನು.

ಶೋಣರಾಜೀವಸಂಕಾಶಃ ಫುಲ್ಲತಾಮರಸೇಕ್ಷಣಃ ।
ಸಂಧ್ಯೋದಿತಾಖಂಡಶಶಿಪ್ರತಿಮಾಸ್ಯಸ್ಸನಾಸಿಕಃ ॥ ೬೮ ॥

ಶಂಖವಚ್ಛ್ರವಣಾವರ್ತಃ ಶ್ಯಾಮಕುಂಚಿತಮೂರ್ಧಜಃ ।
ಸಂಧ್ಯಾಂಶುಮಾಲಿಸದೃಶಕುಂಡಲದ್ವಯಮಂಡಿತಃ ॥ ೬೯ ॥

ಪ್ರಮತ್ತೇಭಗತಿಃ ಪೀನಾಯತದೋರುನ್ನತಾಂಸಕಃ ।
ಕಂಬುಗ್ರೀವಸ್ಸುವಿಸ್ತೀರ್ಣಹೃದಯಃ ಪೀನಸನ್ಮುಖಃ ॥ ೪೦ ॥

ಸರ್ವಾಂಗಸುಂದರಃ ಶ್ಯಾಮಸ್ಸಂಪೂರ್ಣಃ ಸರ್ವಲಕ್ಷಣೈಃ ।
ದರ್ಶನೀಯತಮಸ್ಸರ್ವಮೋಹನಃ ಕಾಮವರ್ಧನಃ ॥ ೪೧ ॥

ಏತಾದೃಶೇ ಸಮುತ್ಪನ್ನೇ ವಸಂತೇ ಕುಸುಮಾಕರೇ ।
ವವೌ ವಾಯುಸ್ಸುಸುರಭಿಃ ಪಾದಪಾ ಅಪಿ ಪುಷ್ಪಿತಾಃ ॥ ೪೨ ॥

---

೩೮.೪೧. ಅವನು ರಕ್ತಕಮಲದಂತೆ ಸೊಗಸಾದ ಕಾಂತಿ, ಅರಳಿದ ಕಮಲದಂತಿರುವ ಕಣ್ಣುಗಳು, ಸಂಜೆಯಲ್ಲಿ ಉದಯಿಸಿರುವ ಪೂರ್ಣಿಮೆಯ ಚಂದ್ರನಂತಿರುವ ಮುಖ, ಸುಂದರವಾದ ನಾಸಿಕೆ, ಶಂಖದಂತಿರುವ ಕಿವಿ, ಕಪ್ಪಾದ ಮತ್ತು ವಕ್ರವಾದತಲೆ ಕೂದಲು ಇವುಗಳಿಂದ ಬಹುಸುಂದರನಾಗಿ ಒಪ್ಪುತ್ತಿದ್ದನು. ಸಂಜೆಯ ಸೂರ್ಯನಂತಿರುವ ಎರಡು ಕಡಕುಗಳನ್ನು ಕಿವಿಯಲ್ಲಿ ಧರಿಸಿದ್ದನು ಅವನ ಗಮನವು ಕೊಬ್ಬಿದ ಸಲಗದಂತಿತ್ತು. ಅವನಿಗೆ ದೃಢವೂ ವಿಶಾಲವೂ ಆದ ಎದೆಯೂ, ಉನ್ನತ (ದಪ್ಪ) ವಾದ ಭುಜಶಿರಸ್ಸುಗಳೂ ಇದ್ದವು. ಅವನ ಕತ್ತು ಶಂಖದಂತಿದ್ದಿತು. ಮುಖವು ಸುಂದರವೂ ತುಂಬಿಕೊಂಡಿರುವುದೂ ವರ್ತುಲವೂ ಆಗಿದ್ದಿತು. ಮತ್ತು ಅವನು ಸರ್ವಾಂಗಗಳಲ್ಲಿಯೂ ಸುಂದರನಾಗಿದ್ದನು. ಸಕಲ ಪುರುಷಲಕ್ಷಣಗಳಿಂದಲೂ ಕೂಡಿದ್ದನು ನೋಡಲು ತುಂಬಾ ಸುಂದರನಾಗಿದ್ದನು. ಎಲ್ಲರಿಗೂ ಕಾಮವಿಕಾರವನ್ನು ಹೆಚ್ಚಿಸುತ್ತಾ ಮೋಹಗೊಳಿಸುತ್ತಲಿದ್ದನು.

೪೨. ಪುಷ್ಪಮಯನಾದಂತಹ ಇಂತಹ ವಸಂತನು ಜನಿಸಲು ಸುವಾಸನೆಯಾದ ಗಾಳಿಯು ಮೆಲ್ಲಗೆ ಬೀಸತೊಡಗಿತು. ಎಲ್ಲಾ ಮರಗಳಲ್ಲಿಯೂ ಹೂವುಗಳು ಅರಳಿದುವು.

ಪಿಕಾ ವಿನೇದುಶ್ಚ ತಶಃ ಪಂಚಮಂ ಮಧುರಸ್ವನಾಃ ।
ಪ್ರಫುಲ್ಲಪದ್ಮಾ ಅಭವನ್ ಸರಸ್ಯಃ ಸ್ವಚ್ಛಪುಷ್ಕರಾಃ ॥ ೪೩ ॥

ತಮುತ್ಪನ್ನಮಹಂ ವೀಕ್ಷ್ಯ ತಥಾ ತಾದೃಶಮುತ್ತಮಂ ।
ಹಿರಣ್ಯಗರ್ಭೋ ಮದನಮಗದಂ ಮಧುರಂ ವಚಃ ॥ ೪೪ ॥

॥ ಬ್ರಹ್ಮೋವಾಚ ॥

ಏಷ ಮನ್ಮಥ ತೇ ಮಿತ್ರಂ ಸದಾ ಸಹಚರೋಽಭವತ್ ।
ಆನುಕೂಲ್ಯಂ ತವ ಕೃತೌ ಸರ್ವದೈವ ಕರಿಷ್ಯತಿ ॥ ೪೫ ॥

ಯಥಾಗ್ನೇಃ ಪವನೋ ಮಿತ್ರಂ ಸರ್ವತ್ರೋಪಕರಿಷ್ಯತಿ ।
ತಥಾಯಂ ಭವತೋ ಮಿತ್ರಂ ಸದಾ ತ್ವಾಮನುಯಾಸ್ಯತಿ ॥ ೪೬ ॥

ವಸತೇರಂತಹೇತುತ್ವಾದ್ವಸಂತಾಖ್ಯೋ ಭವತ್ವಯಂ ।
ತವಾನುಗಮನಂ ಕರ್ಮ ತಥಾ ಲೋಕಾನುರಂಜನಂ ॥ ೪೭ ॥

---

೪೩. ಕೋಗಿಲೆಗಳು ಇಂಪಾಗಿ ಪಂಚಮಸ್ವರವನ್ನು ಹಾಡಿದುವು. ಸರೋವರಗಳಲ್ಲಿ ಸುಂದರವಾದ ಕಮಲಗಳೂ ಕನ್ನೈದಿಲೆಗಳೂ ಅರಳಿದುವು.

೪೪. ಹೀಗೆ ಜನಿಸಿದ ಆ ಸುಂದರನಾದ ವಸಂತನನ್ನು ನೋಡಿ ಬ್ರಹ್ಮನಾದ ನಾನು ಮನ್ಮಥನನ್ನು ಕುರಿತು ಮಧುರವಾಗಿ ಹೀಗೆ ಹೇಳಿದೆನು.

೪೫. ಬ್ರಹ್ಮನು ಹೇಳಿದನು ;—ಎಲೈ ಮನ್ಮಥ, ಈ ವಸಂತನು ನಿನ್ನ ಮಿತ್ರನಾಗಿ ಸದಾ ನಿನ್ನೊಡನಾಡಿಯಾಗಿಯೇ ಇದ್ದು ನಿನ್ನ ಕಾರ್ಯಕ್ಕೆ ಯಾವಾಗಲೂ ಸಹಾಯವನ್ನು ಮಾಡುವನು.

೪೬. ಅಗ್ನಿಗೆ ಮಿತ್ರನಾದ ವಾಯುವು ಎಲ್ಲೆಡೆಯಲ್ಲಿಯೂ ಆ ಅಗ್ನಿಗೆ ಹೇಗೆ ಸಹಾಯಮಾಡುವನೋ ಅದರಂತೆ ನಿನ್ನ ಮಿತ್ರನಾದ ಈ ವಸಂತನೂ ಸಹ ನಿನ್ನೊಡನೆಯೇ ಇದ್ದು ನಿನಗೆ ಸಹಾಯಮಾಡುವನು.

೪೭. ಇವನು ಕಾಮಿಗಳನ್ನು ಸುಮ್ಮನೆ ಇರುವುದಕ್ಕೆ ಬಿಡುವವನಲ್ಲವಾದುದರಿಂದ ಇವನಿಗೆ ವಸಂತನೆಂದು ಹೆಸರು. ಇವನು ನಿನಗೆ ಸಹಾಯವನ್ನೂ ಜನಗಳಿಗೆ ಸಂತೋಷವನ್ನೂ ಉಂಟುಮಾಡುವನು.

ಅಸೌ ವಸಂತಃ ಶೃಂಗಾರೋ ವಸಂತೋ ಮಲಯಾನಿಲಃ ।
ಭವೇತ್ತು ಸುಹೃದೋ ಭಾವಸ್ಸದಾ ತ್ವದ್ವಶವರ್ತಿನಃ ॥ ೪೮ ॥

ವಿಬ್ಬೋಕಾದ್ಯಾಸ್ತಥಾ ಹಾವಾಶ್ಚತುಷ್ಷಷ್ಟಿಕಲಾಸ್ತಥಾ ।
ಕುರ್ವಂತು ರತ್ಯಾಃ ಸೌಹೃದ್ಯಂ ಸುಹೃದಸ್ತೇ ಯಥಾ ತವ ॥ ೪೯ ॥

ಏಭಿಸ್ಸಹಚರೈಃ ಕಾಮ ವಸಂತಪ್ರಮುಖೈರ್ಭವಾನ್ ।
ಮೋಹಯಸ್ವ ಮಹಾದೇವಂ ರತ್ಯಾ ಸಹ ಮಹೋದ್ಯಮಃ ॥ ೫೦ ॥

ಅಹಂ ತಾಂ ಕಾಮಿನೀಂ ತಾತ ಭಾವಯಿಷ್ಯಾಮಿ ಯತ್ನತಃ ।
ಮನಸಾ ಸುವಿಚಾರ್ಯೈವ ಯಾ ಹರಂ ಮೋಹಯಿಷ್ಯತಿ ॥ ೫೧ ॥

॥ ಬ್ರಹ್ಮೋವಾಚ ॥

ಏವಮುಕ್ತೋ ಮಯಾ ಕಾಮಃ ಸುರಜ್ಯೇಷ್ಠೇನ ಹರ್ಷಿತಃ ।
ನನಾಮ ಚರಣೌ ಮೇಽಪಿ ಸ ಪತ್ನೀಸಹಿತಸ್ತದಾ ॥ ೫೨ ॥

---

೪೮. ಈ ವಸಂತನೂ, ಶೃಂಗಾರರಸವೂ, ಮಲಯಪರ್ವತದ ಗಂಧದ ಗಾಳಿಯೂ, ಸ್ತ್ರೀಯರ ಯೌವನದಲ್ಲಿನ ಚೇಷ್ಟೆಗಳೂ ಸಹ ನಿನ್ನ ಅಧೀನವಾಗಿರುವುವು.

೪೯. ಬಿಬ್ಬೋಕ (ಗರ್ವದಿಂದ ಅಥವಾ ಅಭಿಮಾನದಿಂದ ಇಷ್ಟವಾದುದರಲ್ಲಿಯೂ ಸಹ ಅನಾದರಣೆಯನ್ನು ತೋರಿಸುವ ಶೃಂಗಾರಚೇಷ್ಟೆ) ಮೊದಲಾದ ಕಾಮವಿಕಾರವನ್ನುಂಟುಮಾಡುವ ಭಾವಗಳೂ ಅರವತ್ತುನಾಲ್ಕು ಶೃಂಗಾರಕಲೆಗಳೂ ಸಹ ನಿನ್ನ ಕಾಂತೆಯಾದ ರತೀದೇವಿಗೆ ಸಹಾಯವನ್ನು ಮಾಡುವುವು.

೫೦. ಎಲೈಮನ್ಮಥ, ವಸಂತನೇ ಮೊದಲಾದ ಈ ಎಲ್ಲಾ ಪರಿವಾರಗಳಿಂದಲೂ ರತಿಯ ಸಹಾಯದಿಂದಲೂ ಕೂಡಿ ಪ್ರಯತ್ನಪಟ್ಟು ಮಹಾದೇವನನ್ನು ಮೋಹಗೊಳಿಸು.

೫೧. ನಾನು ವಿಮರ್ಶೆಮಾಡಿ ಶಿವನನ್ನು ಮೋಹಗೊಳಿಸುವಂತಹ ಸುಂದರಿಯು ಯಾರೆಂಬುದನ್ನು ಯತ್ನದಿಂದ ಆಲೋಚಿಸುವೆನು.

೫೨-೫೩ ಬ್ರಹ್ಮನು ಹೇಳಿದನು :—ಹೀಗೆ ದೇವೋತ್ತಮನಾದ ನಾನು ಹೇಳಲು ಮನ್ಮಥನು ಸಂತೋಷಗೊಂಡು ಆಗ ತನ್ನ ಪತ್ನಿಯಾದ ರತಿಯೊಡನೆ ನನ್ನ

**ದಕ್ಷಂ ಪ್ರಣಮ್ಯ ತಾ೯ ಸರ್ವಾ೯ನ್ಮಾನಸಾನಭಿವಾದ್ಯ ಚ ।**
**ಯತ್ರಾತ್ಮಾ ಗತವಾ೯ ಶಂಭುಸ್ತತ್ಸ್ಥಾನಂ ಮುನ್ಮಥೋ ಯಯೌ ॥ ೫೩ ॥**

**ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಸತೀಖಂಡೇ**
**ಅಷ್ಟಮೋಽಧ್ಯಾಯಃ.**



ಪಾದಗಳಿಗೂ ಮತ್ತು ದಕ್ಷಬ್ರಹ್ಮನ ಮಿಕ್ಕ ಮಾನಸಪುತ್ರರಾದ ಮುನಿಗಳ ಪಾದಗಳಿಗೂ ನಮಸ್ಕರಿಸಿ ಪರಮಾತ್ಮನಾದ ಶಂಕರನು ಇರುವಂತಹ ಸ್ಥಳಕ್ಕೆ ಕೂಡಲೇ ತೆರಳಿದರು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಎಂಟನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ನವಮೋಽಧ್ಯಾಯಃ

॥ ಬ್ರಹ್ಮೋವಾಚ ॥

ತಸ್ಮಿನ್ ಗತೇ ಸಾನುಚರೇ ಶಿವಸ್ಥಾನಂ ಚ ಮನ್ಮಥೇ ।
ಚರಿತ್ರಮಭವಚ್ಚಿತ್ರಂ ತಚ್ಛೃಣುಷ್ವ ಮುನೀಶ್ವರ ॥ ೧ ॥

ಗತ್ವಾ ತತ್ರ ಮಹಾವೀರೋ ಮನ್ಮಥೋ ಮೋಹಕಾರಕಃ ।
ಸ್ವಪ್ರಭಾವಂ ತತಾನಾಽಽಶು ಮೋಹಯಾಮಾಸ ಪ್ರಾಣಿನಃ ॥ ೨ ॥

---

## ಒಂಭತ್ತನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು :—ಎಲೈ ನಾರದಮುನಿ ! ಹಿಂದೆ ಹೇಳಿದಂತೆ ಮನ್ಮಥನು ತನ್ನ ಪರಿವಾರದೊಂದಿಗೆ ಶಿವನಿರುವಲ್ಲಿಗೆ ಹೋಗಲು ಅಲ್ಲಿ ಆಶ್ಚರ್ಯಕರವಾದಂತಹ ಒಂದು ಸಮಾಚಾರವು ನಡೆಯಿತು. ಅದನ್ನು ಹೇಳುವೆನು ಕೇಳು.

೨. ಮೋಹಗೊಳಿಸುವುದರಲ್ಲಿ ಮಹಾವೀರನಾದ ಮನ್ಮಥನು ಆ ಶಿವನಿರುವಲ್ಲಿಗೆ ಹೋಗಿ ಅಲ್ಲಿ ತನ್ನ ಪ್ರಭಾವವನ್ನು ಪ್ರಸರಿಸಿದನು. ಅಲ್ಲಿರುವ ಪ್ರಾಣಿಗಳನ್ನೆಲ್ಲಾ ಕಾಮವಿಕಾರಗೊಳ್ಳುವಂತೆ ಮೋಹಗೊಳಿಸಿದನು.

ವಸಂತೋಽಪಿ ಪ್ರಭಾವಂ ಸ್ವಂ ಚಕಾರ ಪರಮೋಹನಂ ।
ಸರ್ವೇ ವೃಕ್ಷಾ ಏಕದೈವ ಪ್ರಫುಲ್ಲಾ ಅಭವನ್ಮುನೇ ॥ ೩ ॥

ವಿವಿಧಾನ್ ಕೃತವಾನ್ ಯತ್ನಾನ್ ರತ್ಯಾ ಸಹ ಮನೋಭವಃ ।
ಜೀವಾಸ್ಸರ್ವೇ ವಶಂ ಯಾತಾಸ್ಸಗಣೇಶಶ್ಶಿವೋ ನ ಹಿ ॥ ೪ ॥

ಸಮಧೋರ್ಮದನಸ್ಯಾಸನ್ ಪ್ರಯಾಸಾ ನಿಷ್ಫಲಾ ಮುನೇ ।
ಜಗಾಮ ಚ ನಿಜಸ್ಥಾನಂ ನಿವೃತ್ಯ ವಿಮದಸ್ತದಾ ॥ ೫ ॥

ಕೃತ್ವಾ ಪ್ರಣಾಮಂ ವಿಧಯೇ ಮಹ್ಯಂ ಗದ್ಗದಯಾ ಗಿರಾ ।
ಉವಾಚ ಮದನೋ ಮಾಂ ಚೋದಾಸೀನೋ ವಿಮದೋ ಮುನೇ ॥ ೬ ॥

॥ ಕಾಮ ಉವಾಚ ॥

ಬ್ರಹ್ಮನ್ ಶಂಭುರ್ಮೋಹನೀಯೋ ನ ವೈ ಯೋಗಪರಾಯಣಃ ।
ನ ಶಕ್ತಿರ್ಮಮ ಸಾನ್ಯಸ್ಯ ತಸ್ಯ ಶಂಭೋರ್ಹಿ ಮೋಹನೇ ॥ ೭ ॥

---

೩. ವಸಂತನೂ ಸಹ ತನ್ನ ಪ್ರಭಾವವನ್ನು ಬೀರಿ ಶಂಕರನನ್ನು ಮೋಹಗೊಳಿಸಲು ಯತ್ನಿಸಿದನು. ಆಗ ಮರಗಳೆಲ್ಲವೂ ಏಕಕಾಲದಲ್ಲಿ ವಸಂತನ ಪ್ರಭಾವದಿಂದ ಚಿಗುರಿ ಹೂವರಳಿದುವು.

೪. ಮನ್ಮಥನು ರತೀದೇವಿಯೊಡನೆ ಶಿವನನ್ನು ಮೋಹಗೊಳಿಸಲು ಅನೇಕ ಯತ್ನಗಳನ್ನು ಮಾಡಿದನು. ಅಲ್ಲಿರುವ ಮಿಕ್ಕಪ್ರಾಣಿಗಳೆಲ್ಲವೂ ಅವನ ಅಧೀನವಾಗಿ ಕಾಮವಿಕಾರವನ್ನು ಹೊಂದಿದುವು. ಆದರೆ ಪ್ರಮಥಾಧಿಪತಿಯಾದ ಆ ಶಂಕರನು ಮಾತ್ರ ಮೋಹಗೊಳ್ಳಲೇ ಇಲ್ಲ.

೫-೬. ಎಲೈ ನಾರದ! ಹೀಗೆ ಮನ್ಮಥ ಮತ್ತು ವಸಂತರ ಪ್ರಯತ್ನಗಳೆಲ್ಲವೂ ಶಿವನಲ್ಲಿ ವ್ಯರ್ಥವಾದುವು. ಆಗ ಮನ್ಮಥನು ಉದಾಸೀನನಾಗಿ ಬ್ರಹ್ಮ ಮೊದಲಾದವರಿರುವಂತಹ ಸಂಕೇತಸ್ಥಾನಕ್ಕೆ ಹಿಂತಿರುಗಿ ಬಂದು, ನನಗೆ ನಮಸ್ಕರಿಸಿ ದುಃಖದಿಂದ ನುಡಿಯು ತೊದಲುತ್ತಿರಲು, ನನ್ನನ್ನು ಕುರಿತು ಹೀಗೆ ಹೇಳಿದನು.

೭. ಮನ್ಮಥನು ಹೇಳಿದನು :—ಓ ಬ್ರಹ್ಮನೇ! ವಿರಕ್ತನಾಗಿ ಯೋಗನಿರತನಾದ ಶಿವನನ್ನು ಮೋಹಗೊಳಿಸಲು ಸಾಧ್ಯವಿಲ್ಲ. ನನಗಾಗಲೀ, ಇನ್ನಾರಿಗಾಗಲೀ ಶಿವನನ್ನು ಮೋಹಗೊಳಿಸಲು ಶಕ್ತಿಯಿಲ್ಲ.

ಸಮಿತ್ರೇಣ ಮಯಾ ಬ್ರಹ್ಮನ್ನುಪಾಯಾ ವಿವಿಧಾಃ ಕೃತಾಃ ।
ರತ್ಯಾ ಸಹಾಖಿಲಾಸ್ತೇ ಚ ನಿಷ್ಫಲಾ ಅಭವಂಛಿವೇ ॥ ೮ ॥

ಶೃಣು ಬ್ರಹ್ಮನ್ ಯಥಾಸ್ಮಾಭಿಃ ಕೃತಾ ಹಿ ಹರಮೋಹನೇ ।
ಪ್ರಯಾಸಾನ್ ವಿವಿಧಾಂಸ್ತಾತ ಗದತಸ್ತಾನ್ಮುನೇ ಮಮ ॥ ೯ ॥

ಯದಾ ಸಮಾಧಿಮಾಶ್ರಿತ್ಯ ಸ್ಥಿತಶ್ಶಂಭುರ್ನಿಯಂತ್ರಿತಃ ।
ತದಾ ಸುಗಂಧಿವಾತೇನ ಶೀತಲೇನಾತಿವೇಗಿನಾ ॥ ೧೦ ॥

ಉದ್ವೇಜಯಾಮಿ ನಿತ್ಯಂ ಸ್ಮ ರುದ್ರಂ ಮೋಹನಕಾರಿಣಾ ।
ಪ್ರಯತ್ನೋ ಮಹಾದೇವಂ ಸಮಾಧಿಸ್ಥಂ ತ್ರಿಲೋಚನಂ ॥ ೧೧ ॥

ಸ್ವಸಾಯಕಾಂಸ್ತಥಾ ಪಂಚ ಸಮಾದಾಯ ಶರಾಸನಂ ।
ತಸ್ಯಾಭಿತೋ ಭ್ರಮಂತಸ್ತು ಮೋಹಯಂಸ್ತದ್ಗಣಾನಹಂ ॥ ೧೨ ॥

---

೮. ವಸಂತನೊಡನೆಯೂ ರತಿಯೊಡನೆಯೂ ಸಹ ನಾನು ಶಿವನನ್ನು ಮೋಹಗೊಳಿಸಲು ಅನೇಕ ಉಪಾಯಗಳನ್ನು ಮಾಡಿ ನೋಡಿದೆನು. ಆದರೆ ಅವೆಲ್ಲವೂ ವ್ಯರ್ಥವಾದುವು.

೯. ಓ ಬ್ರಹ್ಮನೆ! ನಾವು ಶಿವನನ್ನು ಮೋಹಗೊಳಿಸಲು ಎಂತೆಂತಹ ಪ್ರಯತ್ನಗಳನ್ನು ಮಾಡಿದೆವೆಂಬುದನ್ನು ಹೇಳುವೆನು ಕೇಳು.

೧೦-೧೧. ಶಿವನು ಶರೀರೇಂದ್ರಿಯಗಳನ್ನೂ ಪ್ರಾಣಗಳನ್ನೂ ಬಂಧಿಸಿ ಯಾವಾಗ ಸಮಾಧಿಯಲ್ಲಿ ಕುಳಿತುಕೊಳ್ಳುವನೋ ಆಗ ಆ ಮಹಾದೇವನನ್ನು, ಸುವಾಸನೆಯುಳ್ಳದುದೂ ಶೀತಲವಾದುದೂ ಮೋಹವನ್ನುಂಟುಮಾಡುವಂತಹುದೂ ಆದಂತ ಗಾಳಿಯನ್ನು ಮೆಲ್ಲಗೆ ಬೀಸಿಸಿ ಉದ್ವೇಗಗೊಳ್ಳುವಂತೆ ಮಾಡುತ್ತಿದ್ದೆನು.

೧೨. ಮತ್ತು ನನ್ನ ಐದು ಪುಷ್ಪಬಾಣಗಳನ್ನೂ ಪ್ರಯೋಗಿಸಿ ಆ ಶಿವನ ಸುತ್ತಲೂ ಸಂಚರಿಸುವ ಪ್ರಮಥಗಣಗಳನ್ನು ಮೋಹಗೊಳಿಸಿದೆನು.

ಮಮ ಪ್ರವೇಶಮಾತ್ರೇಣ ಸುವಶ್ಯಾಸ್ಸರ್ವಜಂತವಃ ।
ಅಭವದ್ವಿಕೃತೋ ನೈವ ಶಂಕರಸ್ಸಗಣಃ ಪ್ರಭುಃ ॥ ೧೩ ॥

ಯದಾ ಹಿಮವತಃ ಪ್ರಸ್ಥಂ ಸ ಗತಃ ಪ್ರಮಥಾಧಿಪಃ ।
ತತ್ರಾಽಽಗತಸ್ಸದೈವಾಹಂ ಸರತಿಸ್ಸಮಧುರ್ವಿಧೇ ॥ ೧೪ ॥

ಯದಾ ಮೇರುಂ ಗತೋ ರುದ್ರೋ ಯದಾ ವಾ ನಾಟಕೇಶ್ವರಂ ।
ಕೈಲಾಸಂ ವಾ ಯದಾ ಯಾತಸ್ತತ್ರಾಹಂ ಗತವಾನ್ ತದಾ ॥ ೧೫ ॥

ಯದಾ ತ್ಯಕ್ತಸಮಾಧಿಸ್ತು ಹರಸ್ತಸ್ಥೌ ಕದಾಚನ ।
ತದಾ ತಸ್ಯ ಪುರಶ್ಚಕ್ರಯುಗಂ ರಚಿತವಾನಹಂ ॥ ೧೬ ॥

ತಚ್ಚಕ್ರಯುಗಳಂ ಬ್ರಹ್ಮನ್ ಹಾವಭಾವಯುತಂ ಬಹು ।
ನಾನಾಭಾವಾನಕಾರ್ಷೀಚ್ಚ ದಾಂಪತ್ಯಕ್ರಮಮುತ್ತಮಂ ॥ ೧೭ ॥

೧೩. ನಾನು ಅಲ್ಲಿಗೆ ಪ್ರವೇಶಿಸಿದೊಡನೆಯೇ ಮಿಕ್ಕ ಎಲ್ಲಾ ಪ್ರಾಣಿಗಳೂ ನನ್ನ ಅಧೀನರಾಗಿ ಕಾಮವಿಕಾರವನ್ನು ಹೊಂದಿದುವು. ಆದರೆ ಶಂಕರನೂ ಅವನ ಗಣಗಳೂ ಮಾತ್ರ ಕಾಮವಿಕಾರವನ್ನು ಹೊಂದಲೇ ಇಲ್ಲ.

೧೪. ಅಲ್ಲದೇ ಆ ಶಿವನು ಯಾವಾಗ ಹಿಮಾಲಯದ ತಪ್ಪಲಿಗೆ ಹೋಗುವನೋ ಆಗಲೆಲ್ಲಾ ನಾನೂ ಸಹ ರತಿ ಮತ್ತು ವಸಂತರೊಡನೆ ಅಲ್ಲಿಗೆ ಹೋಗುತ್ತಲಿದ್ದೆನು.

೧೫. ಅಥವಾ ಮೇರುಪರ್ವತ, ನಾಟಕೇಶ್ವರ, ಕೈಲಾಸಪರ್ವತ ಇವುಗಳಿಗೆ ಶಿವನು ಹೋದರೂ ನಾನು ಅಲ್ಲಿಗೂ ಅವನನ್ನು ಹಿಂಬಾಲಿಸುತ್ತಿದ್ದೆನು.

೧೬. ಶಿವನು ಸಮಾಧಿಯನ್ನು ಬಿಟ್ಟು ಶಾಂತನಾಗಿ ಕುಳಿತಿರುವಾಗ ಅವನೆದುರಿಗೆ ಚಕ್ರವಾಕ ದಂಪತಿಗಳನ್ನು ಆಟವಾಡುವಂತೆ ಮಾಡುತ್ತಿದ್ದೆನು.

೧೭. ಆ ಚಕ್ರವಾಕಗಳ ಜೋಡಿಯು ಶಿವನೆದುರಿನಲ್ಲಿ ಅನೇಕ ಬಗೆಯ ಶೃಂಗಾರ ಚೇಷ್ಟೆಗಳನ್ನು ಮಾಡುತ್ತಾ ಉತ್ತಮವಾದ ಪತಿಪತ್ನೀಭಾವವನ್ನು ಪ್ರದರ್ಶಿಸುತ್ತಿದ್ದವು.

ನೀಲಕಂಠಂ ಮಹಾದೇವಂ ಸಗಣಂ ತತ್ಪುರಸ್ತಥಾ ।
ಅಕಾರ್ಷುರ್ನರ್ತಿತಂ ಭಾವಂ ಮೃಗಾಶ್ಚ ಪಕ್ಷಿಣಸ್ತಥಾ ॥ ೧೮ ॥

ಮಯೂರಮಿಥುನಂ ತತ್ರಾಕಾರ್ಷೀದ್ಭಾವಂ ರಸೋತ್ಸುಕಂ ।
ವಿವಿಧಾಂ ಗತಿಮಾಶ್ರಿತ್ಯ ಪಾರ್ಶ್ವೇ ತಸ್ಯ ಪುರಸ್ತಥಾ ॥ ೧೯ ॥

ನಲಭದ್ವಿವರಂ ತಸ್ಯ ಕದಾಚಿದಪಿ ಮಚ್ಛರಃ ।
ಸತ್ಯಂ ಬ್ರವೀಮಿ ಲೋಕೇಶ ಮಮ ಶಕ್ತಿರ್ನ ಮೋಹನೇ ॥ ೨೦ ॥

ಮಧುರಪ್ಯಕರೋತ್ಕರ್ಮ ಯುಕ್ತಂ ಯತ್ತಸ್ಯ ಮೋಹನೇ ।
ತಚ್ಛೃಣುಷ್ವ ಮಹಾಭಾಗ ಸತ್ಯಂ ಸತ್ಯಂ ವದಾಮ್ಯಹಂ ॥ ೨೧ ॥

ಚಂಪಕಾನ್ ಕೇಸರಾನಾಮ್ರಾನ್ ಕಾರಣಾನ್ ಪಾಟಲಾಂಸ್ತಥಾ ।
ನಾಗಕೇಸರಪುನ್ನಾಗಾನ್ ಕಿಂಶುಕಾನ್ ಕೇತಕಾಂಸ್ತಥಾ ॥ ೨೨ ॥

---

೧೮. ಮತ್ತು ಮಯೂರವೇ ಮೊದಲಾದ ಪಕ್ಷಿಗಳೂ ಮೃಗಗಳೂ ಸಹ ಆ ಶಿವನೆದುರಿನಲ್ಲಿ ಕಾಮಭಾವವನ್ನು ಪ್ರಕಟಿಸುತ್ತಿದ್ದವು.

೧೯. ಮಯೂರ ದಂಪತಿಗಳು ಆ ಶಿವನೆದುರಿನಲ್ಲಿ ಅನೇಕ ಚೇಷ್ಟೆಗಳನ್ನು ಮಾಡುತ್ತಾ ಶೃಂಗಾರಸುಖದಲ್ಲಿ ಆಸಕ್ತಿಯನ್ನು ಪ್ರಕಟಿಸುತ್ತಿದ್ದವು.

೨೦. ಇಷ್ಟು ಪ್ರಯತ್ನಗಳನ್ನು ಮಾಡಿದರೂ ನನ್ನ ಶರಗಳನ್ನು ಪ್ರಯೋಗಿಸಲು ಅವಕಾಶವೇ ಸಿಗಲಿಲ್ಲ. ಓ ಬ್ರಹ್ಮನೇ! ನಿಜವಾದುದನ್ನು ಹೇಳುವೆನು ಶಿವನನ್ನು ಮೋಹಗೊಳಿಸಲು ನನಗೆ ಶಕ್ತಿಯಿಲ್ಲ.

೨೧. ಇನ್ನು ಶಿವನನ್ನು ಮೋಹಗೊಳಿಸಲು ವಸಂತನು ಯಾವ ಪ್ರಯತ್ನಗಳನ್ನು ಮಾಡಿರುವನೆಂಬುದನ್ನು ಹೇಳುವೆನು. ನಾನು ನಡೆದುದನ್ನೇ ಹೇಳುವೆನು. ಓ ಮಹಾಮಹಿಮನಾದ ಬ್ರಹ್ಮನೇ! ಕೇಳು.

೨೨-೨೩. ಸಂಪಗೆ, ಕೇಸರ, ಮಾವು, ಸುರಗಿ, ವಸಲೆ, ಹಸುರುಪಾದರಿ, ನಾಗಸಂಪಿಗೆ, ಪುನ್ನಾಗ, ಮುತ್ತುಗ, ಕೇದಗೆ, (ತಾಳೆ) ಕಗ್ಗಲೀ (ಕಾಡು ಇರುವಂತಿಗೆ)

**ಮಾಧವೀಮಲ್ಲಿಕಾಪರ್ಣಭಾರಾನ್ ಕುರವಕಾಂಸ್ತಥಾ ।**
**ಉತ್ಫುಲ್ಲಯತಿ ತತ್ರ ಸ್ಮ ಯತ್ರ ತಿಷ್ಠತಿ ವೈ ಹರಃ ॥ ೨೩ ॥**

**ಸರಾಂಸ್ಯುತ್ಫುಲ್ಲಪದ್ಮಾನಿ ವೀಜಯನ್ ಮಲಯಾನಿಲೈಃ ।**
**ಯತ್ನಾತ್ಸುಗಂಧೀನ್ಯಕರೋದತೀವ ಗಿರಿಶಾಶ್ರಮೇ ॥ ೨೪ ॥**

**ಲತಾಸ್ಸರ್ವಾಸ್ಸುಮನಸೋ ಫುಲ್ಲಪಲ್ಲವಸಂಚಯಾನ್ ।**
**ವೃಕ್ಷಾನ್ ರುಚಿರಭಾವೇನ ವೇಷ್ಟಯಂತಿ ಸ್ಮ ತತ್ರ ಚ ॥ ೨೫ ॥**

**ತಾನ್ ವೃಕ್ಷಾಂಶ್ಚ ಸುಪುಷ್ಪೌಘಾಂಸ್ತೈಸ್ಸುಗಂಧಿಸಮೀರಣೈಃ ।**
**ದೃಷ್ಟ್ವಾ ಕಾಮವಶಂ ಯಾತಾ ಮುನಯೋಽಪಿ ಪರೇ ಕಿಮು ॥ ೨೬ ॥**

**ಏವಂ ಸತ್ಯಪಿ ಶಂಭೋರ್ನ ದೃಷ್ಟಂ ಮೋಹಸ್ಯ ಕಾರಣಂ ।**
**ಭಾವಮಾತ್ರಮಕಾರ್ಷೀನ್ನೋ ಕೋಪಂ ಮಯ್ಯಪಿ ಶಂಕರಃ ॥ ೨೭ ॥**

---

ಮಲ್ಲಿಗೆ, ಕಗ್ಗೋಲೆ, ಕೆಂಪುಗೋರಂಟಿಗೆ ಮುಂತಾದ ಹೂವುಗಳನ್ನು ಶಿವನಿರುವಲ್ಲಿ ವಸಂತನು ಅರಳಿಸುವನು.

೨೪. ಸರಸ್ಸುಗಳಲ್ಲಿ ಕಮಲಗಳನ್ನು ಅರಳಿಸಿದನು, ಮಲಯಪರ್ವತದ ಸುವಾಸನೆಯುಳ್ಳ ಗಾಳಿಯನ್ನು ಬೀಸಿಸಿ ಶಿವನ ಆಶ್ರಮವನ್ನೆಲ್ಲಾ ಸುವಾಸನೆಯುಳ್ಳದ್ದನ್ನಾಗಿಮಾಡಿದನು.

೨೫. ಸುಂದರವಾದ ಮಾಧವೀಯೇ ಮೊದಲಾದ ಲತೆಗಳು, ಅರಳಿದ ಚಿಗುರುಗಳುಳ್ಳಂತಹ ವೃಕ್ಷಗಳನ್ನು ಮನೋಹರವಾಗಿ ಸುತ್ತಿಕೊಳ್ಳುವಂತೆ ವಸಂತನು ರಚಿಸಿದನು.

೨೬. ಸುಂದರವಾಗಿ ಅರಳಿದ ಹೂವುಗಳುಳ್ಳ ಲತೆ ಮತ್ತು ವೃಕ್ಷಗಳನ್ನೂ ಸುವಾಸನೆಯಾದ ಗಾಳಿಯನ್ನೂ ನೋಡಿ ಮುನಿಗಳೂ ಸಹ ಕಾಮವಿಕಾರವನ್ನು ಹೊಂದಿದರು.

೨೭. ಇಷ್ಟೆಲ್ಲಾ ಪ್ರಯತ್ನಗಳನ್ನು ಮಾಡಿದರೂ ಶಂಕರನಿಗೆ ಸ್ವಲ್ಪವೂ ಮೋಹವುಂಟಾಗಲಿಲ್ಲ. ನನ್ನಲ್ಲಿ ಕೋಪವನ್ನೂ ಸಹ ಆ ಶಿವನು ಪ್ರಕಟಿಸಲಿಲ್ಲ.

ಇತಿ ಸರ್ವಮಹಂ ದೃಷ್ಟ್ವಾ ಜ್ಞಾತ್ವಾ ತಸ್ಯ ಚ ಭಾವನಂ ।
ವಿಮುಖೋಽಹಂ ಶಂಭುಮೋಹಾನ್ನಿಯತಂ ತೇ ವದಾಮ್ಯಹಂ ॥ ೨೮ ॥

ತಸ್ಯ ತ್ಯಕ್ತಸಮಾಧೇಸ್ತು ಕ್ಷಣಂ ನೋ ದೃಷ್ಟಿಗೋಚರೇ ।
ಶಕ್ನುಯಾಮೋ ವಯಂ ಸ್ಥಾತು ತಂ ರುದ್ರಂ ಕೋ ವಿಮೋಹಯೇತ್ ॥

ಜ್ವಲದಗ್ನಿಪ್ರಕಾಶಾಕ್ಷಂ ಯೋಟ್ಟಾರಾಶಿಕರಾಲಿನಂ ।
ಶೃಂಗಿಣಂ ವೀಕ್ಷ್ಯ ಕಃ ಸ್ಥಾತುಂ ಬ್ರಹ್ಮನ್ ಶಕ್ನೋತಿ ತತ್ಪುರಃ ॥ ೩೦ ॥

॥ ಬ್ರಹ್ಮೋವಾಚ ॥

ಮನೋಭವವಚಶ್ಚೇತ್ಥಂ ಶ್ರುತ್ವಾಹಂ ಚತುರಾನನಃ ।
ವಿವಕ್ಷುರಪಿ ನಾವೋಚಂ ಚಿಂತಾವಿಷ್ಟೋಽಭವಂ ತದಾ ॥ ೩೧ ॥

ಮೋಹನೇಽಹಂ ಸಮರ್ಥೋ ನ ಹರಸ್ಯೇತಿ ಮನೋಭವಃ ।
ವಚಃ ಶ್ರುತ್ವಾ ಮಹಾದುಃಖಾನ್ನಿರಶ್ವಸಮಹಂ ಮುನೇ ॥ ೩೨ ॥

---

೨೮. ಹೀಗೆ ಇದೆಲ್ಲವನ್ನೂ ನೋಡಿ, ಶಂಕರನ ಸ್ಥಿರವಾದ ವಿರಕ್ತಭಾವನೆಯನ್ನೂ ತಿಳಿದು ನಾನು ಅವನನ್ನು ಮೋಹಗೊಳಿಸುವ ಪ್ರಯತ್ನದಿಂದ ವಿಫಲನಾಗಿ ಹಿಂತಿರುಗಿರುತ್ತೇನೆ. ಇದು ನಿಶ್ಚಯವಾದ ಮಾತು.

೨೯. ಸಮಾಧಿಯನ್ನು ಬಿಟ್ಟು ಬಹಿರ್ಮುಖನಾಗಿರುವಾಗ ಆ ಶಿವನ ಎದುರಿನಲ್ಲಿ ನಿಲ್ಲಲೂ ನಾವು ಸಮರ್ಥರಾಗಿಲ್ಲ. ಇನ್ನು ಅವನನ್ನು ಮೋಹಗೊಳಿಸುವುದು ಹೇಗೆ?

೩೦. ಜ್ವಲಿಸುತ್ತಿರುವ ಅಗ್ನಿಯಂತಿರುವ ಕಣ್ಣುಗಳುಳ್ಳವನೂ, ನೋಡಲು ಅಸಾಧ್ಯವಾದಂತಹ ತೇಜಸ್ಸುಳ್ಳವನೂ ಆದಂತಹ ಆ ಶಿವನ ಎದುರಿನಲ್ಲಿ ಯಾವನು ತಾನೇ ನಿಲ್ಲಲು ಸಮರ್ಥನು?

೩೧-೩೨. ಈ ರೀತಿಯಾಗಿ ಮನ್ಮಥನು ಹೇಳಲು, ಅದನ್ನು ಕೇಳಿ ಚಿಂತಾವಿಷ್ಟನಾಗಿ ಏನನ್ನು ಹೇಳಲೂ ನನಗೆ ತೋಚಲಿಲ್ಲ. ಎಲೈ ನಾರದ! ಆಮೇಲೆ ನಾನು "ಶಿವನನ್ನು ನಾನು ಮೋಹಗೊಳಿಸಲಾರೆನು" ಎಂದು ಮನ್ಮಥನು ಹೇಳಿದುದನ್ನು ಚಿಂತಿಸಿ ತುಂಬಾ ದುಃಖಗೊಂಡು ನಿಟ್ಟುಸಿರನ್ನು ಬಿಟ್ಟೆನು.

ನಿಃಶ್ವಾಸಮರುತಾ ಮೇ ಹಿ ನಾನಾರೂಪಾ ಮಹಾಬಲಾಃ ।
ಜಾತಾ ಗತಾ ಲೋಲಜಿಹ್ವಾ ಲೋಲಾಶ್ಚಾತಿಭಯಂಕರಾಃ ॥ ೩೩ ॥

ಅವಾದಯಂತ ತೇ ಸರ್ವೇ ನಾನಾವಾದ್ಯಾನಸಂಖ್ಯಕಾನ್ ।
ಪಟಹಾದಿಗಣಾಂಸ್ತಾಂಸ್ತಾನ್ವಿಕರಾಲಾನ್ ಮಹಾರವಾನ್ ॥ ೩೪ ॥

ಅಥ ತೇ ಮಮ ನಿಃಶ್ವಾಸಸಂಭವಾಶ್ಚ ಮಹಾಗಣಾಃ ।
ಮಾರಯ ಛೇದಯೇತ್ಯೂಚುರ್ಬ್ರಹ್ಮಣೋ ಮೇ ಪುರಃ ಸ್ಥಿತಾಃ ॥ ೩೫ ॥

ತೇಷಾಂ ತು ವದತಾಂ ತತ್ರ ಮಾರಯ ಛೇದಯೇತಿ ಮಾಂ ।
ವಚಃ ಶ್ರುತ್ವಾ ವಿಧಿಂ ಕಾಮಃ ಪ್ರವಕ್ತುಮುಪಚಕ್ರಮೇ ॥ ೩೬ ॥

ಮುನೇsಥ ಸಮಾಂ ಸಮಾಭಾಷ್ಯ ತಾನ್ ದೃಷ್ಟ್ವಾ ಮದನೋ ಗಣಾನ್ ।
ಉವಾಚ ವಾರಯನ್ ಬ್ರಹ್ಮನ್ ಗಣಾನಾಮಗ್ರತಃ ಸ್ಮರಃ ॥ ೩೭ ॥

---

೩೩. ಆ ನನ್ನ ನಿಟ್ಟುಸಿರಿನಿಂದ ಅನೇಕ ರೂಪವುಳ್ಳವರೂ, ತುಂಬಾ ಬಲಶಾಲಿಗಳೂ, ಚಂಚಲವಾದ ನಾಲಿಗೆಯುಳ್ಳವರೂ, ತುಂಬಾ ಭಯಂಕರರೂ ಆದಂತಹಅನೇಕ ಗಣಗಳು ಜನಿಸಿದರು.

೩೪. ಆ ಗಣಗಳೆಲ್ಲರೂ ಪಟಹ ಮೊದಲಾದ ಅನೇಕ ಬಗೆಯ ವಾದ್ಯಗಳನ್ನು ತುಂಬಾ ಧ್ವನಿಯೊಡನೆ ಬಾರಿಸಿದರು.

೩೫. ಬಳಿಕ ಆ ನಿಟ್ಟುಸಿರಿನಿಂದ ಜನಿಸಿದ ಮಹಾಗಣಗಳು, ನನ್ನ ಎದುರಿಗೆ ನಿಂತು ಮಾರಯ ಎಂದರೆ ಕೊಲ್ಲು ಛೇದಯ ಎಂದರೆ ಕತ್ತರಿಸು ಎಂಬುದಾಗಿ ಆರ್ಭಟಿಸಿದರು.

೩೬. ಹೀಗೆ ಆ ಗಣಗಳು ಮಾರಯ ಮತ್ತು ಛೇದಯ ಎಂದು ಹೇಳುತ್ತಲಿರಲು ಮನ್ಮಥನು ನನ್ನನ್ನು ಕುರಿತು ಹೀಗೆ ಹೇಳತೊಡಗಿದನು.

೩೭. ಎಲೈ ನಾರದ! ಆ ಮೇಲೆ ಮನ್ಮಥನು ಮಾರಯ ಛೇದಯ ಎಂದು ಗಲಭೆಯನ್ನು ಮಾಡುತ್ತಲಿರುವ ಆ ಗಣಗಳನ್ನು ತಡೆದು ನನ್ನ ಕುರಿತು,

॥ ಕಾಮ ಉವಾಚ ॥

ಹೇ ಬ್ರಹ್ಮನ್ ಹೇ ಪ್ರಜಾನಾಥ ಸರ್ವಸೃಷ್ಟಿಪ್ರವರ್ತಕ ।
ಉತ್ಪನ್ನಾಃ ಕೇ ಇಮೇ ವೀರಾ ವಿಕರಾಲಾ ಭಯಂಕರಾಃ ॥ ೩೮ ॥

ಕಿಂ ಕರ್ಮೈತೇ ಕರಿಷ್ಯಂತಿ ಕುತ್ರ ಸ್ಥಾಸ್ಯಂತಿ ವಾ ವಿಧೇ ।
ಕಿನ್ನಾಮಧೇಯಾ ಏತೇ ತದ್ವದ ತತ್ರ ನಿಯೋಜಯ ॥ ೩೯ ॥

ನಿಯೋಜ್ಯ ತಾನ್ ನಿಜೇ ಕೃತ್ಯೇ ಸ್ಥಾನಂ ದತ್ವಾ ಚ ನಾಮ ಚ ।
ಮಮಾಽಽಜ್ಞಾಪಯ ದೇವೇಶ ಕೃಪಾಂ ಕೃತ್ವಾ ಯಥೋಚಿತಾಂ ॥ ೪೦ ॥

॥ ಬ್ರಹ್ಮೋವಾಚ ॥

ಇತಿ ತದ್ವಾಕ್ಯಮಾಕರ್ಣ್ಯ ಮುನೇಽಹಂ ಲೋಕಕಾರಕಃ ।
ತಮವೋಚಂ ಹ ಮದನಂ ತೇಷಾಂ ಕರ್ಮಾದಿಕಂ ದಿಶನ್ ॥ ೪೧ ॥

॥ ಬ್ರಹ್ಮೋವಾಚ ॥

ಏತ ಉತ್ಪನ್ನಮಾತ್ರಾ ಹಿ ಮಾರಯೇತ್ಯವದನ್ ವಚಃ ।
ಮುಹುರ್ಮುಹುರತೋಽಮೀಷಾಂ ನಾಮ ಮಾರೇತಿ ಜಾಯತಾಂ ॥ ೪೨ ॥

---

೩೮-೩೯. ಮನ್ಮಥನು ಹೇಳಿದನು:—ಓ ಬ್ರಹ್ಮನೆ! ನೀನು ಪ್ರಜೆಗಳಿಗೆ ಒಡೆಯನು. ಎಲ್ಲವನ್ನೂ ಸೃಷ್ಟಿಸುವವನು, ಈಗ ಜನಿಸಿರುವ ಈ ವೀರರೂ ಕ್ರೂರರೂ ಭಯಂಕರರೂ ಆದ ಗಣಗಳು ಯಾರು? ಇವರ ಕೆಲಸವೇನು? ಇವರು ಯಾವ ಸ್ಥಾನದಲ್ಲಿರಬೇಕಾದುದು? ಇವರ ಹೆಸರುಗಳೇನು? ಇವೆಲ್ಲವನ್ನೂ ನನಗೆ ಹೇಳು.

೪೦. ಓ ದೇವನೇ! ಈ ಗಣಗಳನ್ನು ಅವರಿಗೆ ಯೋಗ್ಯವಾದ ಕಾರ್ಯದಲ್ಲಿ ನಿಯಮಿಸಿ, ಸ್ಥಾನವನ್ನೂ, ಹೆಸರನ್ನೂ ಕೊಟ್ಟು, ಬಳಿಕ ನನಗೆ ಯೋಗ್ಯವಾದುದನ್ನು ದಯವಿಟ್ಟು ಅಪ್ಪಣೆಮಾಡು ಎಂದನು.

೪೧. ಬ್ರಹ್ಮನು ಹೇಳಿದನು:—ಎಲೈ ನಾರದ! ಹೀಗೆ ಮನ್ಮಥನು ಹೇಳಿದ ಮಾತುಗಳನ್ನು ಕೇಳಿ ನಾನು ಆ ಗಣಗಳಿಗೆ ಸ್ಥಾನ, ಹೆಸರು ಮುಂತಾದುವುಗಳನ್ನು ತಿಳಿಸಲೋಸುಗ ಮನ್ಮಥನನ್ನು ಕುರಿತು

೪೨. ಎಲೈ ಮನ್ಮಥ! ಈ ಗಣಗಳು ಜನಿಸಿದೊಡನೆಯೇ "ಮಾರಯ" ಎಂದು ಪುನಃ ಪುನಃ ಹೇಳಿರುವುದರಿಂದ ಇವರಿಗೆ ಮಾರಗಣಗಳೆಂದು ಹೆಸರು.

**ಸದೈವ ವಿಘ್ನಂ ಜಂತೂನಾಂ ಕರಿಷ್ಯಂತಿ ಗಣಾ ಇಮೇ ।**
**ವಿನಾ ಶಿವಾರ್ಚನಂ ಕಾಮ ನಾನಾಕಾಮರತಾತ್ಮನಾಂ ॥ ೪೩ ॥**

**ತವಾನುಗಮನಂ ಕರ್ಮ ಮುಖ್ಯಮೇಷಾಂ ಮನೋಭವ ।**
**ಸಹಾಯಿನೋ ಭವಿಷ್ಯಂತಿ ಸದಾ ತವ ನ ಸಂಶಯಃ ॥ ೪೪ ॥**

**ಯತ್ರ ಯತ್ರ ಭವಾನ್ಯಾತಾ ಸ್ವಕಾರ್ಯಾರ್ಥಂ ಯದಾ ಯದಾ ।**
**ಗಂತಾರಸ್ತತ್ರ ತತ್ರೈತೇ ಸಹಾಯಾರ್ಥಂ ತದಾ ತದಾ ॥ ೪೫ ॥**

**ಚಿತ್ತಭ್ರಾಂತಿಂ ಕರಿಷ್ಯಂತಿ ತ್ವದಸ್ತ್ರವಶವರ್ತಿನಾಂ ।**
**ಜ್ಞಾನಿನಾಂ ಜ್ಞಾನಮಾರ್ಗಂ ಚ ವಿಘ್ನಯಿಷ್ಯಂತಿ ಸರ್ವಥಾ ॥ ೪೬ ॥**

**॥ ಬ್ರಹ್ಮೋವಾಚ ॥**

**ಇತ್ಯಾಕರ್ಣ್ಯ ವಚೋ ಮೇ ಹಿ ಸರತಿಸ್ಸ ಸಹಾನುಗಃ ।**
**ಕಿಂಚಿತ್ಪ್ರಸನ್ನವದನೋ ಬಭೂವ ಮುನಿಸತ್ತಮ ॥ ೪೭ ॥**

---

೪೩. ಶಿವಾರ್ಚನೆಯನ್ನು ಮಾಡದೇ ಕೇವಲ ಕಾಮಸುಖದಲ್ಲಿಯೇ ಆಸಕ್ತರಾಗಿರುವಂತಹ ಜನಗಳಿಗೆ ಈ ಗಣಗಳು ಸದಾ ವಿಘ್ನವನ್ನು ಮಾಡುವುವು.

೪೪. ಎಲೈ ಮದನ! ಮುಖ್ಯವಾಗಿ ಈ ಗಣಗಳಿಗೆ ನಿನ್ನನ್ನು ಹಿಂಬಾಲಿಸುವುದೇ ಕರ್ತವ್ಯವು, ಇವರು ಸದಾ ನಿನಗೆ ಸಹಾಯಕರಾಗಿರುವುದರಲ್ಲಿ ಸಂಶಯವಿಲ್ಲ.

೪೫. ನೀನು ನಿನ್ನ ಕಾರ್ಯಕ್ಕಾಗಿ ಯಾವಾಗ ಎಲ್ಲೆಲ್ಲಿಗೆ ಹೋದರೂ ಅಲ್ಲಿಲ್ಲಾ ನಿನ್ನೊಡನೆ ಬಂದು ಈ ಗಣಗಳು ನಿನಗೆ ಸಹಾಯಮಾಡುವರು.

೪೬. ಈ ಗಣಗಳು ಕಾಮಬಾಣಪೀಡಿತರಾದವರ ಮನಸ್ಸಿನಲ್ಲಿ ಭ್ರಾಂತಿಯನ್ನುಂಟುಮಾಡುವರು. ಮತ್ತು ಜ್ಞಾನಿಗಳ ಜ್ಞಾನಮಾರ್ಗವನ್ನೂ ಹಾಳುಮಾಡುವರು ಎಂದು ಮನ್ಮಥನಿಗೆ ಹೇಳಿದನು.

೪೭. ಬ್ರಹ್ಮನು ನಾರದನಿಗೆ ಹೇಳಿದನು :—ಎಲೈ ನಾರದಮುನಿ, ಹೀಗೆ ನಾನು ಹೇಳಿದ ಮಾತುಗಳನ್ನು ಕೇಳಿ ರತಿಯೊಡನೆಯೂ ಪರಿವಾರದೊಂದಿಗೂ ಇರುವ ಮನ್ಮಥನು ಸ್ವಲ್ಪ ಪ್ರಸನ್ನವಾದ ಮುಖವುಳ್ಳವನಾದನು.

ಶ್ರುತ್ವಾ ತೇಽಪಿ ಗಣಾಸ್ಸರ್ವೇ ಮದನಂ ಮಾಂ ಚ ಸರ್ವತಃ ।
ಪರಿವಾರ್ಯ ಯಥಾಕಾಮಂ ತಸ್ಥುಸ್ತತ್ರ ನಿಜಾಕೃತಿಂ ॥ ೪೮ ॥

ಅಥ ಬ್ರಹ್ಮಾ ಸ್ಮರಂ ಪ್ರೀತ್ಯಾಗದಂ ಮೇ ಕುರು ಶಾಸನಂ ।
ಏಭಿಸ್ಸಹೈವ ಗಚ್ಛ ತ್ವಂ ಪುನಶ್ಚ ಹರಮೋಹನೇ ॥ ೪೯ ॥

ಮನ ಆಧಾಯ ಯತ್ನಾನಿ ಕುರು ಮಾರಗಣೈಸ್ಸಹ ।
ಮೋಹೋ ಭವೇದ್ಯಥಾ ಶಂಭೋರ್ದಾರಗ್ರಹಣಹೇತವೇ ॥ ೫೦ ॥

ಇತ್ಯಾಕರ್ಣ್ಯ ವಚಃ ಕಾಮಃ ಪ್ರೋವಾಚ ವಚನಂ ಪುನಃ ।
ದೇವರ್ಷೇ ಗೌರವಂ ಮತ್ವಾ ಪ್ರಣಮ್ಯ ಶಿರಸೇನ ಮಾಂ ॥ ೫೧ ॥

॥ ಕಾಮ ಉವಾಚ ॥

ಮಯಾ ಸಮ್ಯಕ್ಕೃತಂ ಕರ್ಮ ಮೋಹನೇ ತಸ್ಯ ಯತ್ನತಃ ।
ತನ್ಮೋಹೋ ನಾಭವತ್ತಾತ ನ ಭವಿಷ್ಯತಿ ಚಾಧುನಾ ॥ ೫೨ ॥

---

೪೮. ಆ ಗಣಗಳೂ ನಹ ನನ್ನ ಮಾತುಗಳನ್ನು ಕೇಳಿ ಸಂತೋಷಗೊಂಡು ನನ್ನನ್ನೂ ಮನ್ಮಥನನ್ನೂ ಸುತ್ತುವರಿದು ತಮ್ಮಿಷ್ಟದಂತೆ ಕುಳಿತರು.

೪೯. ಬಳಿಕ ನಾನು ಮನ್ಮಥನನ್ನು ಕುರಿತು ಪ್ರೀತಿಯಿಂದ ಹೀಗೆ ಹೇಳಿದೆನು. ಎಲೈ ಮದನ, ಈ ಗಣಗಳನ್ನು ಕೂಡಿಕೊಂಡು ತಿರುಗಿ ಶಂಕರನನ್ನು ಮೋಹಗೊಳಿಸಲು ಹೊರಡು.

೫೦. ಮನಸ್ಸಿಟ್ಟು ಈ ಮಾರಗಣಗಳೊಂದಿಗೆ ಯತ್ನಮಾಡು. ಶಂಕರನು ಪತ್ನಿಯನ್ನು ಪರಿಗ್ರಹಿಸುವಂತೆ ಮೋಹಗೊಳಿಸು ಎನ್ನಲು,

೫೧. ನನ್ನ ಮಾತುಗಳನ್ನು ಕೇಳಿ ಕಾಮನು ವಿನಯದಿಂದ ಶಿರಸ್ಸನ್ನು ಬಗ್ಗಿಸಿ ನಮಸ್ಕರಿಸಿ ನನ್ನನ್ನು ಕುರಿತು ತಿರುಗಿ ಹೀಗೆ ಹೇಳಿದನು.

೫೨. ತಂದೆಯಾದ ಓ ವಿಧಿ! ನಾನು ಈವರೆಗೆ ಶಿವನನ್ನು ಮೋಹಗೊಳಿಸಲು ಬಹಳ ಯತ್ನಗಳನ್ನು ಮಾಡಿರುವೆನು. ಆದರೆ ಅವನು ಇದುವರಿಗೂ ಮೊಹಗೊಳ್ಳಲಿಲ್ಲ. ಈಗಲೂ ಅವನನ್ನು ಮೋಹಗೊಳಿಸುವುದಸಾಧ್ಯವು.

ತವ ವಾಗ್ಗೌರವಂ ಮತ್ವಾ ದೃಷ್ಟ್ವಾ ಮಾರಗಣಾನಪಿ ।
ಗಮಿಷ್ಯಾಮಿ ಪುನಸ್ತತ್ರ ಸಮಾರೋಽಹಂ ತ್ವದಾಜ್ಞಯಾ ॥ ೫೩ ॥

ಮನೋ ನಿಶ್ಚಿತಮೇತದ್ಧಿ ತಸ್ಯ ಮೋಹೋ ನ ಭವಿಷ್ಯತಿ ।
ಭಸ್ಮ ಕುರ್ಯಾಚ್ಚ ಮೇ ದೇಹಮಿತಿ ಶಂಕಾಸ್ತಿ ಮೇ ವಿಧೇ ॥ ೫೪ ॥

ಇತ್ಯುಕ್ತ್ವಾ ಸಮಧುಃ ಕಾಮಸ್ಸರತಿಸ್ಸಭಯಸ್ತದಾ ।
ಯಯೌ ಮಾರಗಣೈಸ್ಸಾರ್ಧಂ ಶಿವಸ್ಥಾನಂ ಮುನೀಶ್ವರ ॥ ೫೫ ॥

ಪೂರ್ವವತ್ಸ್ವಪ್ರಭಾವಂ ಚ ಚಕ್ರೇ ಮನಸಿಜಸ್ತದಾ ।
ಬಹೂಪಾಯಂ ಸ ಹಿ ಮಧುರ್ವಿವಿಧಾಂ ಬುದ್ಧಿಮಾವಹ ॥ ೫೬ ॥

ಉಪಾಯಂ ಸ ಚಕಾರಾತಿ ತತ್ರ ಮಾರಗಣೋಽಪಿ ಚ ।
ಮೋಹೋ ಭವನ್ನ ವೈ ಶಂಭೋರಪಿ ಕಶ್ಚಿತ್ಪರಾತ್ಮನಃ ॥ ೫೭ ॥

---

೫೩. ಆದರೆ ನಿನ್ನ ಮಾತಿನಲ್ಲಿ ಗೌರವವನ್ನಿಟ್ಟು ಈ ಮಾರಗಣಗಳನ್ನೂ ನೋಡಿ ತಿರುಗಿ ಆ ಶಿವನಿದ್ದಲ್ಲಿಗೆ ಹೋಗಿ ನಿನ್ನಪ್ಪಣೆಯಂತೆ ಯತ್ನಿಸುವೆನು.

೫೪. ಇದು ನಿಶ್ಚಯವಾದ ಮಾತು. ಶಿವನನ್ನು ಮೋಹಗೊಳಿಸುವುದಸಾಧ್ಯವು. ಆದರೆ ಆ ಶಿವನು ಕೋಪದಿಂದ ನನ್ನ ಶರೀರವನ್ನು ಭಸ್ಮಮಾಡುವನೇನೋ? ಎಂದು ಹೆದರಿಕೆಯಿರುವುದು ಎಂದನು.

೫೫-೫೬. ಎಲೈ ನಾರದ, ಹೀಗೆ ಹೇಳಿ ಮನ್ಮಥನು ರತಿ ಮತ್ತು ವಸಂತರೊಡನೆಯೂ ಮಾರಗಣಗಳೊಡನೆಯೂ ಸಹ ಹೆದರಿಕೊಂಡೇ ಶಿವನಿರುವಲ್ಲಿಗೆ ಹೋಗಿ ಅಲ್ಲಿ ಶಿವನನ್ನು ಮೋಹಗೊಳಿಸಲು ಅನೇಕ ಯತ್ನಗಳನ್ನು ಮಾಡಿದನು. ವಸಂತನೂ ಸಹ ತನ್ನ ಬುದ್ಧಿಯನ್ನುಪಯೋಗಿಸಿ ಅನೇಕ ಉಪಾಯಗಳನ್ನು ಮಾಡಿದನು.

೫೭. ಮಾರಗಣಗಳೂ ಸಹ ಅಲ್ಲಿ ಶಿವನನ್ನು ಮೋಹಗೊಳಿಸಲು ಅನೇಕ ಉಪಾಯಗಳನ್ನು ಮಾಡಿದವು. ಆದರೂ ಪರಮಾತ್ಮನಾದ ಶಿವನು ಸ್ವಲ್ಪವೂ ಮೋಹಗೊಳ್ಳಲಿಲ್ಲ.

ನಿವೃತ್ಯ ಪ್ರಸರಾಯಾತೋ ಮಮ ಸ್ಥಾನಂ ಸ್ಮರಸ್ತದಾ ।
ಆಸೀನ್ಮಾರಗಣೋಽಗರ್ವೋಽಹರ್ಷೋ ಮೇಽಪಿ ಪುರಸ್ಥಿತಃ ॥ ೫೮ ॥

ಕಾಮಃ ಪ್ರೋವಾಚ ಮಾಂ ತಾತ ಪ್ರಣಮ್ಯ ಚ ನಿರುತ್ಸವಃ ।
ಸ್ಥಿತ್ವಾ ಮಮ ಪುರೋಽಗರ್ವೋ ಮಾರೈಶ್ಚ ಮಧುನಾ ತದಾ ॥ ೫೯ ॥

ಕರ್ಮ ಪೂರ್ವಾದಧಿಕತಃ ಕೃತಂ ತನ್ಮೋಹನೇ ವಿಧೇ ।
ನಾಭವತ್ತಸ್ಯ ಮೋಹೋಽಪಿ ಕಶ್ಚಿದ್ಧ್ಯಾನಗತಾತ್ಮನಃ ॥ ೬೦ ॥

ನ ದಗ್ಧೋ ಮೇ ತನುಶ್ಚೈವ ತತ್ರ ತೇನ ದಯಾಲುನಾ ।
ಕಾರಣಂ ಪೂರ್ವಪುಣ್ಯಂ ಚ ನಿರ್ವಿಕಾರೀ ಸ ವೈ ಪ್ರಭುಃ ॥ ೬೧ ॥

ಚೇದ್ವರಸ್ತೇ ಹರೋ ಭಾರ್ಯಾಂ ಗೃಹ್ಣೀಯಾದಿತಿ ಪದ್ಮಜ ।
ಪರೋಪಾಯಂ ಕುರು ತದಾ ವಿಗರ್ವ ಇತಿ ಮೇ ಮತಿಃ ॥ ೬೨ ॥

---

೫೮. ಹಿಂತಿರುಗಿ ಮನ್ಮಥನು ಪರಿವಾರದೊಡನೆ ನನ್ನ ಬಳಿಗೆ ಬಂದನು. ನನ್ನೆದುರಿಗೆ ಬಂದ ಮಾರಗಣಗಳನ್ನು ನೋಡಿ ನನಗೂ ದುಃಖವಾಯಿತು. ನನ್ನ ಗರ್ವವೂ ನಾಶವಾಯಿತು.

೫೯-೬೦. ಗರ್ವವಿಲ್ಲದೇ ದುಃಖಿತನಾದ ಮನ್ಮಥನು ಮಾರಗಣಗಳೊಂದಿಗೂ ವಸಂತನೊಂದಿಗೂ • ನನ್ನನ್ನು ನಮಸ್ಕರಿಸಿ ಶಿವನನ್ನು ಮೋಹಗೊಳಿಸಲು ಮೊದಲಿಗಿಂತಲೂ ಹೆಚ್ಚಾಗಿ ಪ್ರಯತ್ನವನ್ನು ಮಾಡಿದೆವು. ಆದರೆ ಧ್ಯಾನವನ್ನು ಮಾಡುತ್ತಾ ಸಮಾಧಿಯಲ್ಲಿ ಕುಳಿತ ಆ ಶಿವನಿಗೆ ಸ್ವಲ್ಪವೂ ಕಾಮವಿಕಾರ ವುಂಟಾಗಲಿಲ್ಲ.

೬೧. ಕರುಣಾಮೂರ್ತಿಯಾದ ಅವನು ನನ್ನ ಶರೀರವನ್ನು ದಹಿಸಲೂ ಇಲ್ಲ. ಇದಕ್ಕೆ ನನ್ನ ಪೂರ್ವಪುಣ್ಯವೇ ಕಾರಣವು, ಅಲ್ಲದೆ ಆ ಪ್ರಭುವಾದ ಶಿವನು ಕೋಪ ಮುಂತಾದ ವಿಕಾರಗಳಿಲ್ಲದವನು,

೬೨. ಎಲೈ ಬ್ರಹ್ಮನೆ! ಶಿವನು ಪತ್ನಿಯನ್ನು ಸ್ವೀಕರಿಸಬೇಕೆಂದಿದ್ದರೆ ಈ ನಮ್ಮ ಗರ್ವವನ್ನೂ ಹಠವನ್ನೂ ಬಿಟ್ಟು ಬೇರೆ ಉಪಾಯವನ್ನು ಮಾಡುವುದು ಉತ್ತಮವು ಎಂದನು.

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಸಪರೀವಾರೋ ಯಯೌ ಕಾಮಃ ಸ್ವಮಾಶ್ರಮಂ ।
ಪ್ರಣಮ್ಯ ಮಾಂ ಸ್ಮರನ್ ಶಂಭುಂ ಗರ್ವಹಂ ದೀನವತ್ಸಲಂ ॥ ೬೩ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ
ಸತೀಖಂಡೇ ನವಮೋಽಧ್ಯಾಯಃ.

೬೩. ಬ್ರಹ್ಮನು ಹೇಳಿದನು :—ಹೀಗೆ ಹೇಳಿ ಮನ್ಮಥನು ನನಗೆ ನಮಸ್ಕರಿಸಿ, ಗರ್ವವನ್ನು ಹೋಗಲಾಡಿಸುವವನೂ, ದೀನವತ್ಸಲನೂ ಆದಂತಹ ಶಿವನನ್ನು ಸ್ಮರಿಸುತ್ತಾ ಪರಿವಾರದೊಡನೆ ತನ್ನ ಆಶ್ರಮಕ್ಕೆ ತೆರಳಿದನು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಒಂಭತ್ತನೆಯ
ಅಧ್ಯಾಯವು ಮುಗಿದುದು.

|| ಶ್ರೀಃ ||

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮಹಾಪುರಾಣೆ

## ರುದ್ರಸಂಹಿತಾಯಾಂ ಸತೀಖಂಡೇ

## ದಶಮೋಽಧ್ಯಾಯಃ

|| ನಾರದ ಉವಾಚ ||

**ಬ್ರಹ್ಮನ್ವಿಧೇ ಮಹಾಭಾಗ ಧನ್ಯಸ್ತ್ವಂ ಶಿವಸಕ್ತಧೀಃ ।**
**ಕಥಿತಂ ಸುಚರಿತ್ರಂ ಮೇ ಶಂಕರಸ್ಯ ಪರಾತ್ಮನಃ ॥ ೧ ॥**

**ನಿಜಾಶ್ರಮೇ ಗತೇ ಕಾಮೇ ಸಗಣೇ ಸರತೌ ತತಃ ।**
**ಕಿಮಾಸೀತ್ಕಿಮಕಾರ್ಷೀಸ್ತ್ವಂ ತಚ್ಚರಿತ್ರಂ ವದಾಧುನಾ ॥ ೨ ॥**

---

## ಹತ್ತನೆಯ ಅಧ್ಯಾಯವು.

೧. ನಾರದಮುನಿಯು ಹೇಳಿದನು :—ಮಹಾಮಹಿಮನಾದ ಓ ಬ್ರಹ್ಮನೇ, ಶಿವಭಕ್ತನಾದ ನೀನು ಧನ್ಯನು. ಇಂತಹ ನೀನು ಪರಮಾತ್ಮನಾದ ಶಂಕರನ ಉತ್ತಮವಾದ ಚರಿತ್ರೆಯನ್ನು ಹೇಳಿರುವೆ.

೨. ಮನ್ಮಥನು ರತಿಯೊಡನೆಯೂ ಪರಿವಾರದೊಡನೆಯೂ ತನ್ನ ಆಶ್ರಮಕ್ಕೆ ತೆರಳಲು ಬಳಿಕ ಏನಾಯಿತು ? ನೀನೇನು ಮಾಡಿದೆ ? ಆ ಮುಂದಿನ ಚರಿತ್ರೆಯನ್ನು ಈಗ ಹೇಳು ಎಂದು ಕೇಳಲು,

॥ ಬ್ರಹ್ಮೋವಾಚ ॥

ಶೃಣು ನಾರದ ಸುಪ್ರೀತ್ಯಾ ಚರಿತಂ ಶಶಿಮೌಲಿನಃ ।
ಯಸ್ಯ ಶ್ರವಣಮಾತ್ರೇಣ ನಿರ್ವಿಕಾರೋ ಭವೇನ್ನರಃ ॥ ೧ ॥

ನಿಜಾಶ್ರಮಂ ಗತೇ ಕಾಮೇ ಪರಿವಾರಸಮನ್ವಿತೇ ।
ಯದ್ಬಭೂವ ತದಾ ಜಾತಂ ತಚ್ಚರಿತ್ರಂ ನಿಬೋಧ ಮೇ ॥ ೨ ॥

ನಷ್ಟೋಽಭೂನ್ನಾರದ ಮದೋ ವಿಸ್ಮಯೋಽಭೂಚ್ಚ ಮೇ ಹೃದಿ ।
ನಿರಾನಂದಸ್ಯ ಚ ಮುನೇಽಪೂರ್ಣೇ ನಿಜಮನೋರಥೇ ॥ ೩ ॥

ಅಶೋಚಂ ಬಹುಧಾ ಚಿತ್ತೇ ಗೃಹ್ಣೀಯಾತ್ಸ ಕಥಂ ಸ್ತ್ರಿಯಂ ।
ನಿರ್ವಿಕಾರೋ ಜಿತಾತ್ಮಾ ಸ ಶಂಕರೋ ಯೋಗತತ್ಪರಃ ॥ ೪ ॥

ಇತ್ಥಂ ವಿಚಾರ್ಯ ಬಹುಧಾ ತದಾಹಂ ವಿಮದೋ ಮುನೇ ।
ಹರಿಂ ತಂ ಸೋಽಸ್ಮರಂ ಭಕ್ತ್ಯಾ ಶಿವಾತ್ಮಾನಂ ಸ್ವದೇಹದಂ ॥ ೫ ॥

೧. ಬ್ರಹ್ಮನು ಹೇಳಿದನು :—ಎಲೈ ನಾರದ, ಚಂದ್ರಶೇಖರನ ದಿವ್ಯಚರಿತ್ರೆಯನ್ನು ಹೇಳುವೆನು, ಆದರದಿಂದ ಕೇಳು. ಅದನ್ನು ಕೇಳಿದ ಮಾತ್ರದಿಂದಲೇ ನರನು ಕಾಮವಿಕಾರವಿಲ್ಲದವನಾಗುವನು.

೨ ಮನ್ಮಥನು ತನ್ನ ಪರಿವಾರದೊಡನೆ ಆಶ್ರಮಕ್ಕೆ ತೆರಳಿದಮೇಲೆ ಏನಾಯಿತೆಂಬ ಚರಿತ್ರೆಯನ್ನು ಹೇಳುವೆನು, ಕೇಳು.

೩. ಹೀಗೆ ಶಿವನನ್ನು ಮೋಹಗೊಳಿಸಲು ನನ್ನ ಮನೋರಥವು ಪೂರ್ಣವಾಗದಿರಲು, ತುಂಬಾ ದುಃಖವಾಗಿ ಗರ್ವವೆಲ್ಲಾ ಇಳಿದುಹೋಯಿತು. ಮನಸ್ಸಿನಲ್ಲಿ ತುಂಬಾ ಆಶ್ಚರ್ಯವೂ ಆಯಿತು.

೪. ಆಗ ಮನಸ್ಸಿನಲ್ಲಿ ಹೀಗೆ ಆಲೋಚಿಸಿದೆನು. ಶಿವನು ಸ್ತ್ರೀಯನ್ನು ಹೇಗೆ ಪರಿಗ್ರಹಿಸಿಯಾನು ? ಆ ಶಿವನು ಯಾವ ವಿಕಾರವೂ ಇಲ್ಲದವನು. ಜಿತೇಂದ್ರಿಯನು. ಜ್ಞಾನಯೋಗದಲ್ಲಿರುವವನು.

೫. ಹೀಗೆ ತುಂಬಾ ಆಲೋಚಿಸಿ ಆಗ ನಾನು ನನಗೆ ಶರೀರವನ್ನು ಕೊಟ್ಟವನೂ ಶಿವಸ್ವರೂಪಿಯೂ ಆದಂತಹ ವಿಷ್ಣುವನ್ನು ಭಕ್ತಿಯಿಂದ ಸ್ಮರಿಸಿದೆನು.

ಅಸ್ತವಂ ಚ ಶುಭಸ್ತೋತ್ರೈರ್ದೀನವಾಕ್ಯಸಮನ್ವಿತೈಃ ।
ತಚ್ಛ್ರುತ್ವಾ ಭಗವಾನಾಶು ಬಭೂವಾವಿರ್ಹರಿರ್ಮೇ ಪುರಃ ॥ ೮ ॥

ಚತುರ್ಭುಜೋಽರವಿಂದಾಕ್ಷಃ ಶಾರ್ಙ್ಗಧಾರೀ ಗದಾಧರಃ ।
ಲಸತ್ಪೀತಪಟಃ ಶ್ಯಾಮತನುರ್ಭಕ್ತಪ್ರಿಯೋ ಹರಿಃ ॥ ೯ ॥

ತಂ ದೃಷ್ಟ್ವಾ ತಾದೃಶಮಹಂ ಸುಶರಣ್ಯಂ ಮುಹುರ್ಮುಹುಃ ।
ಅಸ್ತವಂ ಚ ಪುನಃ ಪ್ರೇಮ್ಣಾ ಬಾಷ್ಪಗದ್ಗದಯಾ ಗಿರಾ ॥ ೧೦ ॥

ಹರಿರಾಕರ್ಣ್ಯ ತತ್ಸ್ತೋತ್ರಂ ಸುಪ್ರಸನ್ನ ಉವಾಚ ಮಾಂ ।
ದುಃಖಹಾ ನಿಜಭಕ್ತಾನಾಂ ಬ್ರಹ್ಮಾಣಂ ಶರಣಂ ಗತಂ ॥ ೧೧ ॥

॥ ಹರಿರುವಾಚ ॥

ವಿಧೇ ಬ್ರಹ್ಮನ್ಮಹಾಪ್ರಾಜ್ಞ ಧನ್ಯಸ್ತ್ವಂ ಲೋಕಕಾರಕಃ ।
ಕಿಮರ್ಥಂ ಸ್ಮರಣಂ ಮೇಽದ್ಯ ಕೃತಂ ಚ ಕ್ರಿಯತೇ ನುತಿಃ ॥ ೧೨ ॥

---

೮. ದೀನವಾಕ್ಯಗಳಿಂದಲೂ ಶುಭಸ್ತೋತ್ರಗಳಿಂದಲೂ ಆ ವಿಷ್ಣುವನ್ನು ಸ್ತೋತ್ರಮಾಡಿದೆನು. ಅದನ್ನು ಕೇಳಿ ಭಗವಂತನಾದ ಹರಿಯು ಜಾಗ್ರತೆಯಾಗಿ ನನಗೆ ಪ್ರತ್ಯಕ್ಷನಾದನು.

೯. ಭಕ್ತವತ್ಸಲನಾದ ಆ ಹರಿಯು ನಾಲ್ಕು ಬಾಹುಗಳುಳ್ಳವನಾಗಿದ್ದನು ಅವನ ನೇತ್ರಗಳು ಕಮಲದಂತಿದ್ದುವು. ಶಾರ್ಙ್ಗ ಧನುಸ್ಸು ಮತ್ತು ಗದೆಗಳನ್ನು ಧರಿಸಿದ್ದನು ಪ್ರಕಾಶಿಸುವ ಪೀತಾಂಬರವನ್ನುಟ್ಟಿದ್ದನು. ನೀಲವಾದ ಶರೀರದಿಂದ ಪ್ರಕಾಶಿಸುತ್ತಿದ್ದನು.

೧೦. ಹೀಗಿರುವ ರಕ್ಷಕನಾದ ಹರಿಯನ್ನು ನೋಡಿ ನಾನು ಭಕ್ತಿಪೂರ್ವಕವಾಗಿ ಆನಂದಬಾಷ್ಪದಿಂದ ನುಡಿಯು ತೊದಲುತ್ತಿರಲು ಪುನಃಪುನಃ ಸ್ತೋತ್ರ ಮಾಡಿದೆನು.

೧೧. ಭಕ್ತರ ದುಃಖವನ್ನು ನೀಗುವ ಹರಿಯು ನನ್ನ ಸ್ತೋತ್ರವನ್ನು ಕೇಳಿ ಪ್ರಸನ್ನನಾಗಿ ಶರಣಾಗತನಾದ ನನ್ನನ್ನು ಕುರಿತು ಹೀಗೆ ಹೇಳಿದನು.

೧೨. ಹರಿಯು ಹೇಳಿದನು :— ಮಹಾಪ್ರಾಜ್ಞನಾದ ಎಲೈ ವಿಧಿಯೇ, ಸೃಷ್ಟಿಕರ್ತನಾದ ನೀನು ಧನ್ಯನು. ಆದರೆ ಈಗ ನನ್ನನ್ನು ಸ್ಮರಿಸಿದುದೇಕೆ ? ಏತಕ್ಕಾಗಿ ನನ್ನನ್ನು ಸ್ತುತಿಸುತ್ತಲಿರುವೆ ?

ಕಿಂ ಜಾತಂ ತೇ ಮಹದ್ದುಃಖಂ ಮದಗ್ರೇ ತದ್ವದಾಧುನಾ ।
ಶಮಯಿಷ್ಯಾಮಿ ತತ್ಸರ್ವಂ ನಾತ್ರ ಕಾರ್ಯಾ ವಿಚಾರಣಾ ॥ ೧೩ ॥

॥ ಬ್ರಹ್ಮೋವಾಚ ॥

ಇತಿ ವಿಷ್ಣೋರ್ವಚಃ ಶ್ರುತ್ವಾ ಕಿಂಚಿದುಚ್ಛ್ವಸಿತಾನನಃ ।
ಅವೋಚಂ ವಚನಂ ವಿಷ್ಣುಂ ಪ್ರಣಮ್ಯ ಸುಕೃತಾಂಜಲಿಃ ॥ ೧೪ ॥

॥ ಬ್ರಹ್ಮೋವಾಚ ॥

ದೇವದೇವ ರಮಾನಾಥ ಮದ್ವಾರ್ತಾಂ ಶೃಣು ಮಾನದ ।
ಶ್ರುತ್ವಾ ಚ ಕರುಣಾಂ ಕೃತ್ವಾ ಹರ ದುಃಖಂ ಕಮಾವಹ ॥ ೧೫ ॥

ರುದ್ರಸಮ್ಮೋಹನಾರ್ಥಂ ಹಿ ಕಾಮಂ ಪ್ರೇಷಿತವಾನಹಂ ।
ಪರಿವಾರಯುತಂ ವಿಷ್ಣೋ ಸಮಾರಮಧುಬಾಂಧವಂ ॥ ೧೬ ॥

ಚಕ್ರುಸ್ತೇ ವಿವಿಧೋಪಾಯಾನ್ ನಿಷ್ಫಲಾ ಅಭವಂಶ್ಚ ತೇ ।
ನಾಭವತ್ತಸ್ಯ ಸಮ್ಮೋಹೋ ಯೋಗಿನಸ್ಸಮದರ್ಶಿನಃ ॥ ೧೭ ॥

---

೧೩. ಈಗ ನಿನಗೆ ಯಾವ ಮಹಾವಿಪತ್ತು ಬಂದಿರುವುದು ? ನನ್ನೆದುರಿಗೆ ಹೇಳು. ಅದೆಲ್ಲವನ್ನೂ ನಿಶ್ಚಯವಾಗಿ ನಾಶಗೊಳಿಸುವೆನು.

೧೪. ಹೀಗೆ ವಿಷ್ಣುವು ಹೇಳಿದ ಮಾತುಗಳನ್ನು ಕೇಳಿ ನಾನು ಸ್ವಲ್ಪ ಸಮಾಧಾನವನ್ನು ಹೊಂದಿ ಅವನನ್ನು ನಮಸ್ಕರಿಸಿ, ಅಂಜಲಿಬದ್ಧನಾಗಿ ಹೀಗೆ ಹೇಳಿದೆನು.

೧೫. ಬ್ರಹ್ಮನು ಹೇಳಿದನು :—ಲಕ್ಷ್ಮೀಪತಿಯೂ ನಮ್ಮ ಮಾನವನ್ನು ಕಾಪಾಡುವವನೂ ಆದ ಓ ಪ್ರಭುವೇ, ನನ್ನ ಸಮಾಚಾರವನ್ನು ಕೇಳು. ಬಳಿಕ ನನ್ನಲ್ಲಿ ದಯವಿಟ್ಟು ನನ್ನ ದುಃಖವನ್ನು ಹೋಗಲಾಡಿಸು.

೧೬. ರುದ್ರನನ್ನು ಮೋಹಗೊಳಿಸಲು ಮನ್ಮಥನನ್ನು ಮಾರಗಳೊಡನೆಯೂ ರತಿ ಮತ್ತು ವಸಂತರೊಡನೆಯೂ ನಾನು ಕಳುಹಿಸಿದೆನು.

೧೭. ಅವರೆಲ್ಲರೂ ರುದ್ರನ ಬಳಿಗೆ ಹೋಗಿ ಅನೇಕ ಪ್ರಯತ್ನಗಳನ್ನು ಮಾಡಿದರು. ಆದರೆ ಎಲ್ಲೆಡೆಯಲ್ಲಿಯೂ ಏಕರೂಪವಾದ ಬ್ರಹ್ಮವಸ್ತುವನ್ನು ನೋಡುತ್ತಲಿರುವ ಬ್ರಹ್ಮಸ್ವರೂಪನಾದ ಆ ಜ್ಞಾನಯೋಗಿ ಶಿವನಿಗೆ ಮೋಹವೇ ಉಂಟಾಗಲಿಲ್ಲ.

ಇತ್ಯಾಕರ್ಣ್ಯ ವಚೋ ಮೇ ಹಿ ಹರಿರ್ಮಾಂ ಪ್ರಾಹ ವಿಸ್ಮಿತಃ ।
ವಿಜ್ಞಾತಾಖಿಲದಜ್ಞಾನೀ ಶಿವತತ್ತ್ವವಿಶಾರದಃ ॥ ೧೮ ॥

॥ ವಿಷ್ಣುರುವಾಚ ॥

ಕಸ್ಮಾದ್ಧೇತೋರಿತಿ ಮತಿಸ್ತವ ಜಾತಾ ಪಿತಾಮಹ ।
ಸರ್ವಂ ವಿಚಾರ್ಯ ಸುಧಿಯಾ ಬ್ರಹ್ಮನ್ ಸತ್ಯಂ ಹಿ ತದ್ವದ ॥ ೧೯ ॥

॥ ಬ್ರಹ್ಮೋವಾಚ ॥

ಶೃಣು ತಾತ ಚರಿತ್ರಂ ತತ್ತವ ಮಾಯಾ ವಿಮೋಹಿನೀ ।
ತದಧೀನಂ ಜಗತ್ಸರ್ವಂ ಸುಖದುಃಖಾದಿತತ್ಪರಂ ॥ ೨೦ ॥

ಯಯೈವ ಪ್ರೇಷಿತಶ್ಚಾಹಂ ಪಾಪಂ ಕರ್ತುಂ ಸಮುದ್ಯತಃ ।
ಆಸಂ ತಚ್ಛೃಣು ದೇವೇಶ ವದಾಮಿ ತವ ಶಾಸನಾತ್ ॥ ೨೧ ॥

---

೧೮. ಹೀಗೆ ನಾನು ಹೇಳಿದ ಮಾತನ್ನು ಕೇಳಿ ಹರಿಯು ಆಶ್ಚರ್ಯಗೊಂಡು ಶಿವನ ಸ್ವರೂಪವನ್ನು ತಿಳಿದವನೂ ಸರ್ವಜ್ಞನೂ ಆದ ಅವನು ನನ್ನನ್ನು ಕುರಿತು ಹೀಗೆ ಹೇಳಿದನು.

೧೯. ವಿಷ್ಣುವು ಹೇಳಿದನು :—ಎಲೈ ಬ್ರಹ್ಮನೆ, ನಿನಗೆ ಏಕೆ ಇಂತಹ ಬುದ್ಧಿಯು ಉಂಟಾಯಿತು ? ಚೆನ್ನಾಗಿ ಆಲೋಚಿಸಿ ನಿಜವನ್ನು ನನಗೆ ಹೇಳು ಎನ್ನಲು,

೨೦. ಬ್ರಹ್ಮನು ಹೇಳಿದನು :—ಓ ಹರಿಯೇ, ನಡೆದ ಸಮಾಚಾರವನ್ನು ಹೇಳುವೆನು. ನಿನ್ನ ಮಾಯೆಯು ಜಗತ್ತಿಗೇ ಮೋಹವನ್ನುಂಟುಮಾಡುವಂತಹುದು. ಆ ವಿಷ್ಣುಮಾಯೆಗಧೀನವಾಗಿ ಈ ಜಗತ್ತೆಲ್ಲವೂ ಸುಖದುಃಖಗಳನ್ನು ಅನುಭವಿಸುತ್ತದೆ.

೨೧. ಆ ವಿಷ್ಣುಮಾಯೆಯ ಪ್ರೇರಣೆಯಿಂದಲೇ ಎಂದರೆ ಆ ಜ್ಞಾನದಿಂದಲೇ ಶಿವನನ್ನು ಮೋಹಗೊಳಿಸುವಂತಹ ಪಾಪಕಾರ್ಯದಲ್ಲಿ ಉದ್ಯುಕ್ತನಾದೆನು. ನಿನ್ನ ಅನುಜ್ಞೆಯಾದರೆ ಅದರ ಸಮಾಚಾರವನ್ನು ವಿಸ್ತಾರವಾಗಿ ಹೇಳುವೆನು.

ಸೃಷ್ಟಿಪ್ರಾರಂಭಸಮಯೇ ದಶಪುತ್ರಾ ಹಿ ಜಜ್ಞಿರೇ ।
ದಕ್ಷಾದ್ಯಾಸ್ತನಯಾ ಚೈಕಾ ವಾಗ್ಭವಾಪ್ಯತಿಸುಂದರೀ ॥ ೨೨ ॥

ಧರ್ಮೋ ವಕ್ಷಃಸ್ಥಲಾತ್ಕಾಮೋ ಮನಸೋಽನ್ಯೋಽಪಿ ದೇಹತಃ ।
ಜಾತಾಸ್ತತ್ರ ಸುತಾಂ ದೃಷ್ಟ್ವಾ ಮಮ ಮೋಹೋಽಭವದ್ಧರೇ ॥ ೨೩ ॥

ಕುದೃಷ್ಟ್ಯಾ ತಾಂ ಸಮುದ್ರಾಕ್ಷಂ ತವ ಮಾಯಾವಿಮೋಹಿತಃ ।
ತತ್ಕ್ಷಣಾದ್ಧರ ಆಗತ್ಯ ಮಾಮನಿಂದತ್ಸುತಾನಪಿ ॥ ೨೪ ॥

ಧಿಕ್ಕಾರಂ ಕೃತವಾನ್ ಸರ್ವಾನ್ ನಿಜಂ ಮತ್ವಾ ಪರಂ ಪ್ರಭುಂ ।
ಜ್ಞಾನಿನಂ ಯೋಗಿನಂ ನಾಥ ಭೋಗಿನಂ ವಿಜಿತೇಂದ್ರಿಯಂ ॥ ೨೫ ॥

ಪುತ್ರೋ ಭೂತ್ವಾ ಮಮ ಹರೇಽನಿಂದಂ ಮಾಂ ಚ ಸಮಕ್ಷತಃ ।
ಇತಿ ದುಃಖಂ ಮಹನ್ಮೇ ಹಿ ತದುಕ್ತಂ ತವ ಸನ್ನಿಧೌ ॥ ೨೬ ॥

೨೨. ಸೃಷ್ಟಿಯ ಪ್ರಾರಂಭದಲಿ ದಕ್ಷನೇ ಮೊದಲಾದ ಹತ್ತುಜನ ಪುತ್ರರೂ, ಓರ್ವ ಸುಂದರಿಯಾದ ಪುತ್ರಿಯೂ ನನ್ನಿಂದ ಜನಿಸಿದರು.

೨೩. ಧರ್ಮಪುರುಷನು ನನ್ನ ಹೃದಯದಿಂದ ಜನಿಸಿದನು. ಮನ್ಮಥನು ಮನಸ್ಸಿನಿಂದ ಜನಿಸಿದನು. ಇನ್ನೂ ಕೆಲವರು ನನ್ನ ಶರೀರದಿಂದ ಜನಿಸಿದರು. ಆಗ ಅತಿ ಸುಂದರಿಯಾದ ನನ್ನ ಸುತೆಯನ್ನು ನೋಡಿ ನನಗೇ ಮೋಹವುಂಟಾಯಿತು.

೨೪. ನಿನ್ನ ಮಾಯೆಗೊಳಗಾಗಿ ಕಾಮದೃಷ್ಟಿಯಿಂದ ಆ ನನ್ನ ಸುತೆಯನ್ನು ನೋಡಿದೆನು. ಆ ಕೂಡಲೇ ಶಿವನು ಅಲ್ಲಿಗೆ ಬಂದು ನನ್ನ ಪುತ್ರರನ್ನೂ ನನ್ನನ್ನೂ ನಿಂದಿಸಿದನು.

೨೫. ಆ ಶಿವನು ತಾನೇ ಪರಮಾತ್ಮನೆಂದೂ ಜ್ಞಾನಿಯೆಂದೂ ಯೋಗಿಯೆಂದೂ ವಿರಕ್ತನೆಂದೂ ಜಿತೇಂದ್ರಿಯನೆಂದೂ ಹೆಮ್ಮೆಪಟ್ಟುಕೊಂಡು ನಮ್ಮೆಲ್ಲರನ್ನೂ ನಿಂದಿಸಿದನು.

೨೬. ನನ್ನ ಪುತ್ರನಾಗಿದ್ದರೂ ಆ ಶಿವನು ನನ್ನನ್ನು ಆರೀತಿಯಾಗಿ ಎಲ್ಲರ ಎದುರಿನಲ್ಲಿ ನಿಂದಿಸಿರುವನು. ಆದುದರಿಂದ ನನಗೆ ತುಂಬಾ ದುಃಖವಾಗಿರುವುದು. ಇದನ್ನು ನಿನ್ನ ಸನ್ನಿಧಿಯಲ್ಲಿ ಅರುಹಿರುವೆನು.

ಗೃಹ್ಣೀಯಾದ್ಯದಿ ಪತ್ನೀಂ ಸ ಸ್ಯಾಂ ಸುಖೀ ನಷ್ಟದುಃಖಧೀಃ ।
ಏತದರ್ಥಂ ಸಮಾಯಾತಶ್ಶರಣಂ ತವ ಕೇಶವ ॥ ೨೭ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚೋ ಮೇ ಹಿ ಬ್ರಹ್ಮಣೋ ಮಧುಸೂದನಃ ।
ವಿಹಸ್ಯ ಮಾಂ ದ್ರುತಂ ಪ್ರಾಹ ಹರ್ಷಯನ್ ಭವಕಾರಕಂ ॥ ೨೮ ॥

॥ ವಿಷ್ಣುರುವಾಚ ॥

ವಿಧೇ ಶೃಣು ಹಿ ಮದ್ವಾಕ್ಯಂ ಸರ್ವಂ ಭ್ರಮನಿವಾರಣಂ ।
ಸರ್ವವೇದಾಗಮಾದೀನಾಂ ಸಮ್ಮತಂ ಪರಮಾರ್ಥತಃ ॥ ೨೯ ॥

ಮಹಾಮೂಢಮತಿಶ್ಚಾದ್ಯ ಸಂಜಾತೋಽಸಿ ಕಥಂ ವಿಧೇ ।
ವೇದವಕ್ತಾಪಿ ನಿಖಿಲಲೋಕಕರ್ತಾ ಹಿ ದುರ್ಮತಿಃ ॥ ೩೦ ॥

ಜಡತಾಂ ತ್ಯಜ ಮಂದಾತ್ಮನ್ ಕುರು ತ್ವಂ ನೇದೃಶೀಂ ಮತಿಂ ।
ಕಿಂ ಬ್ರುವಂತ್ಯಖಿಲಾಃ ವೇದಾಃ ಸ್ತುತ್ಯಾ ತತ್ಸ್ಮರ ತದ್ಧಿಯಾ ॥ ೩೧ ॥

---

೨೭. ಆ ಶಿವನು ಪತ್ನಿಯನ್ನು ಪರಿಗ್ರಹಿಸಿದರೆ ನಾನು ದುಃಖವಿಲ್ಲದೆ ಸುಖಿಯಾಗುವೆನು. ಎಲೈ ಕೇಶವ, ಇದಕ್ಕಾಗಿ ನಿನ್ನನ್ನು ಶರಣುಹೊಂದಿರುವೆನು ಎಂದೆನು.

೨೮. ಬ್ರಹ್ಮನು ಹೇಳಿದನು :—ಹೀಗೆ ನನ್ನ ಮಾತನ್ನು ಕೇಳಿ ಮಧುಸೂದನನು ನಕ್ಕು ನನಗೆ ಸಮಾಧಾನವನ್ನು ಮಾಡಲು ಹೀಗೆ ಹೇಳಿದನು.

೨೯. ವಿಷ್ಣುವು ಹೇಳಿದನು :—ಎಲೈ ಬ್ರಹ್ಮನೇ, ನಾನು ಹೇಳುವುದನ್ನು ಕೇಳು. ಆದರಿಂದ ನಿನ್ನ ಭ್ರಾಂತಿಯೆಲ್ಲವೂ ತೊಲಗುವುದು. ನಾನು ಹೇಳುವ ವಿಷಯವು ವೇದ ಮತ್ತು ಆಗಮಗಳಲ್ಲಿ ಪರಮಾರ್ಥವೆಂದು ನಿರೂಪಿಸಲ್ಪಟ್ಟಿದೆ

೩೦. ಎಲೈ ವಿಧಿಯೇ, ನಿನಗೆ ಇಷ್ಟು ತಿಳಿವಳಿಕೆಯಿಲ್ಲದೇ ಹೋಯಿತೇ ? ವೇದವನ್ನು ತಿಳಿದವನೂ ಮತ್ತು ಸಕಲ ಜಗತ್ತನ್ನು ಸೃಷ್ಟಿಸುವವನೂ ಆದ ನಿನಗೆ ಇಂತಹ ಕೆಟ್ಟಬುದ್ಧಿಯು ಏಕೆ ಉಂಟಾಯಿತು ?

೩೧. ಎಲೈ ಮೂಢನೇ, ಈ ಅವಿವೇಕವನ್ನು ತ್ಯಜಿಸು. ಇಂತಹ ದುರ್ಬುದ್ಧಿಯನ್ನು ಮಾಡಬೇಡ. ಎಲ್ಲಾ ವೇದಗಳೂ ಯಾವ ಪರವಸ್ತುವನ್ನು ನಿರೂಪಿಸುವುವೋ ಆ ವಸ್ತುವನ್ನು ಸ್ಮರಿಸುತ್ತಾ ಅದನ್ನು ಸ್ತುತಿಸು.

ರುದ್ರಂ ಜಾನಾಸಿ ದುರ್ಬುದ್ಧೇ ಸ್ವಸುತಂ ಪರಮೇಶ್ವರಂ ।
ವೇದವಕ್ತಾಪಿ ವಿಜ್ಞಾನಂ ವಿಸ್ಮೃತಂ ತೇऽಖಿಲಂ ವಿಧೇ ॥ ೩೨ ॥

ಶಂಕರಂ ಸುರಸಾಮಾನ್ಯಂ ಮತ್ವಾ ದ್ರೋಹಂ ಕರೋಷಿ ಹಿ ।
ಸುಬುದ್ಧಿರ್ವಿಗತಾ ತೇऽದ್ಯಾವಿರ್ಭೂತಾ ಕುಮತಿಸ್ತ್ವಿಹ ॥ ೩೩ ॥

ತತ್ತ್ವಸಿದ್ಧಾಂತಮಾಖ್ಯಾತಂ ಶೃಣು ಸದ್ಬುದ್ಧಿಮಾವಹ ।
ಯಥಾರ್ಥಂ ನಿಗಮಾಖ್ಯಾತಂ ನಿರ್ಣೀಯ ಭವಕಾರಕಂ ॥ ೩೪ ॥

ಶಿವಃ ಸರ್ವಸ್ವಕರ್ತಾ ಹಿ ಭರ್ತಾ ಹರ್ತಾ ಪರಾತ್ಪರಃ ।
ಪರಬ್ರಹ್ಮ ಪರೇಶಶ್ಚ ನಿರ್ಗುಣೋ ನಿತ್ಯ ಏವ ಚ ॥ ೩೫ ॥

ಅನಿರ್ದೇಶ್ಯೋ ನಿರ್ವಿಕಾರಃ ಪರಮಾತ್ಮಾऽದ್ವಯೋऽಚ್ಯುತಃ ।
ಅನಂತೋऽಂತಕರಃ ಸ್ವಾಮೀ ವ್ಯಾಪಕಃ ಪರಮೇಶ್ವರಃ ॥ ೩೬ ॥

೩೨. ಎಲೈ ಕೆಟ್ಟಬುದ್ಧಿಯುವನೇ, ಪರಮಾತ್ಮನಾದ ರುದ್ರನನ್ನು ನಿನ್ನ ಪುತ್ರನೆಂದು ತಪ್ಪಾಗಿ ತಿಳಿದಿರುವೆಯಲ್ಲಾ. ಅವನೇ ಪರಮಾತ್ಮನೆಂದು ನಿನಗೆ ತಿಳಿಯಲಿಲ್ಲವೇ? ವೇದವನ್ನು ತಿಳಿದವನಾದರೂ ಆ ಜ್ಞಾನವೆಲ್ಲವನ್ನು ಮರೆತೆಯಾ ?

೩೩. ಶಂಕರನು ಸಾಮಾನ್ಯದೇವನೆಂದು ತಿಳಿದು ತುಂಬಾ ದ್ರೋಹವನ್ನು ಮಾಡಿರುವೆ. ನಿನಗೆ ಒಳ್ಳೆಯ ಬುದ್ಧಿಯು ನಷ್ಟವಾಗಿ ದುರ್ಬುದ್ಧಿಯು ಉಂಟಾಗಿದೆ.

೩೪. ಸಕಲ ದರ್ಶನಗಳಲ್ಲಿರುವ ಸಿದ್ಧಾಂತವನ್ನು ಹೇಳುವೆನು ಕೇಳು. ಒಳ್ಳೆಯ ಬುದ್ಧಿಯನ್ನು ಪಡೆ. ನಿಜವಾಗಿ ಈ ಜಗತ್ತಿಗೆ ಕರ್ತೃವು ಯಾರೆಂಬುದನ್ನು ತಿಳಿದುಕೋ.

೩೫-೩೭. ಆ ಶಿವನೇ ಎಲ್ಲವನ್ನೂ ಸೃಷ್ಟಿಸುವನು, ರಕ್ಷಿಸುವನು ಮತ್ತು ಸಂಹರಿಸುವನು, ಸರ್ವೋತ್ಕೃಷ್ಟನು, ಪರಬ್ರಹ್ಮನು, ಪರಮೇಶ್ವರನು, ಯಾವ ಗುಣಗಳೂ ಇಲ್ಲದ ಶುದ್ಧಬ್ರಹ್ಮಸ್ವರೂಪನು, ನಿತ್ಯನು, ಇಂದ್ರಿಯಗಳಿಂದ ತಿಳಿಯಲಶಕ್ಯನು, ಉತ್ಪತ್ತಿಯೇ ಮೊದಲಾದ ವಿಕಾರಗಳಿಲ್ಲದವನು, ಪರಮಾತ್ಮನು, ಭೇದವಿಲ್ಲದವನು, (ಜೀವಾಭಿನ್ನಬ್ರಹ್ಮಸ್ವರೂಪನು) ನಾಶವಿಲ್ಲದವನು, ಕೊನೆಯಿಲ್ಲದವನು, ಜಗತ್ತಿಗೊಡೆಯನು, ಜಗತ್ತನ್ನು ವ್ಯಾಪಿಸಿರುವನು, ಮಾಯೆಯ ಸತ್ವರಜಸ್ತಮಸ್ಸುಗಳೆಂಬ

ಸೃಷ್ಟಿಸ್ಥಿತಿವಿನಾಶಾನಾಂ ಕರ್ತಾ ತ್ರಿಗುಣಭಾಗ್ವಿಭುಃ ।
ಬ್ರಹ್ಮವಿಷ್ಣುಮಹೇಶಾಖ್ಯೋ ರಜಸ್ಸತ್ತ್ವತಮಃ ಪರಃ ॥ ೩೭ ॥

ಮಾಯಾಭಿನ್ನೋ ನಿರೀಹಶ್ಚ ಮಾಯೋಽಮಾಯಿಾ ವಿಶಾರದಃ ।
ಸಗುಣೋಽಪಿ ಸ್ವತಂತ್ರಶ್ಚ ನಿಜಾನಂದೋಽವಿಕಲ್ಪಕಃ ॥ ೩೮ ॥

ಆತ್ಮಾರಾಮೋ ನಿರ್ದ್ವಂದ್ವೋ ಭಕ್ತಾಧೀನಸ್ಸುವಿಗ್ರಹಃ ।
ಯೋಗೀ ಯೋಗರತೋ ನಿತ್ಯಂ ಯೋಗಮಾರ್ಗಪ್ರದರ್ಶನಃ ॥ ೩೯ ॥

ಗರ್ವಾಪಹಾರೀ ಲೋಕೇಶಸ್ಸರ್ವದಾ ದೀನವತ್ಸಲಃ ।
ಏತಾದೃಶೋ ಯಃ ಸ್ವಾಮಿಾ ಸ್ವಪುತ್ರಂ ಮನ್ಯಸೇ ಹಿ ತಂ ॥ ೪೦ ॥

ಈದೃಶಂ ತ್ಯಜ ಕುಜ್ಞಾನಂ ಶರಣಂ ವ್ರಜ ತಸ್ಯ ವೈ ।
ಭಜ ಸರ್ವಾತ್ಮನಾ ಶಂಭುಃ ಸಂತುಷ್ಟಶ್ಶಂ ವಿಧಾಸ್ಯತಿ ॥ ೪೧

---

ಗುಣಗಳ ಸಿವಿ ತ್ತನಾಗಿ ಬ್ರಹ್ಮವಿಷ್ಣುರುದ್ರ ಎಂಬ ಈ ಮೂರು ರೂಪಗಳನ್ನು ಧರಿಸಿ ಜಗತ್ತಿನ ಸೃಷ್ಟಿ ಸ್ಥಿತಿ ಮತ್ತು ನಾಶಗಳನ್ನು ಮಾಡುವನು. ಆದರೆ ವಸ್ತುತಃ ಆ ಸತ್ವರಜಸ್ತಮೋಗುಣಗಳ ಸಂಬಂಧವಿಲ್ಲದವನೂ, ಆ ಗುಣಗಳ ಸಾಮ್ಯಾವಸ್ಥೆಯಾದ ಪ್ರಕೃತಿಯು ಸಂಬಂಧವಿಲ್ಲದವನೂ ಆಗಿರುವನು.

೩೮-೪೦. ಮಾಯಾಮಯವಾದ ಸ್ವರೂಪವುಳ್ಳವನಲ್ಲ ಎಂದರೆ ಪರಮಾರ್ಥವಾದ ಸ್ವರೂಪವುಳ್ಳವನು, ನಿಸ್ಪೃಹನು (ನಿತ್ಯತೃಪ್ತನು) ಮಾಯೆಯು ಸಂಬಂಧವಿಲ್ಲದವನಾದರೂ ಮಾಯಾಮಯವಾದ ಅನೇಕ ಅದ್ಭುತ ಘಟನೆಗಳನ್ನು ಪ್ರದರ್ಶಿಸುವನು, ಅನಂತಗುಣಗಳುಳ್ಳವನಂತೆ ತೋರುವನು, ಸ್ವತಂತ್ರನು, ಆನಂದಸ್ವರೂಪನು, ಅಸತ್ಯವಾದ ಸ್ವರೂಪವಿಲ್ಲದವನು, ತನ್ನ ಸ್ವರೂಪದಲ್ಲಿಯೇ ವಿಹರಿಸುವನು, ಸುಖ ದುಃಖ, ಶಿತೋಷ್ಣ ಮುಂತಾದ ದ್ವಂದ್ವಗಳಿಲ್ಲದವನು, ಸದಾ ಸುಖಸ್ವರೂಪನು, ಭಕ್ತಾಧೀನನು, ಸುಂದರವಾದ ವಿಗ್ರಹವುಳ್ಳವನು, ಯೋಗಿಯಾಗಿ ಯೋಗಾಭ್ಯಾಸವನ್ನು ಮಾಡುವನು, ಗರ್ವವನ್ನು ಹೋಗಲಾಡಿಸುವನು, ಜಗದೊಡೆಯನು, ದುಃಖಿತರಲ್ಲಿ ಸದಾ ಕರುಣೆಯುಳ್ಳವನು, ಇಂತಹ ಶಿವನನ್ನು ನೀನು ನಿನ್ನ ಸಾಮಾನ್ಯಪುತ್ರನೆಂದು ತಿಳಿದಿರುವೆಯಲ್ಲಾ.

೪೧. ಈ ಕೆಟ್ಟಬುದ್ಧಿಯನ್ನು ತ್ಯಜಿಸು. ಆ ಶಿವನನ್ನು ಶರಣುಹೊಂದು. ಸರ್ವವಿಧದಿಂದಲೂ ಅವನನ್ನು ಭಜಿಸು, ಅವನು ಸಂತುಷ್ಟನಾಗಿ ನಿನಗೆ ಸುಖವನ್ನನುಗ್ರಹಿಸುವನು.

ಗೃಹ್ಣೀಯಾಚ್ಛಂಕರಃ ಪತ್ನೀಂ ವಿಚಾರೋ ಹೃದಿ ಚೇತ್ತವ ।
ಶಿವಾಮುದ್ದಿಶ್ಯ ಸುತಪಃ ಕುರು ಬ್ರಹ್ಮನ್ ಶಿವಂ ಸ್ಮರನ್ ॥ ೪೨ ॥

ಕುರು ಧ್ಯಾನಂ ಶಿವಾಯಾಸ್ತ್ವಂ ಕಾಮಮುದ್ದಿಶ್ಯ ತಂ ಹೃದಿ ।
ಸಾ ಚೇತ್ಪ್ರಸನ್ನಾ ದೇವೇಶೀ ಸರ್ವಂ ಕಾರ್ಯಂ ಕರಿಷ್ಯತಿ ॥ ೪೩ ॥

ಕೃತ್ವಾವತಾರಂ ಸಗುಣಾ ಯದಿ ಸ್ಯಾನ್ಮಾನುಷೀ ಶಿವಾ ।
ಕಸ್ಯಚಿತ್ತನಯಾ ಲೋಕೇ ಸಾ ತತ್ಪತ್ನೀ ಭವೇದ್ಧ್ರುವಂ ॥ ೪೪ ॥

ದಕ್ಷಮಾಜ್ಞಾಪಯ ಬ್ರಹ್ಮಂಸ್ತಪಃ ಕುರ್ಯಾತ್ಪ್ರಯತ್ನತಃ ।
ತಾಮುತ್ಪಾದಯಿತುಂ ಪತ್ನೀಂ ಶಿವಾರ್ಥಂ ಭಕ್ತಿತಃ ಸ್ವತಃ ॥ ೪೫ ॥

ಭಕ್ತಾಧೀನೌ ಚ ತೌ ತಾತ ಸುವಿಜ್ಞೇಯೌ ಶಿವಾಶಿವೌ ।
ಸ್ವೇಚ್ಛಯಾ ಸಗುಣೌ ಜಾತೌ ಪರಬ್ರಹ್ಮಸ್ವರೂಪಿಣೌ ॥ ೪೬ ॥

---

೪೨. ಶಂಕರನು ಪತ್ನಿಯನ್ನು ಪರಿಗ್ರಹಿಸಲೇಬೇಕೆಂಬ ಬಯಕೆಯು ನಿನಗಿದ್ದರೆ ಶಿವಾ ಎಂದರೆ ಶಕ್ತಿದೇವಿಯನ್ನು ಕುರಿತು ಶಿವನನ್ನು ಸ್ಮರಿಸುತ್ತಾ ತಪಸ್ಸನ್ನು ಮಾಡು.

೪೩. ನಿನ್ನ ಬಯಕೆಯನ್ನುದ್ದೇಶಿಸಿ ಆ ಶಿವಶಕ್ತಿಯನ್ನು ಧ್ಯಾನಮಾಡುವವನಾಗು. ದೇವತೆಗಳಿಗೊಡೆಯಳಾದ ಆ ದೇವಿಯು ಪ್ರಸನ್ನಳಾದರೆ ನಿನ್ನ ಎಲ್ಲಾ ಕಾರ್ಯವನ್ನೂ ನೆರವೇರಿಸುವಳು.

೪೪. ಆ ದೇವಿಯು ಸಗುಣವಾದ ರೂಪವನ್ನು ಧರಿಸಿ ಲೋಕದಲ್ಲಿ ಯಾವನ ಪುತ್ರಿಯಾಗಿ ಅವತರಿಸಿದರೆ ಅವಳು ಶಿವನ ಪತ್ನಿಯಾಗಬಹುದು ? ಅದನ್ನು ಯೋಚಿಸು.

೪೫. ಎಲೈ ಬ್ರಹ್ಮನೆ, ದಕ್ಷಬ್ರಹ್ಮನಿಗೆ ಅಪ್ಪಣೆಮಾಡು. ಅವನು ದೇವಿಯನ್ನು ಕುರಿತು ಭಕ್ತಿಯಿಂದ ತಪಸ್ಸುಮಾಡಿ ಅವಳು ಶಿವನ ಪತ್ನಿಯಾಗಿ ಅವತರಿಸುವಂತೆ ಮಾಡಲಿ.

೪೬. ಪರಬ್ರಹ್ಮಸ್ವರೂಪಿಗಳಾದ ಆ ಶಿವ ಮತ್ತು ದೇವಿಯರು ಭಕ್ತಪರಾಧೀನರು. ತಮ್ಮ ಇಚ್ಛೆಯಿಂದಲೇ ಭಕ್ತರ ಇಷ್ಟಪೂರ್ತಿಗಾಗಿ ಸಗುಣವಾದ ರೂಪವನ್ನು ಧರಿಸುವರು ಎಂದು ನನಗೆ ಹಿತೋಪದೇಶವನ್ನು ಮಾಡಿದನು.

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ತತ್ಕ್ಷಣಂ ವಿಷ್ಣುಃ ಶಿವಂ ಸಸ್ಮಾರ ಸ ಪ್ರಭುಂ ।
ಕೃಪಯಾ ತಸ್ಯ ಸಂಪ್ರಾಪ್ಯ ಜ್ಞಾನಮೂಚೇ ಚ ಮಾಂ ತತಃ ॥ ೪೭ ॥

॥ ವಿಷ್ಣುರುವಾಚ ॥

ವಿಧೇ ಸ್ಮರ ಪುರೋಕ್ತಂ ಯದ್ವಚನಂ ಶಂಕರೇಣ ಹಿ ।
ಪ್ರಾರ್ಥಿತೇನ ಯದಾವಾಭ್ಯಾಮುತ್ಪನ್ನಾಭ್ಯಾಂ ತದಿಚ್ಛಯಾ ॥ ೪೮ ॥

ವಿಸ್ಮೃತಂ ತವ ತತ್ಸರ್ವಂ ಧನ್ಯಾ ಯಾ ಶಾಂಭವೀ ಪರಾ ।
ತಯಾ ಸಮ್ಮೋಹಿತಂ ಸರ್ವಂ ದುರ್ವಿಜ್ಞೇಯಾ ಶಿವಂ ವಿನಾ ॥ ೪೯ ॥

ಯದಾ ಹಿ ಸಗುಣೋ ಜಾತಃ ಸ್ವೇಚ್ಛಯಾ ನಿರ್ಗುಣಃ ಶಿವಃ ।
ಮಾಮುತ್ಪಾದ್ಯ ತತಸ್ತ್ವಾಂ ಚ ಸ್ವಶಕ್ತ್ಯಾ ಸ್ವವಿಹಾರಕೃತ್ ॥ ೫೦ ॥

ಉಪಾದಿದೇಶ ತ್ವಾಂ ಶಂಭುಃ ಸೃಷ್ಟಿಕಾರ್ಯಂ ತದಾ ಪ್ರಭುಃ ।
ತತ್ಪಾಲನಂ ಚ ಮಾಂ ಬ್ರಹ್ಮನ್ ಸೋಮಸ್ತ್ವತಿಕರೋऽವ್ಯಯಃ ॥ ೫೧ ॥

---

೪೭. ಹೀಗೆ ಹೇಳಿ ವಿಷ್ಣುವು ತನ್ನ ಪ್ರಭುವಾದ ಶಿವನನ್ನು ಸ್ಮರಿಸಿದನು. ಬಳಿಕ ಆ ಶಿವನ ಅನುಗ್ರಹದಿಂದ ಉತ್ತಮಜ್ಞಾನವನ್ನು ಪಡೆದು ನನ್ನನ್ನು ಕುರಿತು.

೪೮. ವಿಷ್ಣುವು ಹೇಳಿದನು :—ಎಲೌ ವಿಧಿಯೇ ! ಹಿಂದೆ ನಾವೀರ್ವರೂ ಆ ಶಿವನ ಇಚ್ಛೆಯಿಂದ ಜನಿಸಿ ಅವನನ್ನು ನಾವು ಪ್ರಾರ್ಥಿಸಲು ಯಾವ ಮಾತನ್ನು ನಮಗೆ ಹೇಳಿರುವನೋ ಅದನ್ನು ಈಗ ಸ್ಮರಿಸು.

೪೯. ಆದರೆ ನೀನು ಅದೆಲ್ಲವನ್ನೂ ಆ ಶಿವಶಕ್ತಿಯ ಮಹಿಮೆಯಿಂದ ಮರೆತು ಬಿಟ್ಟಿರುವೆ. ಆ ದೇವಿಯು ಸರ್ವೋತ್ಕೃಷ್ಟಳು. ಅವಳಿಂದಲೇ ಈ ಜಗತ್ತೆಲ್ಲವೂ ಮೋಹಗೊಳಿಸಲ್ಪಟ್ಟಿರುವುದು. ಶಿವನು ಹೊರತು ಆ ದೇವಿಯನ್ನು ಇನ್ನಾರೂ ತಿಳಿಯಲಾರರು.

೫೦-೫೧. ಎಲೈ ಬ್ರಹ್ಮನೆ, ಯಾವಾಗ ನಿರ್ಗುಣನಾದ ಶಿವನು ತನ್ನ ಇಚ್ಛೆಯಿಂದ ಸಗುಣಸ್ವರೂಪ (ಈಶ್ವರರೂಪ) ವನ್ನು ಧರಿಸಿದನೋ ಆಗ ಆ ಈಶ್ವರನು ನನ್ನನ್ನೂ ನಿನ್ನನ್ನೂ ತನ್ನ ಶಕ್ತಿಯಿಂದ ಸೃಷ್ಟಿಸಿದನು. ಬಳಿಕ ನಿನಗೆ ಸೃಷ್ಟಿಕ್ರಮ

ತದಾ ವಾಂ ವೇಶ್ಮ ಸಂಪ್ರಾಪ್ತೌ ಸಾಂಜಲೀ ನತಮಸ್ತಕೌ ।
ಭವ ತ್ವಮಪಿ ಸರ್ವೇಶಾವತಾರೀ ಗುಣರೂಪಧೃಕ್ ॥ ೫೨ ॥

ಇತ್ಯುಕ್ತಃ ಪ್ರಾಹ ಸ ಸ್ವಾಮೀ ವಿಹಸ್ಯ ಕರುಣಾನ್ವಿತಃ ।
ದಿವಮುದ್ವೀಕ್ಷ್ಯ ಸುಪ್ರೀತ್ಯಾ ನಾನಾಲೀಲಾವಿಶಾರದಃ ॥ ೫೩ ॥

ಮದ್ರೂಪಂ ಪರಮಂ ವಿಷ್ಣೋ ಈದೃಶಂ ಹ್ಯಂಗತೋ ವಿಧೇಃ ।
ಪ್ರಕಟೀಭವಿತಾ ಲೋಕೇ ನಾಮ್ನಾ ರುದ್ರಃ ಪ್ರಕೀರ್ತಿತಃ ॥ ೫೪ ॥

ಪೂರ್ಣರೂಪಃ ಸ ಮೇ ಪೂಜ್ಯಸ್ಸದಾ ವಾಂ ಸರ್ವಕಾಮಕೃತ್ ।
ಲಯಕರ್ತಾ ಗುಣಾಧ್ಯಕ್ಷೋ ನಿರ್ವಿಶೇಷಃ ಸುಯೋಗಕೃತ್ ॥ ೫೫ ॥

---

ವನ್ನುಪದೇಶಿಸಿದನು. ನನಗೆ ಜಗತ್ತನ್ನು ಪಾಲಿಸುವಿಕೆಯನ್ನುಪದೇಶಿಸಿದನು. ಹೀಗೆ ಆ ಶಿವನೇ ಜಗತ್ಕರ್ತೃವು.

೫೨. ಆವಾಗ ನಾವು ಆ ಪರಮೇಶ್ವರನ ಬಳಿಗೆ ಬಂದು ತಲೆಯನ್ನು ಬಗ್ಗಿಸಿ ಕೈಮುಗಿದುಕೊಂಡು ನಿಂತು " ಓ ಪರಮೇಶ್ವರ, ನೀನೂ ಸಹ ಗುಣರೂಪಗಳನ್ನು ಧರಿಸಿ ಅವತಾರವನ್ನು ಮಾಡಿ ಲೋಕೋದ್ಧಾರವಮಾಡು ಎಂದು ಪ್ರಾರ್ಥಿಸಿದೆವು.

೫೩. ಹೀಗೆ ನಾವು ಪ್ರಾರ್ಥಿಸಲು ಆ ಕರುಣಾಮೂರ್ತಿಯೂ ಅನೇಕ ಮಾಯಾ ಲೀಲೆಗಳನ್ನು ಮಾಡಬಲ್ಲವನೂ ಆದಂತಹ ಪರಮೇಶ್ವರನು ಮೇಲೆನೋಡಿ ನಕ್ಕು ಈ ರೀತಿಯಾಗಿ ಹೇಳಿದನು.

೫೪. ಪರಮೇಶ್ವರನು ಹೇಳಿದನು :—ಎಲೈ ವಿಷ್ಣು, ಈ ನನ್ನ ಸ್ವರೂಪವು ಬ್ರಹ್ಮನ ಶರೀರದಿಂದ ಸಗುಣವಾಗಿ ಅವತರಿಸುವುದು ಆ ರೂಪಕ್ಕೆ ರುದ್ರನೆಂದು ಹೆಸರು.

೫೫. ನನ್ನ ಪೂರ್ಣರೂಪನಾದ ಆ ರುದ್ರನನ್ನು ಸದಾ ನೀವು ಪೂಜಿಸಬೇಕು. ಆವನು ಸಕಲ ಕಾರ್ಯವನ್ನೂ ಮಾಡುವನು. ಜಗತ್ತನ್ನು ಸಂಹರಿಸುವನು, ಗುಣಗಳಿಗೊಡೆಯನು, ಅವ್ಯಕ್ತಬ್ರಹ್ಮಸ್ವರೂಪನು. ಒಳ್ಳೆಯ ಘಟನೆಗಳನ್ನು ಮಾಡುವನು.

ತ್ರಿದೇವಾ ಅಪಿ ಮೇ ರೂಪಂ ಹರಃ ಪೂರ್ಣೋ ವಿಶೇಷತಃ ।
ಉಮಾಯಾ ಅಪಿ ರೂಪಾಣಿ ಭವಿಷ್ಯಂತಿ ತ್ರಿಧಾ ಸುತೌ ॥ ೫೬ ॥

ಲಕ್ಷ್ಮೀರ್ನಾಮ ಹರೇಃ ಪತ್ನೀ ಬ್ರಹ್ಮಪತ್ನೀ ಸರಸ್ವತೀ ।
ಪೂರ್ಣರೂಪಾ ಸತೀ ನಾಮ ರುದ್ರಪತ್ನೀ ಭವಿಷ್ಯತಿ ॥ ೫೭ ॥

॥ ವಿಷ್ಣುರುವಾಚ ॥

ಇತ್ಯುಕ್ತ್ವಾಂತರ್ಹಿತೋ ಜಾತಃ ಕೃಪಾಂ ಕೃತ್ವಾ ಮಹೇಶ್ವರಃ ।
ಅಭೂತಾಂ ಸುಖಿನಾವಾವಾಂ ಸ್ವಸ್ವಕಾರ್ಯಪರಾಯಣೌ ॥ ೫೮ ॥

ಸಮಯಂ ಪ್ರಾಪ್ಯ ಸಸ್ತ್ರೀಕಾವಾವಾಂ ಬ್ರಹ್ಮನ್ಸಶಂಕರಃ ।
ಅವತೀರ್ಣಃ ಸ್ವಯಂ ರುದ್ರನಾಮಾ ಕೈಲಾಸಸಂಶ್ರಯಃ ॥ ೫೯ ॥

---

೫೬. ತ್ರಿಮೂರ್ತಿಗಳೂ ನನ್ನ ಸ್ವರೂಪರು. ಆದರೂ ರುದ್ರನು ನನ್ನ ಪೂರ್ಣವಾದ ಸ್ವರೂಪವುಳ್ಳವನು. ಉಮಾದೇವಿ (ಶಿವಶಕ್ತಿ) ಯಿಂದಲೂ ಮೂರು ಸಗುಣರೂಪಗಳು ಆಗುವುವು.

೫೭. ಮೊದಲನೆಯ ರೂಪವಾದ ಲಕ್ಷ್ಮಿಯು ಹರಿಯ ಪತ್ನಿಯು. ಎರಡನೆಯದಾದ ಸರಸ್ವತಿಯು ಬ್ರಹ್ಮಪತ್ನಿಯು. ಮೂರನೆಯ ರೂಪವಾದ ಸತೀದೇವಿಯು ರುದ್ರಪತ್ನಿಯು. ಈ ಮೂರು ರೂಪಗಳಲ್ಲಿ ಸತೀದೇವಿಯೇ ದೇವಿಯ ಪೂರ್ಣವಾದ ಸ್ವರೂಪವುಳ್ಳವಳು.

೫೮. ವಿಷ್ಣುವು ಹೇಳಿದನು :—ಹೀಗೆ ಪರಮೇಶ್ವರನು ನಮಗೆ ಹೇಳಿ ಅನುಗ್ರಹಿಸಿ ಅಲ್ಲಿಯೇ ಅಂತರ್ಧಾನನಾದನು. ಬಳಿಕ ನಾವು ಸಂತೋಷಗೊಂಡು ನಮ್ಮ ನಮ್ಮ ಕಾರ್ಯದಲ್ಲಿ ಆಸಕ್ತರಾದೆವು.

೫೯. ಬಳಿಕ ಕೆಲವು ಕಾಲದನಂತರ ನಾವು ಪತ್ನಿಯನ್ನು ಪರಿಗ್ರಹಿಸಿದೆವು. ಆದರೆ ಪರಮೇಶ್ವರನ ಪೂರ್ಣಾವತಾರಿಯೂ, ಕೈಲಾಸವಾಸಿಯೂ ಆದ ರುದ್ರನು ಪತ್ನಿಯನ್ನು ಪರಿಗ್ರಹಿಸಲಿಲ್ಲ.

**ಅವತೀರ್ಣಾ ಶಿವಾಭೂತ್ವಾ ಸತೀ ನಾಮ ಪ್ರಜೇಶ್ವರ ।**
**ತದುತ್ಪಾದನಹೇತೋರ್ಹಿ ಕಾರ್ಯೋ ಯತ್ನೋಽತ ಏವ ಹಿ ॥ ೬೦ ॥**

**ಇತ್ಯುಕ್ತ್ವಾಂತರ್ದಧೇ ವಿಷ್ಣುಃ ಕೃತ್ವಾ ಸ ಕರುಣಾಂ ಪರಾಂ ।**
**ಪ್ರಾಪ್ನುವಂ ಪ್ರಮುದಂ ಚಾಥ ಹ್ಯಧಿಕಂ ಗತಮತ್ಸರಃ ॥ ೬೧ ॥**

**ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಸತೀಖಂಡೇ**
**ದಶಮೋಽಧ್ಯಾಯಃ**



೬೦-೬೧. ಇನ್ನು ಮುಂದೆ ಶಿವಶಕ್ತಿಯು ಸತೀದೇವಿಯ ರೂಪದಿಂದ ಅವತರಿಸುವಳು. ಅವಳ ಅವತಾರಕ್ಕಾಗಿ ನೀನು ಯತ್ನವನ್ನು ಮಾಡು ಎಂದು ವಿಷ್ಣುವು ಹೇಳಿ ನನ್ನನ್ನು ಅನುಗ್ರಹಿಸಿ ಅಂತರ್ಧಾನನಾದನು. ಆಗ ನಾನು ಮಃಖವಿಲ್ಲದವನಾಗಿ ತುಂಬಾ ಹರ್ಷಗೊಂಡೆನು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಹತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಏಕಾದಶೋಽಧ್ಯಾಯಃ

॥ ನಾರದ ಉವಾಚ ॥

ಬ್ರಹ್ಮಂಸ್ತಾತ ಮಹಾಪ್ರಾಜ್ಞ ವದ ನೋ ವದತಾಂ ವರ ।
ಗತೇ ವಿಷ್ಣೌ ಕಿಮಭವದಕಾರ್ಷೀತ್ಕಿಂ ವಿಧೇ ಭವಾನ್ ॥ ೧ ॥

॥ ಬ್ರಹ್ಮೋವಾಚ ॥

ವಿಪ್ರನಂದನವರ್ಯ ತ್ವಂ ಸಾವಧಾನತಯಾ ಶೃಣು ।
ವಿಷ್ಣೌ ಗತೇ ಭಗವತಿ ಯದಕಾರ್ಷಮಹಂ ಖಲು ॥ ೨ ॥

---

## ಹನ್ನೊಂದನೆಯ ಅಧ್ಯಾಯವು.

೧. ನಾರದಮುನಿಯು ಪ್ರಶ್ನಿಸಿದನು :—ಮಹಾಪ್ರಾಜ್ಞನೂ, ನನ್ನ ತಂದೆಯೂ ಆದ ಓ ಬ್ರಹ್ಮನೇ, ನೀನು ಹೇಳಿದಂತೆ ವಿಷ್ಣುವು ಅಂತರ್ಧಾನನಾದ ಮೇಲೆ ಮುಂದೇನಾಯಿತು? ನೀನು ಏನು ಮಾಡಿದೆ? ಎಂದು ಕೇಳಲು,

೨. ಬ್ರಹ್ಮನು ಹೇಳಿದನು :—ಬ್ರಾಹ್ಮಣೋತ್ತಮನಾದ ಎಲೈ ನಾರದ! ಸಾವಧಾನವಾಗಿ ಕೇಳು. ವಿಷ್ಣುವು ಅಂತರ್ಧಾನನಾಗಲು ಮುಂದೆ ನಾನೇನು ಮಾಡಿದೆನೆಂಬುದನ್ನು ಹೇಳುವೆನು.

ವಿದ್ಯಾವಿದ್ಯಾತ್ಮಿಕಾಂ ಶುದ್ಧಾಂ ಪರಬ್ರಹ್ಮಸ್ವರೂಪಿಣೀಂ ।
ಸ್ತೌಮಿ ದೇವೀಂ ಜಗದ್ಧಾತ್ರೀಂ ದುರ್ಗಾಂ ಶಂಭುಪ್ರಿಯಾಂ ಸದಾ ॥ ೩ ॥

ಸರ್ವತ್ರ ವ್ಯಾಪಿನೀಂ ದೇವೀಂ ನಿರಾಲಂಬಾಂ ನಿರಾಽಽಕುಲಾಂ ।
ತ್ರಿದೇವಜನನೀಂ ವಂದೇ ಸ್ಥೂಲಾಸ್ಥೂಲಾದುರೂಪಿಣೀಂ ॥ ೪ ॥

ತ್ವಂ ಚಿತಿಃ ಪರಮಾನಂದಾ ಪರಮಾತ್ಮಸ್ವರೂಪಿಣೀ ।
ಪ್ರಸನ್ನಾ ಭವ ದೇವೇಶಿ ಮತ್ಕಾರ್ಯಂ ಕುರು ತೇ ನಮಃ ॥ ೫ ॥

॥ ಬ್ರಹ್ಮೋವಾಚ ॥

ಏವಂ ಸಂಸ್ತೂಯಮಾನಾ ಸಾ ಯೋಗನಿದ್ರಾ ಮಯಾ ಮುನೇ ।
ಆವಿರ್ಬಭೂವ ಪ್ರತ್ಯಕ್ಷಂ ದೇವರ್ಷೇ ಚಂಡಿಕಾ ಮಮ ॥ ೬ ॥

---

೩. ಆಮೇಲೆ ನಾನು ಜ್ಞಾನ ಮತ್ತು ಅಜ್ಞಾನಸ್ವರೂಪಳೂ, ಶುದ್ಧಳೂ, ಪರಮಾತ್ಮಸ್ವರೂಪಳೂ, ಜಗತ್ತಿಗೆ ಕಾರಣಳೂ, ಭಕ್ತರ ಕಷ್ಟವನ್ನು ನೀಗಿಸುವವಳೂ, ಶಂಕರನ ಪ್ರಿಯೆಯೂ ಆದಂತಹ ದೇವಿಯನ್ನು ಮುಂದೆ ಭಕ್ತಿಯಿಂದ ಧ್ಯಾನಿಸಿ ಸ್ತುತಿಸಿದೆನು.

೪. ಎಲ್ಲೆಡೆಯಲ್ಲಿಯೂ ವ್ಯಾಪಿಸಿರುವವಳೂ, ಜ್ಞಾನಸ್ವರೂಪಳೂ, ಎಲ್ಲಕ್ಕೂ ಆಧಾರಳೂ, ದುಃಖಸಂಬಂಧವಿಲ್ಲದವಳೂ, ತ್ರಿಮೂರ್ತಿಗಳಿಗೆ ಮಾತೆಯೂ, ಸ್ಥೂಲ ಸೂಕ್ಷ್ಮಸ್ವರೂಪಳೂ ಆದಂತಹ ದೇವಿಯನ್ನು ನಮಸ್ಕರಿಸುವೆನು.

೫. ಓ ದೇವಿಯೆ! ನೀನು ಜ್ಞಾನಸ್ವರೂಪಳು, ಆನಂದಸ್ವರೂಪಳು, ಪರಮಾತ್ಮಸ್ವರೂಪಳು. ಇಂತಹ ನೀನು ನನ್ನ ಕಾರ್ಯವನ್ನು ಆಗುವಂತೆ ಅನುಗ್ರಹಿಸು. ನಿನಗೆ ನಮಸ್ಕಾರವು.

೬. ಬ್ರಹ್ಮನು ಹೇಳಿದನು :—ಎಲೈ ನಾರದ! ಹೀಗೆ ನಾನು ಸ್ತುತಿಸಲು ಯೋಗನಿದ್ರಾರೂಪಳಾದ ಚಂಡಿಕಾದೇವಿಯು ನನ್ನೆದುರಿಗೆ ಪ್ರತ್ಯಕ್ಷವಾಗಿ ಆವಿರ್ಭವಿಸಿದಳು.

ಸ್ನಿಗ್ಧಾಂಜನದ್ಯುತಿಶ್ಚಾರುರೂಪಾ ದಿವ್ಯಚತುರ್ಭುಜಾ ।
ಸಿಂಹಸ್ಥಾ ವರಹಸ್ತಾ ಚ ಮುಕ್ತಾಮಣಿಕಚೋತ್ಕಟಾ　　॥ ೭ ॥

ಶರದಿಂದ್ವಾಽಽನನಾ ಶುಭ್ರಚಂದ್ರಭಾಲಾ ತ್ರಿಲೋಚನಾ ।
ಸರ್ವಾವಯವರಮ್ಯಾ ಚ ಕಮಲಾಂಘ್ರಿನಖದ್ಯುತಿಃ　　॥ ೮ ॥

ಸಮಕ್ಷಂ ತಾಮುಮಾಂ ವೀಕ್ಷ್ಯ ಮುನೇ ಶಕ್ತಿಂ ಶಿವಸ್ಯ ಹಿ ।
ಭಕ್ತ್ಯಾ ವಿನತತುಂಗಾಂಶಃ ಪ್ರಾಸ್ತವಂ ಸುಪ್ರಣಮ್ಯ ವೈ　　॥ ೯ ॥

॥ ಬ್ರಹ್ಮೋವಾಚ ॥

ನಮೋ ನಮಸ್ತೇ ಜಗತಃ ಪ್ರವೃತ್ತಿ-
ನಿವೃತ್ತಿರೂಪೇ ಸ್ಥಿತಿಸರ್ಗರೂಪೇ ।
ಚರಾಚರಾಣಾಂ ಭವತೀ ಸುಶಕ್ತಿಃ
ಸನಾತನೀ ಸರ್ವವಿಮೋಹನೀ ಚ　　॥ ೧೦ ॥

೭-೮. ಆ ದೇವಿಯು ದಟ್ಟವಾದ ಅಂಜನದಂತೆ ನೀಲವಾದ ಶರೀರಕಾಂತಿಯಿಂದಲೂ ಪುಷ್ಟವಾದ ನಾಲ್ಕು ಸುಂದರಬಾಹುಗಳಿಂದಲೂ ಒಪ್ಪುತ್ತಿದ್ದಳು. ಸಿಂಹವನ್ನೇರಿ, ಕೈಯಲ್ಲಿ ವರದಮುದ್ರೆಯನ್ನು ಪ್ರದರ್ಶಿಸುತ್ತಲಿದ್ದಳು. ಮುತ್ತುಗಳಿಂದ ಕೇಶಪಾಶವನ್ನಲಂಕರಿಸಿಕೊಂಡಿದ್ದಳು. ಶರತ್ಕಾಲದ ಪೂರ್ಣಚಂದ್ರನಂತೆ ಅವಳ ಮುಖವು ಶೋಭಿಸುತ್ತಲಿದ್ದಿತು. ಹಣೆಯಲ್ಲಿ ಚಂದ್ರಕಲೆಯು ಕಂಗೊಳಿಸುತ್ತಲಿತ್ತು. ಅವಳಿಗೆ ಮೂರು ನಯನಗಳಿದ್ದುವು. ಸರ್ವಾಂಗ ಸುಂದರಿಯಾಗಿದ್ದಳು. ಕೈಕಾಲುಗಳ ಉಗುರುಗಳು ಕಮಲದಂತೆ ಕೆಂಪಾಗಿದ್ದುವು.

೯. ಇಂತಹ ದೇವಿಯನ್ನು ಪ್ರತ್ಯಕ್ಷವಾಗಿ ನೋಡಿ ನಾನು ಶರೀರವನ್ನು ಬಗ್ಗಿಸಿ ಭಕ್ತಿಯಿಂದ ನಮಸ್ಕರಿಸಿ ಆ ಶಿವಶಕ್ತಿದೇವಿಯನ್ನು ಹೀಗೆ ಸ್ತೋತ್ರ ಮಾಡಿದೆನು.

೧೦. ಬ್ರಹ್ಮನು ಹೇಳಿದನು:—ಓ ದೇವಿಯೇ! ಜಗತ್ತಿನ ಪ್ರವೃತ್ತಿ ನಿವೃತ್ತಿಗಳು ನಿನ್ನಿಂದಲೇ ಆಗುವುವು. ಪಾಲನ ಮತ್ತು ಸೃಷ್ಟಿಗಳ ಸ್ವರೂಪಗಳು ನೀನೇ ಆಗಿರುವೆ ಜಗತ್ತಿನ ಚರಾಚರ ಪ್ರಾಣಿಗಳಲ್ಲಿನ ಕಂಡುಬರುವ ಕಾರ್ಯಶಕ್ತಿಯೂ ನೀನೇ ಆಗಿರುವೆ. ನಿನಗೆ ಆದಿಯಿಲ್ಲವು. ನೀನು ಎಲ್ಲರನ್ನೂ ಮೋಹಗೊಳಿಸುವೆ.

ಯಾಃ ಶ್ರೀ ಸದಾ ಕೇಶವಮೂರ್ತಿಮಾಯಾ
ವಿಶ್ವಂಭರಾ ಯಾ ಸಕಲಂ ಬಿಭರ್ತಿ ।
ಯಾ ತ್ವಂ ಪುರಾ ಸೃಷ್ಟಿಕರೀ ಮಹೇಶೀ
ಹರ್ತ್ರೀ ತ್ರಿಲೋಕಸ್ಯ ಪರಾ ಗುಣೇಭ್ಯಃ ॥ ೧೧ ॥

ಯಾ ಯೋಗಿನಾಂ ವೈ ಮಹಿತಾ ಮನೋಜ್ಞಾ
ಸಾ ತ್ವಂ ನಮಸ್ತೇ ಪರಮಾಣುಸಾರೇ ।
ಯಮಾದಿಪೂತೇ ಹೃದಿ ಯೋಗಿನಾಂ ಯಾ
ಯಾ ಯೋಗಿನಾಂ ಧ್ಯಾನಪಥೇ ಪ್ರತೀತಾ ॥ ೧೨ ॥

ಪ್ರಕಾಶಶುದ್ಧ್ಯಾದಿಯುತಾ ವಿರಾಗಾ
ಸಾ ತ್ವಂ ಹಿ ವಿದ್ಯಾ ವಿವಿಧಾವಲಂಬಾ ।
ಕೂಟಸ್ಥಮವ್ಯಕ್ತಮನಂತರೂಪಂ
ತ್ವಂ ಬಿಭ್ರತೀ ಕಾಲಮಯೀ ಜಗಂತಿ ॥ ೧೩ ॥

---

೧೧ ಓ ದೇವಿ! ನೀನು ಲಕ್ಷ್ಮೀರೂಪದಿಂದ ವಿಷ್ಣುವನ್ನು ಮೋಹಗೊಳಿಸುವೆ. ಮತ್ತು ಭೂದೇವಿಯ ರೂಪದಿಂದ ಜಗತ್ತೆಲ್ಲವನ್ನೂ ಧರಿಸುವೆ. ನೀನೇ ಜಗದಾದಿಯಲ್ಲಿ ಜಗತ್ತನ್ನು ಸೃಷ್ಟಿಸುವೆ. ನೀನೇ ರಕ್ಷಿಸುವೆ. ನೀನೇ ಸಂಹರಿಸುವೆ. ನೀನು ಸತ್ತ್ವರಜಸ್ತಮೋಗುಣಗಳ ಸಂಪರ್ಕವಿಲ್ಲದ ಪರಬ್ರಹ್ಮಸ್ವರೂಪಳು. ಇಂತಹ ನಿನಗೆ ನಮಸ್ಕಾರವು.

೧೨. ಓ ದೇವಿಯೇ! ನೀನು ಮಹಾಮಹಿಮಳು, ಸುಂದರಿಯು. ಚರ್ಮಚಕ್ಷುಸ್ಸುಗಳಿಂದ ತಿಳಿಯಲಶಕ್ಯಳು. ಇಂತಹ ನಿನ್ನನ್ನು ಯೋಗಿಗಳು, ಇಂದ್ರಿಯ ದಿಂದ ಪರಿಶುದ್ಧವಾದ ತಮ್ಮ ಮನಸ್ಸಿನಲ್ಲಿ ಧ್ಯಾನಿಸುವರು.

೧೩. ಓ ದೇವಿ! ನೀನು ಜ್ಞಾನಜ್ಯೋತಿಪ್ರಕಾಶಸ್ವರೂಪಳು, ಪರಿಶುದ್ಧಳು, ಸಂಸಾರಸಂಬಂಧವಿಲ್ಲದವಳು. ಇಂತಹ ನೀನು ಜಗತ್ತಿನಲ್ಲಿ ಅನೇಕ ಬಗೆಯಾದ ವಿದ್ಯಾಸ್ವರೂಪಗಳನ್ನು ಪ್ರಕಟಿಸಿರುವೆ ಮತ್ತು ನೀನು ವಿಕಾರವಿಲ್ಲದವನೂ, ಇಂದ್ರಿಯಗಳಿಗೆ ಅಗೋಚರನೂ, ನಾಶವಿಲ್ಲದವನೂ, ಅದಂತಹ ಪರಮಾತ್ಮನ ಸ್ವರೂಪಳು ಮತ್ತು ನೀನು ಪ್ರಳಯಕಾಲದಲ್ಲಿ ಜಗತ್ತೆಲ್ಲವನ್ನೂ ನಿನ್ನಲ್ಲಿ ಸೇರಿಸಿಕೊಳ್ಳುವೆ.

ವಿಕಾರಬೀಜಂ ಪ್ರಕರೋಷಿ ನಿತ್ಯಂ
ಗುಣಾನ್ವಿತಾ ಸರ್ವಜನೇಷು ನೂನಂ ।
ತ್ವಂ ವೈ ಗುಣಾನಾಂ ಚ ಶಿವೇ ತ್ರಯಾಣಾಂ
ನಿದಾನಭೂತಾ ಚ ತತಃ ಪರಾऽಸಿ ॥ ೧೪ ॥

ಸತ್ತ್ವಂ ರಜಸ್ತಾಮಸ ಇತ್ಯಮೀಷಾಂ
ವಿಕಾರಹೀನಾ ಸಮುವಸ್ಥಿತಿರ್ಯಾ ।
ಸಾ ತ್ವಂ ಗುಣಾನಾಂ ಜಗದೇಕಹೇತುಃ
ಬಾಹ್ಯಾಂತರಾರಂಭಸಿ ಪಾಸಿ ಚಾತ್ಸಿ ॥ ೧೫ ॥

ಅಶೇಷಜಗತಾಂ ಬೀಜೇ ಜ್ಞೇಯಜ್ಞಾನಸ್ವರೂಪಿಣಿ ।
ಜಗದ್ಧಿತಾಯ ಸತತಂ ಶಿವಪತ್ನಿ ನಮೋऽಸ್ತು ತೇ ॥ ೧೬ ॥

॥ ಬ್ರಹ್ಮೋವಾಚ ॥

ಇತ್ಯಾऽऽಕರ್ಣ್ಯ ವಚಸ್ಸಾ ಮೇ ಕಾಲೀ ಲೋಕವಿಭಾವಿನೀ ।
ಪ್ರೀತ್ಯಾ ಮಾಂ ಜಗತಾಮೂಚೇ ಪ್ರಸ್ತಾರಂ ಘನಶಬ್ದವತ್ ॥ ೧೭ ॥

---

೧೪. ಓ ಶಿವೆ! ನೀನು ಸಗುಣರೂಪಳಾಗಿದ್ದು ನಿತ್ಯವೂ ಜನಗಳಲ್ಲಿ ನಿನ್ನ ಮಾಯೆಯಿಂದ ಅಜ್ಞಾನವನ್ನು ಹರಡುವೆ, ವಿಕಾರವನ್ನು ಬೆಳೆಸುವೆ. ಸತ್ತ್ವರಜಸ್ತಮೋಗುಣಗಳು ನಿನ್ನಿಂದಲೇ ಜನಿಸುವುವು. ಆದುದರಿಂದ ನೀನು ಆ ಗುಣಗಳಿಗಿಂತ ಭಿನ್ನಳಾಗಿರುವೆ.

೧೫. ಓ ದೇವಿ! ಸೃಷ್ಟಿಗೆ ಮೊದಲು ನಿನ್ನಲ್ಲಿ ಸತ್ತ್ವರಜಸ್ತಮಸ್ಸೆಂಬ ಗುಣಗಳು ವಿಕಾರವಿಲ್ಲದೆ ಸಮವಾಗಿರುವುವು. ಆ ಗುಣಗಳ ಸಾಮ್ಯಾವಸ್ಥೆಯು ಸ್ವರೂಪವೇ ನೀನಾಗಿರುವೆ, ಇಂತಹ ನೀನು ಮುಂದೆ ಆ ಗುಣಗಳ ಮೂಲಕ ಜಗತ್ತೆಲ್ಲವನ್ನೂ ಸೃಷ್ಟಿಸುವೆ, ರಕ್ಷಿಸುವೆ, ಕೊನೆಗೆ ಸಂಹರಿಸುವೆ.

೧೬. ಹೀಗೆ ಸಕಲ ಜಗತ್ತಿಗೂ ಕಾರಣಳಾದ ಓ ದೇವಿ! ನಿನಗೆ ನಮಸ್ಕಾರವು. ನೀನು ಜ್ಞಾನಸ್ವರೂಪಳು, ಮತ್ತು ವಿಷಯಸ್ವರೂಪಳು. ಓ ಶಿವಶಕ್ತಿಯೇ, ಜಗತ್ತಿಗೆ ಕಲ್ಯಾಣವನ್ನು ಮಾಡುವ ನಿನಗೆ ಸದಾ ನಮಸ್ಕಾರವು.

೧೭. ಬ್ರಹ್ಮನು ಹೇಳಿದನು: —ಈ ರೀತಿಯಾದ ನನ್ನ ಸ್ತುತಿಯನ್ನು ಕೇಳಿ ಜಗತ್ಕಾರಣಳಾದ ಕಾಳೀದೇವಿಯು ಪ್ರಸನ್ನಳಾಗಿ ಮೇಘಧ್ವನಿಯಂತೆ ಗಂಭೀರವಾದ ಧ್ವನಿಯಿಂದ ನನ್ನನ್ನು ಕುರಿತು,

॥ ದೇವ್ಯುವಾಚ ॥

ಬ್ರಹ್ಮನ್ ಕಿಮರ್ಥಂ ಭವತಾ ಸ್ತುತಾಽಹಮವಧಾರಯ ।
ಉಚ್ಯತಾಂ ಯದಿ ಧೃಷ್ಯೋಽಸಿ ತಚ್ಛೀಘ್ರಂ ಪುರತೋ ಮಮ ॥ ೧೮ ॥

ಪ್ರತ್ಯಕ್ಷಮಪಿ ಜಾತಾಯಾಂ ಸಿದ್ಧಿಃ ಕಾರ್ಯಸ್ಯ ನಿಶ್ಚಿತಾ ।
ತಸ್ಮಾತ್ತ್ವಂ ವಾಛಿತಂ ಬ್ರೂಹಿ ಯಾ ಕರಿಷ್ಯಾಮಿ ಭಾವಿತಾ ॥ ೧೯ ॥

॥ ಬ್ರಹ್ಮೋವಾಚ ॥

ಶೃಣು ದೇವಿ ಮಹೇಶಾನಿ ಕೃಪಾಂ ಕೃತ್ವಾ ಮಮೋಪರಿ ।
ಮನೋರಥಂ ತಂ ಸರ್ವಜ್ಞೇ ಪ್ರವದಾಮಿ ತ್ವದಾಜ್ಞಯಾ ॥ ೨೦ ॥

ಯಃ ಪತಿಸ್ತವ ದೇವೇಶಿ ಲಲಾಟಾನ್ಮೇಽಭವತ್ಪುರಾ ।
ಶಿವೋ ರುದ್ರಾಖ್ಯಯಾ ಯೋಗೀ ಸ ವೈ ಕೈಲಾಸಮಾಸ್ಥಿತಃ ॥ ೨೧ ॥

---

೧೮. ದೇವಿಯು ಹೇಳಿದಳು :—ಎಲೈ ಬ್ರಹ್ಮನೇ! ಏತಕ್ಕಾಗಿ ನೀನು ನನ್ನನ್ನು ಸ್ತುತಿಸುತ್ತಿರುವೆ? ಅಸಾಧ್ಯವಾದಂತಹ ಅದಾವ ಕಾರ್ಯವು ಬಂದೊದಗಿರುವುದು? ಈ ಕೂಡಲೇ ಅದನ್ನು ನನಗೆ ಹೇಳು.

೧೯. ನಾನು ಪ್ರತ್ಯಕ್ಷಳಾದಮೇಲೆ ನಿನ್ನ ಕಾರ್ಯವು ನಿಶ್ಚಯವಾಗಿ ಸಿದ್ಧಿಸುವುದು. ಆದುದರಿಂದ ನಾನು ಮಾಡಬೇಕಾದ ನಿನ್ನ ಇಷ್ಟಕಾರ್ಯವಾವುದು? ಎಂಬುದನ್ನು ಹೇಳು ಎಂದಳು.

೨೦. ಬ್ರಹ್ಮನು ಹೇಳಿದನು :—ಓ ದೇವಿ, ಪರಮೇಶ್ವರಿ! ನನ್ನಲ್ಲನುಗ್ರಹವನ್ನಿರಿಸಿ ನಾನು ಹೇಳುವುದನ್ನು ದಯವಿಟ್ಟು ಕೇಳು. ನೀನು ಎಲ್ಲವನ್ನೂ ಬಲ್ಲ ಸರ್ವಜ್ಞಳು. ಆದರೂ ನಿನ್ನ ಅಪ್ಪಣೆಯಂತೆ ನನ್ನ ಮನಸ್ಸಿನಲ್ಲಿದ್ದುದನ್ನು ಹೇಳುವೆನು.

೨೧. ಓ ದೇವಿ, ನಿನ್ನ ಪ್ರಿಯನಾದ ಶಿವನು ನನ್ನ ಲಲಾಟದಿಂದ ರುದ್ರರೂಪನಾಗಿ ಅವತರಿಸಿರುವನು. ಆ ರುದ್ರನು ಮಹಾಯೋಗಿಯಾಗಿದ್ದು ಕೈಲಾಸಪರ್ವತದಲ್ಲಿರುವನು.

ತಪಶ್ಚರತಿ ಭೂತೇಶ ಏಕ ಏವಾವಿಕಲ್ಪಕಃ ।
ಅಪತ್ನೀಕೋ ನಿರ್ವಿಕಾರೋ ನ ದ್ವಿತೀಯಾಂ ಸಮಾಹತೇ ॥ ೨೨ ॥

ತಂ ಮೋಹಯ ಯಥಾ ಚಾನ್ಯಾಂ ದ್ವಿತೀಯಾಂ ಸತಿ ವೀಕ್ಷತಿ ।
ತ್ವದೃತೇ ತಸ್ಯ ನೋ ಕಾಚಿದ್ಭವಿಷ್ಯತಿ ಮನೋಹರಾ ॥ ೨೩ ॥

ತಸ್ಮಾತ್ತ್ವಮೇವ ರೂಪೇಣ ಭವಸ್ವ ಹರಮೋಹಿನೀ ।
ಸುತಾ ಭೂತ್ವಾ ಚ ದಕ್ಷಸ್ಯ ರುದ್ರಪತ್ನೀ ಶಿವೇ ಭವ ॥ ೨೪ ॥

ಯಥಾ ಧೃತಶರೀರಾ ತ್ವಂ ಲಕ್ಷ್ಮೀರೂಪೇಣ ಕೇಶವಂ ।
ಆಮೋದಯಸಿ ವಿಶ್ವಸ್ಯ ಹಿತಾಯೈನಂ ತಥಾ ಕುರು ॥ ೨೫ ॥

ಕಾಂತಾಭಿಲಾಷಮಾತ್ರಂ ಮೇ ದೃಷ್ಟ್ವಾಽನಿಂದದ್ವೃಷಧ್ವಜಃ ।
ಸ ಕಥಂ ವನಿತಾಂ ದೇವಿ ಸ್ವೇಚ್ಛಯಾ ಸಂಗ್ರಹೀಷ್ಯತಿ ॥ ೨೬ ॥

---

೨೨. ಪತ್ನಿಯನ್ನು ಪರಿಗ್ರಹಿಸದೇ ಆ ರುದ್ರನು ಸಂಸಾರವಿಮುಖನಾಗಿ ಯಾವ ವಿಕಾರವೂ ಇಲ್ಲದೆ ಓರ್ವನೇ ತಪಸ್ಸನ್ನಾಚರಿಸುತ್ತಲಿರುವನು. ಅವನು ಪತ್ನಿಯನ್ನು ಅಪೇಕ್ಷಿಸುವುದೇ ಇಲ್ಲ.

೨೩. ಆ ರುದ್ರನು ಪತ್ನಿಯನ್ನು ಪರಿಗ್ರಹಿಸಲಿಚ್ಛಿಸುವಂತೆ ನೀನು ಅವನನ್ನು ಮೋಹಗೊಳಿಸಬೇಕು. ನಿನ್ನ ಹೊರತು ಆ ಶಿವನ ಮನಸ್ಸನ್ನು ಇನ್ನಾವ ಸ್ತ್ರೀಯೂ ಅಪಹರಿಸಲಾರಳು.

೨೪. ಆದುದರಿಂದ ಓ ದೇವಿಯೇ, ನೀನೇ ಅವತರಿಸಿ ಆ ರುದ್ರನನ್ನು ಮೋಹಗೊಳಿಸು. ದಕ್ಷಬ್ರಹ್ಮನ ಸುತೆಯಾಗಿ ಜನಿಸಿ ರುದ್ರನನ್ನು ಪತಿಯಾಗಿ ವರಿಸು.

೨೫. ನೀನು ಲಕ್ಷ್ಮೀರೂಪದಿಂದ ಅವತರಿಸಿ ಹರಿಯನ್ನು ಮೋಹಗೊಳಿಸಿರುವಂತೆ ರುದ್ರನನ್ನೂ ಲೋಕಹಿತಕ್ಕಾಗಿ ಮೋಹಗೊಳಿಸು.

೨೬. ನಾನು ಸ್ತ್ರೀಯಲ್ಲಿ ಅಭಿಲಾಷೆಗೊಂಡಿರುವುದನ್ನು ನೋಡಿ ಆ ರುದ್ರನು ನನ್ನನ್ನು ನಿಂದಿಸಿರುವನು. ಇಂತಹವನು ತನ್ನ ಇಚ್ಛೆಯಿಂದ ಹೇಗೆ ತಾನೇ ಕಾಮಿನಿಯನ್ನು ಪರಿಗ್ರಹಿಸುವನು?

ಹರೇಽಗೃಹೀತಕಾಂತೇ ತು ಕಥಂ ಸೃಷ್ಟಿಶ್ಶುಭಾವಹಾ ।
ಆದ್ಯಂತಮಧ್ಯೇ ಚೈತಸ್ಯ ಹೇತೌ ತಸ್ಮಿನ್ ವಿರಾಗಿಣಿ ॥ ೨೭ ॥

ಇತಿ ಚಿಂತಾಪರೋ ನಾಽಹಂ ತ್ವದನ್ಯಂ ಶರಣಂ ಹಿತಂ ।
ಲಬ್ಧವಾಂಸ್ತೇನ ವಿಶ್ವಸ್ಯ ಹಿತಾಯೈತತ್ಕುರುಷ್ವ ಮೇ ॥ ೨೮ ॥

ನ ವಿಷ್ಣುಸ್ತಸ್ಯ ಮೋಹಾಯ ನ ಲಕ್ಷ್ಮೀರ್ನ ಮನೋಭವಃ ।
ನ ಚಾಪ್ಯಹಂ ಜಗನ್ಮಾತರ್ನಾನ್ಯಸ್ತ್ವಾಂ ಕೋಽಪಿ ವೈ ವಿನಾ ॥ ೨೯ ॥

ತಸ್ಮಾತ್ತ್ವಂ ದಕ್ಷಜಾ ಭೂತ್ವಾ ದಿವ್ಯರೂಪಾ ಮಹೇಶ್ವರಿ ।
ತತ್ಪತ್ನೀ ಭವ ಮದ್ಭಕ್ತ್ಯಾ ಯೋಗಿನಂ ಮೋಹಯೇಶ್ವರಂ ॥ ೩೦ ॥

ದಕ್ಷಸ್ತಪತಿ ದೇವೇಶಿ ಕ್ಷೀರೋದೋತ್ತರತೀರಗಃ ।
ತ್ವಾಮುದ್ದಿಶ್ಯ ಸಮಾಧಾಯ ಮನಸ್ತ್ವಯಿ ದೃಢವ್ರತಃ ॥ ೩೧ ॥

---

೨೭. ಆ ರುದ್ರನು ಪತ್ನಿಯನ್ನು ಪರಿಗ್ರಹಿಸದಿದ್ದರೆ ಈ ಸೃಷ್ಟಿಯು ಸುಖವಾಗಿ ಹೇಗೆ ಸಾಗುವುದು ? ಆ ಸೃಷ್ಟಿಯ ಆದಿಮಧ್ಯಾಂತಗಳಿಗೆ ಕಾರಣನಾದ ಆ ರುದ್ರನು ವಿರಕ್ತನಾದರೆ ಅದೆಲ್ಲವೂ ನಡೆಯುವುದು ಹೇಗೆ ?

೨೮. ಈ ರೀತಿಯಾದ ಚಿಂತೆಗೊಳಗಾಗಿ ನಾನು ಇನ್ನಾವ ಗತಿಯನ್ನೂ ಕಾಣದೆ ನಿನ್ನನ್ನೇ ಶರಣುಹೊಂದಿರುವೆನು. ಆದಕಾರಣ ಓ ದೇವಿ, ಲೋಕಕ್ಷೇಮಕ್ಕಾಗಿ ನಾನು ಹೇಳಿದುದನ್ನು ನೆರವೇರಿಸು.

೨೯. ವಿಷ್ಣುವೂ ಆ ರುದ್ರನನ್ನು ಮೋಹಗೊಳಿಸಲಾರನು. ಲಕ್ಷ್ಮಿಯಾಗಲಿ, ಮನ್ಮಥನಾಗಲಿ, ನಾನಾ (ಬ್ರಹ್ಮನಾ) ಗಲಿ ಮೋಹಗೊಳಿಸಲಾರೆವು. ನಿನ್ನ ಹೊರತು ಯಾರೂ ಆ ರುದ್ರನನ್ನು ಮೋಹಗೊಳಿಸಲಾರರು.

೩೦. ಆದುದರಿಂದ ಓ ದೇವಿ, ನೀನು ದಿವ್ಯವಾದ ರೂಪವುಳ್ಳವಳಾಗಿ ದಕ್ಷನ ಪುತ್ರಿಯಾಗಿ ಜನಿಸಿ ಆ ರುದ್ರನ ಪತ್ನಿಯಾಗು. ಮಹಾಯೋಗಿಯಾದ ಅವನನ್ನು ನಿನ್ನ ಭಕ್ತನಾದ ನನಗಾಗಿ ಮೋಹಗೊಳಿಸು.

೩೧. ಓ ಪರಮೇಶ್ವರಿ, ದಕ್ಷನು ಮನಸ್ಸನ್ನು ಸ್ಥಿರೀಕರಿಸಿ ಜಿತೇಂದ್ರಿಯನಾಗಿ ಬಹುವಾದ ನಿಯಮದಿಂದ ಕ್ಷೀರಸಾಗರದ ಉತ್ತರತೀರದಲ್ಲಿ ನಿನ್ನನ್ನುದ್ದೇಶಿಸಿ ತಪಸ್ಸು ಮಾಡುತ್ತಲಿರುವನು ಎಂದೆನು.

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ಸಾ ಮೇ ಚಿಂತಾಮಾಪ ಶಿವಾ ತದಾ ।
ಉವಾಚ ಚ ಸ್ವಮನಸಿ ವಿಸ್ಮಿತಾ ಜಗದಂಬಿಕಾ ॥ ೩೨ ॥

॥ ದೇವ್ಯುವಾಚ ॥

ಅಹೋ ಸುಮಹದಾಶ್ಚರ್ಯಂ ವೇದವಕ್ತಾಪಿ ವಿಶ್ವಕೃತ್ ।
ಮಹಾಜ್ಞಾನಪರೋ ಭೂತ್ವಾ ವಿಧಾತಾ ಕಿಂ ವದತ್ಯಯಂ ॥ ೩೩ ॥

ವಿಧೇಶ್ಚೇತಸಿ ಸಂಜಾತೋ ಮಹಾಮೋಹೋಽಸುಖಾವಹಃ ।
ಯದ್ವರಂ ನಿರ್ವಿಕಾರಂ ತಂ ಸರ್ವೋತ್ತಮಂ ಮೋಹಯಿತುಮಿಚ್ಛತಿ ॥ ೩೪ ॥

ಹರಮೋಹವರಂ ಮತ್ತಃ ಸಮಿಚ್ಛತಿ ವಿಧಿಸ್ತ್ವಯಂ ।
ಕೋ ಲಾಭೋಽಸ್ಯಾತ್ರ ಸ ವಿಭುರ್ನಿರ್ಮೋಹೋ ನಿರ್ವಿಕಲ್ಪಕಃ ॥ ೩೫ ॥

---

೩೨. ಬ್ರಹ್ಮನು ಹೇಳಿದನು:—ಜಗನ್ಮಾತೆಯಾದ ದೇವಿಯು ನಾನು ಹೇಳಿದ ಮಾತುಗಳನ್ನು ಕೇಳಿ ತುಂಬಾ ಆಶ್ಚರ್ಯಗೊಂಡಳು. ಮನಸ್ಸಿನಲ್ಲಿ ಹೀಗೆ ಆಲೋಚಿಸಿ,

೩೩. ದೇವಿಯು ಹೇಳಿದಳು :—ಓಹೋ ! ತುಂಬಾ ಆಶ್ಚರ್ಯವು. ಈ ಬ್ರಹ್ಮನು ವೇದವಕ್ತೃವೂ, ಮಹಾಜ್ಞಾನಿಯೂ ಆಗಿದ್ದರೂ ಇದೇನು ಹೀಗೆ ಹೇಳುತ್ತಲಿರುವನು ?

೩೪. ಈ ಬ್ರಹ್ಮನು ಯಾವ ವಿಕಾರಗಳೂ ಇಲ್ಲದವನೂ ಸರ್ವೋತ್ತಮನೂ ಆದ ರುದ್ರನನ್ನು ಮೋಹಗೊಳಿಸಲಿಚ್ಛಿಸುವನು. ಆದುದರಿಂದ ಈ ಬ್ರಹ್ಮನ ಮನಸ್ಸಿನಲ್ಲಿ ಅನಿಷ್ಟಕರವಾದ ಮಹಾಮೋಹವು ಉತ್ಪನ್ನವಾಗಿರುವುದು.

೩೫. ನಾನು (ದೇವಿಯು) ಶಿವನನ್ನು ಮೋಹಗೊಳಿಸಬೇಕೆಂದು ಈ ವಿಧಿಯು ವರವನ್ನು ಕೇಳುತ್ತಲಿರುವನು. ಇದರಿಂದ ಇವನಿಗಾಗುವ ಲಾಭವೇನು ? ಜಗದೊಡೆಯನಾದ ಆ ರುದ್ರನಾದರೋ ಮಹಾಯೋಗಿಯೂ, ಜಿತೇಂದ್ರಿಯೂ ಮೋಹವಿಲ್ಲದವನೂ ಆಗಿರುವನು.

**ಪರಬ್ರಹ್ಮಾಖ್ಯೋ ಯಶ್ಶಂಭುರ್ನಿರ್ಗುಣೋ ನಿರ್ವಿಕಾರವಾನ್ ।**
**ತಸ್ಯಾಹಂ ಸರ್ವದಾ ದಾಸೀ ತದಾಜ್ಞಾವಶಗಾ ಸದಾ ॥ ೩೬ ॥**

**ಸ ಏವ ಪೂರ್ವರೂಪೇಣ ರುದ್ರನಾಮಾಭವಚ್ಛಿವಃ ।**
**ಭಕ್ತೋದ್ಧಾರಣಹೇತೋರ್ಹಿ ಸ್ವತಂತ್ರಃ ಪರಮೇಶ್ವರಃ ॥ ೩೭ ॥**

**ಹರೇರ್ವಿಧೇಶ್ಚ ಸ ಸ್ವಾಮೀ ಶಿವಾನ್ನ್ಯೂನೋ ನ ಕರ್ಹಿಚಿತ್ ।**
**ಯೋಗಾಧಾರೋ ಹ್ಯಮಾಯಸ್ಥೋ ಮಾಯೇಶಃ ಪರತಃ ಪರಃ ॥ ೩೮ ॥**

**ಮತ್ವಾ ತಮಾತ್ಮಜಂ ಬ್ರಹ್ಮಾ ಸಾಮಾನ್ಯಸುರಸನ್ನಿಭಂ ।**
**ಇಚ್ಛತ್ಯಯಂ ಮೋಹಯಿತುಮತೋಽಜ್ಞಾನವಿಮೋಹಿತಃ ॥ ೩೯ ॥**

**ನ ದದ್ಯಾಚ್ಚೇದ್ವರಂ ವೇದನೀತಿರ್ಭ್ರಷ್ಟಾ ಭವೇದಿತಿ ।**
**ಕಿಂ ಕುರ್ಯಾಂ ಯೇನ ನ ವಿಭುಃ ಕ್ರುದ್ಧಃ ಸ್ಯಾನ್ಮೇ ಮಹೇಶ್ವರಃ ॥ ೪೦ ॥**

---

೩೬. ಪರಬ್ರಹ್ಮಸ್ವರೂಪನಾದ ಆ ಶಂಕರನು ಪ್ರಕೃತಿಸಂಬಂಧವಾದ ಯಾವ ಗುಣಗಳೂ ಇಲ್ಲದ ಪರಬ್ರಹ್ಮಸ್ವರೂಪನು ಮತ್ತು ಯಾವ ವಿಕಾರಗಳೂ ಇಲ್ಲದವನು. ಆ ಶಂಕರನಿಗೆ ನಾನು ಪರಿಚಾರಕಳು. ಅವನ ಅಪ್ಪಣೆಯಂತೆ ಸದಾ ನಡೆಯತಕ್ಕವಳು.

೩೭. ಸ್ವತಂತ್ರನಾದ ಆ ಪರಮೇಶ್ವರನೇ ಭಕ್ತರನ್ನುದ್ಧರಿಸಲೋಸುಗ ರುದ್ರ ರೂಪದಿಂದ ಅವತರಿಸಿರುವನು.

೩೮. ಆ ಶಿವನು ಹರಿಗೂ ವಿಧಿಗೂ ಸ್ವಾಮಿಯು. ಶಿವನಿಗಿಂತಲೂ ಉತ್ಕೃಷ್ಟ ನಾದವನು ಇನ್ನಾರೂ ಇಲ್ಲ. ಅವನು ಯೋಗದಿಂದ ಪಡೆಯತಕ್ಕವನು. ಅವನಿಗೆ ಮಾಯಾಸಂಬಂಧವಿಲ್ಲ. ಆದರೂ ಆ ಮಾಯೆಯನ್ನು ತನ್ನ ಅಧೀನದಲ್ಲಿಟ್ಟುಕೊಂಡಿರು ವನು. ಮಾಯೆಗಿಂತಲೂ ಅವನು ಹೆಚ್ಚಿನವನು.

೩೯. ಇಂತಹ ಶಿವನನ್ನು ತಿಳಿವಳಿಕೆಯಿಲ್ಲದೆ ತನ್ನ ಪುತ್ರನೆಂದೂ ಸಾಮಾನ್ಯ ದೇವನೆಂದೂ ತಿಳಿದು ಮೋಹಗೊಳಿಸಲು ಉದ್ಯುಕ್ತನಾಗಿರುವನು.

೪೦. ನಾನು ವರವನ್ನು ಕೊಡದಿದ್ದರೆ ದೇವಿಯನ್ನು ಧ್ಯಾನಿಸಿದರೆ ಬೇಕಾದು ದನ್ನು ಪಡೆಯಬಹುದು ಎಂಬ ವೇದನೀತಿಯು ಸುಳ್ಳಾಗುವುದು. ವರವನ್ನು ಕೊಟ್ಟರೆ ನನ್ನ ಸ್ವಾಮಿಯಾದ ಆ ಶಿವನು ಕೋಪಗೊಳ್ಳುವನೋ ಏನೋ ? ಆದ ಕಾರಣ ನಾನು ಈಗೇನು ಮಾಡಲಿ ?

॥ ಬ್ರಹ್ಮೋವಾಚ ॥

ವಿಚಾರ್ಯೇತ್ಥಂ ಮಹೇಶಂ ತಂ ಸಸ್ಮಾರ ಮನಸಾ ಶಿವಾ ।
ಪ್ರಾಪಾನುಜ್ಞಾಂ ಶಿವಸ್ಯಾಥೋವಾಚ ದುರ್ಗಾ ಚ ಮಾಂ ತದಾ ॥ ೪೧ ॥

॥ ದುರ್ಗೋವಾಚ ॥

ಯದುಕ್ತಂ ಭವತಾ ಬ್ರಹ್ಮನ್ ಸಮಸ್ತಂ ಸತ್ಯಮೇವ ತತ್ ।
ಮದೃತೇ ಮೋಹಯಿತ್ರೀಹ ಶಂಕರಸ್ಯ ನ ವಿದ್ಯತೇ ॥ ೪೨ ॥

ಹರೇಽಗೃಹೀತದಾರೇ ತು ಸೃಷ್ಟಿರ್ನೈಷಾ ಸನಾತನೀ ।
ಭವಿಷ್ಯತೀತಿ ತತ್ಸತ್ಯಂ ಭವತಾ ಪ್ರತಿಪಾದಿತಂ ॥ ೪೩ ॥

ಮಮಾಪಿ ಮೋಹನೇ ಯತ್ನೋ ವಿದ್ಯತೇಽಸ್ಯ ಮಹಾಪ್ರಭೋಃ ।
ತ್ವದ್ವಾಕ್ಯಾದ್ದ್ವಿಗುಣೋ ಮೇಽದ್ಯ ಪ್ರಯತ್ನೋಽಭೂತ್ಸ ನಿರ್ಭರಃ ॥ ೪೪ ॥

---

೪೧. ಬ್ರಹ್ಮನು ಹೇಳಿದನು :—ಹೀಗೆ ಆಲೋಚಿಸಿ ದೇವಿಯು ಪರಮೇಶ್ವರನನ್ನು ಸ್ಮರಿಸಿ ಅವನ ಅನುಜ್ಞೆಯನ್ನು ಪಡೆದು ಬಳಿಕ ನನ್ನನ್ನು ಕುರಿತು ಹೀಗೆ ಹೇಳಿದಳು.

೪೨. ಚಂಡಿಕಾದೇವಿಯು ಹೇಳಿದಳು :—ಎಲೈ ಬ್ರಹ್ಮನೇ, ನೀನು ಹೇಳಿದುದೆಲ್ಲವೂ ನಿಜವಾದುದು. ನನ್ನ ಹೊರತು ಇನ್ನಾರೂ ಶಂಕರನನ್ನು ಮೋಹಗೊಳಿಸಲಾರರು.

೪೩. ಹರನು ಪತ್ನಿಯನ್ನು ಪರಿಗ್ರಹಿಸದಿದ್ದರೆ ಅನಾದಿಯಾದ ಈ ಸೃಷ್ಟಿಯು ನಡೆಯಲಾರದೆಂಬುದೂ ನಿಜವಾದ ಮಾತು.

೪೪. ನಾನೂ ಸಹ ಮಹಾಪ್ರಭುವಾದ ಶಿವನನ್ನು ಮೋಹಗೊಳಿಸಬೇಕೆಂಬ ಇಚ್ಛೆಯುಳ್ಳವಳಾಗಿದ್ದೆನು. ಈಗ ನಿನ್ನ ವಾಕ್ಯದಿಂದ ಆ ನನ್ನ ಇಚ್ಛೆಯು ಇನ್ನಷ್ಟು ಹೆಚ್ಚಾಯಿತು.

**ಅಹಂ ತಥಾ ಯತಿಷ್ಯಾಮಿ ಯಥಾ ದಾರಪರಿಗ್ರಹಂ ।**
**ಹರಃ ಕರಿಷ್ಯತಿ ವಿಧೇ ಸ್ವಯಮೇವ ವಿಮೋಹಿತಃ ॥ ೪೫ ॥**

**ಸತೀಮೂರ್ತಿಮಹಂ ಧೃತ್ವಾ ತಸ್ಯೈವ ವಶವರ್ತಿನೀ ।**
**ಭವಿಷ್ಯಾಮಿ ಮಹಾಭಾಗಾ ಲಕ್ಷ್ಮೀರ್ವಿಷ್ಣೋರ್ಯಥಾ ಪ್ರಿಯಾ ॥ ೪೬ ॥**

**ಯಥಾ ಸೋಽಪಿ ಮಯ್ಯೈವೇಹ ವಶವರ್ತೀ ಸದಾ ಭವೇತ್ ।**
**ತಥಾ ಯತ್ನಂ ಕರಿಷ್ಯಾಮಿ ತಸ್ಯೈವ ಕೃಪಯಾ ವಿಧೇ ॥ ೪೭ ॥**

**ಉತ್ಪನ್ನಾ ದಕ್ಷಜಾಯಾಯಾಂ ಸತೀರೂಪೇಣ ಶಂಕರಂ ।**
**ಅಹಂ ಸಭಾಜಯಿಷ್ಯಾಮಿ ಲೀಲಯಾ ತಂ ಪಿತಾಮಹ ॥ ೪೮ ॥**

**ಯಥಾನ್ಯಜಂತುರವನೌ ವರ್ತತೇ ವನಿತಾವಶೇ ।**
**ಮದ್ಭಕ್ತ್ಯಾ ಸ ಹರೋ ವಾಮಾವಶವರ್ತೀ ಭವಿಷ್ಯತಿ ॥ ೪೯ ॥**

---

೪೫. ಎಲೌ ವಿಧಿ, ಆ ಹರನು ಮೋಹಗೊಂಡು ತಾನಾಗಿಯೇ ಪತ್ನಿಯನ್ನು ಪರಿಗ್ರಹಿಸುವಂತೆ ಮಾಡುವೆನು.

೪೬. ನಾನು ಸತೀದೇವಿಯ ರೂಪದಿಂದ ಅವತರಿಸಿ ಆ ಹರನನ್ನು ಮದುವೆಯಾಗಿ ಅವನ ಅಧೀನಳಾಗಿದ್ದು, ವಿಷ್ಣುವಿಗೆ ಲಕ್ಷ್ಮಿಯು ಹೇಗೋ ಹಾಗೆ ಅವನಿಗೆ ಪ್ರಿಯಳಾಗಿರುವೆನು.

೪೭. ಆ ಶಿವನೂ ಸಹ ಸದಾ ನನ್ನ ಅಧೀನವಾಗಿರುವಂತೆ ಪ್ರಯತ್ನವನ್ನು ಅವನ ಅನುಗ್ರಹದಿಂದಲೇ ಮಾಡುವೆನು.

೪೮. ಎಲೌ ವಿಧಿಯೆ, ದಕ್ಷನ ಪತ್ನಿಯಲ್ಲಿ ಸತೀದೇವಿಯ ರೂಪದಿಂದ ಜನಿಸಿ ಉಚಿತವಾದ ಲೀಲೆಯಿಂದ ಆ ಶಿವನನ್ನು ಸಂತೋಷಗೊಳಿಸುವೆನು. ಅವನನ್ನೇ ಪತಿಯಾಗಿ ವರಿಸುವೆನು.

೪೯. ಲೋಕದಲ್ಲಿ ಸಾಮಾನ್ಯಪ್ರಾಣಿಯು ಸ್ತ್ರೀಯ ವಶದಲ್ಲಿರುವಂತೆ ಆ ಶಿವನನ್ನೂ ಸಹ ಭಕ್ತಿಯಿಂದ ನನ್ನ ವಶದಲ್ಲಿಟ್ಟುಕೊಳ್ಳುವೆನು ಎಂದಳು.

॥ ಬ್ರಹ್ಮೋವಾಚ ॥
ಮಹ್ಯಮಿತ್ಥಂ ಸಮಾಭಾಷ್ಯ ಶಿವಾ ಸಾ ಜಗದಂಬಿಕಾ ।
ವೀಕ್ಷಮಾಣಾ ಮಯಾ ತಾತ ತತ್ರೈವಾಂತರ್ಧಧೇ ತತಃ ॥ ೫೦ ॥

ತಸ್ಯಾಮಂತರ್ಹಿತಾಯಾಂ ತು ಸೋಽಹಂ ಲೋಕಪಿತಾಮಹಃ ।
ಅಗಮಂ ಯತ್ರ ಸ್ವಸುತಾಸ್ತೇಭ್ಯಸ್ಸರ್ವಮವರ್ಣಯಂ ॥ ೫೧ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಸತೀಖಂಡೇ
ಏಕಾದಶೋಽಧ್ಯಾಯಃ.



---

೫೦. ಬ್ರಹ್ಮನು ಹೇಳಿದನು :—ಜಗನ್ಮಾತೆಯಾದ ದೇವಿಯು ನನಗೆ ಹೀಗೆ ಅಪ್ಪಣೆಮಾಡಿ ನಾನು ನೋಡುತ್ತಿರುವಂತೆ ಅಲ್ಲಿಯೇ ಅಂತರ್ಧಾನಳಾದಳು.

೫೧. ದೇವಿಯು ಅಂತರ್ಧಾನಳಾಗಲು ಜಗತ್ತಿಗೆ ತಾತನೆನಿಸಿದ ನಾನು ನನ್ನ ಮಾನಸಪುತ್ರರಾದ ದಕ್ಷನೇ ಮೊದಲಾದವರು ಇರುವಲ್ಲಿಗೆ ತೆರಳಿದೆನು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಹನ್ನೊಂದನೆಯ
ಅಧ್ಯಾಯವು ಮುಗಿದುದು.



|| ಶ್ರೀಃ ||

|| ಓಂ ನಮಃ ಶಿವಾಯ ||

---

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ದ್ವಾದಶೋಽಧ್ಯಾಯಃ

---

|| ನಾರದ ಉವಾಚ ||

ಬ್ರಹ್ಮನ್ ಶಂಭುವರ ಪ್ರಾಜ್ಞ ಸಮ್ಯಗುಕ್ತಂ ತ್ವಯಾನಘ ।
ಶಿವಾಶಿವಚರಿತ್ರಂ ಚ ಪಾವಿತಂ ಜನ್ಮ ಮೇ ಹಿತಂ || ೧ ||

ಇದಾನೀಂ ವದ ದಕ್ಷಸ್ತು ತಪಃ ಕೃತ್ವಾ ದೃಢವ್ರತಃ ।
ಕಿಂ ವರಂ ಪ್ರಾಪ ದೇವ್ಯಾಸ್ತು ಕಥಂ ಸಾ ದಕ್ಷಜಾಭವತ್ || ೨ ||

---

## ಹನ್ನೆರಡನೆಯ ಅಧ್ಯಾಯವು.

೧. ನಾರದಮುನಿಯು ಹೇಳಿದನು :—ಮಹಾಪ್ರಾಜ್ಞನೂ ಶಿವಭಕ್ತನೂ ಆದ ಓ ಬ್ರಹ್ಮನೇ, ಪುಣ್ಯವಂತನಾದ ನೀನು ಶಿವ ಮತ್ತು ಚಂಡಿಕೆಯರ ಚರಿತ್ರೆಯನ್ನು ಚನ್ನಾಗಿ ಹೇಳಿರುವೆ. ಇದರಿಂದ ನನ್ನ ಜನ್ಮವು ಪವಿತ್ರವಾಯಿತು.

೨. ದಕ್ಷನು ದೃಢವಾದ ನಿಯಮದಿಂದ ದೇವಿಯನ್ನು ಕುರಿತು ತಪಸ್ಸು ಮಾಡಿ ಯಾವ ವರವನ್ನು ಪಡೆದನು ? ಆ ದೇವಿಯು ದಕ್ಷಬ್ರಹ್ಮನ ಪುತ್ರಿಯಾಗಿ ಹೇಗೆ ಜನಿಸಿದಳು ? ಎಂಬುದನ್ನು ಈಗ ನೀನು ಹೇಳು ಎಂದು ಕೇಳಲು,

॥ ಬ್ರಹ್ಮೋವಾಚ ॥

ಶೃಣು ನಾರದ ಧನ್ಯಸ್ತ್ವಂ ಮುನಿಭಿರ್ಭಕ್ತಿತೋಽಖಿಲೈಃ ।
ಯಥಾ ತೇಪೇ ತಪೋ ದಕ್ಷೋ ವರಂ ಪ್ರಾಪ ಚ ಸುವ್ರತಃ ॥ ೩

ಮುದಾಽಽಜ್ಞಪ್ತಸ್ಸುಧೀರ್ದಕ್ಷಸ್ಸಮಾಧಾಯ ಮಹಾಧಿಪಃ ।
ಅಗಾದ್ಯಷ್ಟುಂ ಚ ತಾಂ ದೇವೀಂ ತತ್ಕಾಮೋ ಜಗದಂಬಿಕಾಂ ॥ ೪

ಕ್ಷೀರೋದೋತ್ತರತೀರಸ್ಥಸ್ತಾಂ ಕೃತ್ವಾ ಹೃದಯಸ್ಥಿತಾಂ ।
ತಪಸ್ತಪ್ತುಂ ಸಮಾರೇಭೇ ದ್ರಷ್ಟುಂ ಪ್ರತ್ಯಕ್ಷತೋಽಂಬಿಕಾಂ ॥ ೫

ದಿವ್ಯವರ್ಷೇಣ ದಕ್ಷಸ್ತು ಸಹಸ್ರಾಣಾಂ ತ್ರಯಂ ಸಮಾಃ ।
ತಪಶ್ಚಚಾರ ನಿಯತಸ್ಸಂಯತಾಽಽತ್ಮಾ ದೃಢವ್ರತಃ ॥ ೬ ।

ಮಾರುತಾಶೀ ನಿರಾಹಾರೋ ಜಲಹಾರೀ ಚ ಪರ್ಣಭುಕ್ ।
ಏವಂ ನಿನಾಯ ತಂ ಕಾಲಂ ಚಿಂತಯಂಸ್ತಾಂ ಜಗನ್ಮಯೀಂ ॥ ೭

೩. ಬ್ರಹ್ಮನು ಹೇಳಿದನು:—ಎಲೈ ನಾರದ! ಶಿವಕಥೆಯನ್ನು ಕೇಳುವ ನೀನು ಧನ್ಯನು ; ದಕ್ಷನು ತಪಸ್ಸುಮಾಡಿದುದನ್ನೂ, ವರವನ್ನು ಪಡೆದುದನ್ನೂ ನಿನಗೆ ಈಗ ಹೇಳುವೆನು. ಭಕ್ತಿಯಿಂದ ಕೇಳು.

೪. ಆ ಬಳಿಕ ದಕ್ಷಬ್ರಹ್ಮನು ನನ್ನ ಅಪ್ಪಣೆಯಂತೆ ದೇವಿಯನ್ನು ತನ್ನ ಮಗಳಾಗಿ ಪಡೆಯುವ ಉದ್ದೇಶದಿಂದ ಆ ದೇವಿಯನ್ನು ತಪಸ್ಸಿನಿಂದ ಆರಾಧಿಸಲು ಪ್ರಾರಂಭಿಸಿದನು.

೫-೬. ಕ್ಷೀರಸಮುದ್ರದ ದಡದಲ್ಲಿ ಕುಳಿತು ದೇವಿಯನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ಅವಳನ್ನು ಪ್ರತ್ಯಕ್ಷವಾಗಿ ದರ್ಶನಮಾಡಲಪೇಕ್ಷೆಯಿಂದ ದೇವಮಾನದಿಂದ ಮೂರುಸಾವಿರ ವರ್ಷಗಳವರೆಗೆ, ದೃಢವಾದ ನಿಯಮದಿಂದಿದ್ದು ಜಿತೇಂದ್ರಿಯನಾಗಿ ತಪಸ್ಸನ್ನಾಚರಿಸಿದನು.

೭. ಕೆಲವು ಕಾಲ ಗಾಳಿಯನ್ನೇ ಆಹಾರವಾಗಿ ಸೇವಿಸುತ್ತಲೂ, ಕೆಲವು ಕಾಲ ಯಾವ ಆಹಾರವೂ ಇಲ್ಲದೆಯೂ, ಕೆಲವು ಕಾಲ ಜಲವನ್ನೂ ಕೆಲವು ಕಾಲ ಎಲೆಗಳನ್ನೂ ಸೇವಿಸುತ್ತಾ, ಜಗದ್ರೂಪಳಾದ ಚಂಡಿಕೆಯನ್ನು ಧ್ಯಾನಿಸುತ್ತಾ ಕಾಲವನ್ನು ಕಳೆದನು.

**ದುರ್ಗಾಧ್ಯಾನಸಮಾಸಕ್ತಶ್ಚಿರಂ ಕಾಲಂ ತಪೋರತಃ ।**
**ನಿಯಮೈರ್ಬಹುಭಿರ್ದೇವೀಮಾರಾಧಯತಿ ಸುವ್ರತಃ ॥ ೮ ॥**

**ತತೋ ಯಮಾದಿಯುಕ್ತಸ್ಯ ದಕ್ಷಸ್ಯ ಮುನಿಸತ್ತಮ।**
**ಜಗದಂಬಾಂ ಪೂಜಯತಃ ಪ್ರತ್ಯಕ್ಷಮಭವಚ್ಛಿವಾ ॥ ೯ ॥**

**ತತಃ ಪ್ರತ್ಯಕ್ಷತೋ ದೃಷ್ಟ್ವಾ ಜಗದಂಬಾಂ ಜಗನ್ಮಯೀಂ ।**
**ಕೃತಕೃತ್ಯಮಥಾಽಽತ್ಮಾನಂ ಮೇನೇ ದಕ್ಷಃ ಪ್ರಜಾಪತಿಃ ॥ ೧೦ ॥**

**ಸಿಹ್ಮಸ್ಥಾಂ ಕಾಲಿಕಾಂ ಕೃಷ್ಣಾಂ ಚಾರುವಕ್ತ್ರಾಂ ಚತುರ್ಭುಜಾಂ ।**
**ವರದಾಭಯನೀಲಾಬ್ಜಖಡ್ಗಹಸ್ತಾಂ ಮನೋಹರಾಂ ॥ ೧೧ ॥**

**ಆರಕ್ತನಯನಾಂ ಚಾರುಮುಕ್ತಕೇಶೀಂ ಜಗತ್ಪ್ರಸೂಂ ।**
**ತುಷ್ಟಾವ ವಾಗ್ಭಿಶ್ಚಿತ್ರಾಭಿಃ ಸುಪ್ರಣಮ್ಯಾಥ ಸುಪ್ರಭಾಂ ॥ ೧೨ ॥**

---

೮. ದುರ್ಗಾದೇವಿಯನ್ನು ಧ್ಯಾನಮಾಡುತ್ತಾ ಬಹುಕಾಲ ತಪಸ್ಸಿನಲ್ಲಿ ನಿರತನಾಗಿ ಅನೇಕ ನಿಯಮಗಳಿಂದ ದೇವಿಯನ್ನು ಆರಾಧಿಸಿದನು.

೯. ಹೀಗೆ ಜಿತೇಂದ್ರಿಯನಾಗಿ ಬಹು ನಿಯಮಗಳಿಂದ ದೇವಿಯನ್ನು ದಕ್ಷನು ಆರಾಧಿಸುತ್ತಲಿರಲು, ದೇವಿಯು ಪ್ರಸನ್ನಳಾಗಿ ಪ್ರತ್ಯಕ್ಷಳಾದಳು.

೧೦. ಜಗದ್ರೂಪಳೂ, ಜಗನ್ಮಾತೆಯೂ ಆದ ದೇವಿಯು ಪ್ರತ್ಯಕ್ಷಳಾದುದನ್ನು ನೋಡಿ ದಕ್ಷಬ್ರಹ್ಮನು ತಾನು ಕೃತಾರ್ಥನಾದೆನೆಂದು ತಿಳಿದುಕೊಂಡನು.

೧೧-೧೨. ಆ ದೇವಿಯು ಸಿಹ್ಮವನ್ನೇರಿದ್ದಳು. ನೀಲವರ್ಣದ ಶರೀರಕಾಂತಿಯಿಂದ ಬೆಳಗುತ್ತಿದ್ದಳು. ಅವಳ ಮುಖವು ಸುಂದರವಾಗಿತ್ತು. ನಾಲ್ಕು ಬಾಹುಗಳೂ ಅವುಗಳಲ್ಲಿ ವರದಮುದ್ರೆ ಅಭಯಮುದ್ರೆ ಕನ್ನೈದಿಲೆ ಖಡ್ಗ ಇವುಗಳನ್ನು ಧರಿಸಿದ್ದಳು. ಸುಂದರಿಯೂ ನಸುಗೆಂಪಾದ ಕಡೆಗಣ್ಣುಳ್ಳವಳೂ ಆಗಿದ್ದಳು. ಅವಳ ಕೇಶಪಾಶವು ಬಿಚ್ಚಿ ಕೆದರಿಹೋಗಿ ಸುಂದರವಾಗಿ ಕಾಣಿಸುತ್ತ ಅಪೂರ್ವಕಾಂತಿಯನ್ನು ಬೀರುತ್ತಿದ್ದಿತು. ಹೀಗಿರುವಂತಹ ಜಗನ್ಮಾತೆಯಾದ ದೇವಿಯನ್ನು ದಕ್ಷಬ್ರಹ್ಮನು ಅನೇಕ ವಾಕ್ಕುಗಳಿಂದ ಹೀಗೆ ಸ್ತುತಿಸಿದನು.

॥ ದಕ್ಷ ಉವಾಚ ॥

ಜಗದಂಬ ಮಹಾಮಾಯೇ ಜಗದೀಶೇ ಮಹೇಶ್ವರಿ ।
ಕೃಪಾಂ ಕೃತ್ವಾ ನಮಸ್ತೇಽಸ್ತು ದರ್ಶಿತಂ ತೇ ವಪುರ್ಮಮ ॥ ೧೩ ॥

ಪ್ರಸೀದ ಭಗವತ್ಯಂಬ ಪ್ರಸೀದ ಶಿವರೂಪಿಣಿ ।
ಪ್ರಸೀದ ಭಕ್ತವರದೇ ಜಗನ್ಮಾಯೇ ನಮೋಽಸ್ತು ತೇ ॥ ೧೪ ॥

॥ ಬ್ರಹ್ಮೋವಾಚ ॥

ಇತಿ ಸ್ತುತಾ ಮಹೇಶಾನೀ ದಕ್ಷೇಣ ಪ್ರಯತಾತ್ಮನಾ ।
ಉವಾಚ ದಕ್ಷಂ ಜ್ಞಾತ್ವಾಪಿ ಸ್ವಯಂ ತಸ್ಯೇಪ್ಸಿತಂ ಮುನೇ ॥ ೧೫ ॥

॥ ದೇವ್ಯುವಾಚ ॥

ತುಷ್ಟಾಹಂ ದಕ್ಷ ಭವತಸ್ಸದ್ಭಕ್ತ್ಯಾ ಹ್ಯನಯಾ ಭೃಶಂ ।
ವರಂ ವೃಣೀಷ್ವ ಸ್ವಾಭೀಷ್ಟಂ ನಾದೇಯಂ ವಿದ್ಯತೇ ತವ ॥ ೧೬ ॥

---

೧೩. ದಕ್ಷನು ಹೇಳಿದನು :—ಓ ಜಗನ್ಮಾತೆಯೇ! ಆದಿಮಾಯೆಯೆನಿಸಿದ ನೀನು ಜಗದೊಡೆಯಳು. ಓ ಪರಮೇಶ್ವರಿ! ನಿನಗೆ ನಮಸ್ಕಾರವು. ನನ್ನಲ್ಲಿ ಅನುಗ್ರಹವನ್ನಿಟ್ಟು ಈ ನಿನ್ನ ಸ್ವರೂಪವನ್ನು ಪ್ರತ್ಯಕ್ಷವಾಗಿ ತೋರಿಸಿರುವೆ.

೧೪. ಮಹಾಮಹಿಮಳಾದ ಓ ಮಾತೆ, ಪ್ರಸನ್ನಳಾಗು, ಶಂಕರಸ್ವರೂಪಳೂ, ಭಕ್ತರ ಇಷ್ಟಾರ್ಥವನ್ನು ಸಲ್ಲಿಸುವವಳೂ ಆದ ಓ ದೇವಿ ಪ್ರಸನ್ನಳಾಗು. ಜಗತ್ತನ್ನು ಮೋಹಗೊಳಿಸುವ ಆದಿಮಾಯೆಯಾದ ನಿನಗೆ ನಮಿಸುವೆನು.

೧೫. ಬ್ರಹ್ಮನು ಹೇಳಿದನು :—ಎಲೈ ನಾರದ! ಹೀಗೆ ವಿನೀತನಾಗಿ ದಕ್ಷನು ಸ್ತುತಿಸಲು ಪರಮೇಶ್ವರಿಯು ದಕ್ಷನ ಇಷ್ಟವನ್ನು ತಿಳಿದವಳಾದರೂ ತಿಳಿಯುದವಳಂತೆ ಹೀಗೆ ಹೇಳಿದಳು.

೧೬. ದೇವಿಯು ಹೇಳಿದಳು :—ಎಲೈ ದಕ್ಷನೇ! ನಿನ್ನ ಈ ಸದ್ಭಕ್ತಿಯಿಂದ ನಾನು ತುಂಬಾ ಸಂತುಷ್ಟಳಾಗಿರುವೆನು. ಬೇಕಾದ ವರವನ್ನು ಕೇಳು. ನಿನಗೆ ಕೊಡದಿರುವಂತಹ ವರವಾವುದೂ ಇಲ್ಲ. ಯಾವುದನ್ನು ಕೇಳಿದರೂ ಕೊಡುವೆನು ಎಂದಳು.

॥ ಬ್ರಹ್ಮೋವಾಚ ॥

ಜಗದಂಬಾವಚಃ ಶ್ರುತ್ವಾ ತತೋ ದಕ್ಷಃ ಪ್ರಜಾಪತಿಃ ।
ಸುಪ್ರಹೃಷ್ಟತರಃ ಪ್ರಾಹ ನಾಮಂ ನಾಮಂ ಚ ತಾಂ ಶಿವಾಂ ॥ ೧೭ ॥

॥ ದಕ್ಷ ಉವಾಚ ॥

ಜಗದಂಬ ಮಹಾಮಾಯೇ ಯದಿ ತ್ವಂ ವರದಾ ಮಮ ।
ಮದ್ವಚಃ ಶೃಣು ಸುಪ್ರೀತ್ಯಾ ಮಮ ಕಾಮಂ ಪ್ರಪೂರಯ ॥ ೧೮ ॥

ಮಮ ಸ್ವಾಮೀ ಶಿವೋ ಯೋ ಹಿ ಸ ಜಾತೋ ಬ್ರಹ್ಮಣಃ ಸುತಃ ।
ರುದ್ರನಾಮಾ ಪೂರ್ಣರೂಪಾವತಾರಃ ಪರಮಾತ್ಮನಃ ॥ ೧೯ ॥

ತವಾವತಾರೋ ನೋ ಜಾತಃ ಕಾ ತತ್ಪತ್ನೀ ಭವೇದತಃ ।
ತಂ ಮೋಹಯ ಮಹೇಶಾನಮವತೀರ್ಯ ಕ್ಷಿತೌ ಶಿವೇ ॥ ೨೦ ॥

ತ್ವದೃತೇ ತಸ್ಯ ಮೋಹಾಯ ನ ಶಕ್ತಾನ್ಯಾ ಕದಾಚನ ।
ತಸ್ಮಾನ್ಮಮ ಸುತಾ ಭೂತ್ವಾ ಹರಜಾಯಾ ಭವಾಧುನಾ ॥ ೨೧ ॥

---

೧೭. ಬ್ರಹ್ಮನು ಹೇಳಿದನು :—ಎಲೈ ನಾರದ, ಜಗನ್ಮಾತೆಯಾದ ದೇವಿಯು ಹೇಳಿದ ಮಾತುಗಳನ್ನು ಕೇಳಿ ದಕ್ಷಬ್ರಹ್ಮನು ತುಂಬಾ ಸಂತೋಷಗೊಂಡು ದೇವಿಯನ್ನು ಪುನಃ ಪುನಃ ನಮಸ್ಕರಿಸುತ್ತಾ,

೧೮. ದಕ್ಷನು ಹೇಳಿದನು :—ಜಗನ್ಮಾತೆಯೂ ಆದಿಮಾಯೆಯೂ ಆದ ಓ ದೇವಿ! ಸಂತುಷ್ಟಳಾಗಿ ನೀನು ವರವನ್ನು ಕೊಡುವೆಯಾದರೆ ನಾನು ಹೇಳುವ ಮಾತನ್ನು ಪ್ರೀತಿಯಿಂದ ಕೇಳು. ನನ್ನ ಇಷ್ಟಾರ್ಥವನ್ನು ಪೂರಯಿಸು.

೧೯. ಜಗತ್ಪ್ರಭುವಾದ ಶಂಕರನು ಬ್ರಹ್ಮನ ಪುತ್ರನಾಗಿ ರುದ್ರನೆಂಬ ಹೆಸರಿನಿಂದ ಜನಿಸಿರುವನು. ಅವನು ಪರಮಾತ್ಮನಾದ ಶಿವನ ಸಂಪೂರ್ಣವಾದ ಅವತಾರವು.

೨೦. ಆದರೆ ಇದುವರಿಗೂ ನಿನ್ನ ಅವತಾರವೇ ಆಗಿರುವುದಿಲ್ಲ. ಹೀಗಿರಲು ನಿನ್ನ ಹೊರತು ಆ ರುದ್ರನ ಪತ್ನಿಯು ಯಾವಳು ಆಗುವಳು? ಆದುದರಿಂದ ನೀನು ಭೂಮಿಯಲ್ಲಿ ಅವತರಿಸಿ ಆ ರುದ್ರನನ್ನು ಮೋಹಗೊಳಿಸಬೇಕು.

೨೧. ನಿನ್ನ ಹೊರತು ಇನ್ನಾವಳೂ ಆ ರುದ್ರನನ್ನು ಮೋಹಗೊಳಿಸಲಾರಳು. ಆದಕಾರಣ ಓ ದೇವಿ! ನೀನು ನನ್ನ ಪುತ್ರಿಯಾಗಿ ಜನಿಸಿ ಹರನ ಪತ್ನಿಯಾಗು.

ಇತ್ಥಂ ಕೃತ್ವಾ ಸುಲೀಲಾಂ ಚ ಭವ ತ್ವಂ ಹರಮೋಹಿನೀ ।
ಮಮೈವೈಷ ವರೋ ದೇವಿ ಸತ್ಯಮುಕ್ತಂ ತವಾಗ್ರತಃ ॥ ೨೨ ॥

ಕೇವಲಂ ಸ್ವಾರ್ಥಮಿತಿ ನೋ ಸರ್ವೇಷಾಂ ಜಗತಾಮಪಿ ।
ಬ್ರಹ್ಮವಿಷ್ಣುಶಿವಾನಾಂ ಚ ಬ್ರಹ್ಮಣಾ ಪ್ರೇರಿತೋಽಸ್ಮ್ಯಹಂ ॥ ೨೩ ॥

॥ ಬ್ರಹ್ಮೋವಾಚ ॥

ಇತ್ಯಾಽಽಕರ್ಣ್ಯ ಪ್ರಜೇಶಸ್ಯ ವಚನಂ ಜಗದಂಬಿಕಾ ।
ಪ್ರತ್ಯುವಾಚ ವಿಹಸ್ಯೇತಿ ಸ್ಮೃತ್ವಾ ತಂ ಮನಸಾ ಶಿವಂ ॥ ೨೪ ॥

॥ ದೇವ್ಯುವಾಚ ॥

ತಾತ ಪ್ರಜಾಪತೇ ದಕ್ಷ ಶೃಣು ಮೇ ಪರಮಂ ವಚಃ ।
ಸತ್ಯಂ ಬ್ರವೀಮಿ ತ್ವದ್ಭಕ್ತ್ಯಾ ಸುಪ್ರಸನ್ನಾಖಿಲಪ್ರದಾ ॥ ೨೫ ॥

ಅಹಂ ತವ ಸುತಾ ಭೂತ್ವಾ ತ್ವಜ್ಜಾಯಾಯಾಂ ಮಹೇಶ್ವರೀ ।
ಭವಿಷ್ಯಾಮಿ ನ ಸಂದೇಹಸ್ತ್ವದ್ಭಕ್ತಿವಶವರ್ತಿನೀ ॥ ೨೬ ॥

೨೨. ಹೀಗೆ ನನ್ನ ಪುತ್ರಿಯಾಗಿ ನಿನ್ನ ಲೀಲೆಯಿಂದ ಆ ಶಿವನನ್ನು ಮೋಹಗೊಳಿಸು. ಓ ದೇವಿ! ಇದೇ ನನಗೆ ನೀನು ಕೊಡಬೇಕಾದ ವರವು, ನಿಜವಾದುದನ್ನು ನಿನ್ನೆದುರಿಗೆ ಹೇಳಿರುವೆನು.

೨೩. ಓ ದೇವಿ! ಈ ವರವು ಕೇವಲ ನನಗೆ ಅಲ್ಲ. ಸಕಲ ಜಗತ್ತಿಗೂ ಹಿತಕರವಾದುದು. ಬ್ರಹ್ಮ ವಿಷ್ಣು ಮತ್ತು ಶಿವ ಇವರಿಗೂ ಇಷ್ಟವಾದುದು. ಆದ ಕಾರಣವೇ ಬ್ರಹ್ಮನು ಈ ಕಾರ್ಯಕ್ಕಾಗಿ ನನ್ನನ್ನು ಪ್ರೇರಿಸಿರುವನು ಎಂದನು.

೨೪. ಬ್ರಹ್ಮನು ಹೇಳಿದನು :—ಜಗನ್ಮಾತೆಯಾದ ದೇವಿಯು ದಕ್ಷಬ್ರಹ್ಮನ ಈ ರೀತಿಯಾದ ಮಾತುಗಳನ್ನು ಕೇಳಿ ನಕ್ಕು, ಬಳಿಕ ಮನಸ್ಸಿನಲ್ಲಿಯೇ ಶಿವನನ್ನು ಸ್ಮರಿಸಿ,

೨೫. ದೇವಿಯು ಹೇಳಿದಳು :—ಎಲೈ ದಕ್ಷಬ್ರಹ್ಮನೇ, ಹಿತವಾದ ನನ್ನ ಮಾತನ್ನು ಕೇಳು, ನಿನ್ನಲ್ಲಿರುವ ವಾತ್ಸಲ್ಯದಿಂದ ಪ್ರಸನ್ನಳಾಗಿ ನಿನಗೆ ಸಕಲ ಇಷ್ಟಾರ್ಥವನ್ನೂ ಕೊಡುವೆನು. ನಿಜವಾಗಿ ಹೇಳುವೆನು ಕೇಳು.

೨೬. ಪರಮೇಶ್ವರಿಯಾದ ನಾನು ನಿನ್ನ ಭಕ್ತಿಗೆ ಮೆಚ್ಚಿ, ನಿನ್ನ ಪತ್ನಿಯಲ್ಲಿ ಮಗಳಾಗಿ ಜನಿಸಿ ನಿನ್ನ ಅಧೀನಳಾಗಿರುವೆನು. ಇದರಲ್ಲಿ ಸಂಶಯವಿಲ್ಲ.

ತಥಾ ಯತ್ನಂ ಕರಿಷ್ಯಾಮಿ ತಪಃ ಕೃತ್ವಾ ಸುದುಸ್ಸಹಂ ।
ಹರಜಾಯಾ ಭವಿಷ್ಯಾಮಿ ತದ್ವರಂ ಪ್ರಾಪ್ಯ ಚಾನಘ ॥ ೨೭ ॥

ನಾನ್ಯಥಾ ಕಾರ್ಯಸಿದ್ಧಿರ್ಹಿ ನಿರ್ವಿಕಾರೀ ಸ ಚ ಪ್ರಭುಃ ।
ವಿಧೇರ್ವಿಷ್ಣೋಶ್ಚ ಸಂಸೇವ್ಯಃ ಪೂರ್ಣ ಏವ ಸದಾಶಿವಃ ॥ ೨೮ ॥

ಅಹಂ ತಸ್ಯ ಸದಾ ದಾಸೀ ಪ್ರಿಯಾ ಜನ್ಮನಿ ಜನ್ಮನಿ ।
ಮಮ ಸ್ವಾಮೀ ಸ ವೈ ಶಂಭುರ್ನಾನಾರೂಪಧರೋಽಪಿ ಹ ॥ ೨೯ ॥

ವರಪ್ರಭಾವಾದ್ಭ್ರುಕುಟೇರವತೀರ್ಣೋ ವಿಧೇಸ್ಸ ಚ ।
ಅಹಂ ತದ್ವರತೋಽಪೀಹಾವತರಿಷ್ಯೇ ತದಾಜ್ಞಯಾ ॥ ೩೦ ॥

ಗಚ್ಛಸ್ವ ಭವನಂ ತಾತ ಮಯಾ ಜ್ಞಾತಾ ತು ದೂತಿಕಾ ।
ಹರಜಾಯಾ ಭವಿಷ್ಯಾಮಿ ಭೂತಾ ತೇ ತನಯಾಚಿರಾತ್ ॥ ೩೧ ॥

---

೨೭. ಮತ್ತು ಆಗ ಅಸಾಧ್ಯವಾದಂತಹ ತಪಸ್ಸನ್ನು ಮಾಡಿ ಶಿವನನ್ನು ಮೆಚ್ಚಿಸಿ ಆ ಶಿವನ ಪತ್ನಿಯಾಗುವಂತೆ ಪ್ರಯತ್ನಿಸುತ್ತೇನೆ.

೨೮. ಇದಲ್ಲದೆ ಬೇರೆ ರೀತಿಯಿಂದ ಕಾರ್ಯಸಿದ್ಧಿಯು ಆಗಲಾರದು. ಆ ಪರಮೇಶ್ವನು ಯಾವ ವಿಕಾರವೂ ಇಲ್ಲದವನು. ಬ್ರಹ್ಮ, ವಿಷ್ಣುಗಳೂ ಅವನನ್ನು ಸೇವಿಸುವರು. ಅವನು ಪೂರ್ಣಪರಬ್ರಹ್ಮಸ್ವರೂಪನು. ಸದಾ ಮಂಗಳಸ್ವರೂಪನು.

೨೯. ನಾನು ಆ ಶಿವನ ದಾಸಿಯು. ಪ್ರತಿ ಅವತಾರದಲ್ಲೂ ನಾನೇ ಅವನ ಪ್ರಿಯೆಯು. ಅನೇಕ ಅವತಾರಗಳನ್ನು ಧರಿಸಿದರೂ ಆ ಶಿವನೇ ನನ್ನ ಸ್ವಾಮಿಯು, ಪತಿಯು.

೩೦. ಆ ಶಿವನು ತಾನು ವಿಧಿಗೆ ಕೊಟ್ಟ ವರವನ್ನು ಸಲ್ಲಿಸುವುದಕ್ಕಾಗಿ ಆ ವಿಧಿಯ ಲಲಾಟದಿಂದ ಜನಿಸಿ ರುದ್ರನಾಗಿರುವನು. ಆ ವರದಂತೆ ಶಿವನ ಆಜ್ಞೆಯಿಂದ ನಾನೂ ಸಹ ಈಗ ಅವತಾರಮಾಡುವೆನು.

೩೧. ಆದ ಕಾರಣ ಎಲೈ ದಕ್ಷನೇ, ಈಗ ನೀನು ಮನೆಗೆ ತೆರಳು, ಮುಂದೆ ಸ್ವಲ್ಪಕಾಲದಲ್ಲಿಯೇ ಶಿವದೂತಿಯಾದ ನಾನು ನಿನ್ನ ಪುತ್ರಿಯಾಗಿ ಜನಿಸಿ ಆ ಶಿವನ ಪತ್ನಿಯಾಗುವೆನು.

ಇತ್ಯುಕ್ತ್ವಾ ಸದ್ವಚೋ ದಕ್ಷಂ ಶಿವಾಜ್ಞಾಂ ಪ್ರಾಪ್ಯ ಚೇತಸಿ ।
ಪುನಃ ಪ್ರೋವಾಚ ಸಾ ದೇವೀ ಸ್ಮೃತ್ವಾ ಶಿವಪದಾಂಬುಜಂ ॥ ೩೨ ॥

ಪರಂ ತು ಪಣ ಆಧೇಯೋ ಮನಸಾ ತೇ ಪ್ರಜಾಪತೇ ।
ಶ್ರಾವಯಿಷ್ಯಾಮಿ ತೇ ತಂ ವೈ ಸತ್ಯಂ ಜಾನೀಹಿ ನೋ ಮೃಷಾ ॥ ೩೩ ॥

ಯದಾ ಭವಾನ್ಮಯಿ ಪುನರ್ಭವೇನ್ಮಂದಾದರಸ್ತದಾ ।
ದೇಹಂ ತ್ಯಕ್ಷ್ಯೇ ನಿಜಂ ಸತ್ಯಂ ಸ್ವಾತ್ಮನ್ಯಸ್ಮ್ಯಥ ವೇತರಾಂ ॥ ೩೪ ॥

ಏಷ ದತ್ತಸ್ತವ ವರಃ ಪ್ರತಿಸರ್ಗಂ ಪ್ರಜಾಪತೇ ।
ಅಹಂ ತವ ಸುತಾ ಭೂತ್ವಾ ಭವಿಷ್ಯಾಮಿ ಹರಪ್ರಿಯಾ ॥ ೩೫ ॥

॥ ಬ್ರಹ್ಮೋವಾಚ ॥

ಏವಮುಕ್ತ್ವಾ ಮಹೇಶಾನೀ ದಕ್ಷಂ ಮುಖ್ಯಪ್ರಜಾಪತಿಂ ।
ಅಂತರ್ದಧೇ ದ್ರುತಂ ತತ್ರ ಸದ್ಯೋಗ್ದಕ್ಷಸ್ಯ ಪಶ್ಯತಃ ॥ ೩೬ ॥

---

೩೨. ಹೀಗೆ ದೇವಿಯು ದಕ್ಷನಿಗೆ ಹೇಳಿ ಮನಸ್ಸಿನಲ್ಲಿ ಶಿವನನ್ನು ಸ್ಮರಿಸಿ ಅವನ ಆಜ್ಞೆಯನ್ನು ಪಡೆದು ತಿರುಗಿ ಹೀಗೆ ಹೇಳಿದಳು.

೩೩. ಎಲೈ ದಕ್ಷನೇ, ಆದರೆ, ನನ್ನ ಒಂದು ಪ್ರತಿಜ್ಞೆಯನ್ನು ಹೇಳುವೆನು. ಅದನ್ನು ಮನಸ್ಸಿನಲ್ಲಿ ಜ್ಞಾಪಕವಾಗಿಟ್ಟಿರಬೇಕು. ಇದು ನಿಜವಾದುದು, ಸುಳ್ಳಲ್ಲ.

೩೪. ನಿನ್ನ ಪುತ್ರಿಯಾದ ನನ್ನಲ್ಲಿ ನೀನು ಯಾವಾಗಲಾದರೂ ತಿರಸ್ಕಾರ ಭಾವವನ್ನು ತೋರಿಸಿದರೆ ಆ ಕೂಡಲೇ ಆ ಶರೀರವನ್ನು ಬಿಡುವೆನು, ಇದು ನಿಜವಾದುದು.

೩೫. ಎಲೈ ದಕ್ಷಪ್ರಜಾಪತಿ, ಪ್ರತಿ ಕಲ್ಪದಲ್ಲಿಯೂ ನಡೆಯುವಂತೆ ಈ ವರವನ್ನು ನಿನಗೆ ಕೊಟ್ಟಿರುವೆನು. ನಾನು ನಿನ್ನ ಮಗಳಾಗಿ ಜನಿಸಿ ಶಿವನನ್ನು ಪತಿಯಾಗಿ ವರಿಸುವೆನು ಎಂದಳು.

೩೬. ಬ್ರಹ್ಮನು ಹೇಳಿದನು :—ಹೀಗೆ ದಕ್ಷನಿಗೆ ಹೇಳಿ ಪರಮೇಶ್ವರಿಯು ಅವನು ನೋಡುತ್ತಿರುವಂತೆ ಅಲ್ಲಿಯೇ ಅಂತರ್ಧಾನಳಾದಳು.

**ಅಂತರ್ಹಿತಾಯಾಂ ದುರ್ಗಾಯಾಂ ಸ ದಕ್ಷೋಽಪಿ ನಿಜಾಽಽಶ್ರಮಂ ।**
**ಜಗಾಮ ಚ ಮುದಂ ಲೇಭೇ ಭವಿಷ್ಯತಿ ಸುತೇತಿ ಸಾ ॥ ೩೭ ॥**

**ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಸತೀಖಂಡೇ ದ್ವಾದಶೋಽಧ್ಯಾಯಃ**

---

೩೭. ದೇವಿಯು ಅಂತರ್ಧಾನಳಾಗಲು ದಕ್ಷನು ತನ್ನ ಆಶ್ರಮಕ್ಕೆ ತೆರಳಿದನು. ಆಲ್ಲಿ ಅವನು ದೇವಿಯು ತನ್ನ ಪುತ್ರಿಯಾಗುವಳೆಂದು ತಿಳಿದು ತುಂಬಾ ಹರ್ಷಗೊಂಡನು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ
ಹನ್ನೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ತ್ರಯೋದಶೋಽಧ್ಯಾಯಃ

॥ ನಾರದ ಉವಾಚ ॥

ಬ್ರಹ್ಮನ್ ವಿಧೇ ಮಹಾಪ್ರಾಜ್ಞ ವದ ನೋ ವದತಾಂ ವರ ।
ದಕ್ಷೇ ಗೃಹಂ ಗತೇ ಪ್ರೀತ್ಯಾ ಕಿಮಭೂತ್ತದನಂತರಂ ॥ ೧ ॥

॥ ಬ್ರಹ್ಮೋವಾಚ ॥

ದಕ್ಷಃ ಪ್ರಜಾಪತಿರ್ಗತ್ವಾ ಸ್ವಾಶ್ರಮಂ ಹೃಷ್ಟಮಾನಸಃ ।
ಸರ್ಗಂ ಚಕಾರ ಬಹುಧಾ ಮಾನಸಂ ಮಮ ಚಾಜ್ಞಯಾ ॥ ೨ ॥

---

### ಹದಿಮೂರನೆಯ ಅಧ್ಯಾಯವು.

೧. ನಾರದಮುನಿಯು ಕೇಳಿದನು:—ಮಹಾಪ್ರಾಜ್ಞನೂ, ಉತ್ತಮವಕ್ತೃವೂ ಆದಂತಹ ಓ ಬ್ರಹ್ಮನೇ, ದಕ್ಷನು ತನ್ನ ಮನೆಗೆ ಹೊರಟುಹೋದನಂತರ ಮುಂದೇನಾಯಿತೆಂಬುನನ್ನು ದಯವಿಟ್ಟು ಹೇಳು ಎನ್ನಲು,

೨. ಬ್ರಹ್ಮನು ಹೇಳಿದನು :—ದಕ್ಷಬ್ರಹ್ಮನು ದೇವಿಯಿಂದ ವರವನ್ನು ಪಡೆದು ಸಂತೋಷದಿಂದ ತನ್ನಾಶ್ರಮಕ್ಕೆ ತೆರಳಿ ಮುಂದೆ ನನ್ನಾಜ್ಞೆಯಂತೆ ಮನಸ್ಸಿನಿಂದ ಅನೇಕ ಪ್ರಜೆಗಳನ್ನು ಸೃಷ್ಟಿಸಿದನು.

ತಮುಬೃಂಹಿತಮಾಲೋಕ್ಯ ಪ್ರಜಾಸರ್ಗಂ ಪ್ರಜಾಪತಿಃ ।
ದಕ್ಷೋ ನಿವೇದಯಾಮಾಸ ಬ್ರಹ್ಮಣೇ ಪರಮೇಷ್ಠಿನೇ ॥ ೩ ॥

। ದಕ್ಷ ಉವಾಚ ॥

ಬ್ರಹ್ಮಂಸ್ತಾತ ಪ್ರಜಾನಾಥ ವರ್ಧಂತೇ ನ ಪ್ರಜಾಃ ಪ್ರಭೋ ।
ಮಯಾ ವಿಚಾರಿತಾಸ್ಸರ್ವಾಸ್ತಾವತ್ಯೋ ಹಿ ಸ್ಥಿತಾಃ ಖಲು ॥ ೪ ॥

ಕಿಂ ಕರೋಮಿ ಪ್ರಜಾನಾಥ ವರ್ಧೇಯುಃ ಕಥಮಾತ್ಮನಾ ।
ತದುಪಾಯಂ ಸಮಾಚಕ್ಷ್ವ ಪ್ರಜಾಃ ಕುರ್ಯಾಂ ನ ಸಂಶಯಃ ॥ ೫ ॥

॥ ಬ್ರಹ್ಮೋವಾಚ ॥

ದಕ್ಷ ಪ್ರಜಾಪತೇ ತಾತ ಶೃಣು ಮೇ ಪರಮಂ ವಚಃ ।
ತತ್ಕುರುಷ್ವ ಸುರಶ್ರೇಷ್ಠ ಶಿವಸ್ತೇ ಶಂ ಕರಿಷ್ಯತಿ ॥ ೬ ॥

---

೩. ಆದರೆ ಸೃಷ್ಟಿಸಿದ ಪ್ರಜೆಗಳು ಹಾಗೆಯೇ ಇದ್ದುವು. ಎಂದರೆ ಮುಂದೆ ಬೆಳೆಯಲೇ ಇಲ್ಲ. ಎಷ್ಟು ಜನಗಳನ್ನು ಸೃಷ್ಟಿಸಿದ್ದನೋ ಅಷ್ಟೇ ಜನಗಳಿದ್ದರು ಅದನ್ನು ನೋಡಿ ದಕ್ಷಬ್ರಹ್ಮನು ಚತುರ್ಮುಖ ಬ್ರಹ್ಮನಾದ ನನ್ನ ಬಳಿಗೆ ಬಂದು ಹೀಗೆ ವಿಜ್ಞಾಪಿಸಿಕೊಂಡನು.

೪. ದಕ್ಷಬ್ರಹ್ಮನು ಹೇಳಿದನು :—ಪ್ರಜೆಗಳಿಗೊಡೆಯನಾದ ಓ ಬ್ರಹ್ಮನೇ, ನಾನು ಮಾಡಿದ ಪ್ರಜೆಗಳ ಸೃಷ್ಟಿಯು ಬೆಳೆಯುತ್ತಲೇ ಇಲ್ಲವಲ್ಲಾ ? ನಾನೆಷ್ಟು ಪ್ರಜೆಗಳನ್ನು ಸೃಷ್ಟಿಸಿದ್ದೆನೋ ಅಷ್ಟೇ ಪ್ರಜೆಗಳಿರುವರು. ಒಂದೂ ಹೆಚ್ಚಾಗಿಲ್ಲ.

೫. ಓ ಬ್ರಹ್ಮನೇ, ಈಗ ನಾನೇನು ಮಾಡಲಿ ? ಈ ಪ್ರಜೆಗಳು ತಾನಾಗಿಯೇ ಹೇಗೆ ಬೆಳೆಯುವುವು ? ಹೆಚ್ಚಾಗುವುವು ? ಅದಕ್ಕೆ ಉಪಾಯವನ್ನು ಹೇಳು. ಅದರಂತೆ ನಾನು ಅವಶ್ಯವಾಗಿ ಮಾಡುವೆನು ಎನ್ನಲು.

೬. ಬ್ರಹ್ಮನು ಹೇಳಿದನು :—ಎಲೈ ದಕ್ಷಪ್ರಜಾಪತಿಯೇ, ನಾನು ಹೇಳುವ ಹಿತವಾದ ಮಾತನ್ನು ಕೇಳು. ಅದರಂತೆ ಮಾಡು, ಶಿವನು ನಿನಗೆ ಕಲ್ಯಾಣವನ್ನು ಮಾಡುವನು.

**ಯಾ ಚ ಪಂಚಜನಸ್ಯಾಂಗಸುತಾ ರಮ್ಯಾ ಪ್ರಜಾಪತೇಃ ।**
**ಅಸಿಕ್ನೀ ನಾಮ ಪತ್ನೀತ್ವೇ ಪ್ರಜೇಶ ಪ್ರತಿಗೃಹ್ಯತಾಂ　　　॥ ೭ ॥**

**ವಾಮವ್ಯವಾಯಧರ್ಮಸ್ತ್ವಂ ಪ್ರಜಾಸರ್ಗಮಿಮಂ ಪುನಃ ।**
**ತದ್ವಿಧಾಯಾಂ ಚ ಕಾಮಿನ್ಯಾಂ ಭೂರಿಶೋ ಭಾವಯಿಷ್ಯಸಿ　　　॥ ೮ ॥**

**॥ ಬ್ರಹ್ಮೋವಾಚ ॥**

**ತತಸ್ಸಮುತ್ಪಾದಯಿತುಂ ಪ್ರಜಾ ಮೈಥುನಧರ್ಮತಃ ।**
**ಉಪಯೇಮೇ ವೀರಣಸ್ಯ ನಿದೇಶಾನ್ಮೇ ಸುತಾಂ ತತಃ　　　॥ ೯ ॥**

**ಅಥ ತಸ್ಯಾಂ ಸ್ವಪತ್ನ್ಯಾಂ ಚ ವೀರಿಣ್ಯಾಂ ಸ ಪ್ರಜಾಪತಿಃ ।**
**ಹರ್ಯಶ್ವಸಂಜ್ಞಾನಯುತಂ ದಕ್ಷಃ ಪುತ್ರಾನಜೀಜನತ್　　　॥ ೧೦ ॥**

**ಅಪೃಥಗ್ಧರ್ಮಶೀಲಾಸ್ತೇ ಸರ್ವ ಆರ್ಸ ಸುತಾ ಮುನೇ ।**
**ಪಿತೃಭಕ್ತಿರತಾ ನಿತ್ಯಂ ವೇದಮಾರ್ಗಪರಾಯಣಾಃ　　　॥ ೧೧ ॥**

೭. ಪಾಂಚಜನನೆಂಬ ಮುನಿಗೆ ಅಥವಾ ವೀರಣಮುನಿಗೆ ಅಸಿಕ್ನಿಯೆಂಬ ಸುಂದರಿಯಾದ ಪುತ್ರಿಯಿರುವಳು. ಎಲೈ ದಕ್ಷನೇ, ಆ ಅಸಿಕ್ನಿಯನ್ನು ನೀನು ಪತ್ನಿಯಾಗಿ ಪರಿಗ್ರಹಿಸು.

೮. ಬಳಿಕ ನೀನು ಆ ನಿನ್ನ ಪತ್ನಿಯಲ್ಲಿ ಮೈಥುನಧರ್ಮದಿಂದ ಪ್ರಜೆಗಳನ್ನು ಸೃಷ್ಟಿಮಾಡು ಇದೇ ಕ್ರಮದಿಂದ ಮುಂದೆ ಸೃಷ್ಟಿಯು ಬೆಳೆಯುವುದು ಎಂದನು.

೯. ಬ್ರಹ್ಮನು ಹೇಳಿದನು:—ಎಲೈ ನಾರದ, ಆಮೇಲೆ ದಕ್ಷನು ಮೈಥುನ ಧರ್ಮದಿಂದ ಪ್ರಜೆಗಳನ್ನು ಸೃಷ್ಟಿಸಲುದ್ಯುಕ್ತನಾದನು, ನನ್ನಾಜ್ಞೆಯಂತೆ ವೀರಣ ಮುನಿಯ ಸುತೆಯಾದ ಆಸಿಕ್ನಿಯನ್ನು ಮದುವೆಯಾದನು.

೧೦. ಬಳಿಕ ತನ್ನ ಹೆಂಡತಿಯಾದ ವೀರಣಿಯಲ್ಲಿ ದಕ್ಷನು ಹರ್ಯಶ್ವರೆಂದು ಹೆಸರುಳ್ಳ ಹತ್ತು ಸಾವಿರ ಜನ ಪುತ್ರರನ್ನು ಉತ್ಪಾದನೆಮಾಡಿದನು.

೧೧. ಆ ದಕ್ಷಪುತ್ರರೆಲ್ಲರೂ ಒಂದೇ ವಿಧವಾದ ಧರ್ಮ ಮತ್ತು ಶೀಲವುಳ್ಳವರಾಗಿಯೂ ತಂದೆಯಲ್ಲಿ ಭಕ್ತಿಯುಳ್ಳವರಾಗಿಯೂ ಸದಾ ವೇದೋಕ್ತಮಾರ್ಗದಲ್ಲಿ ನಡೆಯುವವರಾಗಿಯೂ ಇದ್ದರು.

ಪಿತೃಪ್ರೋಕ್ತಾಃ ಪ್ರಜಾಸರ್ಗಕರಣಾರ್ಥಂ ಯಯುರ್ದಿಶಂ ।
ಪ್ರತೀಚೀಂ ತಪಸೇ ತಾತ ಸರ್ವೇ ದಾಕ್ಷಾಯಣಾಸ್ಸುತಾಃ ॥ ೧೨ ॥

ತತ್ರ ನಾರಾಯಣಸರಸ್ತೀರ್ಥಂ ಪರಮಪಾವನಂ ।
ಸಂಗಮೋ ಯತ್ರ ಸಂಜಾತೋ ದಿವ್ಯಸಿಂಧುಸಮುದ್ರಯೋಃ ॥ ೧೩ ॥

ತದುಪಸ್ಪರ್ಶನಾದೇವ ಪ್ರೋತ್ಪನ್ನಮತಯೋಽಭವನ್ ।
ಧರ್ಮೇ ಪಾರಮಹಂಸ್ಯೇ ಚ ವಿನಿರ್ಧೂತಮಲಾಶಯಾಃ ॥ ೧೪ ॥

ಪ್ರಜಾವಿವೃದ್ಧಯೇ ತೇ ವೈ ತೇಪಿರೆ ತತ್ರ ಸತ್ತಮಾಃ ।
ದಾಕ್ಷಾಯಣಾ ದೃಢಾತ್ಮಾನಃ ಪಿತ್ರಾದೇಶಸುಸಂಯುತಾಃ ॥ ೧೫ ॥

ತ್ವಂ ಚ ತಾನ್ ನಾರದ ಜ್ಞಾತ್ವಾ ತಪತಸ್ಸೃಷ್ಟಿಹೇತವೇ ।
ಅಗಮಸ್ತತ್ರ ಭೂರೀಣಿ ಹಾರ್ದಮಾಜ್ಞಾಯ ಮಾಪತೇಃ ॥ ೧೬ ॥

---

೧೨. ದಕ್ಷನು ಆ ಪುತ್ರರನ್ನು ಕುರಿತು ಪ್ರಜೆಗಳನ್ನು ಸೃಷ್ಟಿಮಾಡಿ ಎಂದು ಆಜ್ಞಾಪಿಸಲು ಅದಕ್ಕಾಗಿ ಅವರು ತಪಸ್ಸನ್ನಾಚರಿಸಲು ಪಶ್ಚಿಮದಿಕ್ಕನ್ನು ಕುರಿತು ತೆರಳಿದರು.

೧೩. ಆ ಪಶ್ಚಿಮದಿಕ್ಕಿನಲ್ಲಿ ನಾರಾಯಣಸರಸ್ಸೆಂಬ ತುಂಬಾ ಪವಿತ್ರವಾದ ತೀರ್ಥವಿರುವುದು. ಆ ತೀರ್ಥದಲ್ಲಿ ದೇವಗಂಗೆ ಮತ್ತು ಸಮುದ್ರಗಳ ಸಂಗಮವಾಗಿರುವುದು.

೧೪. ಆ ತೀರ್ಥದ ಜಲವನ್ನು ಸ್ಪರ್ಶಮಾಡಿದೊಡನೆಯೇ ಆ ದಕ್ಷಪುತ್ರರು ಪರಿಶುದ್ಧರಾಗಿ ಧರ್ಮ ಮತ್ತು ಮೋಕ್ಷಸಾಧನವಾದ ಜ್ಞಾನ ಇವುಗಳಲ್ಲಿ ತುಂಬಾ ತಿಳಿವಳಿಕೆಯುಳ್ಳವರಾದರು.

೧೫. ಅಲ್ಲಿ ಆ ದಕ್ಷಸುತರು ತಂದೆಯ ಆಜ್ಞೆಯಂತೆ ಪ್ರಜಾಸೃಷ್ಟಿಯನ್ನು ಬೆಳೆಸಲು ದೃಢವಾದ ನಿಯಮಗಳಿಂದ ತಪಸ್ಸನ್ನಾಚರಿಸಿದರು.

೧೬. ಎಲೈ ನಾರದ! ದಕ್ಷಸುತರು ಸೃಷ್ಟಿಗಾಗಿ ತಪಸ್ಸನ್ನಾಚರಿಸುತ್ತಿರುವುದನ್ನು ಕೇಳಿ ನೀನು ಹರಿಯ ಆಜ್ಞೆಯಂತೆ ಅವರ ಬಳಿಗೆ ಹೋದೆಯಷ್ಟೆ?

ಅದೃಷ್ಟ್ವಾಂತಂ ಭುವಸ್ಸೃಷ್ಟಿಂ ಕಥಂ ಕರ್ತುಂ ಸಮುದ್ಯತಾಃ ।
ಹರ್ಯಶ್ವಾ ದಕ್ಷತನಯಾ ಇತ್ಯವೋಚಸ್ತ್ವಮಾದರಾತ್ ॥ ೧೭ ॥

ತಂ ನಿಶಮ್ಯಾಥ ಹರ್ಯಶ್ವಾಸ್ತೇ ತ್ವದುಕ್ತಮತಂದ್ರಿತಾಃ ।
ಔತ್ಪತ್ತಿಕಧಿಯಸ್ಸರ್ವೇ ಸ್ವಯಂ ವಿಮಮೃಶುರ್ಭೃಶಂ ॥ ೧೮ ॥

ಸುಶಾಸ್ತ್ರಜನಕಾದೇಶಂ ಯೋ ನ ವೇದ ನಿವರ್ತಕಂ ।
ಸ ಕಥಂ ಗುಣವಿಶ್ರಂಭೀ ಕರ್ತುಂ ಸರ್ಗಮುಪಕ್ರಮೇತ್ ॥ ೧೯ ॥

ಇತಿ ನಿಶ್ಚಿತ್ಯ ತೇ ಪುತ್ರಾಸ್ಸುಧಿಯಶ್ಚೈಕಚೇತಸಃ ।
ಪ್ರಣಮ್ಯ ತಂ ಪರಿಕ್ರಮ್ಯಾಯಯುರ್ಮಾರ್ಗಮನಿವರ್ತಕಂ ॥ ೨೦ ॥

ನಾರದ ತ್ವಂ ಮನಶ್ಶಂಭೋರ್ಲೋಕಾನ್ಯಚರೋ ಮುನೇ ।
ನಿರ್ವಿಕಾರೋ ಮಹೇಶಾನಮನೋವೃತ್ತಿಕರಸ್ತದಾ ॥ ೨೧ ॥

---

೧೭. ಆಗ ಆ ದಕ್ಷಸುತರನ್ನು ಕುರಿತು ನೀನು—ಎಲೈ ದಕ್ಷಪುತ್ರರಾದ ಹರ್ಯಶ್ವರೇ, ಭೂಮಿಯಲ್ಲಿಯ ಸೃಷ್ಟಿಯನ್ನೇ ನೋಡದೆ ನೀವು ಆ ಸೃಷ್ಟಿಗಾಗಿ ತಪಸ್ಸನ್ನಾಚರಿಸುತ್ತಲಿರುವಿರಿ ಎಂದು ಕೇಳಲು,

೧೮. ಆಗ ಆ ಹರ್ಯಶ್ವರು ನಿನ್ನ ಮಾತನ್ನು ಕೇಳಿ ಸೃಷ್ಟಿಯನ್ನು ಮಾಡುವ ವಿಚಾರದಲ್ಲಿ ತುಂಬಾ ವಿಮರ್ಶೆಯನ್ನು ಮಾಡಿದರು.

೧೯-೨೦. ಶಾಸ್ತ್ರ ಮತ್ತು ಗುರುಗಳ ಉಪದೇಶ ಇವುಗಳಿಂದ ಸೃಷ್ಟಿಯ ಕ್ರಮವನ್ನು ತಿಳಿಯದಿದ್ದವನು ಪ್ರಕೃತಿಯ ಗುಣಗಳಿಂದಾಗುವ ಸೃಷ್ಟಿಯನ್ನು ಹೇಗೆ ಮಾಡುವನು? ಮಾಡುವುದು ಅಸಾಧ್ಯವು ಎಂದು ನಿಶ್ಚಯಿಸಿ ಆ ದಕ್ಷಪುತ್ರರೆಲ್ಲರೂ ಒಂದೇ ರೀತಿಯಾದ ಬುದ್ಧಿಯುಳ್ಳವರಾಗಿ ನಾರದನಾದ ನಿನಗೆ ನಮಸ್ಕರಿಸಿ ಪುನರ್ಜನ್ಮ ರಹಿತವಾದ ಜ್ಞಾನಮಾರ್ಗವನ್ನು ಹಿಡಿದು ಮುಕ್ತರಾದರು.

೨೧. ಎಲೈ ನಾರದ, ನೀನು ಮನಸ್ಸಿನಲ್ಲಿ ಶಂಕರಲೋಕದಲ್ಲಿಯೇ ಸಂಚರಿಸುವನು. ಶಂಕರನನ್ನೇ ಮನಸ್ಸಿನಲ್ಲಿ ಧ್ಯಾನಿಸುವನು. ಹೊರಗಿನ ವಿಕಾರವಿಲ್ಲದವನು. ಇಂತಹ ನೀನು ಸಾಮಾನ್ಯಜನಗಳಿಗೆ ಮಹೇಶ್ವರನಲ್ಲಿ ಭಕ್ತಿಯುಂಟಾಗುವಂತೆ ಮಾಡಿ ಮುಕ್ತಿಮಾರ್ಗಕ್ಕೆ ಹಚ್ಚುವೆ. ಅದರಂತೆ ಆ ದಕ್ಷಸುತರನ್ನೂ ಉಪದೇಶಿಸಿ ಮುಕ್ತಿ ಮಾರ್ಗದಲ್ಲಿ ಬಿಟ್ಟಿರುವೆ.

ಕಾಲೇ ಗತೇ ಬಹುತರೇ ಮಮ ಪುತ್ರಃ ಪ್ರಜಾಪತಿಃ ।
ನಾಶಂ ನಿಶಮ್ಯ ಪುತ್ರಾಣಾಂ ನಾರದಾದನ್ವತಪ್ಯತ ॥ ೨೨ ॥

ಮುಹುರ್ಮುಹುರುವಾಚೇದಂ ಸುಪ್ರಜತ್ವಂ ಶುಚಾಂ ಪದಂ ।
ಶುಶೋಚ ಬಹುಶೋ ದಕ್ಷಶ್ಶಿವಮಾಯಾವಿಮೋಹಿತಃ ॥ ೨೩ ॥

ಅಹಮಾಗತ್ಯ ಸುಪ್ರೀತ್ಯಾ ಸಾಂತ್ವಯಂ ದಕ್ಷಮಾತ್ಮಜಂ ।
ಶಾಂತಿಭಾವಂ ಪ್ರಶ್ಯೈರ್ವ ದೈವಂ ಪ್ರಬಲಮಿತ್ಯುತ ॥ ೨೪ ॥

ಅಥ ದಕ್ಷಃ ಪಂಚಜನ್ಯಾಂ ಮಯಾ ಸ ಪರಿಸಾಂತ್ವಿತಃ ।
ಸಬಲಾಶ್ವಾಭಿಧಾನ್ ಪುತ್ರಾನ್ ಸಹಸ್ರಂ ಚಾಪ್ಯಜೀಜನತ್ ॥ ೨೫ ॥

ತೇಽಪಿ ಜಗ್ಮುಸ್ತತ್ರ ಸುತಾಃ ಪಿತ್ರಾದಿಷ್ಟಾಃ ದೃಢವ್ರತಾಃ ।
ಪ್ರಜಾಸರ್ಗೇ ಯತ್ರ ಸಿದ್ಧಾಃ ಸ್ವಪೂರ್ವಭ್ರಾತರೋ ಯಯುಃ ॥ ೨೬ ॥

---

೨೨. ಕೆಲವುಕಾಲ ಕಳೆದಮೇಲೆ ನನ್ನ ಪುತ್ರನಾದ ದಕ್ಷಪ್ರಜಾಪ್ರತಿಯು ನಿನ್ನಿಂದ ತನ್ನ ಪುತ್ರರು ತಿರುಗಿ ಬರದಿರುವಂತಹ ಜ್ಞಾನಮಾರ್ಗವನ್ನು ಹಿಡಿದುದನ್ನು ಕೇಳಿ ತುಂಬಾ ದುಃಖಪಟ್ಟನು.

೨೩. ಆ ದಕ್ಷನು ಒಳ್ಳೆಯ ಮಕ್ಕಳು ಜನಿಸುವುದು ಕೊನೆಗೆ ದುಃಖಕ್ಕಾಗಿಯೇ ಎಂದು ಪುನಃ ಪುನಃ ಹೇಳಿದನು. ಶಿವಮಾಯೆಯಿಂದ ಮೋಹಿತನಾಗಿ ತುಂಬಾ ಶೋಕಗೊಂಡನು.

೨೪. ಆಗ ನಾನು ನನ್ನ ಪುತ್ರನಾದ ದಕ್ಷನ ಬಳಿಗೆ ಹೋಗಿ ಅದೃಷ್ಟವು ಬಲವಾದುದೆಂದೂ ಶಾಂತಿಯಿಂದಿರಬೇಕೆಂದೂ ಉಪದೇಶಿಸಿ ಸಮಾಧಾನಮಾಡಿದೆನು.

೨೫. ಬಳಿಕ ಸಮಾಧಾನಗೊಂಡು ದಕ್ಷನು ತಿರುಗಿ ತನ್ನ ಪತ್ನಿಯಾದ ಅಸಿಕ್ನಿಯಲ್ಲಿ ಸಬಲಾಶ್ವರೆಂಬ ಹೆಸರುಳ್ಳ ಸಾವಿರ ಪುತ್ರರನ್ನು ಉತ್ಪತ್ತಿಮಾಡಿದನು.

೨೬. ಜಿತೇಂದ್ರಿಯರಾದ ಆ ಸಬಲಾಶ್ವರೆಂಬ ದಕ್ಷಪುತ್ರರೂ ಸಹ ತಮ್ಮ ತಂದೆಯಿಂದ ಆಜ್ಞಾಪಿಸಲ್ಪಟ್ಟವರಾಗಿ ಪ್ರಜೆಗಳನ್ನು ಸೃಷ್ಟಿಸಲು, ತಮ್ಮ ಸಹೋದರರಾದ ಹರ್ಯಶ್ವರು ಸಿದ್ಧಿಯನ್ನು ಹೊಂದಿದ ಆ ನಾರಾಯಣಸರಸ್ಸಿನ ಬಳಿಗೆ ಹೋದರು.

**ತದುಪಸ್ಪರ್ಶನಾದೇವ ನಷ್ಟಾಘಾ ವಿಮಲಾऽऽಶಯಾಃ ।**
**ತೇಪುರ್ಮಹತ್ತಪಸ್ತತ್ರ ಜಪಂತೋ ಬ್ರಹ್ಮ ಸುವ್ರತಾಃ ॥ ೨೭ ॥**

**ಪ್ರಜಾಸರ್ಗೋದ್ಯತಾಂಸ್ತಾನ್ ವೈ ಜ್ಞಾತ್ವಾ ಗತ್ವೇತಿ ನಾರದ ।**
**ಪೂರ್ವವಚ್ಚಾಗದೋ ವಾಕ್ಯಂ ಸಂಸ್ಮರನ್ನೈಶ್ವರೀಂ ಗತಿಂ ॥ ೨೮ ॥**

**ಭ್ರಾತೃಪಂಥಾನಮಾದಿಶ್ಯ ತ್ವಂ ಮುನೇऽಮೋಘದರ್ಶನಃ ।**
**ಅಯಾಶ್ಚೋರ್ಧ್ವಗತಿಂ ತೇऽಪಿ ಭ್ರಾತೃಮಾರ್ಗಂ ಯಯುಸ್ಸುತಾಃ ॥ ೨೯ ॥**

**ಉತ್ಪಾತಾನ್ ಬಹುಶೋऽಪಶ್ಯತ್ತದೈವ ಸ ಪ್ರಜಾಪತಿಃ ।**
**ವಿಸ್ಮಿತೋऽಭೂತ್ಸ ಮೇ ಪುತ್ರೋ ದಕ್ಷೋ ಮನಸಿ ದುಃಖಿತಃ ॥ ೩೦ ॥**

**ಪೂರ್ವವತ್ತ್ವತ್ಕೃತಂ ದಕ್ಷಃ ಶುಶ್ರಾವ ಚಕಿತೋ ಭೃಶಂ ।**
**ಪುತ್ರನಾಶಂ ಶುಶೋಚಾತಿ ಪುತ್ರಶೋಕವಿಮೂರ್ಛಿತಃ ॥ ೩೧ ॥**

೨೭. ಅಲ್ಲಿ ಆ ತೀರ್ಥಜಲವನ್ನು ಸ್ಪರ್ಶಮಾಡಿದೊಡನೆಯೇ ಪಾಪವನ್ನು ಕಳೆದುಕೊಂಡು ಪರಿಶುದ್ಧರಾಗಿ ಪರಬ್ರಹ್ಮವಸ್ತುವನ್ನು ಜಪಿಸುತ್ತಾ ಮಹತ್ತಾದ ನಿಯಮಗಳಿಂದ ತಪಸ್ಸನ್ನಾಚರಿಸಿದರು.

೨೮. ಎಲೈ ನಾರದ, ಆಗ ನೀನು ಪ್ರಜಾಸೃಷ್ಟಿಗಾಗಿ ದಕ್ಷಪುತ್ರರು ತಪಸ್ಸು ಮಾಡುತ್ತಿರುವರೆಂದು ತಿಳಿದು ಈಶ್ವರಗತಿಯನ್ನು ಸ್ಮರಿಸುತ್ತಾ ಅವರ ಬಳಿಗೆ ಹೋಗಿ ಹಿಂದೆ ಹರ್ಯಶ್ವರಿಗೆ ಹೇಳಿದಂತೆಯೇ ಅವರಿಗೂ ಹೇಳಿದೆ.

೨೯. ಎಲೈ ನಾರದ, ಆ ಸಬಲಾಶ್ವರಿಗೂ ಅವರಣ್ಣಂದಿರಿಗೆ ಉಪದೇಶಿಸಿದ ಮುಕ್ತಿಮಾರ್ಗವನ್ನುಪದೇಶಿಸಿದೆ. ಆಗ ಅವರೂ ಸಹ ತಮ್ಮ ಅಣ್ಣಂದಿರು ಹಿಡಿದ ಮುಕ್ತಿಮಾರ್ಗವನ್ನೇ ಹಿಡಿದರು.

೩೦. ಆ ಕಾಲದಲ್ಲಿಯೇ ನನ್ನ ಪುತ್ರನಾದ ದಕ್ಷಬ್ರಹ್ಮನು ಅನೇಕ ಅನಿಷ್ಟವಾದ ಉತ್ಪಾತಗಳನ್ನು ನೋಡಿದನು. ಆದರಿಂದ ಅವನಿಗೆ ಆಗ ತುಂಬಾ ಆಶ್ಚರ್ಯವೂ ದುಃಖವೂ ಉಂಟಾಯಿತು.

೩೧. ಹಿಂದಿನಂತೆ ನಿನ್ನಿಂದಲೇ ತನ್ನ ಪುತ್ರರು ನಾಶವಾದುದನ್ನು ಕೇಳಿ ಆ ದಕ್ಷನು ವಿಸ್ಮಯಗೊಂಡು ಪುತ್ರನಾಶದಿಂದುಂಟಾದ ಶೋಕದಿಂದ ಮೋಹಗೊಂಡು ತುಂಬ ದುಃಖಪಟ್ಟನು.

ಚುಕ್ರೋಧ ತುಷ್ಯಂ ದಕ್ಷೋಽಸೌ ದುಷ್ಟೋಽಯಮಿತಿ ಚಾಬ್ರವೀತ್ ।
ಆಗತಸ್ತತ್ರ ದೈವಾತ್ತ್ವಮನುಗ್ರಹಕರಸ್ತದಾ ॥ ೩೨ ॥
ಶೋಕಾಽಽವಿಷ್ಟಸ್ಸದಕ್ಷೋ ಹಿ ರೋಷವಿಸ್ಫುರಿತಾಧರಃ ।
ಉಪಲಭ್ಯ ತಮಾಹತ್ಯ ಧಿಗ್ಧಿಕ್ಪ್ರೋಚ್ಯ ವ್ಯಗರ್ಹಯತ್ ॥ ೩೩ ॥

॥ ದಕ್ಷ ಉವಾಚ ॥

ಕಿಂ ಕೃತಂ ತೇಽಧಮುಶ್ರೇಷ್ಠ ಸಾಧೂನಾಂ ಸಾಧುಲಿಂಗತಃ ।
ಭಿಕ್ಷೋರ್ಮಾರ್ಗೋಽರ್ಭಕಾನಾಂ ವೈ ದರ್ಶಿತಸ್ಸಾಧುಕಾರಿ ನೋ ॥ ೩೪ ॥
ಋಣೈಸ್ತ್ರಿಭಿರಮುಕ್ತಾನಾಂ ಲೋಕಯೋರುಭಯೋಃ ಕೃತಃ ।
ವಿಘಾತಃಶ್ರೇಯಸೋಽಮೀಷಾಂ ನಿರ್ದಯೇನ ಶಠೇನ ತೇ ॥ ೩೫ ॥
ಋಣಾನಿ ತ್ರೀಣ್ಯಪಾಕೃತ್ಯ ಯೋ ಗೃಹಾತ್ಪ್ರವ್ರಜೇತ್ಪುಮಾನ್ ।
ಮಾತರಂ ಪಿತರಂ ತ್ಯಕ್ತ್ವಾ ಮೋಕ್ಷಮಿಚ್ಛನ್ ವ್ರಜತ್ಯಧಃ ॥ ೩೬ ॥

---

೩೨. ಆಗ ದಕ್ಷನು ನಿನ್ನನ್ನು ದುಷ್ಟನೆಂದು ಭಾವಿಸಿ ನಿನ್ನಲ್ಲಿ ತುಂಬಾ ಕೋಪ ಗೊಂಡನು. ಆಗ ಅನುಗ್ರಹಿಸುವ ಸ್ವಭಾವದವನಾದ ನೀನೂ ಸಹ ಅಕಸ್ಮಾತ್ತಾಗಿ ಆ ದಕ್ಷನ ಬಳಿಗೆ ಬರಲು,

೩೩. ಆಗ ಶೋಕಿಸುತ್ತಿರುವ ಆ ದಕ್ಷನು ನಿನ್ನನ್ನು ನೋಡಿ ಕೋಪದಿಂದ ತುಟಿಗಳು ನಡುಗುತ್ತಿರಲು—ಛೀ ಮೂಢ, ನಿನಗೆ ನಾಚಿಗೆ ಇಲ್ಲವೇ ? ಈ ರೀತಿ ಅಕಾರ್ಯವನ್ನು ಮಾಡಬಹುದೇ ಎಂದು ಹೇಳಿ ತುಂಬಾ ನಿಂದಿಸಿದನು.

೩೪. ದಕ್ಷನು ನಾರದನಿಗೆ ಮತ್ತೂ ಹೇಳಿದನು :—ಎಲೈ ಮೂರ್ಖಶಿರೋ ಮಣಿ, ಸಾಧುಗಳಾದ ನನ್ನ ಪುತ್ರರಿಗೆ ಸಾಧುವೇಷವನ್ನು ಧರಿಸಿ ಏನನ್ನು ಉಪದೇಶಿ ಸಿರುವೆ? ಆ ನನ್ನ ತಿಳಿವಳಿಕೆಯಿಲ್ಲದಿರುವ ಮಕ್ಕಳಿಗೆ ಸನ್ಯಾಸಿಯ ಮಾರ್ಗವನ್ನೇಕೆ ಉಪದೇಶಿಸಿದೆ ? ಇದು ನ್ಯಾಯವಾದುದಲ್ಲ.

೩೫. ದೇವಋಣ, ಪಿತೃಋಣ, ಋಷಿಋಣ ಇವುಗಳನ್ನು ತೀರಿಸದವರಿಗೆ ಇಹಪರಗಳಲ್ಲಿ ಮುಕ್ತಿಯಿಲ್ಲವೆಂದು ಕಾಣೆಯಾ ? ಹೀಗಿದ್ದರೂ ಆ ಋಣಗಳಿಂದ ಮುಕ್ತರಾಗದಿರುವ ಆ ನನ್ನ ಪುತ್ರರು ಹಾಳಾಗುವಂತೆ ನಿರ್ದಯನೂ ಮೂರ್ಖನೂ ಆದ ನೀನು ಅವರಿಗೆ ಈಗಲೇ ಜ್ಞಾನಮಾರ್ಗವನ್ನು ಉಪದೇಶಿಸಿ ಅವರನ್ನು ಕೆಡಿಸ ಬಹುದೇ ?

೩೬. ಹಿಂದೆ ಹೇಳಿದ ಮೂರು ಋಣಗಳನ್ನು ತೀರಿಸದೇ ತಂದೆತಾಯಿಗಳನ್ನು

ನಿರ್ದಯಸ್ತ್ವಂ ಸುನಿರ್ಲಜ್ಜಃ ಶಿಶುಧೀಭಿದ್ಯಶೋಽಪಹಾ ।
ಹರೇಃ ಪಾರ್ಷದಮಧ್ಯೇ ಹಿ ವೃಥಾ ಚರಸಿ ಮೂಢಧೀಃ　　　　॥ ೩೭ ॥

ಮುಹುರ್ಮುಹುರಭದ್ರಂ ತ್ವಮುಚರೋ ಮೇಽಧಮಾಧಮ ।
ವಿಭವೇದ್ಭ್ರಮತಸ್ತೇಽತಃ ಪದಂ ಲೋಕೇಷು ನ ಸ್ಥಿರಂ　　　　॥ ೩೮ ॥

ಶಶಾಪೇತಿ ಶುಚಾ ದಕ್ಷಸ್ತ್ವಾಂ ತದಾ ಸಾಧುಸಮ್ಮತಂ ।
ಬುಬೋಧ ನೇಶ್ವರೇಚ್ಛಾಂ ಸ ಶಿವಮಾಯಾವಿಮೋಹಿತಃ　　　　॥ ೩೯ ॥

ಶಾಪಂ ಪ್ರತ್ಯಗ್ರಹೀಚ್ಚ ತ್ವಂ ಸ ಮುನೇ ನಿರ್ವಿಕಾರತಃ ।
ಏಷ ಏವ ಬ್ರಹ್ಮಸಾಧುಸ್ಸಹತೇ ಸೋಽಪಿ ಚ ಸ್ವಯಂ　　　　॥ ೪೦ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ
ಸತೀಖಂಡೇ ತ್ರಯೋದಶೋಽಧ್ಯಾಯಃ.

---

ಬಿಟ್ಟು ಯಾವನು ಮುಕ್ತಿಯನ್ನು ಹೊಂದುವ ಇಚ್ಛೆಯಿಂದ ಸನ್ಯಾಸಿಯಾಗುವನೋ ಅವನು ಅಧೋಗತಿಯನ್ನು ಹೊಂದುವನು.

೩೭. ಆದರೆ ನೀನು ದಯೆಯಿಲ್ಲದವನೂ ಲಜ್ಜೆಯಿಲ್ಲದವನೂ ಆಗಿರುವೆ. ತಿಳಿವಳಿಕೆಯಿಲ್ಲದ ಆ ನನ್ನ ಚಿಕ್ಕಮಕ್ಕಳ ಮನಸ್ಸನ್ನು ಕೆಡಿಸಿ ನಿನ್ನ ಯಶಸ್ಸನ್ನೇ ಕೆಡಿಸಿಕೊಂಡಿರುವೆ. ಅಪಯಶಸ್ಸಿಗೆ ಗುರಿಯಾಗಿರುವೆ. ಇಂತಹ ನೀನು ವಿಷ್ಣುವಿನ ಪಾರ್ಷದಗಣಗಳ ಮಧ್ಯದಲ್ಲಿರಲು ಯೋಗ್ಯನಲ್ಲ.

೩೮-೩೯. ಎಲೈ ಮೂರ್ಖ! ಪುನಃ ಪುನಃ ನನಗೆ ಕೆಡುಕನ್ನು ಮಾಡಿರುವೆ. ಆದ ಕಾರಣ ನೀನು ಯಾವಾಗಲೂ ಮೂರು ಲೋಕಗಳನ್ನೂ ಸಂಚರಿಸುತ್ತಲೇ ಇರು. ಒಂದುಕ್ಷಣವೂ ನಿನ್ನ ಕಾಲುಗಳು ಒಂದೆಡೆಯಲ್ಲಿ ಸ್ಥಿರವಾಗಿ ಇರದಿರಲಿ ಎಂದು ಕೋಪಗೊಂಡ ದಕ್ಷನು ಆಗ ಸಾಧುಶ್ರೇಷ್ಠನಾದ ನಿನ್ನನ್ನು ಶಪಿಸಿದನು. ಶಿವಮಾಯೆಯಿಂದ ಮೋಹಿತನಾದ ಅವನು ಈಶ್ವರೇಚ್ಛೆಯೇ ಹಾಗಿರುವುದೆಂದು ಆಗ ತಿಳಿಯಲಿಲ್ಲ.

೪೦. ಎಲೈ ನಾರದ! ಆಗ ನೀನು ಯಾವ ವಿಕಾರವೂ ಇಲ್ಲದೆ ಶಾಂತಿಯಿಂದ ದಕ್ಷನ ಶಾಪವನ್ನು ಪರಿಗ್ರಹಿಸದೆ. ಬ್ರಹ್ಮನಿಷ್ಠನಾದ ಸಾಧುವಿನ ಲಕ್ಷಣವೇ ಇದು. ಆ ಸಾಧುವೂ ಸಹ ಎಲ್ಲ ವಿಧವಾದ ತೊಂದರೆಗಳನ್ನೂ ಸಹನೆಯಿಂದ ಪರಿಗ್ರಹಿಸಿ ಅನುಭವಿಸುವನು ಎಂದನು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಹದಿಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಚತುರ್ದಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

**ಏತಸ್ಮಿನ್ನಂತರೇ ದೇವಮುನೇ ಲೋಕಪಿತಾಮಹಃ ।**
**ತತ್ರಾಗಮಮಹಂ ಪ್ರೀತ್ಯಾ ಜ್ಞಾತ್ವಾ ತಚ್ಚರಿತಂ ದ್ರುತಂ ॥ ೧ ॥**

**ಅಸಾಂತ್ವಯಮಹಂ ದಕ್ಷಂ ಪೂರ್ವವತ್ಸುವಿಚಕ್ಷಣಃ ।**
**ಅಕಾರ್ಷಂ ತೇನ ಸುಸ್ನೇಹಂ ತವ ಸುಪ್ರೀತಿಮಾವಹ ॥ ೨ ॥**

**ಸ್ವಾತ್ಮಜಂ ಮುನಿವರ್ಯಂ ತ್ವಾಂ ಸುಪ್ರೀತ್ಯಾ ದೇವವಲ್ಲಭಂ ।**
**ಸಮಾಶ್ವಾಸ್ಯ ಸಮಾದಾಯ ಪ್ರತ್ಯಪದ್ಯಂ ಸ್ವಧಾಮ ಹ ॥ ೩ ॥**

### ಹದಿನಾಲ್ಕನೆಯ ಅಧ್ಯಾಯವು.

೧-೨. ಬ್ರಹ್ಮನು ಹೇಳಿದನು:—ಎಲೈ ನಾರದ, ಈ ಮಧ್ಯದಲ್ಲಿ ನಡೆದ ಸಮಾಚಾರವನ್ನು ತಿಳಿದು ಲೋಕಪಿತಾಮಹನೆನಿಸಿದ ನಾನು ಆ ಕೂಡಲೇ ನೀವೀರ್ವರೂ ಇರುವಲ್ಲಿಗೆ ಬಂದು ಆ ದಕ್ಷನನ್ನು ಮೊದಲಿನಂತೆ ಪ್ರೀತಿವಚನಗಳಿಂದ ಸಮಾಧಾನಗೊಳಿಸಿದೆನು. ಮತ್ತು ನೀನು ಸಂತೋಷಗೊಳ್ಳುವಂತೆ ನಿನಗೂ ಆ ದಕ್ಷನಿಗೂ ಪರಸ್ಪರಸ್ನೇಹವನ್ನುಂಟುಮಾಡಿದೆನು.

೩. ಆಮೇಲೆ ನನ್ನ ಪ್ರಿಯಪುತ್ರನೂ ದೇವತೆಗಳಿಗೆ ಬೇಕಾದವನೂ ಆದಂತಹ ನಿನ್ನನ್ನೂ ಸಮಾಧಾನಗೊಳಿಸಿ ನಿನ್ನೊಡನೆ ನನ್ನ ಸ್ಥಾನಕ್ಕೆ ಬಂದೆನು.

ತತಃ ಪ್ರಜಾಪತಿರ್ದಕ್ಷೋಽನುನೀತೋ ಮೇ ನಿಜಸ್ತ್ರಿಯಾಂ ।
ಜನಯಾಮಾಸ ದುಹಿತೄಃ ಸುಭಗಾಃ ಷಷ್ಟಿಸಂಮಿತಾಃ ॥ ೪ ॥

ತಾಸಾಂ ವಿವಾಹಂ ಕೃತವಾನ್ ಧರ್ಮಾದಿಭಿರತಂದ್ರಿತಃ ।
ತದೇವ ಶೃಣು ಸುಪ್ರೀತ್ಯಾ ಪ್ರವದಾಮಿ ಮುನೀಶ್ವರ ॥ ೫ ॥

ದದೌ ದಶ ಸುತಾ ದಕ್ಷೋ ಧರ್ಮಾಯ ವಿಧಿವನ್ಮುನೇ ।
ತ್ರಯೋದಶ ಕಶ್ಯಪಾಯ ಮುನಯೇ ತ್ರಿನವೇಂದವೇ ॥ ೬ ॥

ಭೂತಾಂಗಿರಃಕೃಶಾಶ್ವೇಭ್ಯೋ ದ್ವೇ ದ್ವೇ ಪುತ್ರೀ ಪ್ರದತ್ತವಾನ್ ।
ತಾರ್ಕ್ಷ್ಯಾಯ ಚಾಪರಾಃ ಕನ್ಯಾಃ ಪ್ರಸೂತಿಪ್ರಸವೈರ್ಯತಃ ॥ ೭ ॥

ತ್ರಿಲೋಕಾಃ ಪೂರಿತಾಸ್ತನ್ನೋ ವರ್ಣ್ಯತೇ ವ್ಯಾಸತೋ ಭಯಾತ್ ॥ ೮ ॥

೪. ಬಳಿಕ ಸಮಾಧಾನಗೊಂಡು ದಕ್ಷಪ್ರಜಾಪತಿಯು ತನ್ನ ಪತ್ನಿಯಲ್ಲಿ ತಿರುಗಿ ಸುಂದರಿಯರಾದ ಅರವತ್ತು ಜನ ಹೆಣ್ಣುಮಕ್ಕಳನ್ನು ಪಡೆದನು.

೫. ಆ ಕನ್ಯೆಯರನ್ನು ವಿಧಿವತ್ತಾಗಿ ಧರ್ಮ ಮೊದಲಾದವರಿಗೆ ಮದುವೆ ಮಾಡಿಕೊಟ್ಟನು. ಅದನ್ನೇ ವಿಸ್ತಾರವಾಗಿ ಹೇಳುವೆನು, ಆದರದಿಂದ ಕೇಳು.

೬. ಅವರಲ್ಲಿ ಹತ್ತು ಜನ ಕನ್ಯೆಯರನ್ನು ದಕ್ಷನು ಧರ್ಮನಿಗೆ ವಿಧಿವತ್ತಾಗಿ ಮದುವೆಮಾಡಿಕೊಟ್ಟನು. ಹದಿಮೂರುಜನ ಕನ್ಯೆಯರನ್ನು ಕಶ್ಯಪಬ್ರಹ್ಮನಿಗೆ ಕೊಟ್ಟನು. ಇಪ್ಪತ್ತೇಳುಜನ ಕನ್ಯೆಯರನ್ನು ಚಂದ್ರನಿಗೆ ಕೊಟ್ಟನು.

೭-೮. ಭೂತಮುನಿ, ಅಂಗಿರಸ್ಸು, ಕೃಶಾಶ್ವ ಇವರಿಗೆ ಇಬ್ಬಿಬ್ಬರು ಕನ್ಯೆಯರನ್ನು ಮದುವೆಮಾಡಿಕೊಟ್ಟನು. ತಾರ್ಕ್ಷ್ಯ (ಗರುಡ) ನಿಗೆ ಮಿಕ್ಕ ಕನ್ಯೆಯರೆಲ್ಲರನ್ನೂ ಕೊಟ್ಟನು. ಈ ಎಲ್ಲಾ ಕನ್ಯೆಯರಿಂದ ಜನಿಸಿದ ಮಕ್ಕಳಿಂದ ಮೂರು ಲೋಕವೂ ತುಂಬಿಹೋಯಿತು. ಆ ಪ್ರಜೆಗಳೆಲ್ಲರನ್ನೂ ವಿವರವಾಗಿ ಬಿಡಿಸಿಹೇಳಲು ಸಾಧ್ಯವಿಲ್ಲ.

**ಕೇಚಿದ್ವದಂತಿ ತಾಂ ಜ್ಯೇಷ್ಠಾಂ ಮಧ್ಯಮಾಂ ಚಾಪರೇ ಶಿವಾಂ ।**
**ಸರ್ವಾನಂತರಜಾಂ ಕೇಚಿತ್ಕಲ್ಪಭೇದಾತ್ತ್ರಯಂ ಚ ಸತ್ ॥ ೯ ॥**

**ಅನಂತರಂ ಸುತೋತ್ಪತ್ತೇಃ ಸಪತ್ನೀಕಃ ಪ್ರಜಾಪತಿಃ ।**
**ದಕ್ಷೋ ದಧೌ ಸುಪ್ರೀತ್ಯಾ ತಾಂ ಮನಸಾ ಜಗದಂಬಿಕಾಂ ॥ ೧೦ ॥**

**ಅತಃ ಪ್ರೇಮ್ಣಾ ಹಿ ತುಷ್ಟಾವ ಗಿರಾ ಗದ್ಗದಯಾ ಹಿ ಸಃ ।**
**ಭೂಯೋ ಭೂಯೋ ನಮಸ್ಕೃತ್ಯ ಸಾಂಜಲಿರ್ವಿನಯಾನ್ವಿತಃ ॥ ೧೧ ॥**

**ಸಂತುಷ್ಟಾ ಸಾ ತದಾ ದೇವೀ ವಿಚಾರಂ ಮನಸೀತಿ ಚ ।**
**ಚಕ್ರೇಽವತಾರಂ ವೀರಿಣ್ಯಾಂ ಕುರ್ಯಾಂ ಪಣವಿಪೂರ್ತಯೇ ॥ ೧೨ ॥**

**ಅಥ ಸೋವಾಚ ಮನಸಿ ದಕ್ಷಸ್ಯ ಜಗದಂಬಿಕಾ ।**
**ವಿಲಲಾಸ ತದಾತೀವ ಸ ದಕ್ಷೋ ಮುನಿಸತ್ತಮ ॥ ೧೩ ॥**

೯. ದೇವಿಯ ಅವತಾರಿಯಾದ ಸತೀದೇವಿಯನ್ನು ಕೆಲವರು ದಕ್ಷನ ಹಿರಿಯ ಮಗಳೆಂದು ಹೇಳುವರು. ಕೆಲವರು ಮಧ್ಯದವಳೆನ್ನುವರು. ಇನ್ನು ಕೆಲವರು ಕೊನೆಯವಳೆನ್ನುವರು. ಆಯಾಯ ಕಲ್ಪಭೇದದಿಂದ ಈ ಮೂರು ಪಕ್ಷವೂ ಸರಿಯಾದುದು.

೧೦. ಬಳಿಕ ದಕ್ಷಬ್ರಹ್ಮನು ತಿರುಗಿ ತನಗೆ ಪುತ್ರಿಯು ಜನಿಸುವುದಕ್ಕಾಗಿ ಪತ್ನಿಯೊಡನೆ ಭಕ್ತಿಯಿಂದ ಜಗನ್ಮಾತೆಯಾದ ದೇವಿಯನ್ನು ಮನಸ್ಸಿನಲ್ಲಿ ಧ್ಯಾನಿಸಿದನು.

೧೧. ಮತ್ತೂ ದೇವಿಯನ್ನು ಭಕ್ತಿಯಿಂದ ಪುನಃಪುನಃ ನಮಸ್ಕರಿಸಿ ಅಂಜಲಿಬದ್ಧನಾಗಿ ವಿನಯದಿಂದ ಬಗ್ಗಿ ಗದ್ಗದಸ್ವರದಿಂದ ಪುನಃಪುನಃ ಸ್ತುತಿಸಿದನು.

೧೨. ದಕ್ಷನ ಸ್ತುತಿಯಿಂದ ಸಂತುಷ್ಟಳಾಗಿ ದೇವಿಯು ತನ್ನ ಪೂರ್ವಪ್ರತಿಜ್ಞೆಯಂತೆ ದಕ್ಷಪತ್ನಿಯಾದ ವೀರಣಿಯಲ್ಲಿ ಅವತಾರವನ್ನು ಮಾಡುವೆನೆಂದು ಸಂಕಲ್ಪಿಸಿದಳು.

೧೩. ಎಲೈ ನಾರದಮುನಿ ! ಬಳಿಕ ಆ ಜಗನ್ಮಾತೆಯು ದಕ್ಷಬ್ರಹ್ಮನ ಮನಸ್ಸಿನಲ್ಲಿ ನೆಲಸಿದಳು. ಆಗ ದಕ್ಷನು ತುಂಬಾ ತೇಜೋವಂತನಾಗಿ ಪ್ರಕಾಶಿಸಿದನು.

**ಸಮುಹೂರ್ತೇನ ದಕ್ಷೋऽಪಿ ಸ್ವಪತ್ನ್ಯಾಂ ನಿದಧೇ ಮುದಾ ।**
**ದಕ್ಷಪತ್ನ್ಯಾಸ್ತದಾ ಚಿತ್ತೇ ಶಿವೋವಾಸ ದಯಾನ್ವಿತಾ ॥ ೧೪ ॥**

**ಆವಿರ್ಬಭೂವ ಚಿಹ್ನಾನಿ ದೋಹದಸ್ಯಾಖಿಲಾನಿ ವೈ ।**
**ವಿರೇಜೇ ವೀರಿಣೀ ತಾತ ಹೃಷ್ಟಚಿತ್ತಾಧಿಕಂ ತಥಾ ॥ ೧೫ ॥**

**ಶಿವಾವಾಸಪ್ರಭಾವಾತ್ತು ಮಹಾಮಂಗಲರೂಪಿಣೀ ।**
**ಕುಲಸ್ಯ ಸಂಪ್ರದಾಯೈಶ್ಚ ಶ್ರುತೇಶ್ಚಿತ್ತಸಮುನ್ನತೇಃ ॥ ೧೬ ॥**

**ವ್ಯಧತ್ತ ಸುಕ್ರಿಯಾ ದಕ್ಷಃ ಪ್ರೀತ್ಯಾ ಪುಂಸವನಾದಿಕಾಃ ।**
**ಉತ್ಸವೋऽತೀವ ಸಂಜಾತಸ್ತದಾ ತೇಷು ಚ ಕರ್ಮಸು ॥ ೧೭ ॥**

**ವಿತ್ತಂ ದದೌ ದ್ವಿಜಾತಿಭ್ಯೋ ಯಥಾಕಾಮಂ ಪ್ರಜಾಪತಿಃ ।**
**ಅಥ ತಸ್ಮಿನ್ನವಸರೇ ಸರ್ವೇ ಹರ್ಯಾದಯಃ ಸುರಾಃ ॥ ೧೮ ॥**

೧೪. ಆಮೇಲೆ ದಕ್ಷನು ಶುಭಮುಹೂರ್ತದಲ್ಲಿ ತನ್ನ ಪತ್ನಿಯಲ್ಲಿ ಗರ್ಭಾಧಾನವನ್ನು ಮಾಡಿದನು. ಆಗ ದಯಾಮಯಿಯಾದ ದೇವಿಯು ದಕ್ಷಪತ್ನಿಯ ಮನಸ್ಸಿನಲ್ಲಿ ನೆಲಸಿದಳು.

೧೫. ಮುಂದೆ ಕೆಲವುದಿನಗಳಲ್ಲಿಯೇ ವೀರಿಣಿಯಲ್ಲಿ ಗರ್ಭಿಣಿಯ ಚಿಹ್ನೆಗಳು ಪ್ರಕಟವಾದುವು. ದೇವಿಯು ಅವಳಲ್ಲಿ ನೆಲಸಿದುದರಿಂದ ಆ ವೀರಿಣಿಯು ಮಹಾಮಂಗಳರೂಪಳಾಗಿಯೂ ಸದಾ ಸಂತುಷ್ಟಳಾಗಿಯೂ ಪ್ರಕಾಶಿಸಿದಳು.

೧೬. ಆಗ ದಕ್ಷಪ್ರಜಾಪತಿಯು ಕುಲಾಭಿವೃದ್ಧಿಗಾಗಿಯೂ, ಐಶ್ವರ್ಯಾಭಿವೃದ್ಧಿಗಾಗಿಯೂ, ವಿದ್ಯಾಭಿವೃದ್ಧಿಗಾಗಿಯೂ, ಮನಸ್ಸು ಪರಿಪಾಕವನ್ನು ಹೊಂದುವುದಕ್ಕಾಗಿಯೂ ಪುಂಸವನವೇ ಮೊದಲಾದ ಶುಭಕರ್ಮಗಳನ್ನು ಶ್ರದ್ಧೆಯಿಂದ ಆಚರಿಸಿದನು.

೧೭. ಆ ಕರ್ಮಗಳಲ್ಲಿ ಮಹತ್ತಾದ ಉತ್ಸವವೇ ಆಯಿತು. ದಕ್ಷನು ಬ್ರಾಹ್ಮಣರಿಗೆ ಯಥೇಚ್ಛವಾಗಿ ದಕ್ಷಿಣೆಯನ್ನು ಕೊಟ್ಟನು.

೧೮. ಆಗ ಇಂದ್ರನೇ ಮೊದಲಾದ ದೇವತೆಗಳು ವೀರಿಣಿಯ ಗರ್ಭದಲ್ಲಿ ದೇವಿಯು ಬೆಳೆಯುತ್ತಿರುವುದನ್ನು ತಿಳಿದು ತುಂಬಾ ಸಂತೋಷಗೊಂಡರು.

ಜ್ಞಾತ್ವಾ ಗರ್ಭಗತಾಂ ದೇವೀಂ ವೀರಿಣ್ಯಾಂ ತೇ ಮುದಂ ಯಯುಃ ।
ತತ್ರಾಽಽಗತ್ಯ ಚ ತೇ ಸರ್ವೇ ತುಷ್ಟುವುರ್ಜಗದಂಬಿಕಾಂ ॥ ೧೯ ॥

ಲೋಕೋಪಕಾರಕರಿಣೀಂ ಪ್ರಣಮ್ಯ ಚ ಮುಹುರ್ಮುಹುಃ ।
ಕೃತ್ವಾ ತತಸ್ತೇ ಪ್ರಶಂಸಾಂ ಬಹುಧಾ ಹೃಷ್ಟಮಾನಸಾಃ ॥ ೨೦ ॥

ದಕ್ಷಪ್ರಜಾಪತೇಶ್ಚೈವ ವೀರಿಣ್ಯಾಃ ಸ್ವಗೃಹಂ ಯಯುಃ ।
ಗತೇಷು ನವಮಾಸೇಷು ಕಾರಯಿತ್ವಾ ಚ ಲೌಕಿಕೀಂ ॥ ೨೧ ॥

ಗತಿಂ ಶಿವಾ ಚ ಪೂರ್ಣೇ ಸಾ ದಶಮೇ ಮಾಸಿ ನಾರದ ।
ಆವಿರ್ಬಭೂವ ಪುರತೋ ಮಾತುಸ್ಸದ್ಯಸ್ತದಾ ಮುನೇ ॥ ೨೨ ॥

ಮುಹೂರ್ತೇ ಸುಖದೇ ಚಂದ್ರಗ್ರಹತಾರಾನುಕೂಲಕೇ ।
ತಸ್ಯಾಂತ್ತು ಜಾತಮಾತ್ರಾಯಾಂ ಸುಪ್ರೀತೋಽಸೌ ಪ್ರಜಾಪತಿಃ ॥ ೨೩ ॥

---

೧೯. ಮುಂದೆ ಆ ದೇವತೆಗಳೆಲ್ಲರೂ ದಕ್ಷನ ಮನೆಗೆ ಬಂದು ಲೋಕೋಪಕಾರಕ್ಕಾಗಿ ಅವತರಿಸುವಂತಹ ಜಗನ್ಮಾತೆಯಾದ ದೇವಿಯನ್ನು ಪುನಃಪುನಃ ನಮಸ್ಕರಿಸಿ ಸ್ತೋತ್ರಮಾಡಿದರು.

೨೦. ದಕ್ಷಪ್ರಜಾಪತಿಯನ್ನೂ ಅವನ ಪತ್ನಿಯಾದ ವೀರಿಣಿಯನ್ನೂ ತುಂಬಾ ಪ್ರಶಂಸಿಸಿ ಆ ದೇವತೆಗಳು ತಮ್ಮತಮ್ಮ ಸ್ಥಾನಗಳಿಗೆ ತೆರಳಿದರು.

೨೧-೨೨. ಹೀಗೆ ವೀರಿಣಿಗೆ ಒಂಭತ್ತುತಿಂಗಳುಗಳು ತುಂಬಲು, ಲೌಕಿಕವಾದ ಕರ್ಮಗಳೆಲ್ಲಾ ಯಥೋಕ್ತವಾಗಿ ನೆರವೇರಿದವು. ಹತ್ತನೆಯ ತಿಂಗಳಲ್ಲಿ ಗ್ರಹಾನುಕೂಲ ಮತ್ತು ತಾರಾನುಕೂಲವಿರುವಂತಹ ಮತ್ತು ಚಂದ್ರನು ಪೂರ್ಣನಾಗಿರುವಂತಹ ಶುಭಮುಹೂರ್ತದಲ್ಲಿ ತಾಯಿಯಾದ ವೀರಿಣಿಯ ಎದುರಿಗೆ ದೇವಿಯು ಆವಿರ್ಭವಿಸಿದಳು.

೨೩. ಆ ಕುಮಾರಿಯು ಜನಿಸಿದೊಡನೆಯೇ ದಕ್ಷಬ್ರಹ್ಮನು ತುಂಬಾ ಹರ್ಷಗೊಂಡು ಮಹಾತೇಜಸ್ವಿಯಾದ ಆ ಕುಮಾರಿಯನ್ನು ನೋಡಿ ಇವಳು ದೇವಿಯ ಅವತಾರವೆಂದು ತಿಳಿದನು.

ಶೈವದೇವೀತಿ ತಾಂ ಮೇನೇ ದೃಷ್ಟ್ವಾ ತಾಂ ತೇಜಸೋಲ್ಬಣಾಂ ।
ತದಾಭೂತ್ಪುಷ್ಪಸದ್ವೃಷ್ಟಿರ್ಮೇಘಾಶ್ಚ ವವೃಷುರ್ಜಲಂ ॥ ೨೪ ॥

ದಿಶಶ್ಶಾಂತಾ ದ್ರುತಂ ತಸ್ಯಾಂ ಜಾತಾಯಾಂ ಚ ಮುನೀಶ್ವರ ।
ಅವಾದಯಂತ್ರಿದಶಾಶ್ಶುಭವಾದ್ಯಾನಿ ಖೇ ಗತಾಃ ॥ ೨೫ ॥

ಜಜ್ವಲುಶ್ಚಾಗ್ನಯಃ ಶಾಂತಾಸ್ಸರ್ವಮಾಸೀತ್ಸುಮಂಗಲಂ ।
ವೀರಿಣೀಸಂಭವಾಂ ದೃಷ್ಟ್ವಾ ದಕ್ಷಸ್ತಾಂ ಜಗದಂಬಿಕಾಂ ॥ ೨೬ ॥

ನಮಸ್ಕೃತ್ಯ ಕರೌ ಬಧ್ವಾ ಬಹು ತುಷ್ಟಾವ ಭಕ್ತಿತಃ ।

॥ ದಕ್ಷ ಉವಾಚ ॥

ಮಹೇಶಾನಿ ನಮಸ್ತುಭ್ಯಂ ಜಗದಂಬೇ ಸನಾತನಿ ॥ ೨೭ ॥

ಕೃಪಾಂ ಕುರು ಮಹಾದೇವಿ ಸತ್ಯೇ ಸತ್ಯಸ್ವರೂಪಿಣಿ ।
ಶಿವಾ ಶಾಂತಾ ಮಹಾಮಾಯಾ ಯೋಗನಿದ್ರಾ ಜಗನ್ಮಯಿ ॥ ೨೮ ॥

---

೨೪-೨೫. ಆ ಕುಮಾರಿಯು ಜನಿಸಿದಕೂಡಲೇ ಆಕಾಶದಿಂದ ಪುಷ್ಪವೃಷ್ಟಿಯಾಯಿತು. ಮೇಘಗಳು ಮಳೆಯನ್ನು ಸುರಿಸಿದುವು. ದಿಕ್ಕುಗಳು ಮಲಿನವಾಗಿರದೇ ಪ್ರಸನ್ನವಾದುವು. ದೇವತೆಗಳು ಆಕಾಶದಲ್ಲಿ ನಿಂತು ದೇವದುಂದುಭಿಯನ್ನು ಬಾರಿಸಿದರು. ಅಗ್ನಿಗಳು ಶಾಂತಿಯಿಂದ ಪ್ರದಕ್ಷಿಣಾಕಾರವಾಗಿ ಜ್ವಲಿಸಿದುವು. ಹೀಗೆ ಎಲ್ಲವೂ ಶುಭಚಿಹ್ನೆಯಾಯಿತು.

೨೬. ಜಗನ್ಮಾತೆಯಾದ ದೇವಿಯು ವೀರಿಣಿಯಲ್ಲಿ ಜನಿಸಿದುದನ್ನು ನೋಡಿ ದಕ್ಷಪ್ರಜಾಪತಿಯು ಅವಳನ್ನು ನಮಸ್ಕರಿಸಿ ಕೈಮುಗಿದು, ಭಕ್ತಿಯಿಂದ ತುಂಬಾ ಸ್ತೋತ್ರವನ್ನು ಹೀಗೆ ಮಾಡಿದನು.

೨೭. ದಕ್ಷನು ಹೇಳಿದನು:—ಜಗನ್ಮಾತೆಯೂ ಅದಿಯಿಲ್ಲದವಳೂ ಆದಂತಹ ಓ ಪರಮೇಶ್ವರಿ, ನಿನಗೆ ನಮಸ್ಕಾರವು. ಸತ್ಯಸ್ವರೂಪಳಾದ ಓ ಮಹಾದೇವಿಯೇ ನನ್ನಲ್ಲಿ ಅನುಗ್ರಹವನ್ನು ಮಾಡು.

೨೮. ನಿನ್ನನ್ನು ವೇದವಿತ್ತುಗಳು ಶಿವಾ ಶಾಂತಾ ಮಹಾಮಾಯೆ ಜಗದ್ರೂಪಳು ಎಂದು ಮೊದಲಾಗಿ ಅನೇಕವಿಧವಾಗಿ ಹೇಳುವರು. ಇಂತಹ ಮತ್ತು, ಜಗತ್ತಿಗೆ ಕ್ಷೇಮಮಾಡುವಂತಹ ಓ ದೇವಿ, ನಿನ್ನನ್ನು ನಮಸ್ಕರಿಸುವೆನು.

**ಯಾ ಪ್ರೋಚ್ಯತೇ ವೇದವಿದ್ಭಿರ್ನಮಾಮಿ ತ್ವಾಂ ಹಿತಾವಹಾಂ ।**
**ಯಯಾ ಧಾತಾ ನಿಯುಕ್ತೋಽಸೌ ಜಗತ್ಸೃಷ್ಟಿಂ ಪುರಾಽಕರೋತ್ ॥ ೨೯ ॥**

**ತಾಂ ತ್ವಾಂ ನಮಾಮಿ ಪರಮಾಂ ಜಗದ್ಧಾತ್ರೀಂ ಮಹೇಶ್ವರೀಂ ।**
**ಯಯಾ ವಿಷ್ಣುರ್ಜಗತ್ಸ್ಥಿತ್ಯೈ ನಿಯುಕ್ತಸ್ತಾಂ ಸದಾಕರೋತ್ ॥ ೩೦ ॥**

**ಯಯಾ ರುದ್ರೋ ಜಗನ್ನಾಶೇ ನಿಯುಕ್ತಸ್ತಂ ಪುರಾಕರೋತ್ ।**
**ತಾಂ ತ್ವಾಂ ನಮಾಮಿ ಪರಮಾಂ ಜಗದ್ಧಾತ್ರೀಂ ಮಹೇಶ್ವರೀಂ ॥ ೩೧ ॥**

**ರಜಸ್ಸತ್ತ್ವತಮೋರೂಪಾಂ ಸರ್ವಕಾರ್ಯಕರೀಂ ಸದಾ ।**
**ತ್ರಿದೇವಜನನೀಂ ದೇವೀ ತ್ವಾಂ ನಮಾಮಿ ಚ ತಾಂ ಶಿವಾಂ ॥ ೩೨ ॥**

**ಯಸ್ತ್ವಾಂ ವಿಚಿಂತಯೇದ್ದೇವಿ ವಿದ್ಯಾಽವಿದ್ಯಾತ್ಮಿಕಾಂ ಪರಾಂ ।**
**ತಸ್ಯ ಭುಕ್ತಿಶ್ಚ ಮುಕ್ತಿಶ್ಚ ಸದಾ ಕರತಲೇ ಸ್ಥಿತಾ ॥ ೩೩ ॥**

---

೨೯-೩೦. ನಿನ್ನಿಂದ ಪ್ರೇರಿತನಾಗಿಯೇ ವಿಧಿಯು ಜಗತ್ತನ್ನು ಸೃಷ್ಟಿಸುವನು. ಹೀಗೆ ಬ್ರಹ್ಮನ ಮೂಲಕ ಜಗತ್ತನ್ನು ಸೃಷ್ಟಿಸುವವಳೂ ಪರಮಾತ್ಮಸ್ವರೂಪಳೂ ಪರಮೇಶ್ವರಿಯೂ ಆದ ನಿನ್ನನ್ನು ಮತ್ತೆ ನಮಿಸುವೆನು. ಓ ದೇವಿ, ನಿನ್ನಿಂದಲೇ ಆಜ್ಞಾಪಿಸಲ್ಪಟ್ಟವನಾಗಿ ಹರಿಯು ಜಗತ್ತನ್ನು ಸದಾ ಪಾಲಿಸುತ್ತಲಿರುವನು ಹೀಗೆ ವಿಷ್ಣುವಿನ ಮೂಲಕ ಜಗತ್ತನ್ನು ಪಾಲಿಸುತ್ತಿರುವ ನಿನಗೆ ನಮಸ್ಕಾರವು.

೩೧. ಯಾವ ದೇವಿಯಿಂದ ನಿಯಮಿಸಲ್ಪಟ್ಟವನಾಗಿ ರುದ್ರನು ಜಗತ್ತನ್ನು ಪ್ರಳಯಕಾಲದಲ್ಲಿ ಸಂಹರಿಸುವನೋ ಅಂತಹ ಜಗತ್ತನ್ನು ಧರಿಸುವವಳೂ ಪರಮಾತ್ಮಸ್ವರೂಪಳೂ ಪರಮೇಶ್ವರಿಯೂ ಆದ ನಿನಗೆ ನಮಸ್ಕಾರವು.

೩೨. ರಜೋಗುಣ ಸತ್ವಗುಣ ಮತ್ತು ತಮೋಗುಣ ಇವುಗಳ ಸ್ವರೂಪಳಾಗಿದ್ದು ಆ ಗುಣಗಳಿಂದ ಸಕಲ ಕಾರ್ಯಗಳನ್ನೂ ನಿರ್ವಹಿಸುವವಳೂ ತ್ರಿಮೂರ್ತಿಗಳಿಗೆ ಜನನಿಯೂ ಆದಂತಹ ನಿನಗೆ ನಮಸ್ಕಾರವು.

೩೩. ವಿದ್ಯಾಸ್ವರೂಪಳೂ, ಅವಿದ್ಯಾ ಎಂದರೆ ಅಜ್ಞಾನಸ್ವರೂಪಳೂ ಆದಂತಹ ನಿನ್ನನ್ನು ಯಾವನು ಧ್ಯಾನಿಸುವನೋ ಅವನಿಗೆ ಭೋಗವೂ ಮುಕ್ತಿಯೂ ಅವಶ್ಯವಾಗಿ ಲಭಿಸುವುವು.

**ಯಸ್ತ್ವಾಂ ಪ್ರತ್ಯಕ್ಷತೋಽದೇವಿ ಶಿವಾಂ ಪಶ್ಯತಿ ಪಾವನೀಂ ।**
**ತಸ್ಯಾವಶ್ಯಂ ಭವೇನ್ಮುಕ್ತಿರ್ವಿದ್ಯಾಽವಿದ್ಯಾಪ್ರಕಾಶಿಕಾ ॥ ೩೪ ॥**

**ಯೇ ಸ್ತುವಂತಿ ಜಗನ್ಮಾತರ್ಭವಾನೀಮಂಬಿಕೇತಿ ಚ ।**
**ಜಗನ್ಮಯೀತಿ ದುರ್ಗೇತಿ ಸರ್ವಂ ತೇಷಾಂ ಭವಿಷ್ಯತಿ ॥ ೩೫ ॥**

**॥ ಬ್ರಹ್ಮೋವಾಚ ॥**

**ಇತಿ ಸ್ತುತಾ ಜಗನ್ಮಾತಾ ಶಿವಾ ದಕ್ಷೇಣ ಧೀಮತಾ ।**
**ತಥೋವಾಚ ತದಾ ದಕ್ಷಂ ಯಥಾ ಮಾತಾ ಶೃಣೋತಿ ನ ॥ ೩೬ ॥**

**ಸರ್ವಂ ಸಮ್ಮೋಹ್ಯ ತತ್ರಸ್ಥಂ ಯಥಾ ದಕ್ಷಃ ಶೃಣೋತಿ ತತ್ ।**
**ನಾನ್ಯಸ್ತಥಾ ಶಿವಾ ಪ್ರಾಹ ವಾಕ್ಯಂ ಚ ಪರಮೇಶ್ವರೀ ॥ ೩೭ ॥**

**॥ ದೇವ್ಯುವಾಚ ॥**

**ಅಹಮಾರಾಧಿತಾ ಪೂರ್ವಂ ಸುತಾರ್ಥಂ ತೇ ಪ್ರಜಾಪತೇ ।**
**ಈಪ್ಸಿತಂ ತವ ಸಿದ್ಧಂ ತು ತಪೋ ಧಾರಯ ಸಂಪ್ರತಿ ॥ ೩೮ ॥**

---

೩೪. ಪರಮೇಶ್ವರಿಯೂ ಪರಿಶುದ್ಧಳೂ ಆದ ನಿನ್ನನ್ನು ಯಾವನು ಪ್ರತ್ಯಕ್ಷವಾಗಿ ನೋಡುವನೋ ಅವನಿಗೆ ಅಜ್ಞಾನವಾವುದು, ಜ್ಞಾನವಾವುದು ಎಂಬ ಆತ್ಮಾನಾತ್ಮವಿವೇಕಜ್ಞಾನವುಂಟಾಗಿ ಕೂಡಲೇ ಮುಕ್ತಿಯು ಲಭಿಸುವುದು.

೩೫. ಓ ದೇವಿ, ಪರಮೇಶ್ವರಿಯಾದ ನಿನ್ನನ್ನು ಅಂಬಿಕೆಯೆಂದೂ ಜಗನ್ಮಯಿಯೆಂದೂ ದುರ್ಗೆ ಎಂದೂ ಯಾವನು ಪೂಜಿಸುವನೋ ಅವನ ಇಷ್ಟಾರ್ಥವೆಲ್ಲವೂ ಸಿದ್ಧಿಸುವುದು.

೩೬-೩೭. ಬ್ರಹ್ಮನು ಹೇಳಿದನು :—ಹೀಗೆ ಬುದ್ಧಿಶಾಲಿಯಾದ ದಕ್ಷನು ಸ್ತುತಿಸಲು, ಜಗನ್ಮಾತೆಯಾದ ದೇವಿಯು ತನ್ನ ತಾಯಿ ವೀರಿಣಿಯೂ ಅಲ್ಲಿರುವ ಮಿಕ್ಕ ಪ್ರಾಣಿಗಳಾರೂ ಕೇಳದಿರುವಂತೆ ಅವರನ್ನೆಲ್ಲಾ ಮೋಹಗೊಳಿಸಿ, ದಕ್ಷನೊಬ್ಬನು ಮಾತ್ರ ಕೇಳುವಂತೆ ಹೀಗೆ ಹೇಳಿದಳು.

೩೮. ದೇವಿಯು ಹೇಳಿದಳು :—ಎಲೈ ದಕ್ಷನೇ, ನೀನು ಹಿಂದೆ ನನ್ನನ್ನು ಆರಾಧಿಸಿ ನಾನು ನಿನ್ನ ಪುತ್ರಿಯಾಗಿ ಜನಿಸುವಂತೆ ವರವನ್ನು ಪಡೆದಿರುವೆಯಷ್ಟೆ ? ಈಗ ನಿನ್ನ ಆ ವರವು ಸಿದ್ಧಿಸಿತೆಂದು ತಿಳಿ ಎಂದಳು.

॥ ಬ್ರಹ್ಮೋವಾಚ ॥

ಏವಮುಕ್ತ್ವಾ ತದಾ ದೇವೀ ದಕ್ಷಂ ಚ ನಿಜಮಾಯಯಾ ।
ಆಸ್ಥಾಯ ಶೈಶವಂ ಭಾವಂ ಜನನ್ಯಂತೇ ರುರೋದ ಸಾ ॥ ೩೯ ॥

ಅಥ ತದ್ರೋದನಂ ಶ್ರುತ್ವಾ ಸ್ತ್ರೀಯೋ ವಾಕ್ಯಂ ಸಸಂಭ್ರಮಾಃ ।
ಆಗತಾಸ್ತತ್ರ ಸುಪ್ರೀತ್ಯಾ ದಾಸ್ಯೋಽಪಿ ಚ ಸಸಂಭ್ರಮಾಃ ॥ ೪೦ ॥

ದೃಷ್ಟ್ವಾಸಿಕ್ನೀ ಸುತಾರೂಪಂ ನನಂದುಃ ಸರ್ವಯೋಷಿತಃ ।
ಸರ್ವೇ ಪೌರಜನಾಶ್ಚಾಪಿ ಚಕ್ರುರ್ಜಯರವಂ ತದಾ ॥ ೪೧ ॥

ಉತ್ಸವಶ್ಚ ಮಹಾನಾಸೀದ್ಗಾನವಾದ್ಯಪುರಸ್ಸರಂ ।
ದಕ್ಷೋಽಸಿಕ್ನೀ ಮುದಂ ಲೇಭೇಽಭೀಮುಂ ದೃಷ್ಟ್ವಾ ಸುತಾಽನನಂ ॥

ದಕ್ಷಃ ಶ್ರುತಿಕುಲಾಚಾರಂ ಚಕ್ರೇ ಚ ವಿಧಿವತ್ತದಾ ।
ದಾನಂ ದದೌ ದ್ವಿಜಾತಿಭ್ಯೋಽನ್ಯೇಭ್ಯಶ್ಚ ದ್ರವಿಣಂ ತಥಾ ॥ ೪೩ ॥

---

೩೯. ಬ್ರಹ್ಮನು ಹೇಳಿದನು:—ಹೀಗೆ ದಕ್ಷನಿಗೆ ಹೇಳಿ ದೇವಿಯು ತನ್ನ ಮಾಯಾಶಕ್ತಿಯಿಂದ ಶಿಶುವಿನ ಸ್ವಭಾವವನ್ನು ಹೊಂದಿ ತಾಯಿಯ ತೊಡೆಯಲ್ಲಿ ಮಲಗಿ ತುಂಬಾ ರೋದಿಸಿದಳು.

೪೦. ಆಗ ಆ ಬಾಲಿಕೆಯು ಅಳುವುದನ್ನು ಕೇಳಿ ಶಿಶುವು ಜನಿಸಿತೆಂದು ತಿಳಿದು ಸ್ತ್ರೀಯರೂ ಪರಿಚಾರಿಕೆಯರೂ ತ್ವರೆಯಿಂದ ಅಲ್ಲಿಗೆ ಬಂದರು.

೪೧. ಅಸಿಕ್ನಿಯು ಹಡೆದ ಆ ಬಾಲಿಕೆಯ ರೂಪವನ್ನು ನೋಡಿ ಸ್ತ್ರೀಯರೆಲ್ಲರೂ ಸಂತೋಷಗೊಂಡರು. ಪಟ್ಟಣದ ಜನರೆಲ್ಲರೂ ಜಯ ಶಬ್ದವನ್ನು ಮಾಡಿದರು.

೪೨. ಆಗ ಗಾನ ವಾದ್ಯ ಮುಂತಾದುವುಗಳಿಂದ ದೊಡ್ಡ ಉತ್ಸವವಾಯಿತು. ದಕ್ಷನೂ ಅಸಿಕ್ನಿಯೂ ಸಹ ಶಾಂತವೂ ಮತ್ತು ತೇಜಸ್ವಿಯೂ ಆದ ಮಗಳ ಮುಖವನ್ನು ನೋಡಿ ತುಂಬಾ ಹರ್ಷಗೊಂಡರು.

೪೩. ಆಗ ದಕ್ಷನು ಶ್ರುತ್ಯುಕ್ತವಾದ ಜಾತಕರ್ಮಾದಿಗಳನ್ನೂ ತನ್ನ ಕುಲದ ಆಚಾರವನ್ನೂ ವಿಧಿವತ್ತಾಗಿ ಮಾಡಿದನು. ಬ್ರಾಹ್ಮಣರಿಗೆ ದಾನವನ್ನು ಮಾಡಿದನು. ದರಿದ್ರರಿಗೆ ಯಥೇಚ್ಛೆಯಾಗಿ ಧನವನ್ನು ಕೊಟ್ಟನು.

ಬಭೂವ ಸರ್ವತೋ ಗಾನಂ ನರ್ತನಂ ಚ ಯಥೋಚಿತಂ ।
ನೇದುರ್ವಾದ್ಯಾನಿ ಬಹುಶಸ್ಸುಮಂಗಲಪುರಸ್ಸರಂ ॥ ೪೪ ॥

ಅಥ ಹರ್ಯಾದಯೋ ದೇವಾಸ್ಸರ್ವೇ ಸಾನುಚರಾಸ್ತಥಾ ।
ಮುನಿವೃಂದೈಸ್ಸಮಾಗತ್ಯೋತ್ಸವಂ ಚಕ್ರುರ್ಯಥಾವಿಧಿ ॥ ೪೫ ॥

ದೃಷ್ಟ್ವಾ ದಕ್ಷಸುತಾಮಂಬಾಂ ಜಗತಃ ಪರಮೇಶ್ವರೀಂ ।
ನೇಮುಸ್ಸರ್ವೇ ಸವಿನಯಾಃ ತುಷ್ಟುವುಶ್ಚ ಶುಭೈಸ್ಸ್ತವೈಃ ॥ ೪೬ ॥

ಊಚುಸ್ಸರ್ವೇ ಪ್ರಮುದಿತಾ ಗಿರಂ ಜಯಜಯಾತ್ಮಿಕಾಂ ।
ಪ್ರಶಶಂಸುರ್ಮುದಾ ದಕ್ಷಂ ವೀರಿಣೀಂ ಚ ವಿಶೇಷತಃ ॥ ೪೭ ॥

ತದೋಮೇತಿ ನಾಮ ಚಕ್ರೇ ತಸ್ಯಾ ದಕ್ಷಸ್ತದಾಜ್ಞಯಾ ।
ಪ್ರಶಸ್ತಾಯಾಸ್ಸರ್ವಗುಣಸತ್ತ್ವಾದಪಿ ಮುದಾನ್ವಿತಃ ॥ ೪೮ ॥

---

೪೪. ಆ ನಗರದಲ್ಲಿ ದಕ್ಷನಿಗೆ ಕುಮಾರಿಯು ಜನಿಸಿದ ಸಂತೋಷಕ್ಕಾಗಿ ಎಲ್ಲೆಡೆಯಲ್ಲಿಯೂ ಗಾನನರ್ತನಾದ್ಯುತ್ಸವಗಳು ನಡೆದುವು. ಅನೇಕವಿಧವಾದ ಮಂಗಳವಾದ್ಯಗಳನ್ನು ಬಾರಿಸಿದರು.

೪೫. ಆಗ ಇಂದ್ರನೇ ಮೊದಲಾದ ದೇವತೆಗಳೆಲ್ಲರೂ ಮುನಿಗಳೂ ಪರಿವಾರ ಸಮೇತರಾಗಿ ದಕ್ಷನ ಮನೆಗೆ ಬಂದು ವಿಧಿವತ್ತಾಗಿ ಕನ್ಯಾಜನನದ ಉತ್ಸವವನ್ನು ಬೆಳೆಯಿಸಿದರು.

೪೬. ದಕ್ಷನ ಪುತ್ರಿಯಾಗಿ ಅವತರಿಸಿದ ಜಗನ್ಮಾತೆಯಾದ ಪರಮೇಶ್ವರಿಯನ್ನು ನೋಡಿ ಆ ದೇವತೆಗಳೆಲ್ಲರೂ ವಿನಯದಿಂದ ನಮಸ್ಕರಿಸಿ ಮಂಗಳಸ್ತೋತ್ರಗಳಿಂದ ಸ್ತುತಿಸಿದರು.

೪೭. ಮತ್ತು ಆ ದೇವತೆಗಳು ಓ ದೇವಿ, ಜಯ ಜಯ (ಸರ್ವೋತ್ಕೃಷ್ಟಳಾಗಿರು) ಎಂದು ಜಯಶಬ್ದವನ್ನು ಹೇಳಿದರು. ದಕ್ಷನನ್ನೂ ವೀರಿಣಿಯನ್ನೂ ಸಂತೋಷದಿಂದ ತುಂಬಾ ಪ್ರಶಂಸೆಮಾಡಿದರು.

೪೮. ಆಗ ದಕ್ಷನು ಸಕಲ ಗುಣಪರಿಪೂರ್ಣಳೂ ಸುಂದರಿಯೂ ಆದ ಆ ಶಿಶುವಿಗೆ ದೇವತೆಗಳ ಆಜ್ಞೆಯಂತೆ "ಉಮಾ" ಎಂದು ಹೆಸರನ್ನಿಟ್ಟನು.

ನಾಮಾನ್ಯನ್ಯಾನಿ ತಸ್ಯಾಸ್ತು ಪಶ್ಚಾಜ್ಜಾತಾನಿ ಲೋಕತಃ ।
ಮಹಾಮಂಗಲದಾನ್ಯೇವ ದುಃಖಘ್ನಾನಿ ವಿಶೇಷತಃ ॥ ೪೯ ॥

ದಕ್ಷಸ್ತದಾ ಹರಿಂ ನತ್ವಾ ಮಾಂ ಸರ್ವಾನಮರಾನಪಿ ।
ಮುನೀನಪಿ ಕರೌ ಬಧ್ವಾ ಸ್ತುತ್ವಾ ಚಾನರ್ಚ ಭಕ್ತಿತಃ ॥ ೫೦ ॥

ಅಥ ವಿಷ್ಣ್ವಾದಯಸ್ಸರ್ವೇ ಸುಪ್ರಶಸ್ಯಾಜನಂದನಂ ।
ಪ್ರೀತ್ಯಾ ಯಯುಃ ಸ್ವಧಾಮಾನಿ ಸಂಸ್ಮರನ್ ಸಶಿವಂ ಶಿವಂ ॥ ೫೧ ॥

ತತಸ್ತಾಂ ಚ ಸುತಾಂ ಮಾತಾ ಸುಸಂಸ್ಕೃತ್ಯ ಯಥೋಚಿತಂ ।
ಶಿಶುಪಾನೇನ ವಿಧಿನಾ ತಸ್ಯೈ ಸ್ತನ್ಯಾದಿಕಂ ದದೌ ॥ ೫೨ ॥

ಪಾಲಿತಾ ಸಾ ಚ ವೀರಿಣ್ಯಾ ದಕ್ಷೇಣ ಸುಮಹಾತ್ಮನಾ ।
ವವೃಧೇ ಶುಕ್ಲಪಕ್ಷಸ್ಯ ಯಥಾ ಶಶಿಕಲಾನ್ವಹಂ ॥ ೫೩ ॥

ತಸ್ಯಾಂ ತು ಸದ್ಗುಣಾಸ್ಸರ್ವೇ ವಿವಿಶುರ್ದ್ವಿಜಸತ್ತಮ ।
ಶೈಶವೇಽಪಿ ಯಥಾ ಚಂದ್ರೇ ಕಲಾಸ್ಸರ್ವಾ ಮನೋಹರಾಃ ॥ ೫೪ ॥

---

೪೯. ಆಮೇಲೆ ಆ ದೇವಿಗೆ ಲೋಕದಲ್ಲಿ ಮಹಾಮಂಗಳಕರಗಳೂ ದುಃಖವನ್ನು ಹೋಗಲಾಡಿಸುವುವೂ ಆದಂತಹ ಅನೇಕ ಹೆಸರುಗಳು ಬಂದವು.

೫೦. ಆಗ ದಕ್ಷಬ್ರಹ್ಮನು ಹರಿಯನ್ನು ನಮಸ್ಕರಿಸಿ ನನ್ನನ್ನೂ ಮಿಕ್ಕ ಎಲ್ಲಾ ದೇವತೆಗಳನ್ನೂ ಕೈಮುಗಿದು ನಮಸ್ಕರಿಸಿ, ಸ್ತುತಿಸಿ, ಭಕ್ತಿಯಿಂದ ಅರ್ಚಿಸಿದನು

೫೧. ಬಳಿಕ ವಿಷ್ಣು ಮುಂತಾದ ದೇವತೆಗಳೆಲ್ಲರೂ ದಕ್ಷಬ್ರಹ್ಮನನ್ನು ಆದರದಿಂದ ಪ್ರಶಂಸಿಸಿ ಅವನಿಂದ ಬೀಳ್ಕೊಂಡು, ಪರಶಿವನನ್ನು ಸ್ಮರಿಸುತ್ತಾ ತಮ್ಮತಮ್ಮ ಸ್ಥಾನಗಳಿಗೆ ತೆರಳಿದರು.

೫೨. ಮುಂದೆ ತಾಯಿಯಾದ ವೀರಿಣಿಯು ಆ ತನ್ನ ಪುತ್ರಿಗೆ ಯೋಗ್ಯವಾದ ಲಾಲನೆ ಪಾಲನೆಗಳನ್ನು ಮಾಡಿ ಸ್ತನ್ಯಪಾನ ಮುಂತಾದುವುಗಳನ್ನು ಕೊಟ್ಟಳು.

೫೩. ಹೀಗೆ ಆ ಉಮಾಕುಮಾರಿಯು ವೀರಣಿಯಿಂದಲೂ ಮಹಾತ್ಮನಾದ ದಕ್ಷಬ್ರಹ್ಮನಿಂದಲೂ ಸಲಹಲ್ಪಡುತ್ತಾ ಶುಕ್ಲಪಕ್ಷದ ಚಂದ್ರಕಳೆಯಂತೆ ದಿನದಿನವೂ ಬೆಳೆಯುತ್ತಾ ಬಂದಳು.

೫೪. ಎಲೈ ನಾರದ, ಬಾಲ್ಯದಲ್ಲಿಯೇ ಆ ಉಮೆಯಲ್ಲಿ ಸದ್ಗುಣಗಳೆಲ್ಲವೂ ಚಂದ್ರನನ್ನು ಕಲೆಗಳು ಸೇರುವಂತೆ ಸೇರಿದುವು.

ಆಚರನ್ನಿಜಭಾವೇನ ಸಖೀಮಧ್ಯಗತಾ ಯದಾ ।
ತದಾ ಲಿಲೇಖ ಭರ್ಗಸ್ಯ ಪ್ರತಿಮಾಮನ್ವಹಂ ಮುಹುಃ    ॥ ೫೫ ॥

ಯದಾ ಜಗೌ ಸುಗೀತಾನಿ ಶಿವಾ ಬಾಲ್ಯೋಚಿತಾನಿ ಸಾ ।
ತದಾ ಸ್ಥಾಣುಂ ಹರಂ ರುದ್ರಂ ಸಸ್ಮಾರ ಸ್ಮರಶಾಸನಂ    ॥ ೫೬ ॥

ವವೃಧೇಽತೀವ ದಂಪತ್ಯೋಃ ಪ್ರತ್ಯಹಂ ಕರುಣಾತುಲಾ ।
ತಸ್ಯಾ ಬಾಲ್ಯೇಽಪಿ ಭಕ್ತ್ಯಾಯಾಸ್ತಯೋರ್ನಿತ್ಯಂ ಮುಹುರ್ಮುಹುಃ ॥

ಸರ್ವಬಾಲಗುಣಾಕ್ರಾಂತಾ ಸದಾ ಸ್ವಾಲಯಕಾರಿಣೀ ।
ತೋಷಯಾಮಾಸ ಪಿತರೌ ನಿತ್ಯಂ ನಿತ್ಯಂ ಮುಹುರ್ಮುಹುಃ    ॥ ೫೮ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಸತೀಖಂಡೇ
ಚತುರ್ದಶೋಽಧ್ಯಾಯಃ

---

೫೫. ಆ ಉಮೆಯು ಗೆಳತಿಯರೊಡನೆ ಆಟವಾಡುತ್ತಿರುವಾಗ ದಿನವೂ ಪರಮೇಶ್ವರನ ಚಿತ್ರವನ್ನು ಬರೆದು ವಿಹರಿಸುತ್ತಲಿದ್ದಳು.

೫೬. ಹುಡುಗತನದಿಂದ ಹಾಡುವಾಗಲೆಲ್ಲಾ ಆ ಉಮೆಯು ಸ್ಥಾಣು, ಹರ, ರುದ್ರ, ಸ್ಮರಶಾಸನ ಮುಂತಾದ ಶಿವನಾಮಗಳನ್ನೇ ಸೇರಿಸಿ ಇಂಪಾಗಿ ಹಾಡುತ್ತಲಿದ್ದಳು.

೫೭. ಬಾಲ್ಯದಲ್ಲಿಯೇ ಆ ಉಮಾದೇವಿಯು ತಂದೆತಾಯಿಗಳಲ್ಲಿ ತುಂಬಾ ಭಕ್ತಿಯಿಂದ ನಡೆಯುತ್ತಲಿದ್ದು ಆ ದಂಪತಿಗಳ ಪ್ರೀತಿಗೆ ಪಾತ್ರಳಾಗಿ ದಿನದಿನವೂ ಅಭಿವೃದ್ಧಿಹೊಂದಿದಳು.

೫೮. ಮನೋಹರವಾದ ಬಾಲ್ಯತನದ ಗುಣಗಳಿಂದ ಕೂಡಿ ಆ ಉಮೆಯು ಆಟಕ್ಕಾಗಿ ತನ್ನದೆಂದು ಒಂದು ಕೃತಕಮನೆಯನ್ನು ಕಟ್ಟುವುದು ಮುಂತಾದ ಆಟಗಳಿಂದ ತನ್ನ ತಂದೆತಾಯಿಗಳನ್ನು ನಿತ್ಯವೂ ಮತ್ತೆಮತ್ತೆ ಸಂತೋಷಗೊಳಿಸುತ್ತಿದ್ದಳು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಹದಿನಾಲ್ಕನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಪಂಚಾದಶೋಽಧ್ಯಾಯಃ

॥ ಬ್ರಹ್ಮೋವಾಚ ॥

ಅಥೈಕದಾ ಪಿತುಃ ಪಾರ್ಶ್ವೇ ತಿಷ್ಠಂತೀಂ ತಾಂ ಸತೀಮಹಂ ।
ತ್ವಯಾ ಸಹ ಮುನೇಽದ್ರಾಕ್ಷಂ ಸಾರಭೂತಾಂ ತ್ರಿಲೋಕಕೇ ॥ ೧ ॥

ಪಿತ್ರಾ ನಮಸ್ಕೃತಂ ವೀಕ್ಷ್ಯ ಸತ್ಕೃತಂ ತ್ವಾಂ ಚ ಮಾಂ ಸತೀ ।
ಪ್ರಣನಾಮ ಮುದಾ ಭಕ್ತ್ಯಾ ಲೋಕಲೀಲಾನುಸಾರಿಣೀ ॥ ೨ ॥

ಪ್ರಣಾಮಾಂತೇ ಸತೀಂ ವೀಕ್ಷ್ಯ ದಕ್ಷದತ್ತಶುಭಾಸನೇ
ಸ್ಥಿತೋಽಹಂ ನಾರದ ತ್ವಂ ಚ ವಿನಾತಾಮುಹಮಾಗದಂ ॥ ೩ ॥

---

## ಹದಿನೈದನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು :--ಎಲೈ ನಾರದ, ಅನಂತರ ಒಂದು ದಿನ ನಾನೂ ನೀನೂ ಆ ದಕ್ಷನಮನೆಗೆ ಹೋದೆವು. ಆಗ ಮೂರು ಲೋಕಗಳಲ್ಲಿ ಶ್ರೇಷ್ಠರತ್ನವಾದ ಆ ಉಮಾದೇವಿಯು ತಂದೆಯಾದ ದಕ್ಷನ ಬಳಿಯಲ್ಲಿದ್ದಳು.

೨. ಆಗ ದಕ್ಷನು ನಮ್ಮಿರ್ವರನ್ನೂ ಸತ್ಕರಿಸಿ ನಮಸ್ಕರಿಸಿದುದನ್ನು ನೋಡಿ ಆ ಸತೀದೇವಿಯೂ ಸಹ ಲೋಕಾಚಾರದಂತೆ ನಮ್ಮಿರ್ವರನ್ನೂ ನಮಸ್ಕರಿಸಿದಳು.

೩. ನಮಸ್ಕಾರವಾದ ಮೇಲೆ ನಾನೂ ನೀನೂ ದಕ್ಷನು ಕೊಟ್ಟ ಆಸನದಲ್ಲಿ ಕುಳಿತೆವು. ಮತ್ತು ನಾನು ವಿನಯದಿಂದ ಬಗ್ಗಿನಿಂತಿರುವ ಸತೀದೇವಿಯನ್ನು ನೋಡಿ ಹೀಗೆ ಹೇಳಿದೆನು.

**ತ್ವಾಮೇವ ಯಃ ಕಾಮಯತೇ ಯಂ ತ್ವಂ ಕಾಮಯಸೇ ಸತಿ ।**
**ತಮಾಪ್ನುಹಿ ಪತಿಂ ದೇವಂ ಸರ್ವಜ್ಞಂ ಜಗದೀಶ್ವರಂ ॥ ೪ ॥**

**ಯೋ ನಾನ್ಯಾಂ ಜಗೃಹೇ ನಾಪಿ ಗೃಹ್ಣಾತಿ ನ ಗ್ರಹೀಷ್ಯತಿ ।**
**ಜಾಯಾಂ ಸ ತೇ ಪತಿರ್ಭೂಯಾದನನ್ಯಸದೃಶಃ ಶುಭೇ ॥ ೫ ॥**

**ಇತ್ಯುಕ್ತ್ವಾ ಸುಚಿರಂ ತಾಂ ವೈ ಸ್ಥಿತ್ವಾ ದಕ್ಷಾಲಯೇ ಪುನಃ ।**
**ವಿಸೃಷ್ಟೌ ತೇನ ಸಂಯಾತೌ ಸ್ವಸ್ಥಾನಂ ತೌ ಚ ನಾರದ ॥ ೬ ॥**

**ದಕ್ಷೋಽಭವಚ್ಚ ಸುಪ್ರೀತಸ್ತದಾಕರ್ಣ್ಯ ಗತಜ್ವರಃ ।**
**ಆದದೇ ತನಯಾಂ ಸ್ವಾಂ ತಾಂ ಮತ್ವಾ ಹಿ ಪರಮೇಶ್ವರೀಂ ॥ ೭ ॥**

**ಇತ್ಥಂ ವಿಹಾರೈರುಚಿರೈಃ ಕೌಮಾರೈರ್ಭಕ್ತವತ್ಸಲಾ ।**
**ಜಹಾವವಸ್ಥಾಂ ಕೌಮಾರೀಂ ಸ್ವೇಚ್ಛಾಧೃತನರಾಕೃತಿಃ ॥ ೮ ॥**

---

೪. ಎಲೌ ಸತೀದೇವಿ, ನಿನ್ನನ್ನೇ ಯಾವನು ಪ್ರೀತಿಸುವನೋ ಮತ್ತು ನೀನೂ ಯಾವನನ್ನು ಪ್ರೀತಿಸುವೆಯೋ ಅಂತಹ ಸರ್ವಜ್ಞನೂ, ಜಗದೊಡೆಯನೂ ಆದ ದೇವದೇವನನ್ನು ಪತಿಯಾಗಿ ಪಡೆ.

೫. ಎಲೌ ಮಂಗಳೆಯೇ, ಯಾವನು ಇವತ್ತಿನವರೆಗೆ ನಿನ್ನ ಹೊರತು ಯಾವ ಸ್ತ್ರೀಯನ್ನೂ ಮದುವೆಯಾಗಿಲ್ಲವೋ ಈಗಲೂ ಮುಂದೆಯೂ ಮದುವೆ ಯಾಗುವುದಿಲ್ಲವೋ ಅಂತಹ ಅನುಪಮನಾದ ಪುರುಷನೇ ನಿನಗೆ ಪತಿಯಾಗಲಿ

೬. ಎಲೈ ನಾರದ, ಹೀಗೆ ಆ ಸತಿಗೆ ಆಶೀರ್ವದಿಸಿ ಕೆಲವು ಕಾಲ ಆ ದಕ್ಷನ ಮನೆಯಲ್ಲಿಯೇ ಇದ್ದು ಬಳಿಕ ನಾವೀರ್ವರೂ ಸಹ ಆ ದಕ್ಷನಿಂದ ಬೀಳ್ಕೊಂಡು ನಮ್ಮ ನಮ್ಮ ಸ್ಥಾನಗಳಿಗೆ ತೆರಳಿದೆವು.

೭. ಆಗ ದಕ್ಷನು ನಮ್ಮ ಆಶೀರ್ವಾದಗಳನ್ನು ಕೇಳಿ ಚಿಂತಾರಹಿತನಾಗಿ ತನ್ನ ಪುತ್ರಿಯು ಪರಮೇಶ್ವರಿಯೆಂದು ತಿಳಿದು ತುಂಬಾ ಹರ್ಷಗೊಂಡನು.

೮. ಹೀಗೆ ತನ್ನ ಇಚ್ಛೆಯಿಂದಲೇ ಮನುಷ್ಯಳಾಗಿ ಅವತರಿಸಿದ ದೇವಿಯು ಬಾಲ್ಯದಲ್ಲಿ ಆಯಾಯ ವಿಹಾರಗಳನ್ನು ಪ್ರದರ್ಶಿಸಿ ಕೌಮಾರಾವಸ್ಥೆಯನ್ನು ತ್ಯಜಿಸಿ ಯೌವನವತಿಯಾದಳು.

ಬಾಲ್ಯಂ ವ್ಯತೀತ್ಯ ಸಾ ಪ್ರಾಪ್ಯ ಕಿಂಚಿದ್ಯೌವನತಾಂ ಸತೀ ।
ಅತೀವ ಶುಶುಭೇಽಂಗೇನ ಸರ್ವಾಂಗೇಷು ಮನೋಹರಾ ॥ ೯ ॥

ದಕ್ಷಸ್ತಾಂ ವೀಕ್ಷ್ಯ ಲೋಕೇಶಃ ಪ್ರೋದ್ಭಿನ್ನಾಂತರ್ವಯಸ್ಥಿತಾಂ ।
ಚಿಂತಯಾಮಾಸ ಭರ್ಗಾಯ ಕಥಂ ದಾಸ್ಯ ಇಮಾಂ ಸುತಾಂ ॥ ೧೦ ॥

ಅಥ ಸಾಪಿ ಸ್ವಯಂ ಭರ್ಗಂ ಪ್ರಾಪ್ತುಮೈಚ್ಛತ್ತದಾನ್ವಹಂ ।
ಪಿತುರ್ಮನೋಗತಿಂ ಜ್ಞಾತ್ವಾ ಮಾತುರ್ನಿಕಟಮಾಗತಾ ॥ ೧೧ ॥

ಪಪ್ರಚ್ಛಾಜ್ಞಾಂ ತಪೋಹೇತೋಶ್ಶಂಕರಸ್ಯ ವಿನೀತಧೀಃ ।
ಮಾತುಸ್ತ್ರಿಯಾಽಥ ವೀರಿಣಾಸ್ಸಾ ಸತೀ ಪರಮೇಶ್ವರೀ ॥ ೧೨ ॥

ತತಸ್ಸತೀ ಮಹೇಶಾನಂ ಪತಿಂ ಪ್ರಾಪ್ತುಂ ದೃಢವ್ರತಾ ।
ಸಾ ತಮಾರಾಧಯಾಮಾಸ ಗೃಹೇ ಮಾತುರನುಜ್ಞಯಾ ॥ ೧೩ ॥

---

೯. ಬಾಲ್ಯವನ್ನು ಕಳೆದು ಯೌವನ ಪಡೆದ ಆ ಸತೀದೇವಿಯು ಸರ್ವಾಂಗ ಸುಂದರಿಯಾಗಿ ತುಂಬಾ ಪ್ರಕಾಶಿಸಿದಳು.

೧೦. ಆಗ ದಕ್ಷನು ಸತೀದೇವಿಯು ಯೌವನವತಿಯಾದುದನ್ನು ನೋಡಿ ಇವಳನ್ನು ಶಂಕರನಿಗೆ ಹೇಗೆ ಮದುವೆಮಾಡಿಕೊಡಲಿ ಎಂದು ಚಿಂತಿಸಿದನು.

೧೧-೧೨ ಆಗ ತಾಯಿಯಿಂದ ತಂದೆಯ ಅಭಿಪ್ರಾಯವನ್ನು ತಿಳಿದು ಆ ಸತೀದೇವಿಯೂ ಸಹ ಶಂಕರನನ್ನು ಪತಿಯಾಗಿ ಪಡೆಯಬೇಕೆಂದು ಇಚ್ಛಿಸಿ, ತಾಯಿಯಾದ ವೀರಿಣಿಯನ್ನು ಕುರಿತು ತಾನು ಶಂಕರನನ್ನು ಕುರಿತು ತಪಸ್ಸನ್ನು ಮಾಡಲು ಹೊರಡುವೆನು. ಅನುಮತಿಯನ್ನು ಕೊಡೆಂದು ವಿನಯದಿಂದ ಬೇಡಿದಳು.

೧೩. ಆ ಮೇಲಾ ಸತೀದೇವಿಯು ಪರಮೇಶ್ವರನನ್ನು ಪತಿಯನ್ನಾಗಿ ಪಡೆಯಲು ತಾಯಿಯ ಅನುಮತಿಯನ್ನು ಪಡೆದು ಮನೆಯಲ್ಲಿಯೇ ದೃಢವಾದ ನಿಯಮಗಳಿಂದ ಆ ಶಿವನನ್ನು ಅರ್ಚಿಸಿದಳು.

**ಆಶ್ವಿನೇ ಮಾಸಿ ನಂದಾಯಾಂ ತಿಥಾವಾನರ್ಚ ಭಕ್ತಿತಃ ।**
**ಗುಡೋದನೈಸ್ಸಲವಣೈರ್ಹರಂ ನತ್ವಾ ನಿನಾಯ ತಂ ॥ ೧೪ ॥**

**ಕಾರ್ತಿಕಸ್ಯ ಚತುರ್ದಶ್ಯಾಮಪೂಪೈಃ ಪಾಯಸೈರಪಿ ।**
**ಸಮಾಕೀರ್ಣೈಸ್ಸಮಾರಾಧ್ಯ ಸಸ್ಮಾರ ಪರಮೇಶ್ವರಂ ॥ ೧೫ ॥**

**ಮಾರ್ಗಶೀರ್ಷೇಽಸಿತಾಷ್ಟಮ್ಯಾಂ ಸತಿಲೈಸ್ಸಯವೋದನೈಃ ।**
**ಪೂಜಯಿತ್ವಾ ಹರಂ ಕೀಲೈರ್ನಿನಾಯ ದಿವಸಾನ್ ಸತೀ ॥ ೧೬ ॥**

**ಪೌಷೇತು ಶುಕ್ಲಸಪ್ತಮ್ಯಾಂ ಕೃತ್ವಾ ಜಾಗರಣಂ ನಿಶಿ ।**
**ಅಪೂಜಯಚ್ಛಿವಂ ಪ್ರಾತಃ ಕೃಸರಾನ್ನೇನ ಸಾ ಸತೀ ॥ ೧೭ ॥**

**ಮಾಘೇ ತು ಪೌರ್ಣಮಾಸ್ಯಾಂ ಸಾ ಕೃತ್ವಾ ಜಾಗರಣಂ ನಿಶಿ ।**
**ಆರ್ದ್ರವಸ್ತ್ರಾ ನದೀತೀರೇಽಕರೋಚ್ಛಂಕರಪೂಜನಂ ॥ ೧೮ ॥**

---

೧೪. ಆಶ್ವೀಜಮಾಸದಲ್ಲಿ ನಂದಕಾಷ್ಟಮಿಯಲ್ಲಿ ಲವಣಮಿಶ್ರವಾದ ಬೆಲ್ಲದನ್ನವನ್ನು ಎಂದರೆ ಸಿಹಿಪಂಗಲನ್ನು ನಿವೇದಿಸಿ ಭಕ್ತಿಯಿಂದ ಶಿವನನ್ನರ್ಚಿಸಿ ನಮಸ್ಕರಿಸಿದಳು.

೧೫. ಕಾರ್ತಿಕಮಾಸದಲ್ಲಿ ಚತುರ್ದಶಿಯಲ್ಲಿ ಕರಿಗಡುಬು ಮತ್ತು ಪಾಯಸಗಳನ್ನು ನೈವೇದ್ಯಮಾಡಿ ಶಂಕರನನ್ನು ಅರ್ಚಿಸಿ ಅವನನ್ನು ಭಕ್ತಿಯಿಂದ ಧ್ಯಾನಿಸಿದಳು.

೧೬. ಮಾರ್ಗಶೀರ್ಷಮಾಸದ ಕೃಷ್ಣಾಷ್ಟಮಿಯಲ್ಲಿ ತಿಲಮಿಶ್ರವಾದ ಯವಾನ್ನ (ಎಳ್ಳನ್ನ) ವನ್ನು ನಿವೇದಿಸಿಯೂ, ಕನ್ನೇದಿಲೆಯನ್ನರ್ಪಿಸಿಯೂ ಸಹ ಶಿವನನ್ನು ಅವಿಚ್ಛಿನ್ನವಾಗಿ ಅರ್ಚಿಸಿದಳು.

೧೭. ಪುಷ್ಯಮಾಸದಲ್ಲಿ ಶುಕ್ಲಸಪ್ತಮಿಯಲ್ಲಿ ರಾತ್ರಿ ಜಾಗರಣೆಯನ್ನು ಮಾಡಿ ಎಂದರೆ ನಿದ್ರೆಯನ್ನು ಮಾಡದೆ ಶಿವನನ್ನು ಸ್ಮರಿಸುತ್ತಾ ಎಚ್ಚರವಾಗಿದ್ದು, ಮರುದಿನ ಬೆಳಿಗ್ಗೆ ಕೃಸರಾನ್ನ (ಎಳ್ಳನ್ನ) ವನ್ನು ನಿವೇದಿಸಿ ಶಿವನನ್ನರ್ಚಿಸಿದಳು.

೧೮. ಮಾಘ ಶುಕ್ಲ ಹುಣ್ಣಿಮೆಯಲ್ಲಿ ಆ ಸತೀದೇವಿಯು ರಾತ್ರಿ ಜಾಗರಣೆಯಿಂದಿದ್ದು ಬೆಳಿಗ್ಗೆ ನದೀತೀರದಲ್ಲಿ ಸ್ನಾನಮಾಡಿ ಒದ್ದೆಬಟ್ಟೆಯನ್ನುಟ್ಟು ಶಿವನನ್ನು ಭಕ್ತಿಯಿಂದ ಪೂಜಿಸಿದಳು.

ತಪಸ್ಯಾಸಿತಭೂತಾಯಾಂ ಕೃತ್ವಾ ಜಾಗರಣಂ ನಿಶಿ ।
ವಿಶೇಷತಸ್ಸಮಾನರ್ಚ ಶೈಲೂಷೈಸ್ಸರ್ವಯಾಮಸು ॥ ೧೯ ॥

ಚೈತ್ರೇ ಶುಕ್ಲಚತುರ್ದಶ್ಯಾಂ ಪಾಲಾಶೈರ್ದಮನೈಃ ಶಿವಂ ।
ಅಪೂಜಯದ್ದಿನಾರಾತ್ರೌ ಸಂಸ್ಮರಂ ಸಾ ನಿನಾಯ ತಂ ॥ ೨೦ ॥

ರಾಧಶುಕ್ಲತೃತೀಯಾಯಾಂ ತಿಲಮಿಶ್ರಯವೋದನೈಃ ।
ಪೂಜಯಿತ್ವಾ ಸತೀ ರುದ್ರಂ ಗವ್ಯೈರ್ಮಾಸಂ ಚರಂತ್ಯನು ॥ ೨೧ ॥

ಜ್ಯೇಷ್ಠಸ್ಯ ಪೂರ್ಣಿಮಾಯಾಂ ವೈ ರಾತ್ರೌ ಸಂಪೂಜ್ಯ ಶಂಕರಂ ।
ವಸನೈರ್ಬೃಹತೀಪುಷ್ಪೈರ್ನಿರಾಹಾರಾ ನಿನಾಯ ತಂ ॥ ೨೨ ॥

ಆಷಾಢಸ್ಯ ಚತುರ್ದಶ್ಯಾಂ ಶುಕ್ಲಾಯಾಂ ಕೃಷ್ಣವಾಸಸಾ ।
ಬೃಹತೀಕುಸುಮೈಃ ಪೂಜಾ ರುದ್ರಸ್ಯಾಕಾರಿ ವೈ ತಯಾ ॥ ೨೩

೧೯. ಫಾಲ್ಗುಣ ಕೃಷ್ಣಚತುರ್ದಶಿಯಲ್ಲಿ ರಾತ್ರಿ ಜಾಗರಣವಿಂದಿದ್ದು ಪ್ರ
ಯಾಮಗಳಲ್ಲೂ ಬಿಲ್ವಪತ್ರಗಳಿಂದ ಶಿವನನ್ನು ಅರ್ಚಿಸಿದಳು.

೨೦. ಚೈತ್ರಶುಕ್ಲ ಚತುರ್ದಶಿಯಲ್ಲಿ ಹಗಲು ಮುತ್ತುಗದ ಹೂವುಗಳಿಂದಲೂ ದವನಪತ್ರಗಳಿಂದಲೂ ಶಿವನನ್ನು ಅರ್ಚಿಸಿ ರಾತ್ರಿಯಲ್ಲಿ ಶಿವನನ್ನು ಧ್ಯಾನಿಸುತ್ತಾ ಕಾಲಕಳೆದಳು.

೨೧. ವೈಶಾಖ ಶುದ್ಧ ತದಿಗೆಯಲ್ಲಿ ಎಳ್ಳನ್ನವನ್ನು ನೈವೇದ್ಯಮಾಡಿ ರುದ್ರನನ್ನು ಭಕ್ತಿಯಿಂದ ಅರ್ಚಿಸಿ ಆ ತಿಂಗಳು ಕೇವಲ ಹಾಲುಮೊಸರುಗಳನ್ನೇ ಸೇವಿಸುತ್ತಾ ಕಾಲಕಳೆದಳು.

೨೨. ಜ್ಯೇಷ್ಠ ಶುದ್ಧ ಹುಣ್ಣಿಮೆಯಲ್ಲಿ ರಾತ್ರಿ ಶಂಕರನನ್ನು ಶುಭ್ರವಸ್ತ್ರಗಳಿಂದಲೂ ಬೃಹತೀಪುಷ್ಪಗಳಿಂದಲೂ ಅರ್ಚಿಸಿ ಆ ರಾತ್ರಿಯನ್ನು ಯಾವ ಆಹಾರವನ್ನೂ ಸೇವಿಸದೆ ಕಳೆದಳು.

೨೩. ಆಷಾಢ ಶುದ್ಧ ಚತುರ್ದಶಿಯಲ್ಲಿ ಕಪ್ಪುಬಟ್ಟೆಯನ್ನುಟ್ಟು ಬೃಹತೀಕುಸುಮಗಳಿಂದ ಶಿವನನ್ನು ಅರ್ಚಿಸಿದಳು.

**ಶ್ರಾವಣಸ್ಯ ಸಿತಾಷ್ಟಮ್ಯಾಂ ಚತುರ್ದಶ್ಯಾಂ ಚ ಸಾ ಶಿವಂ ।**
**ಯಜ್ಞೋಪವೀತೈರ್ವಾಸೋಭಿಃ ಪವಿತ್ರೈರಪ್ಯಪೂಜಯತ್ ॥ ೨೪ ॥**

**ಭಾದ್ರೇ ಕೃಷ್ಣಚತುರ್ದಶ್ಯಾಂ ಪುಷ್ಪೈರ್ನಾನಾವಿಧೈಃ ಫಲೈಃ ।**
**ಸಂಪೂಜ್ಯ ಚ ಚತುರ್ದಶ್ಯಾಂ ಚಕಾರ ಜಲಭೋಜನಂ ॥ ೨೫ ॥**

**ನಾನಾವಿಧೈಃ ಫಲೈಃ ಪುಷ್ಪೈಸ್ಸಸ್ಯೈಸ್ತತ್ಕಾಲಸಂಭವೈಃ ।**
**ಚಕ್ರೇ ಸುನಿಯತಾಽಽಹಾರಾ ಜಪನ್ಮಾಸೇ ಶಿವಾರ್ಚನಂ ॥ ೨೬ ॥**

**ಸರ್ವಮಾಸೇ ಸರ್ವದಿನೇ ಶಿವಾರ್ಚನರತಾ ಸತೀ ।**
**ದೃಢವ್ರತಾಭವದ್ದೇವೀ ಸ್ವೇಚ್ಛಾಧೃತನರಾಕೃತಿಃ ॥ ೨೭ ॥**

**ಇತ್ಥಂ ನಂದಾವ್ರತಂ ಕೃಷ್ಣಂ ಸಮಾಪ್ಯ ಸುಸಮಾಹಿತಾ ।**
**ದಧ್ಯೌ ಶಿವಂ ಸತೀ ಪ್ರೇಮ್ಣಾ ನಿಶ್ಚಲಾಭೂದನನ್ಯಧೀಃ ॥ ೨೮ ॥**

೨೪. ಶ್ರಾವಣ ಶುಕ್ಲ ಅಷ್ಟಮಿಯಲ್ಲೂ ಚತುರ್ದಶಿಯಲ್ಲೂ ಸಹ ಆ ಸತಿಯು ಶಿವನಿಗೆ ಪವಿತ್ರವಾದ ಯಜ್ಞೋಪವೀತಗಳನ್ನೂ ವಸ್ತ್ರಗಳನ್ನೂ ಅರ್ಪಿಸಿ ಭಕ್ತಿಯಿಂದ ಪೂಜಿಸಿದಳು.

೨೫. ಭಾದ್ರಪದ ಕೃಷ್ಣಚತುರ್ದಶಿಯಲ್ಲಿ ಅನೇಕ ಬಗೆಯ ಹೂವುಗಳಿಂದಲೂ ಹಣ್ಣುಗಳಿಂದಲೂ ಶಿವನನ್ನು ಅರ್ಚಿಸಿ ಆ ದಿನ ಕೇವಲ ಜಲವನ್ನೇ ಆಹಾರವಾಗಿ ಸೇವಿಸಿದಳು.

೨೬. ಅನೇಕ ಬಗೆಯ ಹಣ್ಣುಗಳಿಂದಲೂ, ಹೂವುಗಳಿಂದಲೂ, ಧಾನ್ಯಗಳಿಂದಲೂ ಸಹ ಭಾದ್ರಪದಮಾಸ ಪೂರ್ತಿಯಾಗಿ ಮಿತವಾದ ಆಹಾರವನ್ನು ಸೇವಿಸುತ್ತಾ ಶಿವನನ್ನು ಭಕ್ತಿಯಿಂದ ಅರ್ಚಿಸಿದಳು.

೨೭. ತನ್ನಿಚ್ಛೆಯಿಂದಲೇ ಮನುಷ್ಯಳಾಗಿ ಅವತರಿಸಿದ ಆ ಸತೀದೇವಿಯು ಎಲ್ಲಾ ತಿಂಗಳುಗಳಲ್ಲಿಯೂ ದಿನಗಳಲ್ಲಿಯೂ ಭಕ್ತಿಯಿಂದ ಶಿವನನ್ನು ಅರ್ಚಿಸುತ್ತಾ ದೃಢವಾದ ನಿಯಮಗಳನ್ನಾಚರಿಸುತ್ತಲಿದ್ದಳು.

೨೮. ಹೀಗೆ ಭಾದ್ರಪದ ಕೃಷ್ಣಪಕ್ಷದಲ್ಲಿ ನಂದಾವ್ರತವನ್ನು ಮುಗಿಯಿಸಿ ಆ ಸತೀದೇವಿಯು ನಿಶ್ಚಲವಾದ ಮನಸ್ಸಿನಿಂದ ಶಿವನನ್ನು ಪ್ರೇಮಪೂರ್ವಕವಾಗಿ ಧ್ಯಾನಿಸಿದಳು.

ಏತಸ್ಮಿನ್ನಂತರೇ ದೇವಾ ಮುನಯಶ್ಚಾಖಿಲಾ ಮುನೇ ।
ವಿಷ್ಣುಂ ಮಾಂ ಚ ಪುರಸ್ಕೃತ್ಯ ಯಯುರ್ದ್ರಷ್ಟುಂ ಸತೀತಪಃ ॥ ೨೯ ॥

ದೃಷ್ಟ್ವಾಗತ್ಯ ಸತೀ ದೇವೈರ್ಮೂರ್ತಾ ಸಿದ್ಧಿರಿವಾಪರಾ ।
ಶಿವಧ್ಯಾನಮಹಾಮಗ್ನಾ ಸಿದ್ಧಾವಸ್ಥಾಂ ಗತಾ ತದಾ ॥ ೩೦ ॥

ಚಕ್ರುಸ್ಸರ್ವೇ ಸುರಾಸ್ಸತ್ಯೈ ಮುದಾ ಸಾಂಜಲಯೋ ನತಿಂ ।
ಮುನಯಶ್ಚ ನತಸ್ಕಂಧಾಃ ವಿಷ್ಣ್ವಾದ್ಯಾಃ ಪ್ರೀತಮಾನಸಾಃ ॥ ೩೧ ॥

ಅಥ ಸರ್ವೇ ಸುಪ್ರಸನ್ನಾಃ ಸುರಾಸ್ಸರ್ವೇ ಮಹರ್ಷಯಃ ।
ಪ್ರಶಶಂಸುಸ್ತಪಸ್ತಸ್ಯಾಸ್ಸತ್ಯಾಸ್ತಸ್ಯಾತ್ಸವಿಸ್ಮಯಾಃ ॥ ೩೨ ॥

ತತಃ ಪ್ರಣಮ್ಯ ತಾಂ ದೇವೀಂ ಪುನಸ್ತೇ ಮುನಯಸ್ಸುರಾಃ ।
ಜಗ್ಮುರ್ಗಿರಿವರಂ ಸದ್ಯಃ ಕೈಲಾಸಂ ಶಿವವಲ್ಲಭಂ ॥ ೩೩ ॥

---

೨೯. ಈ ಮಧ್ಯದಲ್ಲಿ ದೇವತೆಗಳೂ ಮುನಿಗಳೆಲ್ಲರೂ ಸಹ ಸತಿಯ ತಪಸ್ಸನ್ನು ನೋಡಲು ನನ್ನನ್ನೂ ವಿಷ್ಣುವನ್ನೂ ಮುಂದುಮಾಡಿಕೊಂಡು ಆ ಸತಿಯ ಬಳಿಗೆ ಬಂದರು.

೩೦. ಆಗ ಸತೀದೇವಿಯು ಶಿವಧ್ಯಾನದಲ್ಲಿ ತಲ್ಲೀನಳಾಗಿ ಸಿದ್ಧಾವಸ್ಥೆಯನ್ನು ಹೊಂದಿದ್ದು ಮೂರ್ತಿವತ್ತಾದ ಸಿದ್ಧಿಯಂತೆ ತೋರುತ್ತಿದ್ದಳು. ಇಂತಹ ಸತಿಯನ್ನು ದೇವತೆಗಳು ನೋಡಿದರು.

೩೧. ಆಗ ವಿಷ್ಣುವೇ ಮೊದಲಾದ ದೇವತೆಗಳೂ ಮುನಿಗಳೂ ಸಹ ಸಂತೋಷಗೊಂಡು ಭಕ್ತಿಯಿಂದ ಅಂಜಲಿಯನ್ನು ಧರಿಸಿ ನಮಸ್ಕಾರವನ್ನು ಮಾಡಿದರು.

೩೨. ಆ ದೇವತೆಗಳೂ ಮುನಿಗಳೂ ಸಹ ವಿಸ್ಮಯದಿಂದ ಆ ಸತೀದೇವಿಯ ತಪಸ್ಸನ್ನು ಬಹುವಾಗಿ ಪ್ರಶಂಸಿಸಿದರು.

೩೩-೩೪. ಆಮೇಲೆ ಆದೇವತೆಗಳೂ ಮುನಿಗಳೂ ಸಹ ಸತೀದೇವಿಯನ್ನು ನಮಸ್ಕರಿಸಿ ಅವಳಿಂದ ಬೀಳ್ಕೊಂಡು ಶಿವನಿಗೆ ಪ್ರಿಯವಾದ ಕೈಲಾಸಪರ್ವತಕ್ಕೆ

ಸಾವಿತ್ರೀಸಹಿತಶ್ಚಾಹಂ ಸಹ ಲಕ್ಷ್ಮ್ಯಾ ಮುದಾನ್ವಿತಃ ।
ವಾಸುದೇವೋಽಪಿ ಭಗವಾನ್ ಜಗಾಮಾಥ ಹರಾಂತಿಕಂ ॥ ೩೪ ॥

ಗತ್ವಾ ತತ್ರ ಪ್ರಭುಂ ದೃಷ್ಟ್ವಾ ಸುಪ್ರಣಮ್ಯ ಸುಸಂಭ್ರಮಾಃ ।
ತುಷ್ಟುವುರ್ವಿವಿಧೈಃ ಸ್ತೋತ್ರೈಃ ಕರೌ ಬಧ್ವಾ ವಿನಮ್ರಕಾಃ ॥ ೩೫ ॥

॥ ದೇವಾ ಊಚುಃ ॥

ನಮೋ ಭಗವತೇ ತುಭ್ಯಂ ಯತ ಏತಚ್ಚರಾಚರಂ ।
ಪುರುಷಾಯ ಮಹೇಶಾಯ ಪರೇಶಾಯ ಮಹಾತ್ಮನೇ ॥ ೩೬ ॥

ಆದಿಬೀಜಾಯ ಸರ್ವೇಷಾಂ ಚಿದ್ರೂಪಾಯ ಪರಾಯ ಚ ।
ಬ್ರಹ್ಮಣೇ ನಿರ್ವಿಕಾರಾಯ ಪ್ರಕೃತೇಃ ಪುರುಷಸ್ಯ ಚ ॥ ೩೭ ॥

ಯ ಇದಂ ಪ್ರತಿಪಚ್ಯೇದಂ ಯೇನೇದಂ ವಿಚಕಾಸ್ತಿ ಹಿ ।
ಯಸ್ಮಾದಿದಂ ಯತಶ್ಚೇದಂ ಯಸ್ಯೇದಂ ತ್ವಂ ಚ ಯತ್ರತಃ ॥ ೩೮ ॥

---

ಹೊರಟು ಸರಸ್ವತಿಯೊಡನೆ ನಾನೂ ಲಕ್ಷ್ಮೀದೇವಿಯೊಡನೆ ಭಗವಾನ್ ವಿಷ್ಣುವೂ ಸಹ ಶಿವನ ಬಳಿಗೆ ತೆರಳಿದೆವು.

೩೫. ಶಿವನ ಬಳಿಗೆ ಹೋಗಿ ಅಲ್ಲಿ ಜಗತ್ಪ್ರಭುವಾದ ಶಿವನನ್ನು ನೋಡಿ ತ್ವರೆಯಿಂದ ನಮಸ್ಕರಿಸಿ, ವಿನಯದಿಂದ ಕೈಮುಗಿದು ಅನೇಕ ವಿಧವಾಗಿ ಸ್ತೋತ್ರ ಮಾಡಿದೆವು.

೩೬. ಓ ದೇವ, ಸಕಲ ಜಗತ್ತನ್ನೂ ಸೃಷ್ಟಿಸುವ ಭಗವಂತನಾದ ನಿನಗೆ ನಮಸ್ಕಾರವು.

೩೭. ಎಲ್ಲರಿಗೂ ಆದಿಕಾರಣನೂ, ಜ್ಞಾನಸ್ವರೂಪನೂ, ಸರ್ವೋತ್ಕೃಷ್ಟನೂ ಜನ್ಮವೇ ಮೊದಲಾದ ವಿಕಾರಗಳಿಲ್ಲದವನೂ, ಪ್ರಕೃತಿಗೆ ಆಶ್ರಯನೂ, ಪುರುಷ ಸ್ವರೂಪನೂ ಆದಂತಹ ಓ ದೇವನೆ! ನಿನಗೆ ನಮಸ್ಕಾರವು.

೩೮-೩೯. ಯಾವನು ಈ ಜಗತ್ತನ್ನು ಸೃಷ್ಟಿಸಿ ಅದರ ಒಳಗೂ ಹೊರಗೂ ಪ್ರಕಾಶಿಸುವನೋ ಮತ್ತು ಜಗತ್ತಿಗೆ ಯಾವನು ಆಧಾರಭೂತನೋ, ಈ ಜಗತ್ತು ಯಾವನಲ್ಲಿ ಹುಟ್ಟಿ ಕೆಲವು ಕಾಲ ತೋರಿ ಕೊನೆಗೆ ಯಾವನಲ್ಲಿಯೇ ಲಯವನ್ನು

ಯೋಽಸ್ಮಾತ್ಪರಸ್ಮಾಚ್ಚ ಪರೋ ನಿರ್ವಿಕಾರೀ ಮಹಾಪ್ರಭುಃ ।
ಈಕ್ಷತೇ ಯಸ್ಸ್ವಾತ್ಮನೀದಂ ತಂ ನತಾಃ ಸ್ಮ ಸ್ವಯಂಭುವಂ ॥ ೩೯ ॥

ಅವಿದ್ಧದೃಕ್ಪರಃ ಸಾಕ್ಷೀ ಸರ್ವಾತ್ಮಾನೇಕರೂಪಧೃಕ್ ।
ಆತ್ಮಭೂತಃ ಪರಬ್ರಹ್ಮ ತಪಂತಂ ಶರಣಂ ಗತಾಃ ॥ ೪೦ ॥

ನ ಯಸ್ಯ ದೇವಾ ಋಷಯಃ ಸಿದ್ಧಾಶ್ಚ ನ ವಿದುಃ ಪದಂ ।
ಕಃ ಪುನರ್ಜಂತುರಪರೋ ಜ್ಞಾತುಮರ್ಹತಿ ವೈರಿತುಂ ॥ ೪೧ ॥

ದಿದೃಕ್ಷವೋ ಯಸ್ಯ ಪದಂ ಮುಕ್ತಸಂಗಾಸ್ಸುಸಾಧವಃ ।
ಚರಂತಿ ಸುಗತಿರ್ನಸ್ತ್ವಂ ಸಲೋಕವ್ರತಮವ್ರಣಂ ॥ ೪೨ ।

ಮಜ್ಜನ್ಮಾದಿವಿಕಾರಾ ನೋ ವಿದ್ಯಂತೇ ಕೇಽಪಿ ದುಃಖದಾಃ ।
ತಥಾಪಿ ಮಾಯಯಾ ತ್ವಂ ಹಿ ಗೃಹ್ಣಾಸಿ ಕೃಪಯಾ ಚ ತಾನ್ ॥ ೪೩ ॥

---

ಹೊಂದುವುದೋ ಅಂತಹ ಪರಮೇಶ್ವರನಿಗೆ ನಮಸ್ಕಾರವು. ಓ ಪ್ರಭುವೇ, ನಿನಗಿಂತಲೂ ಬೇರೆಯಾಗಿ ನಿರ್ವಿಕಾರನಾದ ಪ್ರಭುವು ಮತ್ತೊಬ್ಬನಿಲ್ಲ. ನೀನೇ ಪರಮೇಶ್ವರನು. ಈ ಜಗತ್ತನ್ನು ತನ್ನಲ್ಲಿಯೇ ನೋಡುವಂತಹ ನಿನಗೆ ನಮಸ್ಕಾರವು.

೪೦. ಓ ದೇವ! ನೀನು ತಡೆಯಿಲ್ಲದ ದಿವ್ಯದೃಷ್ಟಿಯುಳ್ಳವನು. ಜಗತ್ತಿನಲ್ಲಿ ನಡೆಯುವುದೆಲ್ಲವನ್ನೂ ಉದಾಸೀನದೃಷ್ಟಿಯಿಂದ ನೋಡುವ ಸಾಕ್ಷಿಭೂತನು. ಎಲ್ಲಾ ಜೀವರ ಆತ್ಮಸ್ವರೂಪನು. ಸರ್ವಾಂತರ್ಯಾಮಿಯು, ಪರಮೇಶ್ವರನು. ಇಂತಹ ನಿನ್ನನ್ನು ಶರಣುಹೊಂದಿರುವೆವು.

೪೧. ಓ ದೇವನೆ, ನಿನ್ನ ಸ್ವರೂಪವನ್ನು ದೇವತೆಗಳೂ ಸಿದ್ಧರೂ ಋಷಿಗಳೂ ಸಹ ತಿಳಿಯಲಾರರು. ಹೀಗಿರಲು ಸಾಮಾನ್ಯರಾದ ಜಂತುಗಳು ನಿನ್ನನ್ನು ಹೇಗೆ ತಿಳಿಯುವರು? ಹೇಗೆ ಹೇಳಲು ಶಕ್ತರಾಗುವರು?

೪೨. ನಿತ್ಯನೂ, ಅನಿತ್ಯಕರ್ಮಗಳಿಂದ ಪಡೆಲಶಕ್ಯನೂ ಆದ ನಿನ್ನನ್ನು, ಸಾಧುಗಳು ಸಂಸಾರದಲ್ಲಿ ಆಸಕ್ತಿಯನ್ನು ಬಿಟ್ಟು ವೈರಾಗ್ಯವನ್ನು ಹೊಂದಿ ನಿನ್ನನ್ನು ದರ್ಶನ ಮಾಡಬೇಕೆಂದು ಸಂಚರಿಸುವರು.

೪೩. ಓ ಪ್ರಭು! ದುಃಖಮಯವಾದ ಜನ್ಮ ಮೊದಲಾದ ವಿಕಾರಗಳು ನಿನಗೆ ವಸ್ತುತಃ ಇಲ್ಲ. ಆದರೆ ಮಾಯೆಯಿಂದ ಆ ವಿಕಾರಗಳನ್ನು ಧರಿಸಿ ಭಕ್ತರ ಅನುಗ್ರಹಕ್ಕಾಗಿ ನೀನು ಆಗಾಗ ಅವತರಿಸುವೆ.

ತಸ್ಮೈ ನಮಃ ಪರೇಶಾಯ ತುಭ್ಯಮಾಶ್ಚರ್ಯಕರ್ಮಣೇ ।
ನಮೋ ಗಿರಾಂ ವಿದೂರಾಯ ಬ್ರಹ್ಮಣೇ ಪರಮಾತ್ಮನೇ ॥ ೪೪ ॥

ಅರೂಪಾಯೋರುರೂಪಾಯ ಪರಾಯಾನಂತಶಕ್ತಯೇ ।
ತ್ರಿಲೋಕಪತಯೇ ಸರ್ವಸಾಕ್ಷಿಣೇ ಸರ್ವಗಾಯ ಚ ॥ ೪೫ ॥

ನಮ ಆತ್ಮಪ್ರದೀಯಾಯ ನಿರ್ವಾಣಸುಖಸಂಪದೇ ।
ಜ್ಞಾನಾತ್ಮನೇ ನಮಸ್ತೇಽಸ್ತು ವ್ಯಾಪಕಾಯೇಶ್ವರಾಯ ಚ ॥ ೪೬ ॥

ನೈಷ್ಕರ್ಮ್ಯೇಣ ಸುಲಭ್ಯಾಯ ಕೈವಲ್ಯಪತಯೇ ನಮಃ ।
ಪುರುಷಾಯ ಪರೇಶಾಯ ನಮಸ್ತೇ ಸರ್ವದಾಯ ಚ ॥ ೪೭ ॥

ಕ್ಷೇತ್ರಜ್ಞಾಯಾತ್ಮರೂಪಾಯ ಸರ್ವಪ್ರತ್ಯಯಹೇತವೇ ॥ ೪೮ ॥

ಸರ್ವಾಧ್ಯಕ್ಷಾಯ ಮಹತೇ ಮೂಲಪ್ರಕೃತಯೇ ನಮಃ ।
ಪುರಷಾಯ ಪರೇಶಾಯ ನಮಸ್ತೇ ಸರ್ವದಾಯ ಚ ॥ ೪೯ ॥

---

೪೪-೪೬. ಓ ದೇವ ! ಅತ್ಯದ್ಭುತವಾದ ಕರ್ಮವನ್ನಾಚರಿಸುವವನೂ, ವಾಕ್ಕುಗಳಿಗೆ ಅಗೋಚರನೂ, ವ್ಯಾಪಕನೂ, ಪರಮಾತ್ಮನೂ, ಪರಮೇಶ್ವರನೂ ಆದ ನಿನಗೆ ನಮಸ್ಕಾರವು. ಮತ್ತು ವಸ್ತುತಃ ರೂಪವಿಲ್ಲದಿದ್ದರೂ ಮಾಯಾಮಯವಾದ ಸಗುಣೇಶ್ವರ ರೂಪವುಳ್ಳವನೂ, ಸರ್ವೋತ್ಕೃಷ್ಟನೂ, ಅಪರಿಮಿತವಾದ ಶಕ್ತಿಯುಳ್ಳವನೂ, ಮೂರು ಲೋಕಗಳಿಗೆ ಒಡೆಯನೂ, ಎಲ್ಲಕ್ಕೂ ದಿನಮಣಿಯಂತೆ ಸಾಕ್ಷಿಯೂ, ವ್ಯಾಪಕನೂ ಆದ ನಿನಗೆ ನಮಸ್ಕಾರವು. ಜ್ಞಾನಜ್ಯೋತಿಪ್ರಕಾಶಸ್ವರೂಪನೂ ಆನಂದಸ್ವರೂಪನೂ, ಜ್ಞಾನಸ್ವರೂಪನೂ, ಎಲ್ಲವನ್ನು ವ್ಯಾಪಿಸಿರುವನೂ, ಈಶ್ವರನೂ ಆದ ನಿನಗೆ ನಮಸ್ಕಾರವು.

೪೭. ಓ ಸ್ವಾಮಿ, ಸನ್ಯಾಸಮಾರ್ಗದಿಂದ ಸುಖವಾಗಿ ಪಡೆಯಲ್ಪಡತಕ್ಕವನೂ, ಮುಕ್ತಿಯನ್ನುಕೊಡುವವನೂ, ವಿರಾಟ್ಪುರುಷನೂ, ಪರಮೇಶ್ವರನೂ, ಭಕ್ತರಿಗೆ ಸಕಲ ಇಷ್ಟಾರ್ಥಗಳನ್ನು ಕೊಡುವವನೂ ಆದ ನಿನಗೆ ನಮಸ್ಕಾರವು.

೪೮-೪೯. ಓ ದೇವನೇ, ನೀನು ಕ್ಷೇತ್ರಜ್ಞನೆಂದು ಹೇಳಲ್ಪಡುವ ಆತ್ಮಸ್ವರೂಪನಾಗಿರುವೆ. ಚರಾಚರಾತ್ಮಕವಾದ ಸರ್ವ ಪ್ರಪಂಚಕ್ಕೂ ಆದಿಕಾರಣನು, ಸಮಸ್ತ ವಿಶ್ವಕ್ಕೂ ಅಧಿಪತಿಯು. ಮಹದಾದಿ ತತ್ತ್ವಗಳೂ ಮೂಲಪ್ರಕೃತಿಯೂ ನಿನ್ನ ಸ್ವರೂಪವೇ ಹೊರತು ಬೇರೆಯಲ್ಲ. ಇಂತಹ ನಿನ್ನನ್ನು ನಮಸ್ಕರಿಸುವೆವು.

ತ್ರಿನೇತ್ರಾಯೇಷುವಕ್ತ್ರಾಯ ಸದಾಭಾಸಾಯ ತೇ ನಮಃ ।
ಸರ್ವೇಂದ್ರಿಯಗುಣದ್ರಷ್ಟ್ರೇ ನಿಷ್ಕಾರಣ ನಮೋಽಸ್ತು ತೇ ॥ ೫೦ ॥

ತ್ರಿಲೋಕಕಾರಣಾಯಾಥಾಪವರ್ಗಾಯ ನಮೋ ನಮಃ ।
ಅಪವರ್ಗಪ್ರದಾಯಾಶು ಶರಣಾಗತತಾರಿಣೇ ॥ ೫೧ ॥

ಸರ್ವಾಮ್ನಾಯಾಗಮಾನಾಂ ಚೋದಧಯೇ ಪರಮೇಷ್ಠಿನೇ ।
ಪರಾಯಣಾಯ ಭಕ್ತಾನಾಂ ಗುಣಾನಾಂ ಚ ನಮೋಽಸ್ತು ತೇ ॥ ೫೨ ॥

ನಮೋ ಗುಣಾರಣಿಚ್ಛನ್ನಚಿದೂಷ್ಮಾಯ ಮಹೇಶ್ವರ ।
ಮೂಢದುಷ್ಪ್ರಾಪ್ತರೂಪಾಯ ಜ್ಞಾನಿಹೃದ್ವಾಸಿನೇ ಸದಾ ॥ ೫೩ ॥

ಪಶುಪಾಶವಿಮೋಕ್ಷಾಯ ಭಕ್ತಸನ್ಮುಕ್ತಿದಾಯ ಚ ।
ಸ್ವಪ್ರಕಾಶಾಯ ನಿತ್ಯಾಯಾವ್ಯಯಾಯಾಜಸ್ರಸಂವಿದೇ ॥ ೫೪ ॥

---

೫೦. ಮೂರು ಕಣ್ಣುಗಳುಳ್ಳವನೂ, ಹರಿತವಾದ ಬಾಣದಂತೆ ಉಗ್ರವೂ, ತೇಜಸ್ವಿಯೂ ಆದ ಮುಖವುಳ್ಳವನೂ, ಸದಾ ಪ್ರಕಾಶಸ್ವರೂಪನೂ, ಎಲ್ಲಾ ಇಂದ್ರಿಯಗಳಿಗೂ ಸದ್ರೂಪದಿಂದ ವಿಷಯನೂ, ತನಗೆ ಇನ್ನೊಂದು ಕಾರಣವಿಲ್ಲದವನೂ ಆದಂತಹ ಓ ದೇವನೇ, ನಿನಗೆ ನಮಸ್ಕಾರವು.

೫೧-೫೨. ಮೂರು ಲೋಕಗಳಿಗೆ ಕಾರಣನೂ, ಮುಕ್ತಿಸ್ವರೂಪನೂ, ಮುಕ್ತಿಯನ್ನು ಕೊಡುವವನೂ, ಶರಣುಹೊಕ್ಕವರನ್ನು ಸಲಹುವವನೂ, ಆದಂತಹ ದೇವನಿಗೆ ನಮಸ್ಕಾರವು. ಎಲ್ಲಾ ವೇದಶಾಸ್ತ್ರ ಆಗಮಗಳಿಗೆ ಆಧಾರನೂ ಸರ್ವೋತ್ತಮನೂ, ಭಕ್ತರನ್ನು ಸಲಹುವವನೂ ಅನಂತಕಲ್ಯಾಣಗುಣಗಳುಳ್ಳವನೂ ಆದ ನಿನಗೆ ನಮಸ್ಕಾರವು.

೫೩. ಓ ಮಹೇಶ್ವರ, ನಿನ್ನ ಸ್ವರೂಪಪ್ರಕಾಶವು ಮಾಯೆಯ ಗುಣಗಳಿಂದ ಮುಚ್ಚಲ್ಪಟ್ಟಿದ್ದು ಅಜ್ಞಾನಿಗಳಿಗೆ ಕಾಣಿಸುತ್ತಲಿಲ್ಲ. ಆದುದರಿಂದಲೇ ಆ ಅಜ್ಞಾನಿಗಳು ನಿನ್ನನ್ನು ನೋಡಲಾರರು. ಆದರೆ ನೀನು ಜ್ಞಾನಿಗಳ ಹೃದಯದಲ್ಲಿ ವಾಸಿಸುವೆ. ಜ್ಞಾನಿಗಳು ಮಾತ್ರ ನಿನ್ನನ್ನು ನೋಡುವರು.

೫೪. ಓ ದೇವ, ನೀನು ಅಜ್ಞಾನಿಗಳ ಸಂಸಾರಪಾಶವನ್ನು ಹೋಗಲಾಡಿಸುವವನು, ಭಕ್ತರಿಗೆ ಮುಕ್ತಿಯನ್ನು ಕೊಡುವವನು, ಸ್ವಯಂಪ್ರಕಾಶನು, ನಿತ್ಯನು, ನಾಶವಿಲ್ಲದವನು, ಜ್ಞಾನಸ್ವರೂಪನು, ಸರ್ವಸಾಕ್ಷಿಯು, ಜನ್ಮವೇ ಮೊದಲಾದ

ಪ್ರತ್ಯಗ್ದ್ರಷ್ಟೇಽವಿಕಾರಾಯ ಪರಮೈಶ್ವರ್ಯಧಾರಿಣೇ ।
ಯಂ ಭಜಂತಿ ಚತುರ್ವರ್ಗಂ ಕಾಮಯಂತೀಷ್ಟಸದ್ಗತಿಂ ।
ಸೋಽಭೂದಕರಣಸ್ತ್ವಂ ನಃ ಪ್ರಸನ್ನೋ ಭವ ತೇ ನಮಃ　　॥ ೫೫ ॥

ಏಕಾಂತಿತಃ ಕಂಚನಾರ್ಥಂ ಭಕ್ತಾ ವಾಂಛಂತಿ ಯಸ್ಯ ನ ।
ಕೇವಲಂ ಚರಿತಂ ತೇ ತೇ ಗಾಯಂತಿ ಪರಮಂಗಲಂ　　॥ ೫೬ ॥

ಅಕ್ಷರಂ ಪರಮಂ ಬ್ರಹ್ಮ ತಮವ್ಯಕ್ತಾಕೃತಿಂ ವಿಭುಂ ।
ಅಧ್ಯಾತ್ಮಯೋಗಗಮ್ಯಂ ತ್ವಾಂ ಪರಿಪೂರ್ಣಂ ಸ್ತುತೋ ವಯಂ　　॥ ೫೭ ॥

ಅತೀಂದ್ರಿಯಮನಾಧಾರಂ ಸರ್ವಾಧಾರಮಹೇತುಕಂ ।
ಅನಂತಮಾದ್ಯಂ ಸೂಕ್ಷ್ಮಂ ತ್ವಾಂ ಪ್ರಣಮಾಮೋಽಖಿಲೇಶ್ವರ　　॥ ೫೮ ॥

---

ವಿಕಾರಗಳಿಲ್ಲದವನೂ, ಸಕಲೈಶ್ವರ್ಯಸಂಪೂರ್ಣನೂ ಆದಂತಹ ಶಿವನಿಗೆ ನಮಸ್ಕಾರವು.

೫೫. ಓ ದೇವ, ಜನಗಳು ನಿನ್ನನ್ನೇ ಕುರಿತು ಪುರುಷಾರ್ಥಗಳನ್ನೂ, ಸಕಲ ಇಷ್ಟಾರ್ಥಗಳನ್ನೂ ಕೊಡು ಎಂದು ಪ್ರಾರ್ಥಿಸುವರು. ಇಂತಹ ನೀನು ನಮ್ಮಲ್ಲಿ ದಯೆಯುಳ್ಳವನಾಗಿ ಪ್ರಸನ್ನನಾಗು, ನಿನಗೆ ನಮಸ್ಕಾರವು.

೫೬. ನಿನ್ನ ವಿರಕ್ತರಾದ ಭಕ್ತರು ನಿನ್ನಿಂದ ಯಾವ ಇಷ್ಟಾರ್ಥವನ್ನೂ ಅಪೇಕ್ಷಿಸದೆ ಕೇವಲ ನಿನ್ನ ಮಂಗಳ ಚರಿತ್ರೆಯನ್ನೇ ಗಾನಮಾಡುವರು.

೫೭. ಓ ದೇವ, ನೀನು ನಾಶವಿಲ್ಲದ ಪರಬ್ರಹ್ಮಸ್ವರೂಪನು. ಸೃಷ್ಟಿಯ ಆದಿಯಲ್ಲಿ ಸೂಕ್ಷ್ಮಜಗದ್ರೂಪನು. (ಎಂದರೆ ಸೂಕ್ಷ್ಮಜಗದ್ರೂಪವಾದ ಮಾಯೆಯುಳ್ಳವನು) ಜಗದೊಡೆಯನು, ಜ್ಞಾನಯೋಗದಿಂದ ಪಡೆಯಲ್ಪಡತಕ್ಕವನು, ಪರಿಪೂರ್ಣಸ್ವರೂಪನು ಇಂತಹ ನಿನ್ನನ್ನು ಸ್ತುತಿಸುವೆವು.

೫೮. ಮತ್ತು ನೀನು ಇಂದ್ರಿಯಗಳಿಗೆ ಅಗೋಚರನು. ನಿನಗೆ ಯಾವ ಆಧಾರವೂ ಇಲ್ಲ. ಆದರೆ ನೀನು ಎಲ್ಲಕ್ಕೂ ಆಧಾರನು, ಎಲ್ಲಕ್ಕೂ ಕಾರಣನು. ಆದರೆ ನಿನಗೆ ಕಾರಣ ಬೇರೆಯಿಲ್ಲ. ನಿನಗೆ ಆದ್ಯಂತಗಳಿಲ್ಲ. ಅಜ್ಞಾನಿಗಳು ನಿನ್ನನ್ನು ತಿಳಿಯಲಾರರು. ಇಂತಹ ಪರಮೇಶ್ವರನಾದ ನಿನಗೆ ನಮಸ್ಕಾರವು.

ಹರ್ಯಾದಯೋಽಖಿಲಾ ದೇವಾಸ್ತಥಾ ಲೋಕಾಶ್ಚರಾಚರಾಃ ।
ನಾಮರೂಪವಿಭೇದೇನ ಫಲ್ಗ್ವ್ಯಾ ಚ ಕಲಯಾ ಕೃತಾಃ ॥ ೫೯ ॥

ಯಥಾರ್ಚಿಷೋಗ್ನೇಸ್ಸವಿತುರ್ಯಾಂತಿ ನಿರ್ಯಾಂತಿ ವಾಸಕೃತ್ ।
ಗಭಸ್ತಯಸ್ತಥಾಯಂ ವೈ ಪ್ರವಾಹೋ ಗೌಣ ಉಚ್ಯತೇ ॥ ೬೦ ॥

ನ ತ್ವಂ ದೇವೋಽಸುರೋ ಮರ್ತ್ಯೋ ನ ತಿರ್ಯಙ್ನ ದ್ವಿಜಃ ಪ್ರಭೋ ।
ನ ಸ್ತ್ರೀ ನ ಷಂಢೋ ನ ಪುಮಾನ್ಕಾರ್ಯಸ್ಸದಸನ್ನ ಕಿಂಚನ ॥ ೬೧ ॥

ನಿಷೇಧಶೇಷಸ್ಸರ್ವಂ ತ್ವಂ ವಿಶ್ವಕೃದ್ವಿಶ್ವಪಾಲಕಃ ।
ವಿಶ್ವಲಯಕೃದ್ವಿಶ್ವಾತ್ಮಾ ಪ್ರಣತಾಸ್ಸ್ಮಸ್ತಮೀಶ್ವರಂ ॥ ೬೨ ॥

---

೫೯. ಇಂದ್ರನೇ ಮೊದಲಾದ ದೇವತೆಗಳೂ ಸ್ಥಾವರಜಂಗಮರೂಪವಾದ ಸಕಲ ಪ್ರಾಣಿಗಳೂ ಸಹ ಮಾಯಾಕಲ್ಪಿತವಾದ ನಾಮರೂಪಗಳುಳ್ಳವುಗಳಾಗಿ ನಿನ್ನ ಚಿಕ್ಕ ಅಂಶಗಳಿಂದ ಜನಿಸಿರುವುವು.

೬೦. ಓ ಮಹೇಶ್ವರನೇ, ಅಗ್ನಿಯಿಂದ ಯಾವಾಗಲೂ ಉಷ್ಣವು ಹೇಗೆ ಹೊರಹೊರಡುತ್ತಿರುವುದೋ, ಸೂರ್ಯನಿಂದ ತೇಜೋಮಯವಾದ ಕಿರಣಗಳು ಎಡಬಿಡದೆ ಹೇಗೆ ಹೊರಡುವವೋ ಹಾಗೆ ಪರಬ್ರಹ್ಮಸ್ವರೂಪನಾದ ನಿನ್ನಿಂದ ಜಗತ್ಸೃಷ್ಟಿಸ್ಥಿತಿ ನಾಶಗಳೆಂಬ ಪ್ರವಾಹವು ಯಾವಾಗಲೂ ಎಡಬಿಡದೆ ಹೊರಡುತ್ತಿರುವದು.

೬೧. ನೀನು ದೇವನಲ್ಲ, ಅಸುರನಲ್ಲ, ಮನುಷ್ಯನಲ್ಲ, ಪಶುಪ್ರಾಣಿಯಲ್ಲ, ತ್ರೈವರ್ಣಿಕನಲ್ಲ, ಸ್ತ್ರೀಯಲ್ಲ, ನಪುಂಸಕನಲ್ಲ, ಪುರುಷನೂ ಅಲ್ಲ, ಈ ದೇವತ್ವ, ಅಸುರತ್ವ, ಮನುಷ್ಯತ್ವ ಮುಂತಾದುವು ನಿನ್ನಲ್ಲಿಲ್ಲ. ಅವೆಲ್ಲವೂ ಮಾಯಾಕಲ್ಪಿತವು. ಆ ಮಾಯೆಯಿಂದಲೇ ಈ ಜಗತ್ತು ನಿನ್ನಲ್ಲಿ ಸುಳ್ಳಾಗಿ ತೋರುವುದು, ನ್ಯಾಯವಾಗಿ ಆ ಜಗತ್ತನ್ನು ನೀನು ಸೃಷ್ಟಿಸಿಲ್ಲ. ಆ ಜಗತ್ತು ಇಲ್ಲವೇ ಇಲ್ಲ.

೬೨. ಈ ಜಗತ್ತೆಲ್ಲವೂ ನಿನ್ನ ರೂಪವಾದುದು ಎಂದರೆ ನಿನ್ನ ಹೊರತು ಈ ಜಗತ್ತಾವುದೂ ಇಲ್ಲ. ಆದರೆ ಮಾಯಾಮಯವಾಗಿ ಈ ಜಗತ್ತನ್ನು ಸೃಷ್ಟಿಸುವೆ, ಪಾಲಿಸುವೆ, ಕೊನೆಗೆ ಸಂಹರಿಸುವೆ, ಹೀಗೆ ನೀನು ಜಗದ್ರೂಪನು. ಇಂತಹ ನಿನಗೆ ನಮಸ್ಕರಿಸುವೆವು.

ಯೋಗರಂಧಿತಕರ್ಮಾಣೋ ಯಂ ಪ್ರಪಶ್ಯಂತಿ ಯೋಗಿನಃ ।
ಯೋಗಸಂಭಾವಿತೇ ಚಿತ್ತೇ ಯೋಗೇಶಂ ತ್ವಾಂ ನತಾ ವಯಂ　　॥ ೬೩ ॥

ನಮೋಽಸ್ತು ತೇಽಸಹ್ಯವೇಗ ಶಕ್ತಿತ್ರಯ ತ್ರಯೀಮಯ ।
ನಮಃ ಪ್ರಸನ್ನಪಾಲಾಯ ನಮಸ್ತೇ ಭೂರಿಶಕ್ತಯೇ　　॥ ೬೪ ॥

ಕದಿಂದ್ರಿಯಾಣಾಂ ದುರ್ಗೇಶಾನವಾಪ್ಯ ಪರವರ್ತ್ಮನೇ ।
ಭಕ್ತೋದ್ಧಾರರತಾಯಾಥ ನಮಸ್ತೇ ಗೂಢವರ್ಚಸೇ　　॥ ೬೫ ॥

ಯಚ್ಛಕ್ತ್ಯಾಪಂ ಧಿಯಾತ್ಮಾನಂ ಹತಂ ವೇದ ನ ಮೂಢಧೀಃ ।
ತಂ ದುರತ್ಯಯಮಾಹಾತ್ಮ್ಯಂ ತ್ವಾಂ ನತಾಃ ಸ್ಮೋ ಮಹಾಪ್ರಭುಂ ॥ ೬೬ ॥

---

೬೩. ಯೋಗಿಗಳು ಯೋಗವನ್ನನುಷ್ಠಾನವನ್ನು ಮಾಡಿ ಅದರಿಂದ ಪರಿಶುದ್ಧವಾದ ತಮ್ಮ ಮನಸ್ಸಿನಲ್ಲಿ ನಿನ್ನನ್ನು ನೋಡುವರು. ಇಂತಹ ಯೋಗೇಶ್ವರನಾದ ನಿನಗೆ ನಮಸ್ಕಾರವು.

೬೪. ತಡೆಯಿಲ್ಲದ ವೇಗವುಳ್ಳವನೂ, ವ್ಯಾಪಕನೂ, ಇಚ್ಛಾಶಕ್ತಿ ಜ್ಞಾನಶಕ್ತಿ, ಕ್ರಿಯಾಶಕ್ತಿಗಳುಳ್ಳವನೂ ವೇದಸ್ವರೂಪನೂ, ಪ್ರಸನ್ನನಾಗಿ ಭಕ್ತರನ್ನು ಅನುಗ್ರಹಿಸುವವನೂ, ಅನಂತಶಕ್ತಿವಂತನೂ ಆದ ಓ ಶಿವನೇ, ನಿನಗೆ ನಮಸ್ಕಾರವು.

೬೫. ಪಾರ್ವತೀಪತಿಯಾದ ಓ ಶಿವನೆ, ನೀಚ ವಿಷಯಗಳನ್ನು ಗ್ರಹಿಸುವ ಈ ನೀಚ ಇಂದ್ರಿಗಳು ನಿನ್ನನ್ನು ವಿಷಯೀಕರಿಸಲಾರವು. ನೀನು ಸದಾ ಭಕ್ತರನ್ನು ಉದ್ಧರಿಸುತ್ತಿರುವೆ, ಅಂತರ್ಯಾಮಿಯಾದ ನಿನಗೆ ನಮಸ್ಕಾರವು.

೬೬. ಓ ದೇವ, ನಿನ್ನ ಮಾಯಾಶಕ್ತಿಯಿಂದ ಆವೃತರಾಗಿ ನಾವೆಲ್ಲರೂ ನಿನ್ನ ಸ್ವರೂಪವನ್ನು ತಿಳಿಯಲಾರದವರಾಗಿರುವೆವು. ಇಂತಹ ಮಹಾಮಹಿಮನೂ ಮಹಾಪ್ರಭುವೂ ಆದ ನಿನ್ನನ್ನು ಮತ್ತೆ ಮತ್ತೆ ನಮಸ್ಕರಿಸುವೆವು.

॥ ಬ್ರಹ್ಮೋವಾಚ ॥

ಇತಿ ಸ್ತುತ್ವಾ ಮಹಾದೇವಂ ಸರ್ವೇ ವಿಷ್ಣ್ವಾದಿಕಾಸ್ಸುರಾಃ ।
ತೂಷ್ಣೀಮಾಸನ್ಪ್ರಭೋರಗ್ರೇ ಸದ್ಭಕ್ತಿನತಕಂಧರಾಃ ॥ ೬೭ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ದ್ವಿತೀಯೇ ಸತೀಖಂಡೇ ನಂದಾವ್ರತವಿಧಾನ ಶಿವಸ್ತುತಿವರ್ಣನಂ
ನಾಮ ಪಂಚದಶೋಽಧ್ಯಾಯಃ



---

೬೭. ಬ್ರಹ್ಮನು ಹೇಳಿದನು :—ಹೀಗೆ ವಿಷ್ಣುವೇ ಮೊದಲಾದ ದೇವತೆಗಳು ಮಹಾದೇವನನ್ನು ಸ್ತುತಿಸಿ ಮಹಾಪ್ರಭುವಾದ ಆ ಶಿವನೆದುರಿಗೆ ಭಕ್ತಿಯಿಂದ ಶಿರವನ್ನು ಬಗ್ಗಿಸಿ ಸುಮ್ಮನೇ ನಿಂತುಕೊಂಡಿದ್ದರು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಹದಿನೈದನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಷೋಡಶೋಽಧ್ಯಾಯಃ

॥ ಬ್ರಹ್ಮೋವಾಚ ॥

ಇತಿ ಸ್ತುತಿಂ ಚ ಹರ್ಯಾದಿಕ್ಕೃತಾಮಾಕರ್ಣ್ಯ ಶಂಕರಃ ।
ಬಭೂವಾತಿಪ್ರಸನ್ನೋ ಹಿ ವಿಜಹಾಸ ಚ ಸೂತಿಕೃತ್ ॥ ೧ ॥

ಬ್ರಹ್ಮವಿಷ್ಣೂ ತು ದೃಷ್ಟ್ವಾ ತೌ ಸಸ್ತ್ರೀಕೌ ಸಂಗತೌ ಹರಃ ।
ಯಥೋಚಿತಂ ಸಮಾಭಾಷ್ಯ ಪಪ್ರಚ್ಛಾಗಮನಂ ತಯೋಃ ॥ ೨ ॥

---

## ಹದಿನಾರನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ವಿಷ್ಣು ಮೊದಲಾದ ದೇವತೆಗಳು ಮಾಡಿದ ಸ್ತುತಿಯನ್ನು ಕೇಳಿ ಶಂಕರನು ತುಂಬಾ ಸಂತೋಷಗೊಂಡು ಮಂದಹಾಸವನ್ನು ಬೀರುತ್ತಾ ಪ್ರಸನ್ನನಾದನು.

೨. ಆಮೇಲೆ ಹರನು ತಮ್ಮ ತಮ್ಮ ಪತ್ನಿಯರೊಡನೆ ಬಂದಿರುವ ಬ್ರಹ್ಮ ಮತ್ತು ವಿಷ್ಣುಗಳನ್ನು ನೋಡಿ ಯಥಾಯೋಗ್ಯವಾಗಿ ಮಾತನಾಡಿಸಿ, ಅವರು ಬಂದ ಕಾರಣವೇನೆಂದು ವಿಚಾರಿಸಿದನು.

॥ ರುದ್ರ ಉವಾಚ ॥

ಹೇ ಹರೇ ಹೇ ವಿಧೇ ದೇವಾ ಮುನಯಶ್ಚಾದ್ಯನಿರ್ಭಯಾಃ ।
ನಿಜಾಗಮನಹೇತುಂ ಹಿ ಕಥಯಧ್ವಂ ಸುತತ್ತ್ವತಃ ॥ ೩ ॥

ಕಿಮರ್ಥಮಾಗತಾ ಯೂಯಂ ಕಿಂ ಕಾರ್ಯಂ ಚೇಹ ವಿದ್ಯತೇ ।
ತತ್ಸರ್ವಂ ಶ್ರೋತುಮಿಚ್ಛಾಮಿ ಭವಸ್ತುತ್ಯಾ ಪ್ರಸನ್ನಧೀಃ ॥ ೪ ॥

॥ ಬ್ರಹ್ಮೋವಾಚ ॥

ಇತಿ ಪೃಷ್ಟೇ ಹರೇಣಾಹಂ ಸರ್ವಲೋಕಪಿತಾಮಹಃ ।
ಮುನೇsವೋಚಂ ಮಹಾದೇವಂ ವಿಷ್ಣುನಾ ಪರಿಚೋದಿತಃ ॥ ೫ ॥

॥ ಬ್ರಹ್ಮೋವಾಚ ॥

ದೇವದೇವ ಮಹಾದೇವ ಕರುಣಾಸಾಗರ ಪ್ರಭೋ ।
ಯದರ್ಥಮಾಗತಾವಾವಾಂ ತಚ್ಛೃಣು ತ್ವಂ ಸುರರ್ಷಿಭಿಃ ॥ ೬ ॥

---

೩. ಮಹಾದೇವನು ಹೇಳಿದನು :—ಎಲೈ ಹರಿ, ಎಲೈ ಬ್ರಹ್ಮ ಮತ್ತು ದೇವತೆಗಳೇ, ಮತ್ತು ಮುನಿಗಳೇ, ನಿಮಗೆ ಅಭಯವನ್ನು ಕರುಣಿಸಿರುವೆನು. ನೀವು ಬಂದಿರುವ ಕಾರಣವೇನು ? ನಿಜಾಂಶವನ್ನು ಹೇಳಿ.

೪. ನೀವು ಇಲ್ಲಿ ಏಕೆ ಬಂದಿರುವಿರಿ? ಇಲ್ಲಿ ಯಾವ ಕಾರ್ಯವು ಆಗಬೇಕಾಗಿರುವುದು? ಇದೆಲ್ಲವನ್ನೂ ಹೇಳಿ. ನಿಮ್ಮ ಸ್ತುತಿಗೆ ನಾನು ಪ್ರಸನ್ನನಾಗಿರುವೆನು ಎಂದನು.

೫. ಬ್ರಹ್ಮನು ಹೇಳಿದನು :— ಹೀಗೆ ಶಂಕರನು ಪ್ರಶ್ನಿಸಲು, ಸಕಲಲೋಕ ಪಿತಾಮಹನಾದ ನಾನು ವಿಷ್ಣುವಿನಿಂದ ಪ್ರೇರಿತನಾಗಿ ಹೀಗೆ ಹೇಳಿದೆನು.

೬. ಬ್ರಹ್ಮನು ಹೇಳಿದನು :—ದೇವದೇವನೂ, ಕರುಣಾಸಮುದ್ರನೂ, ಜಗದೊಡೆಯನೂ ಆದ ಓ ಮಹಾದೇವನೆ, ನಾವು ಈ ದೇವಮುನಿಗಳೊಡನೆ ಏಕೆ ಇಲ್ಲಿಗೆ ಬಂದಿರುವೆವೆಂಬುದನ್ನು ಹೇಳುವೆನು ಕೇಳು.

ವಿಶೇಷತಸ್ತ್ವನ್ಯೈವಾರ್ಥವಾಗತಾ ವೃಷಭಧ್ವಜ ।
ಸಹಾರ್ಥಿನಸ್ಸದಾಯೋಗ್ಯಮನ್ಯಥಾ ನ ಜಗದ್ಭವೇತ್ ॥ ೭ ॥

ಕೇಚಿದ್ಭವಿಷ್ಯಂತ್ಯಸುರಾ ಮಮ ವಧ್ಯಾ ಮಹೇಶ್ವರ ।
ಹರೇರ್ವಧ್ಯಾಸ್ತಥಾ ಕೇಚಿದ್ಭವತಶ್ಚಾಪಿ ಕೇಚನ ॥ ೮ ॥

ಕೇಚಿತ್ತ್ವದ್ವೀರ್ಯಜಾತಸ್ಯ ತನಯಸ್ಯ ಮಹಾಪ್ರಭೋ ।
ಮಯಾ ವಧ್ಯಾಃ ಪ್ರಭೋ ಕೇಚಿದ್ಭವಿಷ್ಯಂತ್ಯಸುರಾಃ ಸದಾ ॥ ೯ ॥

ತವೈವ ಕೃಪಯಾ ಶಂಭೋಸ್ಸುರಾಣಾಂ ಸುಖಮುತ್ತಮಂ ।
ನಾಶಯಿತ್ವಾಸುರಾನ್ಘೋರಾಜ್ಜಗತ್ಸ್ವಾಸ್ಥ್ಯಂ ಸದಾಭಯಂ ॥ ೧೦ ॥

ಯೋಗಯುಕ್ತೇ ತ್ವಯಿ ಸದಾ ರಾಗದ್ವೇಷವಿವರ್ಜಿತೇ ।
ದಯಾಮಾತ್ರೈಕನಿರತೇ ನ ವಧ್ಯಾ ಹ್ಯಥವಾ ತವ ॥ ೧೧ ॥

---

೭. ಎಲೈ ಶಂಕರ! ನಿನ್ನ ನಿಮಿತ್ತವಾಗಿಯೇ ನಾವು ಇಲ್ಲಿಗೆ ಬಂದಿರುವೆವು. ನಿನ್ನ ಸಹಾಯವಿಲ್ಲದಿದ್ದರೆ ಈ ಜಗತ್ತು ಸರಿಯಾಗಿ ನಡೆಯಲಾರದು.

೮. ಮುಂದೆ ಲೋಕಕಂಟಕರಾದ ಕೆಲವರು ರಾಕ್ಷಸರು ಜನಿಸುವರು. ಅವರಲ್ಲಿ ಕೆಲವರನ್ನು ನಾನು ಕೊಲ್ಲಬೇಕಾಗುವುದು, ಇನ್ನು ಕೆಲವರು ಹರಿಯಿಂದಲೇ ಕೊಲ್ಲಲ್ಪಡತಕ್ಕವರು, ಮತ್ತೆ ಕೆಲವರನ್ನು ನೀನೇ ಸಂಹರಿಸಬೇಕಾಗುವುದು.

೯. ಓ ಸ್ವಾಮಿ, ಇನ್ನು ಕೆಲವರು ನಿನ್ನ ವೀರ್ಯದಿಂದ ಜನಿಸುವಂತಹ ಕುಮಾರನಿಂದ ಸಂಹರಿಸಲ್ಪಡತಕ್ಕವರು. ಮತ್ತೆ ಕೆಲವರನ್ನು ಚಂಡಿಕಾದೇವಿಯು ಕೊಲ್ಲಬೇಕಾಗುವುದು.

೧೦. ಓ ಶಂಕರ, ನಿನ್ನ ಅನುಗ್ರಹದಿಂದ ದೇವತೆಗಳಿಗೆ ಉತ್ತಮಸುಖವು ಲಭಿಸಬೇಕಾಗಿರುವುದು. ಮತ್ತು ಘೋರವಾದ ರಾಕ್ಷಸರನ್ನು ಸಂಹರಿಸಿ ಜಗತ್ತಿಗೆ ಅಭಯವನ್ನೂ ಸ್ವಸ್ಥತೆಯನ್ನು ನೀನೇ ಕಲ್ಪಿಸಬೇಕಾಗಿರುವುದು.

೧೧. ಹೀಗಿರಲು ನೀನು ಕರುಣಾಮಯನಾಗಿ ಯೋಗಮಾರ್ಗನಿರತನೂ, ರಾಗ ಮತ್ತು ದ್ವೇಷಗಳಿಲ್ಲದವನೂ ಆಗಿಬಿಟ್ಟರೆ ಲೋಕಕಂಟಕರಾದ ಆ ಅಸುರರನ್ನು ಸಂಹರಿಸುವುದೆಂತು ?

ಅರಾಧಿತೇಷು ತೇಷ್ವೀಶ ಕಥಂ ಸೃಷ್ಟಿಸ್ತಥಾ ಸ್ಥಿತಿಃ ।
ಅತಶ್ಚ ಭವಿತಾ ಯುಕ್ತಂ ನಿತ್ಯಂ ನಿತ್ಯಂ ವೃಷಧ್ವಜ ॥ ೧೨ ॥

ಸೃಷ್ಟಿಸ್ಥಿತ್ಯಂತಕರ್ಮಾಣಿ ನ ಕಾರ್ಯಾಣಿ ಯದಾ ತದಾ ।
ರೀಶರಭೇದಮಸ್ಮಾಕಂ ಮಾಯಾಯಾಶ್ಚ ನ ಯುಜ್ಯತೇ ॥ ೧೩ ॥

ಏಕಸ್ವರೂಪಾ ಹಿ ವಯಂ ಭಿನ್ನಾಃ ಕಾರ್ಯಸ್ಯ ಭೇದತಃ ।
ಕಾರ್ಯಭೇದೋ ನ ಸಿದ್ಧಶ್ಚೇದ್ರೂಪಭೇದೋಽಪ್ರಯೋಜನಃ ॥ ೧೪ ॥

ಏಕ ಏವ ತ್ರಿಧಾ ಭಿನ್ನಃ ಪರಮಾತ್ಮಾ ಮಹೇಶ್ವರಃ ।
ಮಾಯಯಾ ಸ್ವಾ ಕಾರಣಾ ದೇವ ಸ್ವತಂತ್ರೋ ಲೀಲಯಾ ಪ್ರಭುಃ ॥ ೧೫ ॥

ವಾಮಾಂಗಜೋ ಹರಿಸ್ತಸ್ಯ ದಕ್ಷಿಣಾಂಗಭವೋ ಹ್ಯಹಂ ।
ಶಿವಸ್ಯ ಹೃದಯಾಜ್ಜಾತಸ್ತ್ವಂ ಹಿ ಪೂರ್ಣತನುಶ್ಶಿವಃ ॥ ೧೬ ॥

---

೧೨. ಆ ಅಸುರರು ನಾಶನಾಗದಿದ್ದರೆ ಜಗತ್ತಿನ ಸೃಷ್ಟಿಯೂ ಸ್ಥಿತಿಯೂ ಸರಿಯಾಗಿ ನಡೆಯುವುದು ಹೇಗೆ? ಮತ್ತು ಓ ಶಂಕರ, ನಿತ್ಯವೂ ನಡೆಯಬೇಕಾದ ಮಿಕ್ಕ ಕಾರ್ಯಗಳು ನಡೆಯುವುದೆಂತು?

೧೩. ಸೃಷ್ಟಿ, ಸ್ಥಿತಿ ಮತ್ತು ಪ್ರಳಯಗಳು ನಡೆಯದಿದ್ದಲ್ಲಿ ನಮ್ಮ ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ಈ ಮೂರು ರೂಪಭೇದಗಳೂ, ಮಾಯೆಯ ಅವತಾರವೂ ಬೇಕಾಗಿಯೇ ಇಲ್ಲ.

೧೪. ಓ ಶಂಕರ, ನಾವು ಮೂವರೂ ಒಂದೇ ಬ್ರಹ್ಮಸ್ವರೂಪರು. ಸೃಷ್ಟಿ, ಸ್ಥಿತಿ ಮತ್ತು ಲಯ ರೂಪವಾದ ಕಾರ್ಯಭೇದ ನಿಮಿತ್ತವಾಗಿ ನಮಗೆ ಬ್ರಹ್ಮ, ವಿಷ್ಣು, ರುದ್ರರೂಪಗಳು ಮಾಯಾಮಯವಾಗಿ ಬಂದಿರುವುವು. ಆ ಸೃಷ್ಟಿ, ಸ್ಥಿತಿ, ಲಯಗಳು ನಡೆಯದಿದ್ದಲ್ಲಿ ನಮ್ಮ ಈ ರೂಪಭೇದವು ವ್ಯರ್ಥವು.

೧೫. ಪರಮಾತ್ಮನೂ, ಸ್ವತಂತ್ರನೂ ಆದ ಪರಮೇಶ್ವರನು ಒಬ್ಬನೇ ತನ್ನ ಮಾಯೆಯಿಂದ ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ಮೂರು ರೂಪಗಳನ್ನು ಧರಿಸಿರುವನು.

೧೬. ಆ ಪರಮೇಶ್ವರನ ಶರೀರದ ಎಡಭಾಗದಿಂದ ಹರಿಯು ಜನಿಸಿರುವನು. ಬಲಭಾಗದಿಂದ ನಾನು ಜನಿಸಿರುವೆನು. ಅವನ ಹೃದಯದಿಂದ ಶಿವನ ಪೂರ್ಣಾಂಶನಾದ ನೀನು ಜನಿಸಿರುವೆ

ಇತ್ಥಂ ವಯಂ ತ್ರಿಧಾ ಭೂತಾಃ ಪ್ರಭೋ ಭಿನ್ನಸ್ವರೂಪಿಣಃ ।
ಶಿವಾಶಿವಸುತಾಸ್ತತ್ತ್ವಂ ಹೃದಾ ವಿದ್ಧಿ ಸನಾತನ ॥ ೧೭ ॥

ಅಹಂ ವಿಷ್ಣುಶ್ಚ ಸಸ್ತ್ರೀಕೌ ಸಂಜಾತೌ ಕಾರ್ಯಹೇತುತಃ ।
ಲೋಕಕಾರ್ಯಕರೌ ಪ್ರೀತ್ಯಾ ತವ ಶಾಸನತಃ ಪ್ರಭೋ ॥ ೧೮ ॥

ತಸ್ಮಾದ್ವಿಶ್ವಹಿತಾರ್ಥಾಯ ಸುರಾಣಾಂ ಸುಖಹೇತವೇ ।
ಪರಿಗೃಹ್ಣೀಷ್ವ ಭಾರ್ಯಾರ್ಥೇ ರಾಮಾಮೇಕಾಂ ಸುಶೋಭನಾಂ ॥ ೧೯ ॥

ಅನ್ಯಚ್ಛೃಣು ಮಹೇಶಾನ ಪೂರ್ವವೃತ್ತಂ ಸ್ಮೃತಂ ಮಯಾ ।
ಯನ್ನೋಃ ಪುರಃ ಪುರಾ ಪ್ರೋಕ್ತಂ ತ್ವಯೈವ ಶಿವರೂಪಿಣಾ ॥ ೨೦ ॥

ಮದ್ರೂಪಂ ಪರಮಂ ಬ್ರಹ್ಮನ್ನೀದೃಶಂ ಭವದಂಗತಃ ।
ಪ್ರಕಟೀಭವಿತಾ ಲೋಕೇ ನಾಮ್ನಾ ರುದ್ರಃ ಪ್ರಕೀರ್ತಿತಃ ॥ ೨೧ ॥

೧೭. ಓ ಪ್ರಭು ! ಹೀಗೆ ನಾವು ಮೂವರೂ ಮಾಯಾಧೀನರಾಗಿ ಪರಶಿವ ಮತ್ತು ದೇವಿಯರ ಪುತ್ರರಾಗಿ ಮೂರು ರೂಪದಿಂದ ಜನಿಸಿರುವೆವು.

೧೮. ನಾನೂ ವಿಷ್ಣುವೂ ಸಹ ಸೃಷ್ಟಿ ಮತ್ತು ಸ್ಥಿತಿ ಇವುಗಳಿಗಾಗಿ ನಿನ್ನ ಅಪ್ಪಣೆಯಂತೆ ಪತ್ನಿಯರನ್ನು ಪರಿಗ್ರಹಿಸಿ ಲೋಕಕಾರ್ಯವನ್ನು ಮಾಡುತ್ತಲಿರುವೆವು.

೧೯. ಆದುದರಿಂದ ಓ ಶಿವನೇ, ಜಗತ್ತಿನ ಕ್ಷೇಮಕ್ಕಾಗಿಯೂ ದೇವತೆಗಳ ಕ್ಷೇಮಕ್ಕಾಗಿಯೂ ಸುಂದರಿಯಾದ ಓರ್ವ ರಮಣಿಯನ್ನು ಮದುವೆಯಾಗು.

೨೦. ಓ ಮಹೇಶ್ವರ, ಹಿಂದೆ ನಡೆದ ಇನ್ನೊಂದು ಸಮಾಚಾರವನ್ನು ನಿನಗೆ ಹೇಳುವೆನು. ಪರಶಿವರೂಪದಿಂದ ನೀನೇ ಹಿಂದೆ ನನ್ನನ್ನೂ ಮತ್ತು ವಿಷ್ಣುವನ್ನೂ ಕುರಿತು ಹೀಗೆ ಹೇಳಿರುವೆಯಲ್ಲಾ.

೨೧. ಶಿವನು ಹೇಳಿದುದು:—ಎಲೈ ಬ್ರಹ್ಮನೇ, ಇಂತಹ ಸ್ವರೂಪವುಳ್ಳ ನಾನು ಮುಂದೆ ನಿನ್ನ ಲಲಾಟದಿಂದ ರುದ್ರನೆಂಬ ಹೆಸರಿನಿಂದ ಜನಿಸುವೆನು.

**ಸೃಷ್ಟಿಕರ್ತಾSಭವದ್ಬ್ರಹ್ಮಾ ಹರಿಃ ಪಾಲನಕಾರಕಃ ।**
**ಲಯಕಾರೀ ಭವಿಷ್ಯಾಮಿ ರುದ್ರರೂಪೋ ಗುಣಾಕೃತಿಃ ॥ ೨೨ ॥**

**ಸ್ತ್ರಿಯಂ ವಿವಾಹ್ಯ ಲೋಕಸ್ಯ ಕರಿಷ್ಯೇ ಕಾರ್ಯಮುತ್ತಮಂ ।**
**ಇತಿ ಸಂಸ್ಮೃತ್ಯ ಸ್ವಪ್ರೋಕ್ತಂ ಪೂರ್ಣಂ ಕುರು ನಿಜಂ ಪಣಂ ॥ ೨೩ ॥**

**ನಿದೇಶಸ್ತವ ಚ ಸ್ವಾಮಿನ್ನಹಂ ಸೃಷ್ಟಿಕರೋ ಹರಿಃ ।**
**ಪಾಲಕೋ ಲಯಹೇತುಸ್ತ್ವಮಾವಿರ್ಭೂತಸ್ಸ್ವಯಂ ಶಿವಃ ॥ ೨೪ ॥**

**ತ್ವಾಂ ವಿನಾ ನ ಸಮರ್ಥೌ ಹಿ ಆವಾಂ ಚ ಸ್ವಸ್ವಕರ್ಮಣಿ ।**
**ಲೋಕಕಾರ್ಯರತಾಂ ತಸ್ಮಾದೇಕಾಂ ಗೃಹ್ಣೀಷ್ವ ಕಾಮಿನೀಂ ॥ ೨೫ ॥**

**ಯಥಾ ಪದ್ಮಾಲಯಾ ವಿಷ್ಣೋಸ್ಸಾವಿತ್ರೀ ಚ ಯಥಾ ಮಮ ।**
**ತಥಾ ಸಹಚರೀಂ ಶಂಭೋ ಕಾಂತಾಂ ಗೃಹ್ಣೀಷ್ವ ಸಂಪ್ರತಿ ॥ ೨೬ ॥**

೨೨. ಎಲೈ ವಿಧಿ, ಈಗ ನೀನು ಸೃಷ್ಟಿಯನ್ನು ಮಾಡು. ಹರಿಯು ಪಾಲನೆಯನ್ನು ಮಾಡಲಿ, ರುದ್ರಸ್ವರೂಪನಾದ ನಾನು ಸಂಹಾರವನ್ನು ಮಾಡುವೆನು.

೨೩. ರಮಣಿಯನ್ನು ಮದುವೆಯಾಗಿ ಲೋಕಕ್ಕೆ ಅನುಕೂಲವಾಗುವಂತೆ ಕಾರ್ಯವನ್ನು ಮಾಡುವೆನು ಎಂದು ಹೇಳಿರುವೆಯಲ್ಲವೇ ? ಓ ಶಿವನೇ, ಆ ನಿನ್ನ ಪ್ರತಿಜ್ಞೆಯನ್ನು ಸ್ಮರಿಸಿ ಈಗ ನಿನ್ನ ಕಾರ್ಯವನ್ನು ನೆರವೇರಿಸು.

೨೪. ಓ ಸ್ವಾಮಿಯೆ, ನಿನ್ನ ಅಪ್ಪಣೆಯಂತೆ ನಾನು ಸೃಷ್ಟಿಯನ್ನೂ ಹರಿಯು ಪಾಲನೆಯನ್ನೂ ಮಾಡುತ್ತಲಿರುವೆವು. ಶಿವಸ್ವರೂಪನಾದ ನೀನು ಜಗತ್ತಿನ ಪ್ರಳಯವನ್ನು ಮಾಡುವವನಾಗು.

೨೫. ನಿನ್ನ ಹೊರತು ನಾವು ನಮ್ಮ ಕಾರ್ಯಗಳನ್ನು ಮಾಡಲಾರೆವು. ಆದುದರಿಂದ ಓ ಶಿವನೇ, ಲೋಕಕಾರ್ಯಕ್ಕೆ ಅನುಕೂಲಳಾಗುವಂತಹ ಕಾಮಿನಿಯನ್ನು ಮದುವೆಯಾಗು

೨೬. ಲಕ್ಷ್ಮಿಯು ವಿಷ್ಣುವಿಗೆ ಹೇಗೋ, ನನಗೆ ಸರಸ್ವತಿಯು ಹೇಗೋ ಹಾಗೇ ನೀನೂ ಸಹ ನಿನ್ನ ಕಾರ್ಯಗಳಿಗೆ ಅನುಕೂಲಳಾದಂತಹ ಓರ್ವಕಾಂತೆಯನ್ನು ಮದುವೆಯಾಗು ಎಂದನು.

॥ ಬ್ರಹ್ಮೋವಾಚ ॥

ಇತಿ ಶ್ರುತ್ವಾ ವಚೋ ಮೇ ಹಿ ಬ್ರಹ್ಮಣಃ ಪುರತೋ ಹರೇಃ ।
ಸ ಮಾಂ ಜಗಾದ ಲೋಕೇಶಃ ಸ್ಮೇರಾನನಮುಖೋ ಹರಃ ॥ ೨೭ ॥

॥ ಈಶ್ವರ ಉವಾಚ ॥

ಹೇ ಬ್ರಹ್ಮನ್ ಹೇ ಹರೇ ಮೇ ಹಿ ಯುವಾಂ ಪ್ರಿಯತರೌ ಸದಾ ।
ದೃಷ್ಟ್ವಾ ವಾಂ ಚ ಮಮಾನಂದೋ ಭವತ್ಯತಿತರಾಂ ಖಲು ॥ ೨೮ ॥

ಯುವಾಂ ಸುರವಿಶಿಷ್ಟೌ ಹಿ ತ್ರಿಭವಸ್ವಾಮಿನೌ ಕಿಲ ।
ಕಥನಂ ವಾಂ ಗರಿಷ್ಠೇತಿ ಭವಕಾರ್ಯರತಾತ್ಮನೋಃ ॥ ೨೯ ॥

ಉಚಿತಂ ನ ಸುರಶ್ರೇಷ್ಠೌ ವಿವಾಹಕರಣಂ ಮಮ ।
ತಪೋರತವಿರಕ್ತಸ್ಯ ಸದಾ ವಿದಿತಯೋಗಿನಃ ॥ ೩೦ ॥

ಯೋ ನಿವೃತ್ತಿಸುಮಾರ್ಗಸ್ಥಃ ಸ್ವಾತ್ಮಾರಾಮೋ ನಿರಂಜನ ।
ಅವಧೂತತನುರ್ಜ್ಞಾನೀ ಸ್ವದ್ರಷ್ಟಾ ಕಾಮವರ್ಜಿತಃ ॥ ೩೧ ॥

---

೨೭. ಬ್ರಹ್ಮನು ಹೇಳಿದನು :—ಎಲೈ ನಾರದ, ಹೀಗೆ ವಿಷ್ಣುವಿನ ಎದುರಿನಲ್ಲಿ ನಾನು ಹೇಳಿದ ಮಾತುಗಳನ್ನು ಕೇಳಿ ಭಗವಂತನಾದ ಶಿವನು ಮಂದಹಾಸವನ್ನು ಬೀರುತ್ತಾ ನನ್ನನ್ನು ಕುರಿತು ಹೀಗೆ ಹೇಳಿದನು.

೨೮. ಈಶ್ವರನು ಹೇಳಿದನು:—ಎಲೈ ಹರಿಯೇ, ಮತ್ತು ವಿಧಿಯೇ, ನೀವು ನನಗೆ ತುಂಬಾ ಪ್ರಿಯರಾದವರು. ನಿಮ್ಮನ್ನು ನೋಡಿದರೆ ನನಗೆ ತುಂಬಾ ಆನಂದ ವಾಗುವುದು.

೨೯. ನೀವೀರ್ವರೂ ದೇವಶ್ರೇಷ್ಠರು, ತ್ರಿಲೋಕಾಧಿಪತಿಗಳು. ಲೋಕಕ್ಷೇಮ ಕಾರಿಗಳಾದ ನಿಮ್ಮನ್ನು ಸ್ತುತಿಸುವ ಜನಗಳಿಗೆ ಕ್ಷೇಮವಾಗುವುದು.

೩೦. ದೇವಶ್ರೇಷ್ಠರಾದ ಎಲೈ ವಿಷ್ಣುಬ್ರಹ್ಮರೇ, ಆದರೆ ಸಂಸಾರವಿರಕ್ತನೂ, ತಪೋನಿಷ್ಠನೂ, ಜ್ಞಾನಯೋಗಿಯೂ ಆದ ನಾನು ಮದುವೆಯನ್ನು ಮಾಡಿಕೊಳ್ಳು ವುದು ನ್ಯಾಯವಲ್ಲ.

೩೧-೩೨. ಯಾವನು ವೈರಾಗ್ಯಮಾರ್ಗದಲ್ಲಿದ್ದು ಸ್ವಸ್ವರೂಪದಲ್ಲಿ ವಿಹರಿಸು ವವನೂ, ಪಾಪವಿಲ್ಲದವನೂ, ದಿಗಂಬರನೂ, ಜ್ಞಾನಿಯೂ, ತನ್ನ ಸ್ವರೂಪವನ್ನು

**ಅವಿಕಾರೀ ಹ್ಯಭೋಗೀ ಚ ಸದಾ ಶುಚಿರಮಂಗಲಃ ।**
**ತಸ್ಯ ಪ್ರಯೋಜನಂ ಲೋಕೇ ಕಾಮಿನ್ಯಾ ಕಿಂ ವದಾಧುನಾ ॥ ೩೨ ॥**

**ಕೇವಲಂ ಯೋಗಲಗ್ನಸ್ಯ ಮಮಾನಂದಸ್ಸದಾಸ್ತಿ ವೈ ।**
**ಜ್ಞಾನಹೀನಸ್ತು ಪುರುಷೋ ಮನುತೇ ಬಹು ಕಾಮುಕಂ ॥ ೩೩ ॥**

**ವಿವಾಹಕರಣಂ ಲೋಕೇ ವಿಜ್ಞೇಯಂ ಪರಬಂಧನಂ ।**
**ತಸ್ಮಾತ್ತಸ್ಯ ರುಚಿರ್ನೋ ಮೇ ಸತ್ಯಂ ಸತ್ಯಂ ವದಾಮ್ಯಹಂ ॥ ೩೪ ॥**

**ನ ಸ್ವಾರ್ಥಂ ಮೇ ಪ್ರವೃತ್ತಿರ್ಹಿ ಸಮ್ಯಕ್ಸ್ವಾರ್ಥವಿಚಿಂತನಾತ್ ।**
**ತಥಾಪಿ ತತ್ಕರಿಷ್ಯಾಮಿ ಭವದುಕ್ತಂ ಜಗದ್ಧಿತಂ ॥ ೩೫ ॥**

**ಮತ್ವಾ ವಚೋ ಗರಿಷ್ಠಂ ವಾ ನಿಯೋಕ್ತಿಪರಿಪೂರ್ತಯೇ ।**
**ಕರಿಷ್ಯಾಮಿ ವಿವಾಹಂ ವೈ ಭಕ್ತವಶ್ಯಸ್ಸದಾ ಹ್ಯಹಂ ॥ ೩೬ ॥**

---

ತಿಳಿದಿರುವವನೂ, ಕಾಮವಿಕಾರವಿಲ್ಲದವನೂ, ಸಂಸಾರ ಭೋಗದಲ್ಲಿ ಆಸಕ್ತಿಯಿಲ್ಲದವನೂ, ದೇಹಾಭಿಮಾನನಿಮಿತ್ತವಾದ ಅಶೌಚ ಮತ್ತು ಅಮಂಗಳತೆಯಿಲ್ಲದವನೂ ಆಗಿರುವನೋ ಆ ಜ್ಞಾನಿಯೋಗಿಗೆ ಕಾಮಿನಿಯಿಂದ ಯಾವ ಪ್ರಯೋಜನವಿರುವುದು ಎಂಬುದನ್ನು ನೀನೇ ಹೇಳು.

೩೩. ಕೇವಲ ಜ್ಞಾನಯೋಗಿಯಾಗಿ ಆತ್ಮಸ್ವರೂಪದಲ್ಲಿ ವಿಹರಿಸುತ್ತಲಿರುವ ನನಗೆ ಸ್ವರೂಪಾನಂದವು ಸದಾ ಇದ್ದೇ ಇರುವುದು. ಸ್ವರೂಪಜ್ಞಾನವಿಲ್ಲದ ಪುರುಷನು ಮಾತ್ರ ಸಂಸಾರಸುಖದಲ್ಲಿ ಅಭಿಮಾನವುಳ್ಳವನಾಗುವನು.

೩೪. ಮದುವೆಮಾಡಿಕೊಳ್ಳುವುದು ದೊಡ್ಡ ಬಂಧನವು. ಆದುದರಿಂದ ಮದುವೆಯಲ್ಲಿ ನನಗೆ ಇಷ್ಟವಿಲ್ಲ. ಇದು ನಿಜವಾದುದು. ನಿಜವಾದ ಮಾತನ್ನೇ ನಿನಗೆ ಹೇಳಿರುವೆನು.

೩೫. ನನ್ನ ಸ್ವರೂಪವನ್ನೇ ನಾನು ತಿಳಿದಿರುವುದರಿಂದ ಸ್ವಾರ್ಥಕ್ಕಾಗಿ ನಾನು ಪ್ರವರ್ತಿಸುವುದಿಲ್ಲ. ಆದರೆ ನೀನು ಹೇಳಿದಂತೆ ಜಗತ್ತಿನ ಕ್ಷೇಮಕ್ಕಾಗಿ ಕಾರ್ಯವನ್ನು ಮಾಡುವೆನು.

೩೬. ನನ್ನ ಮಾತು ಎಂದಿಗೂ ವ್ಯರ್ಥವಾಗುವುದಿಲ್ಲ. ಆದಕಾರಣ ಭಕ್ತಾಧೀನನಾದ ನಾನು ಹಿಂದೆ ಹೇಳಿದ ಮಾತಿನಂತೆ ಮದುವೆಯನ್ನು ಮಾಡಿಕೊಳ್ಳುವೆನು.

ಪರಂ ತು ಯಾದೃಶೀಂ ಕಾಂತಾಂ ಗ್ರಹೀಷ್ಯಾಮಿ ಯಥಾಪಣಂ ।
ತಚ್ಛೃಣುಷ್ವ ಹರೇ ಬ್ರಹ್ಮನ್ ಯುಕ್ತಮೇವ ವಚೋ ಮಮ ॥ ೩೭ ॥

ಯಾ ಮೇ ತೇಜಸ್ಸಮರ್ಥಾ ಹಿ ಗ್ರಹೀತುಂ ಸ್ಯಾದ್ವಿಭಾಗಶಃ ।
ತಾಂ ನಿದೇಶಯ ಭಾರ್ಯಾರ್ಥೇ ಯೋಗಿನೀಂ ಕಾಮರೂಪಿಣೀಂ ॥ ೩೮ ॥

ಯೋಗಯುಕ್ತೇ ಮಯಿ ತಥಾ ಯೋಗಿನ್ಯೇವ ಭವಿಷ್ಯತಿ ।
ಕಾಮಾಸಕ್ತೇ ಮಯಿ ತಥಾ ಕಾಮಿನ್ಯೇವ ಭವಿಷ್ಯತಿ ॥ ೩೯ ॥

ಯಮಕ್ಷರಂ ವೇದವಿದೋ ನಿಗದಂತಿ ಮನೀಷಿಣಃ ।
ಜ್ಯೋತೀರೂಪಂ ಶಿವಂ ತೇ ಚ ಚಿಂತಯಿಷ್ಯೇ ಸನಾತನಂ ॥ ೪೦ ॥

ತಚ್ಚಿಂತಾಯಾಂ ಯದಾ ಸಕ್ತೋ ಬ್ರಹ್ಮನ್ ಗಚ್ಛಾಮಿ ಭಾವಿನೀಂ ।
ತತ್ರ ಯಾ ವಿಘ್ನಜನನೀ ನ ಭವಿತ್ರೀ ಹತಾsಸ್ತು ಮೇ ॥ ೪೧ ॥

---

೩೭. ಆದರೆ ಎಲೈ ಬ್ರಹ್ಮವಿಷ್ಣುಗಳೇ ನಾನು ಎಂತಹ ಕಾಮಿನಿಯನ್ನು ಮದುವೆಯಾಗುವೆನು ಎಂದು ಹೇಳುವೆನು ಕೇಳಿರಿ.

೩೮. ನಾನು ಪತ್ನಿಯನ್ನಾಗಿ ಪರಿಗ್ರಹಿಸಬೇಕೆಂದಿರುವವಳು, ಯೋಗಿನಿಯೂ, ಸುಂದರಿಯೂ ಆಗಿದ್ದು ನನ್ನ ವೀರ್ಯವನ್ನು ಭಾಗಶಃ ಧರಿಸಲು ಸಮರ್ಥಳಾಗಿರಬೇಕು, ಅಂತಹ ಕಾಮಿನಿಯನ್ನೇ ನಾನು ಮದುವೆಯಾಗುವುದು, ಅಂತಹವಳು ಎಲ್ಲಿರುವಳು ಎಂಬುದನ್ನು ತೋರಿಸಿ.

೩೯. ಮತ್ತು ಅವಳು ನಾನು ಯೋಗನಿಷ್ಠನಾದರೆ ಅವಳೂ ಯೋಗನಿಷ್ಠಳಾಗಬೇಕು. ಕಾಮಸುಖಾಸಕ್ತನಾದರೆ ಅವಳೂ ಕಾಮಾಸಕ್ತಳಾಗಬೇಕು.

೪೦. ಯಾವ ಪರಮಾತ್ಮನನ್ನು ವೇದಗಳು ನಾಶವಿಲ್ಲದ ಅಕ್ಷರಸ್ವರೂಪನೆಂದು ವರ್ಣಿಸುವುವೋ ಅಂತಹ ಅನಾದಿಯಾದ ಜ್ಞಾನಜ್ಯೋತಿಸ್ವರೂಪನಾದ ಪರಶಿವನನ್ನು ನಾನು ಸದಾ ಚಿಂತಿಸುತ್ತಿರುವೆನು.

೪೧. ಆ ಪರಮಾತ್ಮನನ್ನು ನಾನು ಚಿಂತಿಸುತ್ತಿರುವಾಗ ನನ್ನ ಚಿಂತನೆಗೆ ಅಡ್ಡಿಯಾಗಿ ಬರದಿರುವವಳು ಯಾವಳೋ ಅಂತಹ ಕಾಮಿನಿಯನ್ನೇ ನಾನು ಮದುವೆಯಾಗುವೆನು.

ತ್ವಂ ವಾ ವಿಷ್ಣುರಹಂ ವಾಽಪಿ ಶಿವಸ್ಯ ಬ್ರಹ್ಮರೂಪಿಣಃ ।
ಅಂಶಭೂತಾ ಮಹಾಭಾಗಾ ಯೋಗ್ಯಂ ತದನುಚಿಂತನಂ ॥ ೪೨ ॥

ತಚ್ಚಿಂತಯಾ ವಿನೋದ್ವಾಹಂ ಸ್ಥಾಸ್ಯಾಮಿ ಕಮಲಾಸನ ।
ತಸ್ಮಾಜ್ಜಾಯಾಂ ಪ್ರದಿಶ ತ್ವಂ ಮತ್ಕರ್ಮಾನುಗತಾಂ ಸದಾ ॥ ೪೩ ॥

ತತ್ರಾಪ್ಯೇಕಂ ಪಣಂ ಮೇ ತ್ವಂ ಶೃಣು ಬ್ರಹ್ಮಂಶ್ಚ ಮಾಂ ಪ್ರತಿ ।
ಅವಿಶ್ವಾಸೋ ಮದುಕ್ತೇ ಚೇನ್ಮಯಾ ತ್ಯಕ್ತಾ ಭವಿಷ್ಯತಿ ॥ ೪೪ ॥

॥ ಬ್ರಹ್ಮೋವಾಚ ॥

ಇತಿ ತಸ್ಯ ವಚಶ್ಶ್ರುತ್ವಾಹಂ ಸ ವಿಷ್ಣುರ್ಹರಸ್ಯ ಚ ।
ಸಸ್ಮಿತಂ ಮೋದಿತಮನೋಽವೋಚಂ ಚೇತಿ ವಿನಮ್ರಕಃ ॥ ೪೫ ॥

ಶೃಣು ನಾಥ ಮಹೇಶಾನ ಮಾರ್ಗಿತಾ ಯಾದೃಶೀ ತ್ವಯಾ ।
ನಿವೇದಯಾಮಿ ಸುಪ್ರೀತ್ಯಾ ತಾಂ ಸ್ತ್ರಿಯಂ ತಾದೃಶೀಂ ಪ್ರಭೋ ॥ ೪೬ ॥

---

೪೨. ಎಲೈ ವಿಧಿ, ನೀನೂ ಹರಿಯೂ ನಾನೂ ಸಹ ವ್ಯಾಪಕನಾದ ಪರಮೇಶ್ವರನ ಅಂಶಭೂತರು, ಆದುದರಿಂದ ನಾವು ಆ ಪರಮಾತ್ಮನನ್ನು ಧ್ಯಾನಿಸುವುದು ಯುಕ್ತವಾದುದು.

೪೩. ಆದರಂತೆ ನಾನು ಆ ಪರಮಾತ್ಮನನ್ನು ಧ್ಯಾನಿಸದೇ ಇರಲಾಗುವುದಿಲ್ಲ. ಆದುದರಿಂದ ನನ್ನ ಕಾರ್ಯಕ್ಕೆ ಅನುಕೂಲಳಾದಂತಹ ಕಾಮಿನಿಯನ್ನೇ ನನ್ನ ಭಾರ್ಯೆಯಾಗಿ ತೋರಿಸಿ.

೪೪. ಎಲೈ ಬ್ರಹ್ಮನೇ, ಇನ್ನೂ ಒಂದು ಪಣವನ್ನು (ನಿಬಂಧನೆಯನ್ನು) ಹೇಳುವೆನು ಕೇಳಿ, ನಾನು ಪರಿಗ್ರಹಿಸಬೇಕೆಂದಿರುವವಳು ನನ್ನಲ್ಲಿ ಯಾವಾಗ ವಿಶ್ವಾಸವಿಲ್ಲದವಳಾಗುವಳೋ ಆಗ ಅವಳನ್ನು ತ್ಯಜಿಸಿಬಿಡುವೆನು ಎಂದನು.

೪೫-೪೬. ಹೀಗೆ ಹರಿಯೊಡನಿರುವ ನನ್ನನ್ನು ಕುರಿತು ಆ ಶಿವನು ಹೇಳಲು ನಾನು ಸಂತುಷ್ಟನಾಗಿ ವಿನಯದಿಂದ ಸ್ವಾಮಿಯಾದ ಓ ಮಹೇಶ್ವರನೇ, ನೀನು ಹೇಳುವಂತಹ ಕನ್ಯೆಯೇ ಇರುವಳು. ಅವಳಾರೆಂಬುದನ್ನು ನಿನಗೆ ಹೇಳುವೆನು ಕೇಳು.

ಉಮಾ ಸಾ ಭಿನ್ನರೂಪೇಣ ಸಂಜಾತಾ ಕಾರ್ಯಸಾಧಿನೀ ।
ಸರಸ್ವತೀ ತಥಾ ಲಕ್ಷ್ಮೀ ದ್ವಿಧಾರೂಪಾ ಪುರಾ ಪ್ರಭೋ　　॥ ೪೭ ॥

ಪದ್ಮಾ ಕಾಂತಾಽಭವದ್ವಿಷ್ಣೋಸ್ತಥಾ ಮಮ ಸರಸ್ವತೀ ।
ತೃತೀಯರೂಪಾ ಸಾ ನೋಽಭೂಲ್ಲೋಕಕಾರ್ಯಹಿತೈಷಿಣೀ　　॥ ೪೮ ॥

ದಕ್ಷಸ್ಯ ತನಯಾ ಯಾ ಭೂತ್ಸತೀ ನಾಮ್ನಾ ತು ಸಾ ವಿಭೋ ।
ಸೈವೇದೃಶೀ ಭವೇದ್ಭಾರ್ಯಾ ಭವೇದ್ಧಿ ಹಿತಕಾರಿಣೀ　　॥ ೪೯ ॥

ಸಾ ತಪಸ್ಯತಿ ದೇವೇಶ ತ್ವದರ್ಥಂ ಹಿ ದೃಢವ್ರತಾ ।
ತ್ವಾಂ ಪತಿಂ ಪ್ರಾಪ್ತುಕಾಮಾ ವೈ ಮಹಾತೇಜೋವತೀ ಸತೀ　　॥ ೫೦ ॥

ಪಾತುಂ ಗಚ್ಛ ವರಂ ತಸ್ಯೈ ಕೃಪಾಂ ಕುರು ಮಹೇಶ್ವರ ।
ತಾಂ ವಿವಾಹಯ ಸುಪ್ರೀತ್ಯಾ ವರಂ ದತ್ವಾ ಚ ತಾದೃಶಂ　　॥ ೫೧ ॥

---

೪೭. ಜಗನ್ಮಾತೆಯಾದ ಉಮಾದೇವಿಯು ಹಿಂದೆ ಸೃಷ್ಟಿ ಮತ್ತು ಸ್ಥಿತಿ ಈ ಕಾರ್ಯಗಳ ಸಾಧನೆಗಾಗಿ ಸರಸ್ವತೀ ಮತ್ತು ಲಕ್ಷ್ಮೀ ಎಂಬ ಎರಡು ರೂಪಳಾಗಿ ಜನಿಸಿರುವಳು.

೪೮. ಲಕ್ಷ್ಮಿಯು ಹರಿಯ ಕಾಂತೆಯಾದಳು. ಸರಸ್ವತಿಯು ನನ್ನ ಪ್ರಿಯ ಭಾರ್ಯೆಯಾದಳು. ಓ ಪ್ರಭು, ಆ ಉಮಾದೇವಿಯು ತಿರುಗಿ ಲೋಕಕ್ಷೇಮಕ್ಕಾಗಿ ದಕ್ಷನ ಪುತ್ರಿಯಾಗಿ " ಸತೀದೇವಿ " ಯೆಂಬ ಹೆಸರಿನಿಂದ ಜನಿಸಿರುವಳು.

೪೯-೫೦. ಆ ಸತೀದೇವಿಯು ನೀನು ಹೇಳಿದಂತೆ ನಿನಗನುಕೂಲಳಾದ ಪತ್ನಿಯಾಗಲರ್ಹಳು ಮತ್ತು ತೇಜಸ್ವಿನಿಯಾದ ಅವಳು ನಿನ್ನನ್ನೇ ಪತಿಯಾಗಿ ಪಡೆಯ ಬೇಕೆಂದು ದೃಢವಾದ ನಿಯಮದಿಂದ ತಪಸ್ಸನ್ನಾಚರಿಸುತ್ತಲಿರುವಳು.

೫೧. ಓ ಪರಮೇಶ್ವರ! ಆ ಸತೀದೇವಿಗೆ ವರವನ್ನು ಅನುಗ್ರಹಿಸಲು ಅವಳ ಬಳಿಗೆ ತೆರಳಿ, ಅವಳಿಗೆ ಬೇಕಾದ ವರವನ್ನು ಕೊಟ್ಟು ಪ್ರೀತಿಯಿಂದ ಅವಳನ್ನು ನೀನು ಮದುವೆಯಾಗು.

ಹರೇರ್ಮಮ ಚ ದೇವನಾಮಿಯಂ ವಾಂಛಾಽಸ್ತಿ ಶಂಕರ ।
ಪರಿಪೂರಯ ಸದ್ದೃಷ್ಟ್ಯಾ ತ್ವಂ ಪಶ್ಯಾಮೋತ್ಸವಮಾದರಾತ್ ॥ ೫೨ ॥

ಮಂಗಲಂ ಪರಮಂ ಭೂಯಾಸ್ತ್ರಿಲೋಕೇಷು ಸುಖಾವಹಂ ।
ಸರ್ವಜ್ವರೋ ವಿನಶ್ಯೇದ್ವೈ ಸರ್ವೇಷಾಂ ನಾತ್ರ ಸಂಶಯಃ ॥ ೫೩ ॥

ಅಥ ವಾಸ್ಮದ್ವಚಶ್ಶೇಷೇ ವದಂತಂ ಮಧುಸೂದನಃ ।
ಲೀಲಾಜಾಕೃತಿಮೀಶಾನಂ ಭಕ್ತವತ್ಸಲಮಚ್ಯುತಃ ॥ ೫೪ ॥

॥ ವಿಷ್ಣುರುವಾಚ ॥

ದೇವದೇವ ಮಹಾದೇವ ಕರುಣಾಕರ ಶಂಕರ ।
ಯದುಕ್ತಂ ಬ್ರಹ್ಮಣಾ ಸರ್ವಂ ಮದುಕ್ತಂ ತನ್ನ ಸಂಶಯಃ ॥ ೫೫ ॥

ತತ್ಕುರುಷ್ವ ಮಹೇಶಾನ ಕೃಪಾಂ ಕೃತ್ವಾ ಮಮೋಪರಿ ।
ಸನಾಥಂ ಕುರು ಸದ್ದೃಷ್ಟ್ಯಾ ತ್ರಿಲೋಕಂ ಸುವಿವಾಹ್ಯ ತಾಂ ॥ ೫೬ ॥

---

೫೨. ನನಗೂ ದೇವತೆಗಳಿಗೂ, ಹರಿಗೂ ಸಹ ಈ ಅಭಿಲಾಷೆಯಿರುವುದು. ಆದಕಾರಣ ಓ ಶಂಕರ, ಅನುಗ್ರಹವಿಟ್ಟು ನಮ್ಮಾಶೆಯನ್ನು ಪೂರಯಿಸು. ನಿನ್ನ ವಿವಾಹದ ಉತ್ಸವವನ್ನು ಸಂತೋಷದಿಂದ ನೋಡಬೇಕೆಂದಿರುವೆವು.

೫೩. ಆದರಿಂದ ಮೂರು ಲೋಕಗಳಲ್ಲಿಯೂ ಮಂಗಳವಾಗುವುದು. ಎಲ್ಲರ ದುಃಖವೂ ನಾಶವಾಗುವುದು. ತುಂಬಾ ಸುಖವಾಗುವುದು ಎಂದೆನು.

೫೪. ಬಳಿಕ ನನ್ನ ಮಾತು ಮುಗಿದ ಮೇಲೆ ಹರಿಯು ಲೀಲಾಮಯ ಸ್ವರೂಪನಾದ ಮತ್ತು ಭಕ್ತವತ್ಸಲನಾದ ಶಿವನನ್ನು ಕುರಿತು ಹೀಗೆ ಹೇಳಿದನು.

೫೫. ವಿಷ್ಣುವು ಹೇಳಿದನು :—ಕರುಣಾಮಯನೂ, ಸುಖಪ್ರದನೂ, ದೇವ ದೇವನೂ ಆದ ಓ ಮಹಾದೇವನೆ, ಈಗ ಬ್ರಹ್ಮನು ಹೇಳಿದುದೆಲ್ಲವೂ ನಿಜವಾದುದು. ನನ್ನ ಅಭಿಪ್ರಾಯವೂ ಹಾಗೆಯೇ ಇರುವುದು. ಇದರಲ್ಲಿ ಸಂಶಯವಿಲ್ಲ.

೫೬. ಆದುದರಿಂದ ಓ ಮಹೇಶ್ವರನೆ! ನನ್ನಲ್ಲಿ ಅನುಗ್ರಹವನ್ನಿಟ್ಟು ಬ್ರಹ್ಮನು ಹೇಳಿದಂತೆ ಆ ಸತೀದೇವಿಯನ್ನು ಮದುವೆಯಾಗಿ ಮೂರು ಲೋಕಗಳಿಗೂ ಸುಖ ವನ್ನುಂಟುಮಾಡು ಎಂದನು.

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಭಗವಾನ್ವಿಷ್ಣುಸ್ತೂಷ್ಣೀಮಾಸ ಮುನೇ ಸುಧೀಃ ।
ತಥಾ ಸ್ತುತಿಂ ವಿಹಸ್ಯಾಹ ಸ ಪ್ರಭುರ್ಭಕ್ತವತ್ಸಲಃ ॥ ೫೭ ॥

ತತಸ್ತ್ವಾವಾಂ ಚ ಸಂಪ್ರಾಪ್ಯ ಚಾಜ್ಞಾಂ ಸ ಮುನಿಭಿಸ್ಸುರೈಃ ।
ಅಗಚ್ಛಾವ ಸ್ವೇಷ್ಟದೇಶಂ ಸಸ್ತ್ರೀಕೌ ಪರಹರ್ಷಿತೌ ॥ ೫೮ ॥

ಇತಿ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ದ್ವಿತೀಯೇ ಸತೀಖಂಡೇ ವಿಷ್ಣುಬ್ರಹ್ಮಕೃತ ಶಿವಪ್ರಾರ್ಥನಾವರ್ಣನಂ
ನಾಮ ಷೋಡಶೋಽಧ್ಯಾಯಃ.

---

೫೭. ಬ್ರಹ್ಮನು ಹೇಳಿದನು :—ಹೀಗೆ ಹೇಳಿ ಪಂಡಿತನೂ ಭಗವಂತನೂ ಆದ ಹರಿಯು ಸುಮ್ಮನಾದನು. ವಿಷ್ಣುವಿನ ಮಾತನ್ನು ಕೇಳಿ ನಕ್ಕು ಭಕ್ತವತ್ಸಲ ನಾದ ಶಿವನು ಹಾಗೆಯೇ ಆಗಲೆಂದು ನಮ್ಮ ಪ್ರಾರ್ಥನೆಯನ್ನು ಅಂಗೀಕರಿಸಿದನು.

೫೮. ಬಳಿಕ ನಾನೂ ಹರಿಯೂ ಸಹ ಶಿವನ ಅಪ್ಪಣೆಯನ್ನು ಪಡೆದು ಮುನಿಗಳು ಮತ್ತು ದೇವತೆಗಳೊಡನೆಯೂ, ನಮ್ಮ ಪತ್ನಿಯರೊಡನೆಯೂ ಸಂತೋಷದಿಂದ ನಮ್ಮ ನಮ್ಮ ಸ್ಥಾನಗಳಿಗೆ ತೆರಳಿದವು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಹದಿನಾರನೆಯ
ಅಧ್ಯಾಯವು ಮುಗಿದುದು.

|| ಶ್ರೀಃ ||

---

|| ಓಂ ನಮಃ ಶಿವಾಯ ||

# ಅಥ ಶ್ರೀಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಸಪ್ತದಶೋಽಧ್ಯಾಯಃ

---

|| ಬ್ರಹ್ಮೋವಾಚ ||

**ಇತ್ಯುಕ್ತ್ವಾ ಸರ್ವದೇವೈಶ್ಚ ಕೃತಾ ಶಂಭೋರ್ನುತಿಃ ಪರಾ ।**
**ಶಿವಾಚ್ಚ ಸಾ ವರಂ ಪ್ರಾಪ್ತಾ ಶೃಣು ಹ್ಯಾದರತೋ ಮುನೇ || ೧ ||**

**ಅಥೋ ಸತೀ ಪುನಃ ಶುಕ್ಲಪಕ್ಷೇಽಷ್ಟಮ್ಯಾಮುಪೋಷಿತಾ ।**
**ಆಶ್ವಿನೇ ಮಾಸಿ ಸರ್ವೇಶಂ ಪೂಜಯಾಮಾಸ ಭಕ್ತಿತಃ || ೨ ||**

---

### ಹದಿನೇಳನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು :—ಎಲೈ ನಾರದ, ಹೀಗೆ ನಾವೆಲ್ಲರೂ ದೇವತೆಗಳು ಶಂಕರನನ್ನು ಪ್ರಾರ್ಥಿಸಿ ನಮಸ್ಕರಿಸಲು, ಶಂಕರನು ಆ ಸತೀದೇವಿಯ ಬಳಿಗೆ ಹೋಗಿ ಅವಳಿಗೆ ವರವನ್ನು ಅನುಗ್ರಹಿಸಿದನು. ಈ ವಿಷಯವನ್ನೇ ವಿಸ್ತಾರವಾಗಿ ಹೇಳುವೆನು ಕೇಳು.

೨. ಮುಂದೆ ಆ ಸತೀದೇವಿಯು ಪುನಃ ಆಶ್ವಯುಜ ಶುಕ್ಲ ಅಷ್ಟಮಿಯಲ್ಲಿ ಉಪವಾಸವಿದ್ದು ದೇವದೇವನಾದ ಶಿವನನ್ನು ಭಕ್ತಿಯಿಂದ ಆರಾಧಿಸಿದಳು.

ಇತಿ ನಂದಾವ್ರತೇ ಪೂರ್ಣೇ ನವಮ್ಯಾಂ ದಿನಮಾಗತೇ ।
ತಸ್ಯಾಸ್ತು ಧ್ಯಾನಮಗ್ನಾಯಾಃ ಪ್ರತ್ಯಕ್ಷಮಭವದ್ಧರಃ ॥ ೩ ॥

ಸರ್ವಾಂಗಸುಂದರೋ ಗೌರಃ ಪಂಚವಕ್ತ್ರಸ್ತ್ರಿಲೋಚನಃ ।
ಚಂದ್ರಭಾಲಃ ಪ್ರಸನ್ನಾತ್ಮಾ ಶಿತಿಕಂಠಶ್ಚತುರ್ಭುಜಃ ॥ ೪ ॥

ತ್ರಿಶೂಲಬ್ರಹ್ಮಕವರಾಭಯಧೃಗ್ಭಸ್ಮಭಾಸ್ವರಃ ।
ಸ್ವರ್ಧುನ್ಯಾ ವಿಲಸಚ್ಛೀರ್ಷಸ್ಸಕಲಾಂಗಮನೋಹರಃ ॥ ೫ ॥

ಮಹಾಲಾವಣ್ಯಧಾಮಾ ಚ ಕೋಟಿಚಂದ್ರಸಮಾನನಃ ।
ಕೋಟಿಸ್ಮರಸಮಾಕಾಂತಿಸ್ಸರ್ವಥಾ ಸ್ತ್ರೀಪ್ರಿಯಾಕೃತಿಃ ॥ ೬ ॥

ಪ್ರತ್ಯಕ್ಷತೋ ಹರಂ ವೀಕ್ಷ್ಯ ಸತೀ ಸೇದೃಗ್ವಿಧಂ ಪ್ರಭುಂ ।
ವವಂದೇ ಚರಣೌ ತಸ್ಯ ಸುಲಜ್ಜಾವನತಾವನಾ ॥ ೭ ॥

---

೩. ಹೀಗೆ ನಂದಾವ್ರತವು ಮುಗಿಯಲು ನವಮಿಯದಿನ ಪ್ರಾತಃಕಾಲದಲ್ಲಿ ಸತೀದೇವಿಯು ಧ್ಯಾನಮಗ್ನಳಾಗಿರಲು ಶಿವನು ಆವಳೆದುರಿಗೆ ಪ್ರತ್ಯಕ್ಷನಾದನು.

೪-೬. ಆ ಶಿವನು ಸರ್ವಾಂಗಸುಂದರನಾಗಿದ್ದನು. ಸುವರ್ಣದಂತೆ ಹೊಳೆಯುವ ಗೌರವರ್ಣದ ಶರೀರಕಾಂತಿಯಿಂದ ಬೆಳಗುತ್ತಿದ್ದನು. ಐದುಮುಖಗಳು, ಮೂರು ಕಣ್ಣುಗಳು, ಲಲಾಟದಲ್ಲಿ ಚಂದ್ರಕಲೆಯು ಪ್ರಕಾಶಿಸುತ್ತಲಿದ್ದವು. ಶಾಂತ ಮುದ್ರೆಯಿಂದೊಪ್ಪುತ್ತಿದ್ದನು. ಕತ್ತು ನೀಲವಾಗಿದ್ದಿತು. ನಾಲ್ಕು ಬಾಹುಗಳಲ್ಲಿ ಕ್ರಮವಾಗಿ ತ್ರಿಶೂಲ, ಬ್ರಹ್ಮಕ, ವರದಮುದ್ರೆ, ಅಭಯಮುದ್ರೆಗಳನ್ನು ಧರಿಸಿದ್ದನು. ಭಸ್ಮವನ್ನು ಶರೀರದಲ್ಲಿ ಲೇಪಿಸಿಕೊಂಡಿದ್ದನು. ಶಿರಸ್ಸಿನಲ್ಲಿ ದೇವಗಂಗೆಯು ಪ್ರಕಾಶಿಸುತ್ತಲಿದ್ದಳು. ತುಂಬಾ ಲಾವಣ್ಯಮಯನಾಗಿ ಕೋಟಿಚಂದ್ರರಂತೆ ಪ್ರಕಾಶಿಸುತ್ತಾ ಆನಂದದಾಯಕನಾಗಿದ್ದನು. . ಮತ್ತು ಕೋಟಿಮನ್ಮಥರಂತೆ ಸುಂದರನಾಗಿದ್ದು ಕಾಮಿನಿಯರಿಗೆ ಸರ್ವವಿಧದಿಂದಲೂ ಇಷ್ಟವಾದ ಆಕಾರವುಳ್ಳವನಾಗಿದ್ದನು.

೭. ಈರೀತಿಯಾಗಿ ಪ್ರತ್ಯಕ್ಷನಾದ ಜಗದೊಡೆಯ ಶಂಕರನನ್ನು ನೋಡಿ ಸತೀದೇವಿಯು ಲಜ್ಜೆಯಿಂದ ಮುಖವನ್ನು ಬಗ್ಗಿಸಿ ಆ ಶಿವನ ಪಾದಗಳನ್ನು ನಮಸ್ಕರಿಸಿದಳು.

ಅಥ ಪ್ರಾಹ ಮಹಾದೇವಸ್ಸತೀಂ ತದ್ವ್ರತಧಾರಿಣೀಂ ।
ತಾಮಿಚ್ಛನ್ನಪಿ ಭಾರ್ಯಾರ್ಥಂ ತಪಶ್ಚರ್ಯಾಫಲಪ್ರದಃ ॥ ೮ ॥

॥ ಮಹಾದೇವ ಉವಾಚ ॥

ದಕ್ಷನಂದಿನಿ ಪ್ರೀತೋಽಸ್ಮಿ ವ್ರತೇನಾನೇನ ಸುವ್ರತೇ ।
ವರಂ ವರಯ ಸಂದಾಸ್ಯೇ ಯತ್ರ ವಾಽಭಿಮತಂ ಭವೇತ್ ॥ ೯ ॥

॥ ಬ್ರಹ್ಮೋವಾಚ ॥

ಜಾನನ್ನಪೀಹ ತದ್ಭಾವಂ ಮಹಾದೇವೋ ಜಗತ್ಪತಿಃ ।
ಜಗೌ ವರಂ ವೃಣೀಷ್ವೇತಿ ತದ್ವಾಕ್ಯಶ್ರವಣೇಚ್ಛಯಾ ॥ ೧೦ ॥

ಸಾಪಿ ತ್ರಪಾವಶಾ ಯುಕ್ತಾ ವಕ್ತುಂ ನೋ ಹೃದಿ ಯತ್ಸ್ಥಿತಂ ।
ಶಶಾಕ ಸಾ ತ್ವಭೀಷ್ಟಂ ಯತ್ತಲ್ಲಜ್ಜಾಚ್ಛಾದಿತಂ ಪುನಃ ॥ ೧೧ ॥

ಪ್ರೇಮಮಗ್ನಾಽಭವತ್ಸಾತಿ ಶ್ರುತ್ವಾ ಶಿವವಚಃ ಪ್ರಿಯಂ ।
ತಜ್ಜ್ಞಾತ್ವಾ ಸುಪ್ರಸನ್ನೋಽಭೂಚ್ಛಂಕರೋ ಭಕ್ತವತ್ಸಲಃ ॥ ೧೨ ॥

---

೮. ಬಳಿಕ ಮಹಾದೇವನು ಮಹಾತಪಸ್ಸನ್ನಾಚರಿಸುತ್ತಲಿರುವ ಸತೀದೇವಿಯನ್ನು ಕುರಿತು ತಾನು ಅವಳನ್ನು ಮದುವೆಯಾಗಲಿಚ್ಛೆಯುಳ್ಳವನಾದರೂ ಅವಳ ತಪಸ್ಸಿಗೆ ಫಲವನ್ನು ಕೊಡುವ ಉದ್ದೇಶದಿಂದ ಹೀಗೆ ಹೇಳಿದನು.

೯. ಮಹಾದೇವನು ಹೇಳಿದನು :—ಮಹಾತಪಸ್ವಿನಿಯೂ ದಕ್ಷಪುತ್ರಿಯೂ ಆದ ಎಲೌ ಸತಿ, ನಿನ್ನ ಈ ವ್ರತಗಳಿಂದ ಪ್ರೀತನಾಗಿರುವೆನು. ನಿನಗೆ ಬೇಕಾದ ವರವನ್ನು ಕೇಳು, ಕೊಡುವೆನು ಎಂದನು.

೧೦. ಬ್ರಹ್ಮನು ಹೇಳಿದನು :—ಜಗತ್ಪ್ರಭುವಾದ ಮಹಾದೇವನು ಆ ಸತಿಯ ಅಭಿಪ್ರಾಯವನ್ನು ತಿಳಿದವನಾಗಿದ್ದರೂ ಅವಳ ಇಂಪಾದ ವಾಕ್ಯವನ್ನು ಕೇಳಲಿಚ್ಛೆಯಿಂದ "ವರವನ್ನು ಕೇಳಿಕೋ" ಎಂದು ಹೇಳಿದನು.

೧೧. ಆಗ ಆ ಸತೀದೇವಿಯೂ ಸಹ ಲಜ್ಜೆಗೊಂಡವಳಾಗಿ ತನ್ನ ಮನಸ್ಸಿನಲ್ಲಿದ್ದುದನ್ನು ಹೇಳಲಾರದೆ ಲಜ್ಜೆಯಿಂದ ಮಾತನಾಡದೆ ಸುಮ್ಮನಿದ್ದಳು.

೧೨. ಆ ಸತಿಯು ಶಿವನ ಪ್ರಿಯವಾದ ಮಾತುಗಳನ್ನು ಕೇಳಿ ಪ್ರೇಮಮಯಳಾಗಿ ಬಿಟ್ಟಳು. ಇದನ್ನು ತಿಳಿದು ಭಕ್ತವತ್ಸಲನಾದ ಶಂಕರನು ಮತ್ತೂ ಪ್ರಸನ್ನನಾದನು.

ವರಂ ಬ್ರೂಹಿ ವರಂ ಬ್ರೂಹಿ ಪ್ರಾಹೇತಿ ಸ ಪುನರ್ದ್ರುತಂ ।
ಸತೀಭಕ್ತಿವಶಶ್ಶಂಭುರಂತರ್ಯಾಮೀ ಸತಾಂಗತಿಃ ॥ ೧೩ ॥

ಅಥ ತ್ರಪಾಂ ಸ್ವಾಂ ಸಂಧಾಯ ಯದಾ ಪ್ರಾಹ ಹರಂ ಸತೀ ।
ಯಥೇಷ್ಟಂ ದೇಹಿ ವರದ ವರಮಿತ್ಯನಿವಾರಕಂ ॥ ೧೪ ॥

ತದಾ ವಾಕ್ಯಸ್ಯಾವಸಾನಮನವೇಕ್ಷ್ಯ ವೃಷಧ್ವಜಃ ।
ಭವ ತ್ವಂ ಮಮ ಭಾರ್ಯೇತಿ ಪ್ರಾಹ ತಾಂ ಭಕ್ತವತ್ಸಲಃ ॥ ೧೫ ॥

ಏತಚ್ಛ್ರುತ್ವಾ ವಚಸ್ತಸ್ಯ ಸಾಭೀಷ್ಟಫಲಭಾವನಂ ।
ತೂಷ್ಣೀಂ ತಸ್ಥೌ ಪ್ರಮುದಿತಾ ವರಂ ಪ್ರಾಪ್ಯ ಮನೋಗತಂ ॥ ೧೬ ॥

ಸಕಾಮಸ್ಯ ಹರಸ್ಯಾಗ್ರೇ ಸ್ಥಿತಾ ಸಾ ಚಾರುಹಾಸಿನೀ ।
ಅಕರೋನ್ನಿಜಭಾವಾಂಶ್ಚ ಹಾವಾನ್ಕಾಮವಿವರ್ಧನಾನ್ ॥ ೧೭ ॥

---

೧೩. ಸತ್ಪುರುಷರಿಗೆ ಸದ್ಗತಿಯನ್ನು ಕೊಡುವವನೂ ಅಂತರ್ಯಾಮಿಯೂ ಆದ ಶಿವನು ಸತೀದೇವಿಯ ಭಕ್ತಿಗೆ ತುಂಬಾ ಮೆಚ್ಚಿ ವರವನ್ನು ಕೇಳಿಕೋ ಎಂದು ಪುನಃಪುನಃ ಹೇಳಲು,

೧೪. ಸತೀದೇವಿಯು ತನ್ನ ಲಜ್ಜೆಯನ್ನು ಸ್ವಲ್ಪ ಕಮ್ಮಿಮಾಡಿಕೊಂಡು ವರದನಾದ ಓ ದೇವನೆ, ನಿನಗೆ ಯಾವುದು ಯುಕ್ತವಾಗಿ ತೋರುವುದೋ ಆ ವರವನ್ನು ಅನುಗ್ರಹಿಸು ಎಂದು ಹೇಳಿದಳು.

೧೫. ಆಗ ಭಕ್ತವತ್ಸಲನಾದ ಶಂಕರನು ಸತೀದೇವಿಯ ವಾಕ್ಯವು ಮುಗಿಯುವುದರೊಳಗೇ ಎಲೌ ಸತೀದೇವಿ, ನೀನು ನನ್ನ ಭಾರ್ಯೆಯಾಗು ಎಂದು ಹೇಳಿದನು.

೧೬. ಸತೀದೇವಿಯು ತನಗೆ ಇಷ್ಟವಾದಂತಹ ಆ ಶಿವನವಾಕ್ಯವನ್ನು ಕೇಳಿ ತುಂಬಾಹರ್ಷಗೊಂಡು ಸುಮ್ಮನೆ ಕೆಲಹೊತ್ತು ನಿಂತಳು.

೧೭. ಕಾಮವಿಕಾರವನ್ನು ಹೊಂದಿದ ಶಿವನೆದುರಿಗೆ ನಿಂತು ಸುಂದರವಾದ ಮಂದಹಾಸವುಳ್ಳ ಸತೀದೇವಿಯು, ಕಾಮವಿಕಾರವನ್ನು ಹೆಚ್ಚಿಸುವಂತಹ ಹಾವಭಾವ ಮೊದಲಾದ ಶೃಂಗಾರಚೇಷ್ಟೆಗಳನ್ನು ಮಾಡಿದಳು.

ತತೋ ಭಾವಾನ್ಸಮಾದಾಯ ಶೃಂಗಾರಾಖ್ಯೋ ರಸಸ್ತದಾ ।
ತಯೋಶ್ಚಿತ್ತೇ ವಿವೇಶಾಸು ಕಲಾ ಹಾವಾ ಯಥೋದಿತಂ ॥ ೧೮ ॥

ತತ್ಪ್ರವೇಶಾತ್ತು ದೇವರ್ಷೇ ಲೋಕಲೀಲಾನುಸಾರಿಣೋಃ ।
ಕಾಪ್ಯಭಿಷ್ಯಾ ತಯೋರಾಸೀಚ್ಚಿತ್ರಾಚಂದ್ರಮಸೋರ್ಯಥಾ ॥ ೧೯ ॥

ರೇಜೇ ಸತೀ ಹರಂ ಪ್ರಾಪ್ಯ ಸ್ನಿಗ್ಧಭಿನ್ನಾಂಜನಪ್ರಭಾ ।
ಚಂದ್ರಾಭ್ಯಾಸೇಽಭ್ರಲೇಖೇವ ಸ್ಫಟಿಕೋಜ್ಜ್ವಲವರ್ಷ್ಮಣಃ ॥ ೨೦ ॥

ಅಥ ಸಾ ತಮುವಾಚೇದಂ ಹರಂ ದಾಕ್ಷಾಯಣೀ ಮುಹುಃ ।
ಸುಪ್ರಸನ್ನಾ ಕರೌ ಬದ್ಧ್ವಾ ನತಕಾ ಭಕ್ತವತ್ಸಲಂ ॥ ೨೧ ॥

॥ ಸತ್ಯುವಾಚ ॥

ದೇವದೇವ ಮಹಾದೇವ ವಿವಾಹವಿಧಿನಾ ಪ್ರಭೋ ।
ಪಿತುರ್ಮೇ ಗೋಚರೀಕೃತ್ಯ ಮಾಂ ಗೃಹಾಣ ಜಗತ್ಪತೇ ॥ ೨೨ ॥

---

೧೮. ಶೃಂಗಾರರಸವು ತನ್ನ ಹಾವಭಾವ ಮತ್ತು ಕಲೆಗಳೊಡನೆ ಆಗ ಆ ಶಿವಪಾರ್ವತಿಯರ ಮನಸ್ಸಿನಲ್ಲಿ ಪ್ರವೇಶಿಸಿತು.

೧೯. ಶೃಂಗಾರರಸವು ಅವರ ಮನಸ್ಸಿನಲ್ಲಿ ಪ್ರವೇಶಿಸದೊಡನೆಯೇ ಲೋಕಸಾಮಾನ್ಯರಂತೆ ಶೃಂಗಾರಲೀಲೆಗಳನ್ನು ಪ್ರದರ್ಶಿಸುತ್ತಲಿರುವ ಆ ಶಿವಪಾರ್ವತಿಯರು ಚಿತ್ರಾನಕ್ಷತ್ರದೊಡನಿರುವ ಚಂದ್ರನಂತೆ ಪ್ರಕಾಶಿಸಿದರು.

೨೦. ಸಾಂದ್ರವಾದ ಅಂಜನಖಂಡದಂತೆ ಕಪ್ಪಾದ ಶರೀರಕಾಂತಿಯುಳ್ಳ ಸತೀದೇವಿಯು ಶಿವನ ಬಳಿಯಲ್ಲಿ, ಸ್ಫಟಿಕದಂತೆ ಶುಭ್ರವಾದ ಕಾಂತಿಯುಳ್ಳ ಚಂದ್ರನ ಬಳಿಯಲ್ಲಿರುವ ನೀಲಮೇಘರೇಖೆಯಂತೆ ಪ್ರಕಾಶಿಸಿದಳು.

೨೧. ಬಳಿಕ ಆ ಸತೀದೇವಿಯು ತುಂಬಾ ಹರ್ಷಗೊಂಡು ಭಕ್ತವತ್ಸಲನಾದ ಶಿವನನ್ನು ಕುರಿತು, ಕೈಗಳನ್ನು ಜೋಡಿಸಿ ಕೈಮುಗಿದು ಬಗ್ಗಿನಿಂತು ಹೀಗೆ ಹೇಳಿದಳು.

೨೨. ಸತೀದೇವಿಯು ಹೇಳಿದಳು:—ದೇವದೇವನೂ ಜಗದೊಡೆಯನೂ ಆದ ಓ ಶಂಕರನೆ, ನನ್ನ ತಂದೆಗೆ ತಿಳಿಸಿ ಅವನನುಮತಿಯನ್ನು ಪಡೆದು ನೀನು ನನ್ನನ್ನು ವಿವಾಹವಿಧಿಯಂತೆ ಮದುವೆಯಾಗು ಎಂದಳು.

॥ ಬ್ರಹ್ಮೋವಾಚ ॥
ಏವಂ ಸತೀವಚಃ ಶ್ರುತ್ವಾ ಮಹೇಶೋ ಭಕ್ತವತ್ಸಲಃ ।
ತಥಾಽಸ್ತ್ವಿತಿ ವಚಃ ಪ್ರಾಹ ನಿರೀಕ್ಷ್ಯ ಪ್ರೇಮತಶ್ಚ ತಾಂ ॥ ೨೩ ॥

ದಾಕ್ಷಾಯಿಣ್ಯಪಿ ತಂ ನತ್ವಾ ಶಂಭುಂ ವಿಜ್ಞಾಪ್ಯ ಭಕ್ತಿತಃ ।
ಪ್ರಾಪ್ತಾಜ್ಞಾ ಮಾತುರಭ್ಯಾಶಮಗಾನ್ಮೋಹಮುದಾನ್ವಿತಾ ॥ ೨೪ ॥

ಹರೋಽಪಿ ಹಿಮವತ್ಪ್ರಸ್ಥಂ ಪ್ರವಿಶ್ಯ ಚ ನಿಜಾಶ್ರಮಂ ।
ದಾಕ್ಷಾಯಿಣೀವಿಯೋಗಾದ್ವೈ ಕೃಚ್ಛ್ರಧ್ಯಾನಪರೋಽಭವತ್ ॥ ೨೫ ॥

ಸಮಾಧಾಯ ಮನಃ ಶಂಭುರ್ಲೌಕಿಕೀಂ ಗತಿಮಾಶ್ರಿತಃ ।
ಚಿಂತಯಾಮಾಸ ದೇವರ್ಷೇ ಮನಸಾ ಮಾಂ ವೃಷಧ್ವಜಃ ॥ ೨೬ ॥

ತತಸ್ಸಂಚಿಂತ್ಯಮಾನೋಽಹಂ ಮಹೇಶೇನ ತ್ರಿಶೂಲಿನಾ ।
ಪುರಸ್ತಾತ್ಪ್ರಾವಿಶತ್ತೂರ್ಣಂ ಹರಸಿದ್ಧಿಪ್ರಚೋದಿತಃ ॥ ೨೭ ॥

ಯತ್ರಾಸೌ ಹಿಮವತ್ಪ್ರಸ್ಥೇ ತದ್ವಿಯೋಗೀ ಹರಃ ಸ್ಥಿತಃ ।
ಸರಸ್ವತೀಯುತಸ್ತಾತ ತತ್ರೈವ ಸಮುಪಸ್ಥಿತಃ ॥ ೨೮ ॥

---

೨೩. ಬ್ರಹ್ಮನು ಹೇಳಿದನು :—ಎಲೈ ನಾರದ, ಈರೀತಿಯಾದ ಸತೀದೇವಿಯ ಮಾತುಗಳನ್ನು ಕೇಳಿ ಶಿವನು ಪ್ರೇಮದಿಂದ ಅವಳನ್ನು ನೋಡಿ ಹಾಗೆಯೇ ಆಗಲಿ ಎಂದು ಅಂಗೀಕರಿಸಿದನು.

೨೪. ಸತೀದೇವಿಯೂ ಸಹ ಶಂಕರನನ್ನು ನಮಸ್ಕರಿಸಿ ಅವನ ಅಪ್ಪಣೆಯನ್ನು ಪಡೆದು ಸಂತೋಷದಿಂದಲೂ ವಿರಹದುಃಖದಿಂದಲೂ ತನ್ನ ತಾಯಿಯ ಬಳಿಗೆ ಬಂದಳು.

೨೫. ಶಿವನೂ ಸಹ ಹಿಮಾಲಯದ ತಪ್ಪಲಲ್ಲಿರುವ ತನ್ನ ಆಶ್ರಮಕ್ಕೆ ತೆರಳಿ ಸತೀದೇವಿಯ ವಿರಹದಿಂದ ದುಃಖಿತನಾಗಿ ತುಂಬಾ ಪ್ರಯಾಸದಿಂದ ಧ್ಯಾನನಿರತನಾದನು.

೨೬. ಬಳಿಕ ಆ ಶಂಭುವು ತನ್ನ ಮನಸ್ಸನ್ನು ಬಹು ಪ್ರಯತ್ನದಿಂದ ಸಮಾಧಾನಮಾಡಿಕೊಂಡು ಲೋಕಾಚಾರರೀತಿಯಾಗಿ ಆಗ ನನ್ನನ್ನು ಸ್ಮರಿಸಿದನು.

೨೭-೨೮. ಎಲೈ ನಾರದ, ಹೀಗೆ ಶಿವನು ನನ್ನನ್ನು ಸ್ಮರಿಸಲು ನಾನು ಅವನ ಕಾರ್ಯಸಿದ್ಧಿಗಾಗಿ ಆ ಕೂಡಲೇ ವಿರಹಿಯಾದ ಆ ಶಿವನಿರುವ ಹಿಮಾಲಯದ ತಪ್ಪಲಿಗೆ ಸರಸ್ವತೀದೇವಿಯೊಡನೆ ಹೋದೆನು.

ಸರಸ್ವತೀಯುತಂ ಮಾಂ ಚ ದೇವರ್ಷೇ ವೀಕ್ಷ್ಯ ಸ ಪ್ರಭುಃ ।
ಉತ್ಸುಕಃ ಪ್ರೇಮಬದ್ಧಶ್ಚ ಸತ್ಯಾ ಶಂಭುರುವಾಚ ಹ ॥ ೨೯ ॥

॥ ಶಂಭುರುವಾಚ ॥

ಅಹಂ ಬ್ರಹ್ಮನ್ಸ್ವಾರ್ಥತರಃ ಪರಿಗ್ರಹಕೃತೌ ಚ ಯತ್ ।
ತದಾ ಸ್ವತ್ವಮಿವ ಸ್ವಾರ್ಥೇ ಪ್ರತಿಭಾತಿ ಮಮಾಧುನಾ ॥ ೩೦ ॥

ಅಹಮಾರಾಧಿತಸ್ಸತ್ಯಾ ದಾಕ್ಷಾಯಣ್ಯಾಥ ಭಕ್ತಿತಃ ।
ತಸ್ಯೈ ವರೋ ಮಯಾ ದತ್ತೋ ನಂದಾವ್ರತಪ್ರಭಾವತಃ ॥ ೩೧ ॥

ಭರ್ತಾ ಭವೇತಿ ಚ ತಯಾ ಮತ್ತೋ ಬ್ರಹ್ಮನ್ವರೋ ವೃತಃ ।
ಮಮ ಭಾರ್ಯಾ ಭವೇತ್ಯುಕ್ತಂ ಮಯಾ ತುಷ್ಟೇನ ಸರ್ವಥಾ ॥ ೩೨ ॥

ಅಥಾವದತ್ತದಾ ಮಾಂ ಸಾ ಸತೀ ದಾಕ್ಷಾಯಣೀ ತ್ವಿತಿ ।
ಪಿತುರ್ಮೇ ಗೋಚರೀಕೃತ್ಯ ಮಾಂ ಗೃಹಾಣ ಜಗತ್ಪತೇ ॥ ೩೩ ॥

---

೨೯. ಸರಸ್ವತಿಯೊಡನೆ ಬಂದಿರುವ ನನ್ನನ್ನು ನೋಡಿ ಆ ಸತೀದೇವಿಯಲ್ಲಿ ಪ್ರೇಮಮಯನಾದ ಶಿವನು ಉತ್ಸುಕತೆಯಿಂದ ನನ್ನನ್ನು ಕುರಿತು,

೩೦. ಶಂಕರನು ಹೇಳಿದನು ;—ಎಲೈ ಬ್ರಹ್ಮನೆ, ಈಗ ನಾನು ತುಂಬಾ ಸ್ವಾರ್ಥಿಯಾಗಿರುವೆನು. ಈಗ ನನಗಾಗಿ ನಾನು ಮದುವೆಯನ್ನು ಮಾಡಿಕೊಳ್ಳ ಬೇಕೆಂದಿರುವೆನು. ಇದಕ್ಕಿಂತಲೂ ಹೆಚ್ಚಿನದಾದ ಸ್ವಾರ್ಥವುಂಟೆ ?

೩೧. ದಕ್ಷಪುತ್ರಿಯಾದ ಸತೀದೇವಿಯು ಭಕ್ತಿಯಿಂದ ನಂದಾವ್ರತವನ್ನಾಚರಿಸಿ ನನ್ನನ್ನಾರಾಧಿಸಿದಳು. ಅವಳಿಗೆ ಬೇಕಾದಂತಹ ವರವನ್ನು ಕೊಟ್ಟಿರುವೆನು.

೩೨. ಆ ಸತೀದೇವಿಯು ನೀನೇ ನನ್ನ ಪತಿಯಾಗೆಂದು ನನ್ನಿಂದ ವರವನ್ನು ಕೇಳಿದಳು. ಸುಪ್ರಸನ್ನನಾದ ನಾನೂ ಸಹ " ನೀನು ನನ್ನ ಪತ್ನಿಯಾಗು " ಎಂದು ಹೇಳಿದೆನು.

೩೩. ಬಳಿಕ ಸತೀದೇವಿಯು ಓ ಜಗದೊಡೆಯನೆ, ನನ್ನ ತಂದೆಗೆ ತಿಳಿಸಿ ಅವನನುಮತಿಯನ್ನು ಪಡೆದು ನನ್ನನ್ನು ಮದುವೆಯಾಗು ಎಂದು ಹೇಳಿರುವಳು.

ತದಪ್ಯಂಗೀಕೃತಂ ಬ್ರಹ್ಮನ್ಮಯಾ ತದ್ಭಕ್ತಿತುಷ್ಟಿತಃ ।
ಸಾ ಗತಾ ಭವನಂ ಮಾತುರಹಮತ್ರಾಗತೋ ವಿಧೇ ॥ ೩೪ ॥

ತಸ್ಮಾತ್ತ್ವಂ ಗಚ್ಛ ಭವನಂ ದಕ್ಷಸ್ಯ ಮಮ ಶಾಸನಾತ್ ।
ತಾಂ ದಕ್ಷೋಽಪಿ ಯಥಾ ಕನ್ಯಾಂ ದದ್ಯಾನ್ಮೇಽರಂ ತಥಾ ವದ ॥ ೩೫ ॥

ಸತೀವಿಯೋಗಭಂಗಸ್ಸ್ಯಾದ್ಯಥಾ ಮೇ ತ್ವಂ ತಥಾ ಕುರು ।
ಸಮಾಶ್ವಾಸಯ ತಂ ದಕ್ಷಂ ಸರ್ವವಿದ್ಯಾವಿಶಾರದಃ ॥ ೩೬ ॥

॥ ಬ್ರಹ್ಮೋವಾಚ ॥

ಇತ್ಯುದೀರ್ಯ ಮಹಾದೇವಸ್ಸಕಾಶೇ ಮೇ ಪ್ರಜಾಪತೇಃ ।
ಸರಸ್ವತೀಂ ವಿಲೋಕ್ಯಾಶು ವಿಯೋಗವಶಗೋಽಭವತ್ ॥ ೩೭ ॥

ತೇನಾಹಮಪಿ ಚಾಜ್ಞಪ್ತಃ ಕೃತಕೃತ್ಯೋ ಮುದಾನ್ವಿತಃ ।
ಪ್ರಾವೋಚಂ ಚೇತಿ ಜಗತಾಂ ನಾಥಂ ತಂ ಭಕ್ತವತ್ಸಲಂ ॥೩೮ ॥

---

೩೪. ಎಲೈ ಬ್ರಹ್ಮನೆ, ಅವಳ ಭಕ್ತಿಗೆ ಸಂತುಷ್ಟನಾದ ನಾನು ಅವಳಂದಂತೆ ಒಪ್ಪಿಕೊಳ್ಳಲು, ಆ ಸತೀದೇವಿಯು ತನ್ನ ತಾಯಿಬಳಿಗೆ ತೆರಳಿದಳು. ನಾನೂ ಸಹ ಇಲ್ಲಿಗೆ ಬಂದೆನು.

೩೫. ಆದುದರಿಂದ ಎಲೈ ಬ್ರಹ್ಮನೆ, ನನ್ನಪ್ಪಣೆಯಂತೆ ನೀನೀಗ ಆ ದಕ್ಷನ ಮನೆಗೆ ಹೋಗಿ ಅವನು ತನ್ನ ಪುತ್ರಿಯನ್ನು ಜಾಗ್ರತೆ ನನಗೆ ಮದುವೆಮಾಡಿ ಕೊಡುವಂತೆ ಹೇಳಬೇಕು.

೩೬. ಮತ್ತೂ ಸಕಲ ವಿದ್ಯೆಗಳಲ್ಲಿ ನಿಪುಣನಾದ ನೀನು ಆ ದಕ್ಷನು ನನಗೆ ತನ್ನ ಕನ್ಯೆಯನ್ನು ಮದುವೆಮಾಡಿಕೊಡುವಂದೆ ತಕ್ಕ ಸಂಧಾನವನ್ನು ಮಾಡಿ ಈ ನನ್ನ ಸತೀದೇವಿಯ ವಿರಹವು ಹೋಗುವಂತೆ ಮಾಡಬೇಕು ಎಂದನು.

೩೭. ಬ್ರಹ್ಮನು ಹೇಳಿದನು:—ಹೀಗೆ ನನಗೆ ಹೇಳಿ ಮಹಾದೇವನು ನನ್ನನ್ನೂ ನನ್ನ ಬಳಿಯಲ್ಲಿರುವ ಸರಸ್ವತಿಯನ್ನೂ ನೋಡಿ ಪತಿಪತ್ನಿಯರ ಭಾವವನ್ನು ನೆನೆದು ಮತ್ತಷ್ಟು ಸತೀದೇವಿಯ ವಿರಹದಿಂದ ದುಃಖಿತನಾದನು.

೩೮. ಮದುವೆಯ ಸಂಧಾನಕ್ಕಾಗಿ ಹೀಗೆ ಶಂಕರನು ನನ್ನನ್ನು ಆಜ್ಞಾಪಿಸಲು ನಾನು ಕೃತಕೃತ್ಯನೆಂದು ತಿಳಿದು ಭಕ್ತವತ್ಸಲನೂ ಜಗದೊಡೆಯನೂ ಆದ ಆ ಮಹಾದೇವನನ್ನು ಕುರಿತು,

॥ ಬ್ರಹ್ಮೋವಾಚ ॥

ಯದಾತ್ಥ ಭಗವಾನ್ ಶಂಭೋ ತದ್ವಿಚಾರ್ಯ ಸುನಿಶ್ಚಿತಂ ।
ದೇವಾನಾಂ ಮುಖ್ಯಸ್ಸ್ವಾರ್ಥೋ ಹಿ ಮಮಾಪಿ ವೃಷಭಧ್ವಜ ॥ ೩೯ ॥

ದಕ್ಷಸ್ತುಭ್ಯಂ ಸುತಾಂ ಸ್ವಾಂ ಚ ಸ್ವಯಮೇವ ಪ್ರದಾಸ್ಯತಿ ।
ಅಹಂ ಚಾಪಿ ವದಿಷ್ಯಾಮಿ ತ್ವದ್ವಾಕ್ಯಂ ತತ್ಸಮಕ್ಷತಃ ॥ ೪೦ ॥

॥ ಬ್ರಹ್ಮೋವಾಚ ॥

ಇತ್ಯುದೀರ್ಯ ಮಹಾದೇವಮಹಂ ಸರ್ವೇಶ್ವರಂ ಪ್ರಭುಂ ।
ಅಗಮಂ ದಕ್ಷನಿಲಯಂ ಸ್ಯಂದನೇನಾತಿವೇಗಿನಾ ॥ ೪೧ ॥

॥ ನಾರದ ಉವಾಚ ॥

ವಿಧೇ ಪ್ರಾಜ್ಞ ಮಹಾಭಾಗ ವದ ನೋ ವದತಾಂ ವರ ।
ಸತ್ಯೈ ಗೃಹಾಗತಾಯೈ ಸ ದಕ್ಷಃ ಕಿಮಕರೋತ್ತತಃ ॥ ೪೨ ॥

---

೩೯. ಬ್ರಹ್ಮನು ಹೇಳಿದನು :—ಭಗವಂತನಾದ ಓ ಶಂಕರ, ನೀನು ಹೇಳಿದುದನ್ನು ನಾವು ಮೊದಲೇ ವಿಮರ್ಶಿಸಿ ನಿಶ್ಚಯಮಾಡಿರುವೆವು. ನೀನು ಮದುವೆಯಾಗುವುದರಲ್ಲಿ ಮುಖ್ಯವಾಗಿ ನನಗೂ ದೇವತೆಗಳಿಗೂ ಸ್ವಾರ್ಥವು ಸಿದ್ಧಿಸುವುದು

೪೦. ದಕ್ಷಪ್ರಜಾಪತಿಯೂ ಸಹ ತಾನಾಗಿಯೇ ತನ್ನ ಮಗಳನ್ನು ನಿನಗೆ ಮದುವೆಮಾಡಿಕೊಡುವನು. ನಾನೂ ಸಹ ನಿನ್ನ ಮಾತುಗಳನ್ನು ಅವನೆದುರಿಗೆ ಹೇಳಿ ಸಂಧಾನವನ್ನು ನಡೆಸುವೆನು ಎಂದೆನು.

೪೧. ಬ್ರಹ್ಮನು ಹೇಳಿದನು :—ಎಲೈ ನಾರದ, ಹೀಗೆ ಸರ್ವೇಶ್ವರನಾದ ಮಹಾದೇವನಿಗೆ ಹೇಳಿ ನಾನು ತುಂಬಾ ವೇಗವಾಗಿ ಹೋಗುವ ಹಂಸರಥವನ್ನೇರಿ ಸಂಧಾನಾರ್ಥವಾಗಿ ದಕ್ಷನ ಮನೆಗೆ ಬಂದೆನು.

೪೨. ನಾರದನು ಕೇಳಿದನು ;—ಮಹಾಮಹಿಮನೂ ಉತ್ತಮವಕ್ತೃವೂ ಪ್ರಾಜ್ಞನೂ ಆದಂತಹ ಓ ಬ್ರಹ್ಮನೇ, ಸತಿಯು ಶಿವನಿಂದ ವರವನ್ನು ಪಡೆದು ಮನೆಗೆ ಬಂದಮೇಲೆ ದಕ್ಷನು ಏನುಮಾಡಿದನೆಂಬುದನ್ನು ಹೇಳು ಎನ್ನಲು,

॥ ಬ್ರಹ್ಮೋವಾಚ ॥

ತಪಸ್ತಪ್ತ್ವಾ ವರಂ ಪ್ರಾಪ್ಯ ಮನೋಽಭಿಲಷಿತಂ ಸತೀ ।
ಗೃಹಂ ಗತ್ವಾ ಪಿತುರ್ಮಾತುಃ ಪ್ರಣಾಮಮಕರೋತ್ತದಾ ॥ ೪೩ ॥

ಮಾತ್ರೇ ಪಿತ್ರೇಽಥ ತತ್ಸಖ್ಯಂ ಸಮಾಚಖ್ಯೌ ಮಹೇಶ್ವರಾತ್ ।
ವರಪ್ರಾಪ್ತಿಃ ಸ್ವಸಖ್ಯಾ ವೈ ಸತ್ಯಾಸ್ತುಷ್ಟಾಸ್ತು ಭಕ್ತಿತಃ ॥ ೪೪ ॥

ಮಾತಾ ಪಿತಾ ಚ ವೃತ್ತಾಂತಂ ಸರ್ವಂ ಶ್ರುತ್ವಾ ಸಖೀಮುಖಾತ್ ।
ಆನಂದಂ ಪರಮಂ ಲೇಭೇ ಚಕ್ರೇ ಚ ಪರಮೋತ್ಸವಂ ॥ ೪೫ ॥

ದ್ರವ್ಯಂ ದದೌ ದ್ವಿಜಾತಿಭ್ಯೋ ಯಥಾಭೀಷ್ಟಮುದಾರಧೀಃ ।
ಅನ್ಯೇಭ್ಯಶ್ಚಾಂಧದೀನೇಭ್ಯೋ ವೀರಿಣೀ ಚ ಮಹಾಮನಾಃ ॥ ೪೬ ॥

ವೀರಿಣೀ ತಾಂ ಸಮಾಲಿಂಗ್ಯ ಸ್ವಸುತಾಂ ಪ್ರೀತಿವರ್ಧಿನೀಂ ।
ಮೂರ್ಧ್ನ್ಯುಪಾಘ್ರಾಯ ಮುದಿತಾ ಪ್ರಶಶಂಸ ಮುಹುರ್ಮುಹುಃ॥ ೪೭

೪೩-೪೪. ಬ್ರಹ್ಮನು ಹೇಳಿದನು :—ಎಲೈ ನಾರದ, ತಪಸ್ಸನ್ನಾಚರಿಸಿ ತಾನು ಅಪೇಕ್ಷಿಸಿದ ವರವನ್ನು ಶಿವನಿಂದ ಪಡೆದ ಮೇಲೆ ಸತೀದೇವಿಯು ಮನೆಗೆ ಬಂದು ತನ್ನ ತಾಯಿತಂದೆಗಳಿಗೆ ನಮಸ್ಕಾರಮಾಡಿ ಶಂಕರನು ಭಕ್ತಿಗೆ ಮೆಚ್ಚಿ ತನ್ನನ್ನು ಪ್ರೀತಿಸಿದುದನ್ನೂ, ತನ್ನನ್ನೇ ಮದುವೆಯಾಗುವನೆಂದು ವರವನ್ನು ಅನುಗ್ರಹಿಸಿದುದನ್ನೂ ತನ್ನ ಮಾತಾಪಿತೃಗಳಿಗೆ ಸಖಿಯ ಮೂಲಕ ತಿಳಿಸಿದಳು.

೪೫. ಅವಳ ತಂದೆತಾಯಿಗಳಾದ ದಕ್ಷವೀರಿಣಿಯರು ಸಖಿಯ ಮೂಲಕ ನಡೆದ ಸಮಾಚಾರವನ್ನೆಲ್ಲಾ ತಿಳಿದು ತುಂಬಾ ಆನಂದವುಳ್ಳವರಾದವರು. ಮತ್ತು ಆ ಇಷ್ಟಲಾಭಕ್ಕಾಗಿ ಮಹತ್ತಾದ ಉತ್ಸವವನ್ನು ಮಾಡಿದರು.

೪೬. ಉದಾರಿಯಾದ ದಕ್ಷನು ಬ್ರಾಹ್ಮಣರಿಗೆ ಯಥೇಚ್ಛವಾಗಿ ದ್ರವ್ಯವನ್ನು ದಾನಮಾಡಿದನು. ದೊಡ್ಡ ಮನಸ್ಸುಳ್ಳ ವೀರಣಿಯೂ ಸಹ ಕಿವುಡರು, ಮೂಕರು, ಕುರುಡರು ಮುಂತಾದ ದೀನರಿಗೆ ಧನವನ್ನು ಕೊಟ್ಟಳು.

೪೭ ಅಲ್ಲದೇ ಆ ವೀರಿಣಿಯು ಪ್ರೀತಿಪಾತ್ರಳಾದ ಆ ತನ್ನ ಪುತ್ರಿಯನ್ನು ಆಲಿಂಗಿಸಿ ಶಿರಸ್ಸನ್ನಾಘ್ರಾಣಿಸಿ ಸಂತೋಷದಿಂದ ಅವಳನ್ನು ಪುನಃ ಪುನಃ ಹೊಗಳಿದಳು.

ಅಥ ದಕ್ಷಃ ಕಿಯತ್ಕಾಲೇ ವ್ಯತೀತೇ ಧರ್ಮವಿತ್ತಮಃ ।
ಚಿಂತಯಾಮಾಸ ದೇಯೋಽಯಂ ಸ್ವಸುತಾ ಶಂಭವೇ ಕಥಂ ॥ ೪೮ ॥

ಆಗತೋಽಪಿ ಮಹಾದೇವಃ ಪ್ರಸನ್ನಸ್ಸ ಜಗಾಮ ಹ ।
ಪುನರೇವ ಕಥಂ ಸೋಽಪಿ ಸುತಾರ್ಥೇಽತ್ರಾಗಮಿಷ್ಯತಿ ॥ ೪೯ ॥

ಪ್ರಸ್ಥಾಪ್ಯೋಽಥ ಮಯಾ ಕಶ್ಚಿಚ್ಛಂಭೋರ್ನಿಕಟಮಂಜಸಾ ।
ನೈತದ್ಯೋಗ್ಯಂ ನ ಗೃಹ್ಣೀಯಾದ್ಯದ್ಯೇವಂ ವಿಫಲಾರ್ದನಾ ॥ ೫೦ ॥

ಅಥವಾ ಪೂಜಯಿಷ್ಯಾಮಿ ತಮೇವ ವೃಷಭಧ್ವಜಂ ।
ಮದೀಯತನಯಾ ಭಕ್ತ್ಯಾ ಸ್ವಯಮೇವ ಯಥಾ ಭವೇತ್ ॥ ೫೧ ॥

ತಯೈವ ಪೂಜಿತಸ್ಸೋಽಪಿ ವಾಂಛ್ಯತ್ಯಾರ್ಯಪ್ರಯತ್ನತಃ ।
ಶಂಭುರ್ಭವತು ಮದ್ಭರ್ತೇತ್ಯೇವಂ ದತ್ತವರೇಣ ತತ್ ॥ ೫೨ ॥

೪೮ ಬಳಿಕ ಕೆಲವು ಕಾಲ ಕಳೆಯಲು ಧರ್ಮಜ್ಞನಾದ ಆ ದಕ್ಷನು ಹೀಗೆ ಚಿಂತಿಸಿದನು. ನನ್ನ ಪುತ್ರಿಯನ್ನು ಶಂಕರನಿಗೆ ಹೇಗೆ ಮದುವೆಮಾಡಿ ಕೊಡಲಿ ?

೪೯. ಸತೀದೇವಿಯ ಭಕ್ತಿಗೆ ಮೆಚ್ಚಿ ಇಲ್ಲಿಗೆ ಬಂದಿದ್ದ ಆ ಶಿವನು ಯಾವು ದನ್ನೂ ತಿಳಿಸದೆ ತಿರುಗಿ ಹೊರಟುಹೋಗಿರುವನು. ತಿರುಗಿ ನನ್ನ ಪುತ್ರಿಯನು ಮದುವೆಯಾಗುವುದಕ್ಕಾಗಿ ಅವನಿಲ್ಲಿಗೆ ಬರುವನೆ ?

೫೦. ಅಥವಾ ನನ್ನ ಪುತ್ರಿಯನ್ನು ಮದುವೆಯಾಗುವಂತೆ ತಿಳಿಸಲು ಯಾವ ನಾದರೂ ಪುರುಷನನ್ನು ಆ ಶಿವನ ಬಳಿಗೆ ಕಳುಹಿಸಲೆ ? ಇದು ಯೋಗ್ಯವಲ್ಲ. ಅವನ್ನು ಒಪ್ಪದಿದ್ದರೆ ನಮ್ಮ ಪ್ರಾರ್ಥನೆಯು ವ್ಯರ್ಥವಾಗುವುದು.

೫೧. ಅಥವಾ ನನ್ನ ಪುತ್ರಿಯಂತೆ ನಾನೂ ಆ ಶಿವನನ್ನು ಭಕ್ತಿಯಿಂದ ಪೂಜಿಸಿ ನನ್ನ ಪುತ್ರಿಯನ್ನು ಅವನು ತಾನಾಗಿಯೇ ಮದುವೆಮಾಡಿಕೊಳ್ಳುವಂತೆ ಮಾಡುವೆನು.

೫೨. ಸತಿಯೂ ಸಹ ಆ ಶಿವನನ್ನು ಭಕ್ತಿಯಿಂದ ಅರ್ಚಿಸಿ ನನ್ನ ಪತಿ ಯಾಗೆಂದು ಅವನಿಂದ ವರವನ್ನು ಪ್ರಾರ್ಥಿಸಿರುವಳು. ಶಿವನೂ ಸಹ ನಿನ್ನನ್ನು ಮದುವೆಯಾಗುವೆನೆಂದು ವರವನ್ನು ಕೊಟ್ಟಿರುವನು.

ಇತಿ ಚಿಂತಯತಸ್ತಸ್ಯ ದಕ್ಷಸ್ಯ ಪುರತೋಽನ್ವಹಂ ।
ಉಪಸ್ಥಿತೋಽಹಂ ಸಹಸಾ ಸರಸ್ವತ್ಯನ್ವಿತಸ್ತದಾ ॥ ೫೩ ॥

ಮಾಂ ದೃಷ್ಟ್ವಾ ಪಿತರಂ ದಕ್ಷಃ ಪ್ರಣಮ್ಯಾವನತಃ ಸ್ಥಿತಃ ।
ಆಸನಂ ಚ ದದೌ ಮಹ್ಯಂ ಸ್ವಭಸಾಯ ಯಥೋಚಿತಂ ॥ ೫೪ ॥

ತತೋ ಮಾಂ ಸರ್ವಲೋಕೇಶಂ ತತ್ರಾಗಮನಕಾರಣಂ ।
ದಕ್ಷಃ ಪಪ್ರಚ್ಛ ಸಃ ಕ್ಷಿಪ್ರಂ ಚಿಂತಾವಿಷ್ಟೋಽಪಿ ಹರ್ಷಿತಃ ॥ ೫೫ ॥

॥ ದಕ್ಷ ಉವಾಚ ॥

ತವಾತ್ರಾಗಮನೇ ಹೇತುಃ ಕಃ ಪ್ರವೇಶೇ ಸ ಸೃಷ್ಟಿಕೃತ್ ।
ಮಮೋಪರಿ ಸುಪ್ರಸಾದಂ ಕೃತ್ವಾಚಕ್ಷ್ವ ಜಗದ್ಗುರೋ ॥ ೫೬ ॥

ಪುತ್ರಸ್ನೇಹಾತ್ಕಾರ್ಯವಶಾದಥವಾ ಲೋಕಕಾರಕ ।
ಮಮಾಶ್ರಮಂ ಸಮಾಯಾತೋ ಹುಷ್ಟಸ್ಯ ತವ ದರ್ಶನಾತ್ ॥ ೫೭ ॥

೫೩. ಹೀಗೆಂದು ಆ ದಕ್ಷನು ಚಿಂತಿಸುತ್ತಲಿರಲು ಆಗ ನಾನು ಸರಸ್ವತಿಯೊಡನೆ ಆ ದಕ್ಷನ ಬಳಿಗೆ ಹೋಗಲು,

೫೪. ತನ್ನ ತಂದೆಯಾದ ನನ್ನನ್ನು ನೋಡಿ ದಕ್ಷನು ಶಿರವನ್ನು ಬಗ್ಗಿಸಿ ನಮಸ್ಕರಿಸಿ ನನಗೆ ಯೋಗ್ಯವಾದ ಆಸನವನ್ನು ಕೊಟ್ಟನು.

೫೫. ಬಳಿಕ ಆ ದಕ್ಷನು ಚಿಂತಾಕುಲನಾಗಿದ್ದರೂ ಸರ್ವಲೋಕೇಶ್ವರನಾದ ನನ್ನನ್ನು ನೋಡಿ ಸಂತೋಷದಿಂದ ಬಂದಿರುವ ಕಾರಣವೇನೆಂದು ತಿಳಿಯುವುದಕ್ಕಾಗಿ,

೫೬-೫೭. ದಕ್ಷನು ಹೇಳಿದನು:—ಓ ಬ್ರಹ್ಮನೇ, ನೀನು ಯಾವ ನಿಮಿತ್ತವಾಗಿ ಇಲ್ಲಿಗೆ ಬಂದಿರುವೆ ? ಜಗದ್ಗುರುವಾದ ನೀನು ನನ್ನ ಮೇಲೆ ಅನುಗ್ರಹವನ್ನಿಟ್ಟು ಹೇಳು. ಪುತ್ರನಾದ ನನ್ನ ಮೇಲಿನ ವಾತ್ಸಲ್ಯದಿಂದ ಬಂದಿರುವೆಯಾ? ಅಥವಾ ಬೇರೆ ಯಾವುದಾದರೂ ಕಾರ್ಯಕ್ಕಾಗಿ ನನ್ನ ಆಶ್ರಮಕ್ಕೆ ಬಂದಿರುವೆಯಾ? ಹೇಗಾದರೂ ಇರಲಿ ನಿನ್ನ ದರ್ಶನದಿಂದ ನಾನು ತುಂಬಾ ಸುಖಿಯಾಗಿರುವೆನು ಎಂದನು.

॥ ಬ್ರಹ್ಮೋವಾಚ ॥

ಇತಿ ಪೃಷ್ಟಸ್ಸ್ವಪುತ್ರೇಣ ದಕ್ಷೇಣ ಮುನಿಸತ್ತಮ ।
ವಿಹಸನ್ನಬ್ರುವಂ ವಾಕ್ಯಂ ಮೋದಯಂಸ್ತಂ ಪ್ರಜಾಪತಿಂ ॥ ೫೮ ॥

॥ ಬ್ರಹ್ಮೋವಾಚ ॥

ಶೃಣು ದಕ್ಷ ಯದರ್ಥಂ ತ್ವತ್ಸಮೀಪಮಹಮಾಗತಃ ।
ತ್ವತ್ತೋ ಕಸ್ಯ ಹಿತಂ ಮೇಽಪಿ ಭವತೋಽಪಿ ತದೀಪ್ಸಿತಂ ॥ ೫೯ ॥

ತವ ಪುತ್ರೀ ಸಮಾರಾಧ್ಯ ಮಹಾದೇವಂ ಜಗತ್ಪತಿಂ ।
ಯೋ ವರಃ ಪ್ರಾರ್ಥಿತಸ್ತಸ್ಯ ಸಮಯೋಽಯಮುಪಾಗತಃ ॥ ೬೦ ॥

ಶಂಭುನಾ ತವ ಪುತ್ರ್ಯರ್ಥಂ ತ್ವತ್ಸಕಾಶಮಹಂ ಧ್ರುವಂ ।
ಪ್ರಸ್ಥಾಪಿತೋಽಸ್ಮಿ ಯತ್ಕೃತ್ಯಂ ಶ್ರೇಯಸ್ತದವಧಾರಯ ॥ ೬೧ ॥

ವರಂ ದತ್ವಾ ಗತೋ ರುದ್ರಸ್ತಾವತ್ಪ್ರಭೃತಿ ಶಂಕರಃ ।
ತ್ವತ್ಸುತಾಯಾ ವಿಯೋಗೇನ ನ ಶರ್ಮ ಲಭತೇಽಜಸಾ ॥ ೬೨ ॥

---

೫೮. ಎಲೈ ನಾರದನೇ, ನನ್ನ ಪುತ್ರನಾದ ದಕ್ಷನು ನನ್ನನ್ನು ಹೀಗೆ ಕೇಳಲು' ನಾನು ನಕ್ಕು ಅವನನ್ನು ಸಂತೋಷಪಡಿಸುವುದಕ್ಕಾಗಿ ಹೀಗೆ ಹೇಳಿದೆನು.

೫೯. ಎಲೈ ದಕ್ಷ! ನಿನ್ನ ಬಳಿಗೆ ನಾನು ಯಾವುದಕ್ಕಾಗಿ ಬಂದಿರುವೆನೆಂಬುದನ್ನು ಹೇಳುವೆನು ಕೇಳು. ನಿನಗಿಂತಲೂ ಪ್ರಿಯವಾದ ಒಂದು ಕಾರ್ಯವು ನಿನ್ನಿಂದ ಆಗಬೇಕಾಗಿರುತ್ತೆ. ಆ ಕಾರ್ಯವು ನಿನಗೂ ಇಷ್ಟವಾದುದೇ.

೬೦. ನಿನ್ನ ಪುತ್ರಿಯಾದ ಸತಿಯು ಜಗತ್ಪ್ರಭುವಾದ ಮಹೇಶ್ವನನ್ನು ಆರಾಧಿಸಿ ಯಾವ ವರವನ್ನು ಅವನಿಂದ ಪಡೆದಿರುವಳೋ ಆ ವರವು ಈಗ ಸಿದ್ಧಿಸುವಂತಹ ಸಮಯವು ಬಂದಿರುವುದು.

೬೧. ಶಂಕರನು ನಿನ್ನ ಪುತ್ರಿಗಾಗಿ ನಿನ್ನ ಬಳಿಗೆ ನನ್ನನ್ನು ಕಳುಹಿಸಿರುವನು. ಈ ವಿಷಯದಲ್ಲಿ ಶ್ರೇಯಸ್ಕರವಾದ ಯಾವ ಕಾರ್ಯವನ್ನು ಮಾಡಬೇಕು ಎಂಬುದನ್ನು ಹೇಳುವೆನು ಕೇಳು.

೬೨. ಸತೀದೇವಿಗೆ ವರವನ್ನು ಕೊಟ್ಟು ಹೋದ ಮೊದಲುಗೊಂಡು ಶಂಕರನು ನಿನ್ನ ಪುತ್ರಿಯ ವಿರಹದಿಂದ ದುಃಖಿತನಾಗಿ ಎಲ್ಲಿಯೂ ಸುಖವನ್ನು ಅವನು ಹೊಂದುತ್ತಲಿಲ್ಲ.

ಅಲಬ್ಧಚ್ಛಿದ್ರಮದನೋ ಜಿಗಾಯ ಗಿರಿಶಂ ನ ಯಂ ।
ಸರ್ವೈಃ ಪುಷ್ಪಮಯೈರ್ಬಾಣೈರ್ಯತ್ನಂ ಕೃತ್ವಾಪಿ ಭೂರಿಶಃ ॥ ೬೩ ॥

ಸ ಕಾಮಬಾಣವಿದ್ಧೋಽಪಿ ಪರಿತ್ಯಜ್ಯಾತ್ಮಚಿಂತನಂ ।
ಸತೀಂ ವಿಚಿಂತಯನ್ನಾಸ್ತೇ ವ್ಯಾಕುಲಃ ಪ್ರಾಕೃತೋ ಯಥಾ ॥ ೬೪ ॥

ವಿಸ್ಮೃತ್ಯ ಪ್ರಶ್ರುತಾಂ ವಾಣೀಂ ಗಣಾಗ್ರೇ ವಿಪ್ರಯೋಗತಃ ।
ಕ್ವ ಸತೀತ್ಯೇವಮಭಿತೋ ಭಾಷತೇ ನ ಕೃತಾವಪಿ ॥ ೬೫ ॥

ಮಯಾ ಯದ್ವಾಂಛಿತಂ ಪೂರ್ವಂ ತ್ವಯಾ ಚ ಮದನೇನ ಚ ।
ಮರೀಚ್ಯಾದ್ಯೈರ್ಮುನಿವರೈಸ್ತತ್ಸಿದ್ಧಮಧುನಾ ಸುತ ॥ ೬೬ ॥

ತ್ವತ್ಪುತ್ರ್ಯಾರಾಧಿತಶ್ಶಂಭುಸ್ಸೋಽಪಿ ತಸ್ಯಾ ವಿಚಿಂತನಾತ್ ।
ಅನುರೋಧಯಿತುಂ ಪ್ರೇಪ್ಸುರ್ವರ್ತತೇ ಹಿಮವದ್ಗಿರೌ ॥ ೬೭ ॥

---

೬೩. ಹಿಂದೆ ಮನ್ಮಥನು ಪುಷ್ಪಮಯವಾದ ಬಾಣಗಳಿಂದ ತುಂಬಾ ಪ್ರಯಾಸವನ್ನು ಪಟ್ಟರೂ ಸ್ವಲ್ಪವೂ ಅವಕಾಶವನ್ನು ಪಡೆಯದೆ ಶಿವನನ್ನು ಜಯಿಸಲಾರದವನಾಗಿದ್ದನು.

೬೪. ಈಗ ಆ ಶಿವನೇ ಮನ್ಮಥಬಾಣವಿದ್ಧನಾಗಿ ಆತ್ಮಚಿಂತನೆಯನ್ನು ಬಿಟ್ಟು ಸಾಮಾನ್ಯಮನುಷ್ಯನಂತೆ ವಿರಹದುಃಖಿತನಾಗಿ ಸತೀದೇವಿಯನ್ನು ಚಿಂತಿಸುತ್ತಲಿರುವನು.

೬೫. ಆ ಶಿವನು ಪ್ರಕೃತವಾದ ಮಾತನ್ನು ಬಿಟ್ಟು ವಿರಹದುಃಖಿತನಾಗಿ ಗಣಗಳ ಎದುರಿನಲ್ಲಿಯೇ "ನನ್ನ ಸತೀದೇವಿಯು ಎಲ್ಲಿ?" ಎಂದು ಕೇಳುವನು. ಅದರಂತೆಯೇ ಕಾರ್ಯವನ್ನು ಮಾಡುವನು.

೬೬. ಎಲೈ ದಕ್ಷನೇ! ನಾನೂ ನೀನೂ ಮನ್ಮಥ ಮತ್ತು ಮರೀಚಿ ಮುಂತಾದ ಮುನಿಗಳೂ ಸಹ ಯಾವುದನ್ನು ಹಿಂದೆ ಇಷ್ಟಪಟ್ಟಿದ್ದೆವೋ ಅದು ಈಗ ಸಿದ್ಧಿಸಿದಂತಾಗಿರುವುದು.

೬೭. ನಿನ್ನ ಪುತ್ರಿ ಸತಿಯು ಶಂಕರನನ್ನು ಆರಾಧಿಸಿದಳು. ಆ ಶಿವನೂ ಸಹ ಅವಳನ್ನು ಪಡೆಯಬೇಕೆಂದು ಹಿಮಾಲಯದಲ್ಲಿ ನಿತ್ಯವೂ ಚಿಂತಿಸುತ್ತಲಿರುವನು.

ಯಥಾ ನಾನಾವಿಧೈರ್ಭಾವೈಸ್ಸತ್ತ್ವತ್ತೇನ ವ್ರತೇನ ಚ ।
ಶಂಭುರಾರಾಧಿತಸ್ತೇನ ತಥೈವಾರಾಧ್ಯತೇ ಸತೀ ॥ ೧೮ ॥

ತಸ್ಮಾತ್ತು ದಕ್ಷತನಯಾಂ ಸಂಭ್ವರ್ಥಂ ಪರಿಕಲ್ಪಿತಾಂ ।
ತಸ್ಮೈ ದೇಹ್ಯವಿಲಂಬೇನ ಕೃತಾ ತೇ ಕೃತಕೃತ್ಯತಾ ॥ ೧೯ ॥

ಅಹಂ ತಮಾನಯಿಷ್ಯಾಮಿ ನಾರದೇನ ತ್ವದಾಲಯಂ ।
ತಸ್ಮೈ ತ್ವಮೇನಾಂ ಸಂಯುಚ್ಛ ತದರ್ಥೇ ಪರಿಕಲ್ಪಿತಾಂ ॥ ೨೦ ॥

॥ ಬ್ರಹ್ಮೋವಾಚ ॥

ಶ್ರುತ್ವಾ ಮಮ ವಚಶ್ಚೇತಿ ಸ ಮೇ ಪುತ್ರೋಽತಿಹರ್ಷಿತಃ ।
ಏವಮೇವೇತಿ ಮಾಂ ದಕ್ಷ ಉವಾಚ ಪರಹರ್ಷಿತಃ ॥ ೨೧ ॥

ತತಸ್ಸೋಽಹಂ ಮುನೇ ತತ್ರಾಗಮಮತ್ಯಂತಹರ್ಷಿತಃ ।
ಉತ್ಸುಕೋ ಲೋಕನಿರತೋ ಗಿರಿಶೋ ಯತ್ರ ಸಂಸ್ಥಿತಃ ॥ ೨೨ ॥

---

೧೮. ಸತಿಯು ಹೇಗೆ ಶಿವನನ್ನು ಅನೇಕ ವಿಧವಾದ ಭಾವಗಳಿಂದಲೂ ಆಯಾಯ ವ್ರತಗಳಿಂದಲೂ ಆರಾಧಿಸಿದಳೋ ಅದರಂತೆ ಆ ಶಿವನೂ ಸಹ ಸತೀದೇವಿಯನ್ನು ನಿತ್ಯವೂ ಆರಾಧಿಸುತ್ತಲಿರುವನು.

೧೯. ಆದುದರಿಂದ ಎಲೈ ದಕ್ಷನೇ, ಶಂಕರನಿಗಾಗಿಯೇ ಜನಿಸಿರುವ ಈ ಸತೀದೇವಿಯನ್ನು ಆ ಶಂಕರನಿಗೆ ಮದುವೆಮಾಡಿಕೊಡು. ಅದರಿಂದ ನೀನು ಕೃತಾರ್ಥನಾಗುವೆ.

೨೦. ಆ ಶಂಕರನನ್ನು ನಿನ್ನ ಮನೆಗೆ ನಾರದನ ಮೂಲಕ ಕರೆತರುವೆನು. ಅವನಿಗಾಗಿ ನಿಶ್ಚಿತಳಾಗಿರುವ ಈ ನಿನ್ನ ಪುತ್ರಿಯನ್ನು ಮದುವೆಮಾಡಿ ಕೊಡು ಎಂದನು.

೨೧. ಬ್ರಹ್ಮನು ಹೇಳಿದನು:—ಎಲೈ ನಾರದ! ನನ್ನ ಪುತ್ರನಾದ ದಕ್ಷನು ಆ ರೀತಿಯಾದ ನನ್ನ ಮಾತುಗಳನ್ನು ಕೇಳಿ ತುಂಬಾ ಸಂತೋಷಗೊಂಡು ಹಾಗೆಯೇ ಆಗಲಿ. ಸತೀದೇವಿಯನ್ನು ಶಂಕರನಿಗೆ ಮದುವೆಮಾಡಿಕೊಡುವೆನು ಎಂದು ಹೇಳಿದನು.

೨೨. ಎಲೈ ನಾರದ! ಬಳಿಕ ನಾನು ತುಂಬಾ ಹರ್ಷಗೊಂಡವನಾಗಿ ಔತ್ಸುಕ್ಯದಿಂದ ಪರಮೇಶ್ವರನಿರುವಲ್ಲಿಗೆ ಹೋದೆನು.

**ಗತೇ ನಾರದ ದಕ್ಷೋಽಪಿ ಸದಾರತನಯೋ ಹ್ಯಪಿ ।**
**ಅಭವತ್ಪೂರ್ಣಕಾಮಸ್ತು ಪೀಯೂಷೈರಿವ ಪೂರಿತಃ ॥ ೭೩ ॥**

**ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ**
**ದ್ವಿತೀಯೇ ಸತೀಖಂಡೇ ಸತೀವರಲಾಭೋನಾಮ**
**ಸಪ್ತದಶೋಽಧ್ಯಾಯಃ**

---

೭೩. ನಾನು ಹೊರಟುಹೋಗಲು ದಕ್ಷಪ್ರಜಾಪತಿಯೂ ಸಹ ತನ್ನ ಇಷ್ಟಾರ್ಥವು ಕೈಗೂಡಿತೆಂದು ತಿಳಿದು ತನ್ನ ಪತ್ನಿ ಮತ್ತು ಪುತ್ರಿಯೊಡನೆ ತುಂಬಾ ಹರ್ಷಗೊಂಡನು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ
ಹದಿನೇಳನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಅಷ್ಟಾದಶೋಽಧ್ಯಾಯಃ

---

|| ನಾರದ ಉವಾಚ ||

ರುದ್ರಪಾರ್ಶ್ವೇ ತ್ವಯಿ ಗತೇ ಕಿಮಭೂಚ್ಚರಿತಂ ತತಃ ।
ಕಾ ವಾರ್ತಾ ಹ್ಯಭವತ್ತಾತ ಕಿಂ ಚಕಾರ ಹರಃ ಸ್ವಯಂ || ೧ ||

|| ಬ್ರಹ್ಮೋವಾಚ ||

ಅಥಾಹಂ ಶಿವಮಾನೇತುಂ ಪ್ರಸನ್ನಃ ಪರಮೇಶ್ವರಂ ।
ಆಸದಂ ಹಿ ಮಹಾದೇವಂ ಹಿಮವದ್ಗಿರಿಸಂಸ್ಥಿತಂ || ೨ ||

---

## ಹದಿನೆಂಟನೆಯ ಅಧ್ಯಾಯವು.

೧. ನಾರದನು ಕೇಳಿದನು :—ಓ ಬ್ರಹ್ಮನೇ, ಪರಮೇಶ್ವರನ ಬಳಿಗೆ ಹೋದ ನಂತರ ಮುಂದೆ ಏನಾಯಿತು? ಶಂಕರನೇನು ಮಾಡಿದನು ಎಂಬುದನ್ನು ಹೇಳೆನಲು,

೨. ಬ್ರಹ್ಮನು ಹೇಳಿದನು :—ಎಲೈ ನಾರದ! ಹಿಂದೆ ಹೇಳಿದಂತೆ ನಾನು ಶಿವನನ್ನು ದಕ್ಷನ ಮನೆಗೆ ಕರೆದೊಯ್ಯಲೋಸುಗ ಹಿಮವತ್ಪರ್ವತದಲ್ಲಿರುವ ಮಹಾದೇವನ ಬಳಿಗೆ ತೆರಳಿದೆನು.

ಮಾಂ ವೀಕ್ಷ್ಯ ಲೋಕಸ್ರಷ್ಟಾರಮಾಯಾಂತಂ ವೃಷಭಧ್ವಜಃ ।
ಮನಸಾ ಸಂಶಯಂ ಚಕ್ರೇ ಸತೀಪ್ರಾಪ್ತೌ ಮುಹುರ್ಮುಹುಃ ॥ ೩ ॥

ಅಥ ಪ್ರೀತ್ಯಾ ಹರೋ ಲೋಕೇ ಗತಿಮಾಶ್ರಿತ್ಯ ಲೀಲಯಾ ।
ಸತ್ಯಾ ಭಕ್ತ್ಯಾ ಚ ಮಾಂ ಕ್ಷಿಪ್ರಮುವಾಚ ಪ್ರಾಕೃತೋ ಯಥಾ ॥ ೪ ॥

॥ ಈಶ್ವರ ಉವಾಚ ॥

ಕಿಮುಕ್ತಾರ್ಷೀತ್ಸುರಜ್ಯೇಷ್ಠ ಸತ್ಯರ್ಥೇ ತ್ವತ್ಸುತಸ್ಸ ಮಾಂ ।
ಕಥಯಸ್ವ ಯಥಾ ಸ್ವಾಂತಂ ನ ದೀರ್ಯೇನ್ಮನ್ಮಥೇನ ಹಿ ॥ ೫ ॥

ಧಾವಮಾನೋ ವಿಪ್ರಯೋಗೋ ಮಾಮೇವ ಚ ಸತೀಂ ಪ್ರತಿ ।
ಅಭಿಹಂತಿ ಸುರಜ್ಯೇಷ್ಠ ತ್ಯಕ್ತ್ವಾನ್ಯಾಂ ಪ್ರಾಣಧಾರಿಣೀಂ ॥ ೬ ॥

ಸತೀತಿ ಸತತಂ ಬ್ರಹ್ಮನ್ ವದ ಕಾರ್ಯಂ ಕರೋಮ್ಯಹಂ ।
ಅಭೇದಾನ್ಮಮ ಸಾ ಪ್ರಾಪ್ಯಾ ತದ್ವಿಧೇ ಕ್ರಿಯತಾಂ ತಥಾ ॥ ೭ ॥

---

೩. ಆಗ ಬರುತ್ತಲಿರುವ ನನ್ನನ್ನು ದೂರದಿಂದಲೇ ನೋಡಿ ಶಿವನು ಸತೀದೇವಿಯನ್ನು ಪಡೆಯುವ ವಿಷಯದಲ್ಲಿ ಕೆಲಸವಾಯಿತೋ ಇಲ್ಲವೋ ಎಂಬ ಸಂಶಯದಿಂದ ತವಕಪಡುತ್ತಿದ್ದನು.

೪. ಬಳಿಕ ಆ ಶಿವನು ಸತೀದೇವಿಯಲ್ಲಿನ ಪ್ರೀತಿಯಿಂದ ಸಾಮಾನ್ಯಜನರಂತೆ ವ್ಯವಹರಿಸುತ್ತಾ ನನ್ನನ್ನು ಕುರಿತು,

೫. ಈಶ್ವರನು ಹೇಳಿದನು :—ದೇವಶ್ರೇಷ್ಠನಾದ ಎಲೈ ಬ್ರಹ್ಮನೇ, ಸತಿಯ ವಿಷಯದಲ್ಲಿ ನಿನ್ನ ಪುತ್ರ ದಕ್ಷನು ಏನು ಹೇಳಿದನು ? ಬೇಗನೆ ಹೇಳು. ನಾನು ಮನ್ಮಥನಿಂದ ಕಷ್ಟನಾದ ಅವಸ್ಥೆಯನ್ನು ಪಡೆಯದಿರುವಂತೆ ಮಾಡು.

೬. ಆ ಸತೀದೇವಿಯ ವಿರಹವು ಇನ್ನಾರನ್ನೂ ಬಾಧಿಸದೇ ನನ್ನಲ್ಲಿಗೆ ಬಂದು ನನ್ನನ್ನು ತುಂಬಾ ಘಾಸಿಪಡಿಸುತ್ತಲಿರುವುದು.

೭. ಎಲೈ ಬ್ರಹ್ಮನೇ ! ನಿತ್ಯವೂ ನಾನು ಸತೀದೇವಿಯನ್ನೇ ಚಿಂತಿಸುತ್ತಾ ಕೆಲಸವನ್ನು ಮಾಡುತ್ತಲಿರುವೆನು. ಆದುದರಿಂದ ಅವಳು ನನ್ನೊಡನೆ ಸೇರುವಂತೆ ಜಾಗ್ರತೆ ಪ್ರಯತ್ನಮಾಡು ಎಂದನು.

॥ ಬ್ರಹ್ಮೋವಾಚ ॥
ಇತಿ ರುದ್ರೋಕ್ತವಚನಂ ಲೋಕಾಚಾರಸುಗರ್ಭಿತಂ ।
ಶ್ರುತ್ವಾಹಂ ನಾರದಮುನೇ ಸಾಂತ್ವಯನ್ನಗದಂ ಶಿವಂ ॥ ೮ ॥

॥ ಬ್ರಹ್ಮೋವಾಚ ॥
ಸತ್ಯರ್ಥಂ ಯನ್ಮಮ ಸುತೋ ವದತಿ ಸ್ಮ ವೃಷಧ್ವಜ ।
ತಚ್ಛೃಣುಷ್ವ ನಿಜಾಸಾಧ್ಯಂ ಸಿದ್ಧಮಿತ್ಯವಧಾರಯ ॥ ೯ ॥

ದೇಯಾ ತಸ್ಮೈ ಮಯಾ ಪುತ್ರೀ ತದರ್ಥಂ ಪರಿಕಲ್ಪಿತಾ ।
ಮಮಾಭೀಷ್ಟಮಿದಂ ಕಾರ್ಯಂ ತ್ವದ್ವಾಕ್ಯಾದಧಿಕಂ ಪುನಃ ॥ ೧೦ ॥

ಮತ್ಪುತ್ರ್ಯಾರಾಧಿತಶ್ಶಂಭುರೇತದರ್ಥಂ ಸ್ವಯಂ ಪುನಃ ।
ಸೋಽಪ್ಯನ್ವಿಷ್ಯತಿ ಮಾಂ ಯಸ್ಮಾತ್ತದಾ ದೇಯಾ ಮಯಾ ಹರೇ ॥ ೧೧ ॥

---

೮. ಬ್ರಹ್ಮನು ಹೇಳಿದನು :—ಎಲೈ ನಾರದ, ಹೀಗೆ ಸಾಮಾನ್ಯ ಲೋಕವ್ಯವಹಾರದಂತೆ ಶಿವನು ಆಡುತ್ತಿರುವ ಮಾತುಗಳನ್ನು ಕೇಳಿ ನಾನು ಅವನನ್ನು ಸಮಾಧಾನಗೊಳಿಸುತ್ತಾ,

೯. ಬ್ರಹ್ಮನು ಹೇಳಿದನು :—ಓ ಶಿವನೇ ! ಸತಿಯ ವಿಷಯದಲ್ಲಿ ದಕ್ಷನು ಏನು ಹೇಳಿದನೆಂಬುದನ್ನು ಹೇಳುವೆನು ಕೇಳು. ನಿನ್ನ ಇಷ್ಟಾರ್ಥವು ಸಿದ್ಧಿಸಿರುವುದೆಂದು ತಿಳಿ.

೧೦. (ಆ ದಕ್ಷನು ಹೀಗೆ ಹೇಳಿದನು) ಶಿವನಿಗೆ ನನ್ನ ಪುತ್ರಿಯನ್ನು ಮದುವೆ ಮಾಡಿಕೊಡುವೆನು. ಅವನಿಗಾಗಿಯೇ ಅವಳು ನಿಶ್ಚಯಿಸಲ್ಪಟ್ಟಿರುವಳು. ಈ ಕಾರ್ಯವು ನನಗೂ ಇಷ್ಟವಾದುದು. ಈಗ ನಿನ್ನ ಮಾತಿನಿಂದ ಮತ್ತಷ್ಟು ಅಧಿಕವಾಗಿರುವುದು.

೧೧. ನನ್ನ ಸುತೆಯಾದ ಸತಿಯೂ ಸಹ ಆ ಶಿವನೇ ತನ್ನ ಪತಿಯಾಗಬೇಕೆಂದು ಅವನನ್ನು ಆರಾಧಿಸಿರುವಳು. ಆ ಶಿವನೂ ಸಹ ಈ ವಿಷಯಕ್ಕಾಗಿಯೇ ನನ್ನ ಅನುಮತಿಯನ್ನು ಕೇಳುವನೆಂದ ಮೇಲೆ ನಾನೂ ಸಹ ಸತೀದೇವಿಯನ್ನು ಆ ಶಿವನಿಗೆ ಅವಶ್ಯವಾಗಿ ಮದುವೆಮಾಡಿ ಕೊಡುವೆನು.

ಶುಭೇ ಲಗ್ನೇ ಸುಮುಹೂರ್ತೇ ಸಮಾಗಚ್ಛತು ಸೇತಿ ಕಿಂ ।
ತದಾ ದಾಸ್ಯಾಮಿ ತನಯಾಂ ಭಿಕ್ಷಾರ್ಥಂ ಶಂಭವೇ ವಿಧೇ ॥ ೧೨ ॥

ಇತ್ಯುವಾಚ ಸ ಮಾಂ ದಕ್ಷಸ್ತಸ್ಮಾತ್ತ್ವಂ ವೃಷಭಧ್ವಜ ।
ಶುಭೇ ಮುಹೂರ್ತೇ ತದ್ವೇಶ್ಮ ಗಚ್ಛ ತಾಮಾನಯಸ್ವ ಚ ॥ ೧೩ ॥

॥ ಬ್ರಹ್ಮೋವಾಚ ॥

ಇತಿ ಶ್ರುತ್ವಾ ಮಮ ವಚೋ ಲೌಕಿಕೀಂ ಗತಿಮಾಶ್ರಿತಃ ।
ಉವಾಚ ವಿಹಸನ್ರುದ್ರೋ ಮುನೇ ಮಾಂ ಭಕ್ತವತ್ಸಲಃ ॥ ೧೪ ॥

॥ ರುದ್ರ ಉವಾಚ ॥

ಗಮಿಷ್ಯೇ ಭವತಾ ಸಾರ್ಧಂ ನಾರದೇನ ಚ ತದ್ಗೃಹಂ ।
ಅಯಮೇವ ಜಗತ್ಸ್ರಷ್ಟಸ್ತಸ್ಮಾತ್ತ್ವಂ ನಾರದಂ ಸ್ಮರ ॥ ೧೫ ॥

ಮರೀಚ್ಯಾದೀನ್ ಸಪುತ್ರಾಂಶ್ಚ ಮಾನಸಾನಪಿ ಸಂಸ್ಮರ ।
ತೈಃ ಸಾರ್ಧಂ ದಕ್ಷನಿಲಯಂ ಗಮಿಷ್ಯೇ ಸಗಣೋ ವಿಧೇ ॥ ೧೬ ॥

---

೧೨. ಎಲೈ ಬ್ರಹ್ಮನೇ, ಶುಭಲಗ್ನವುಳ್ಳ ಸುಮುಹೂರ್ತದಲ್ಲಿ ಆ ಶಂಕರನು ನಮ್ಮ ಮನೆಗೆ ಪಾಣಿಗ್ರಹಣಕ್ಕಾಗಿ ಬರಲಿ. ಆಗ ನಾನು ನನ್ನ ಪುತ್ರಿಯನ್ನು ವಿಧಿವತ್ತಾಗಿ ಮದುವೆಮಾಡಿಕೊಡುವೆನು.

೧೩. ಓ ಶಂಕರ, ಹೀಗೆ ಆ ದಕ್ಷನು ಹೇಳಿದನು. ಆದುದರಿಂದ ನೀನು ಶುಭಮುಹೂರ್ತದಲ್ಲಿ ಅವನ ಮನೆಗೆ ತೆರಳುವವನಾಗು.

೧೪. ಬ್ರಹ್ಮನು ಹೇಳಿದನು :—ಎಲೈ ನಾರದ, ಈರೀತಿಯಾದ ನನ್ನ ಮಾತುಗಳನ್ನು ಕೇಳಿ ಲೋಕದ ಸಾಮಾನ್ಯಜನಗಳ ವ್ಯವಹಾರದಂತೆ ಆಚರಿಸುತ್ತಾ ಭಕ್ತವತ್ಸಲನಾದ ಶಿವನು ಸಂತೋಷದಿಂದ ನನ್ನನ್ನು ಕುರಿತು.

೧೫-೧೬. ರುದ್ರನು ಹೇಳಿದನು :—ಎಲೈ ವಿಧಿ, ನಿನ್ನೊಡನೆಯೂ ನಾರದನೊಡನೆಯೂ ಸಹ ಈಗಲೇ ನಾನು ಆ ದಕ್ಷನಮನೆಗೆ ತೆರಳುವೆನು. ನೀನು ಜಾಗ್ರತೆ ನಾರದನನ್ನೂ ಮತ್ತು ಮರೀಚಿಮುನಿ ಮೊದಲಾದ ಮಾನಸಪುತ್ರರನ್ನೂ ಸ್ಮರಿಸು.

॥ ಬ್ರಹ್ಮೋವಾಚ ॥

ಇತ್ಯಾಜ್ಞಪ್ತೋಽಹಮಿಶೇನ ಲೋಕಾಚಾರಪರೇಣ ಹ ।
ಸಂಸ್ಮರಂ ನಾರದಂ ತ್ವಾಂ ಚ ಮರೀಚ್ಯಾದೀನ್ಸುತಾಂಸ್ತಥಾ ॥ ೧೭ ॥

ತತಸ್ಸಮಾಗತಾಸ್ಸರ್ವೇ ಮಾನಸಾಸ್ತನಯಾಸ್ತ್ವಯಾ ।
ಮಮ ಸ್ಮರಣಮಾತ್ರೇಣ ಹೃಷ್ಟಾಸ್ತೇ ದ್ರುತಮಾದರಾತ್ ॥ ೧೮ ॥

ವಿಷ್ಣುಸ್ಸಮಾಗತಸ್ತೂರ್ಣಂ ಸ್ಮೃತೋ ರುದ್ರೇಣ ಶೈವರಾಟ್ ।
ಸ ಸ್ವಸೈನ್ಯಃ ಕಮಲಯಾ ಗರುಡಾರೂಢ ಏವ ಚ ॥ ೧೯ ॥

ಅಥ ಚೈತ್ರಸಿತೇ ಪಕ್ಷೇ ನಕ್ಷತ್ರೇ ಭಗದೈವತೇ ।
ತ್ರಯೋದಶ್ಯಾಂ ದಿನೇ ಭಾನೌ ನಿರ್ಗಚ್ಛತ್ಸ ಮಹೇಶ್ವರಃ ॥ ೨೦ ॥

ಸರ್ವೈಸ್ಸುರಗಣೈಸ್ಸಾರ್ಧಂ ಬ್ರಹ್ಮವಿಷ್ಣುಪುರಸ್ಸರೈಃ ।
ತಥಾ ತೈರ್ಮುನಿಭಿರ್ಗಚ್ಛನ್ ಸ ಬಭೌ ಪಥಿ ಶಂಕರಃ ॥ ೨೧ ॥

---

ಅವರೆಲ್ಲರೊಡನೆಯೂ ನನ್ನ ಪ್ರಮಥಗಣಗಳೊಡನೆಯೂ ದಕ್ಷನ ಮನೆಗೆ ಹೋಗು ವೆನು ಎಂದನು.

೧೭. ಬ್ರಹ್ಮನು ಹೇಳಿದನು :—ಎಲೈ ನಾರದ, ಈಶ್ವರನು ಹೀಗೆ ಲೋಕ ವ್ಯವಹಾರಾನುಸಾರವಾಗಿ ಆಜ್ಞಾಪಿಸಲು ನಾನು ನಿನ್ನನ್ನೂ ಮರೀಚಿಯೇ ಮೊದಲಾದ ಮಾನಸಪುತ್ರರನ್ನೂ ಸಹ ಸ್ಮರಿಸಿದೆನು.

೧೮. ನಾನು ಸ್ಮರಿಸಿದೊಡನೆಯೇ ನಿನ್ನೊಡನೆ ನನ್ನ ಮಾನಸಪುತ್ರರೆಲ್ಲರೂ ಸಹ ಸಂತೋಷದಿಂದ ನಾವಿರುವಲ್ಲಿಗೆ ಬಂದರು.

೧೯. ಬಳಿಕ ರುದ್ರನು ಸ್ಮರಿಸಲು ಶಿವಭಕ್ತಶ್ರೇಷ್ಠನಾದ ವಿಷ್ಣುವೂ ಸಹ ಆ ಕೂಡಲೇ ಲಕ್ಷ್ಮಿಯೊಂದಿಗೆ ಗರುಡವನ್ನೇರಿ ತನ್ನ ಸೈನ್ಯದೊಡನೆ ಅಲ್ಲಿಗೆ ಬಂದನು.

೨೦. ಆಮೇಲೆ ಶಿವನು ಚೈತ್ರ ಶುಕ್ಲ ತ್ರಯೋದಶೀ ಭಾನುವಾರ ಉತ್ತರಾ ನಕ್ಷತ್ರದಲ್ಲಿ ಪರಿವಾರದೊಡನೆ ಮದುವೆಗಾಗಿ ಹೊರಟನು.

೨೧. ಎಲ್ಲಾ ದೇವತೆಗಳೊಡನೆಯೂ ಬ್ರಹ್ಮವಿಷ್ಣುಗಳೊಡನೆಯೂ ಮುನಿ ಗಳೊಡನೆಯೂ ಹೋಗುತ್ತಿರುವಾಗ ಆ ಶಿವನು ತುಂಬಾ ಶೋಭಿಸಿದನು.

**ಮಾರ್ಗೇ ಸಮುತ್ಸವೋ ಜಾತೋ ದೇವಾದೀನಾಂ ಚ ಗಚ್ಛತಾಂ ।**
**ತಥಾ ಹರಗಣಾನಾಂ ಚ ಸಾನಂದಮನಸಾಮತಿ ॥ ೨೨ ॥**

**ಗಜಗೋವ್ಯಾಘ್ರಸರ್ಪಾಶ್ಚ ಜಟಾಚಂದ್ರಕಲಾ ತಥಾ ।**
**ಜಗ್ಮುಸ್ಸರ್ವೇ ಭೂಷಣತ್ವಂ ಯಥಾಯೋಗ್ಯಂ ಶಿವೇಚ್ಛಯಾ ॥ ೨೩ ॥**

**ತತಃ ಕ್ಷಣೇನ ಬಲಿನಾ ಬಲೀವರ್ದೇನ ವೇಗಿನಾ ।**
**ಸ ವಿಷ್ಣುಪ್ರಮುಖಃ ಪ್ರೀತ್ಯಾ ಪ್ರಾಪ ದಕ್ಷಾಲಯಂ ಹರಃ ॥ ೨೪ ॥**

**ತತೋ ದಕ್ಷೋ ವಿನೀತಾತ್ಮಾ ಸಂಪ್ರಹೃಷ್ಟತನೂರುಹಃ ।**
**ಪ್ರಯಯೌ ಸಮ್ಮುಖಂ ತಸ್ಯ ಸಂಯುಕ್ತಸ್ಸಕಲೈರ್ನಿಜೈಃ ॥ ೨೫ ॥**

**ಸರ್ವೇ ಸುರಗಣಾಸ್ತತ್ರ ಸ್ವಯಂ ದಕ್ಷೇಣ ಸತ್ಕೃತಾಃ ।**
**ಪಾರ್ಶ್ವೇ ಶ್ರೇಷ್ಠಂ ಚ ಮುನಿಭಿರುಪವಿಷ್ಟಾ ಯಥಾಕ್ರಮಂ ॥ ೨೬ ॥**

---

೨೨. ಮಾರ್ಗದಲ್ಲಿ ಸಂತೋಷದಿಂದ ಶಂಕರನನ್ನು ಹಿಂಬಾಲಿಸಿ ಹೋಗುತ್ತಲಿರುವ ದೇವತೆಗಳು ಮೊದಲಾದವರೂ, ಶಿವನ ಪ್ರಮಥಗಣಗಳೂ ಮಹಾ ಉತ್ಸಾಹ ಭರಿತರಾಗಿದ್ದರು.

೨೩. ಗಜಚರ್ಮ, ವ್ಯಾಘ್ರಚರ್ಮ, ಸರ್ಪಗಳು, ಸಿಂಹ, ಜಟೆಯಲ್ಲಿನ ಚಂದ್ರಕಲೆ ಇವೆಲ್ಲವೂ ಶಿವನ ಇಚ್ಛೆಯಂತೆ ಆಯಾಯ ಶಿವನ ಅಂಗಗಳಿಗೆ ಯೋಗ್ಯವಾದ ಅಲಂಕಾರಗಳಾದುವು.

೨೪. ಆ ಮೇಲೆ ಆ ಶಿವನು ಪುಷ್ಟವೂ ವೇಗಶಾಲಿಯೂ ಆದಂತಹ ನಂದೀಕೇಶ್ವರನನ್ನೇರಿ ವಿಷ್ಣು ಮೊದಲಾದವರೊಡನೆ ಸಂತೋಷದಿಂದ ದಕ್ಷನಮನೆಯನ್ನು ಪ್ರವೇಶಿಸಿದನು.

೨೫. ಆಗ ದಕ್ಷನು ಸಂತೋಷದಿಂದ ರೋಮಾಂಚವುಳ್ಳವನಾಗಿ ತನ್ನ ಪರಿವಾರದೊಡನೆ ಕೂಡಿ ಬಂದು, ವಿನಯದಿಂದ ಆ ಶಿವನನ್ನು ಎದುರುಗೊಂಡನು.

೨೬. ದೇವತೆಗಳೆಲ್ಲರನ್ನೂ ದಕ್ಷನು ಯೋಗ್ಯವಾಗಿ ಸತ್ಕರಿಸಿ ಅವರವರಿಗೆ ಉಚಿತವಾದ ಆಸನವನ್ನು ಕೊಟ್ಟು ಕ್ರಮವಾಗಿ ಕುಳ್ಳಿರಿಸಿ ಉಪಚರಿಸಿದನು.

ಪರಿವಾರ್ಯಾಖಿಲಾನ್ ದೇವಾನ್ಗಣಾಂಶ್ಚ ಮುನಿಭಿರ್ಯಥಾ ।
ದಕ್ಷಸ್ಸಮಾನಯಾಮಾಸ ಗೃಹಾಭ್ಯಂತರತಶ್ಶಿವಂ ॥ ೨೭ ॥

ಅಥ ದಕ್ಷಃ ಪ್ರಸನ್ನಾತ್ಮಾ ಸ್ವಯಂ ಸರ್ವೇಶ್ವರಂ ಹರಂ ।
ಸಮಾನರ್ಚ ವಿಧಾನೇನ ದತ್ತ್ವಾಸನಮನುತ್ತಮಂ ॥ ೨೮ ॥

ತತೋ ವಿಷ್ಣುಂ ಚ ಮಾಂ ವಿಪ್ರಾನ್ಸುರಾನ್ಸರ್ವಾನ್ಗಣಾಂಸ್ತಥಾ ।
ಪೂಜಯಾಮಾಸ ಸದ್ಭಕ್ತ್ಯಾ ಯಥೋಚಿತವಿಧಾನತಃ ॥ ೨೯ ॥

ಕೃತ್ವಾ ಯಥೋಚಿತಾಂ ಪೂಜಾಂ ತೇಷಾಂ ಪೂಜ್ಯಾಧಿಭಿಸ್ತಥಾ ।
ಚಕಾರ ಸಂವಿದಂ ದಕ್ಷೋ ಮುನಿಭಿರ್ಮಾನಸಃ ಪುನಃ ॥ ೩೦ ॥

ತತೋ ಮಾಂ ಪಿತರಂ ಪ್ರಾಹ ದಕ್ಷಃ ಪ್ರೀತ್ಯಾ ಹಿ ಮತ್ಸುತಃ ।
ಪ್ರಣಿಪತ್ಯ ತ್ವಯಾ ಕರ್ಮ ಕಾರ್ಯಂ ವೈವಾಹಿಕಂ ವಿಭೋ ॥ ೩೧ ॥

---

೨೭. ಆಮೇಲೆ ಎಲ್ಲಾ ದೇವತೆಗಳು, ಪ್ರಮಥಗಳು, ಮುನಿಗಳು ಇವರೊಡನೆ ಶಿವನನ್ನು ಮನೆಯ ಒಳಗೆ ಕರೆದುಕೊಂಡು ಬಂದನು.

೨೮. ಅಲ್ಲಿ ಶಿವನಿಗೆ ಮಹಾರ್ಘವಾದ ಸಿಹ್ಮಾಸನವನ್ನು ಕೊಟ್ಟು ಸರ್ವೇಶ್ವರನಾದ ಅವನನ್ನು ಪ್ರಸನ್ನತೆಯಿಂದ ವಿಧಿವತ್ತಾಗಿ ಪೂಜಿಸಿದನು.

೨೯. ಮತ್ತು ವಿಷ್ಣುವನ್ನೂ ನನ್ನನ್ನೂ ಎಲ್ಲಾ ದೇವತೆಗಳು ಮತ್ತು ಪ್ರಮಥ ಗಣಗಳನ್ನೂ ಮುನಿಗಳನ್ನೂ ಸಹ ವಿಧಿವತ್ತಾಗಿ ಭಕ್ತಿಯಿಂದ ಪೂಜಿಸಿದನು.

೩೦. ಯಥೋಚಿತವಾಗಿ ಪೂಜೆಯನ್ನು ಮಾಡಿ ಆಸನವನ್ನು ಕೊಟ್ಟು ಮಾನಸಪುತ್ರರಾದ ಮುನಿಗಳಿಗೆ ಸ್ವಾಗತವನ್ನು ಬಯಸಿ ಕುಶಲಪ್ರಶ್ನೆಯನ್ನು ಮಾಡಿದನು.

೩೧. ಬಳಿಕ ನನ್ನ ಸುತನಾದ ಆ ದಕ್ಷನು ತಂದೆಯಾದ ನನ್ನನ್ನು ನಮಸ್ಕರಿಸಿ ಓ ತಂದೆಯಾದ ಬ್ರಹ್ಮನೇ, ನೀನೇ ಈ ವಿವಾಹವನ್ನು ಮಾಡಿಸಬೇಕು ಎಂದು ಪ್ರಾರ್ಥಿಸಿದನು.

**ಬಾಢಮಿತ್ಯಹಮುಪ್ಯುಕ್ತ್ವಾ ಪ್ರಹೃಷ್ಟೇನಾಂತರಾತ್ಮನಾ ।**
**ಸಮುತ್ಥಾಯ ತತೋಽಕಾರ್ಷಂ ತತ್ಕಾರ್ಯಮಖಿಲಂ ತಥಾ ॥ ೩೨ ॥**

**ತತಶ್ಶುಭೇ ಮುಹೂರ್ತೇ ಹಿ ಲಗ್ನೇ ಗ್ರಹಬಲಾನ್ವಿತೇ ।**
**ಸತೀಂ ನಿಜಸುತಾಂ ದಕ್ಷೋ ದದೌ ಹರ್ಷೇಣ ಶಂಭವೇ ॥ ೩೩ ॥**

**ಉದ್ವಾಹವಿಧಿನಾ ಸೋಽಪಿ ಪಾಣಿಂ ಜಗ್ರಾಹ ಹರ್ಷಿತಃ ।**
**ದಾಕ್ಷಾಯಣ್ಯಾ ವರತನೋಸ್ತದಾನೀಂ ವೃಷಭಧ್ವಜಃ ॥ ೩೪ ॥**

**ಅಹಂ ಹರಿಸ್ತ್ವದಾದ್ಯಾ ವೈ ಮುನಯಶ್ಚ ಸುರಾ ಗಣಾಃ ।**
**ನೇಮುಸ್ಸರ್ವೇ ಸಂಸ್ತುತಿಭಿಸ್ತೋಷಯಾಮಾಸುರೀಶ್ವರೀಂ ॥ ೩೫ ॥**

**ಸಮುತ್ಸವೋ ಮಹಾನಾಸೀನ್ನೃತ್ಯಗಾನಪುರಸ್ಸರಃ ।**
**ಆನಂದಂ ಪರಮಂ ಜಗ್ಮುಸ್ಸರ್ವೇ ಮುನಿಗಣಾಃ ಸುರಾಃ ॥ ೩೬ ॥**

---

೩೨. ಆಗಲಿ ಎಂದು ಅಂಗೀಕರಿಸಿ ನಾನು ಸಂತೋಷದಿಂದ ಎದ್ದು ವಿಧಿವತ್ತಾಗಿ ವಿವಾಹಕರ್ಮವನ್ನು ಮಾಡಿಸಿದೆನು.

೩೩. ಆಗ ದಕ್ಷನು ಗ್ರಹಬಲದಿಂದ ಕೂಡಿರುವ ಒಳ್ಳೆಯ ಲಗ್ನವಿರುವ ಸುಮುಹೂರ್ತದಲ್ಲಿ ತನ್ನ ಪುತ್ರಿ ಸತಿಯನ್ನು ಹರ್ಷದಿಂದ ಶಂಕರನಿಗೆ ಮದುವೆಮಾಡಿಕೊಟ್ಟನು.

೩೪. ಆಗ ಶಿವನೂ ಸಹ ವಿವಾಹವಿಧಿಯಂತೆ ಸುಂದರಿಯಾದ ಸತೀದೇವಿಯ ಪಾಣಿಗ್ರಹಣವನ್ನು ಸಂತೋಷದಿಂದ ಮಾಡಿದನು.

೩೫. ನಾನೂ ವಿಷ್ಣುವೂ ನೀನು (ನಾರದ) ಮೊದಲಾದ ಮುನಿಗಳೂ, ದೇವತೆಗಳೂ, ಪ್ರಮಥಗಣಗಳೂ ಸಹ ಆಗ ಶಂಕರನನ್ನು ಸ್ತೋತ್ರಮಾಡಿ ಸಂತೋಷಗೊಳಿಸಿದೆವು.

೩೬. ಮತ್ತು ಆಗ ನರ್ತನ ಗಾನ ಮುತಾದುವುಗಳಿಂದ ಉತ್ಸವವು ಮಹಾ ವಿಜೃಂಭಣೆಯಿಂದ ನಡೆಯಿತು. ಎಲ್ಲಾ ದೇವತೆಗಳು ಮತ್ತು ಮುನಿಗಳು ತುಂಬಾ ಹರ್ಷವನ್ನು ಹೊಂದಿದರು.

ಕನ್ಯಾಂ ದತ್ವಾ ಕೃತಾರ್ಥೋಽಭೂತ್ತದಾ ದಕ್ಷೋ ಹಿ ಮುತ್ಸುತಃ ।
ಶಿವಾಶಿವೌ ಪ್ರಸನ್ನೌ ಚ ನಿಖಿಲಂ ಮಂಗಲಾಲಯಂ ॥ ೩೭ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ದ್ವಿತೀಯೇ ಸತೀಖಂಡೇ ಕನ್ಯಾದಾನವರ್ಣನಂ ನಾಮ
ಅಷ್ಟಾದಶೋಽಧ್ಯಾಯಃ



---

೩೭. ದಕ್ಷನೂ ಸಹ ತನ್ನ ಕನ್ಯೆಯನ್ನು ಶಿವನಿಗೆ ಕೊಟ್ಟು ಕೃತಾರ್ಥನಾದನು. ಶಿವ ಸತಿಯರೂ ಸಹ ಪ್ರಸನ್ನರಾದರು. ಎಲ್ಲವು ಮಂಗಳಮಯವಾಯಿತು, ಸುಖ ಮಯವಾಯಿತು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡವಲ್ಲಿ ಹದಿನೆಂಟನೆಯ
ಅಧ್ಯಾಯವು ಮುಗಿದುದು.



|| ಶ್ರೀ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಏಕೋನವಿಂಶೋಽಧ್ಯಾಯಃ

---

|| ಬ್ರಹ್ಮೋವಾಚ ||

ಕೃತ್ವಾ ದಕ್ಷಸ್ಸುತಾದಾನಂ ಯೌತಕಂ ವಿವಿಧಂ ದದೌ ।
ಹರಾಯ ಸುಪ್ರಸನ್ನಶ್ಚ ದ್ವಿಜೇಭ್ಯೋ ವಿವಿಧಂ ಧನಂ || ೧ ||

ಅಥ ಶಂಭುಮುಪಾಗತ್ಯ ಸಮುತ್ಥಾಯ ಕೃತಾಂಜಲಿಃ ।
ಸಾರ್ಧಂ ಕಮಲಯಾ ಚೇದಮುವಾಚ ಗರುಡಧ್ವಜಃ || ೨ ||

---

### ಹತ್ತೊಂಭತ್ತನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು:—ಎಲೈ ನಾರದ! ಹೀಗೆ ದಕ್ಷಪ್ರಜಾಪತಿಯು ಶಿವನಿಗೆ ಪುತ್ರಿಯನ್ನು ಮದುವೆಮಾಡಿಕೊಟ್ಟು ಅಳಿಯನಿಗೆ ಅನೇಕ ಬಗೆಯ ಬಳುವಳಿಯನ್ನು ಕೊಟ್ಟನು. ಬ್ರಾಹ್ಮಣರಿಗೆ ಯಥೇಚ್ಛವಾಗಿ ಧನವನ್ನು ದಾನಮಾಡಿದನು.

೨. ಬಳಿಕ ಹರಿಯು ಲಕ್ಷ್ಮಿಯೊಡನೆ ಎದ್ದು ಶಿವನ ಬಳಿಗೆ ಬಂದು ಕೈಮುಗಿದುಕೊಂಡು ಶಿವನನ್ನು ಕುರಿತು,

॥ ವಿಷ್ಣುರುವಾಚ ॥

ದೇವದೇವ ಮಹಾದೇವ ಕರುಣಾಸಾಗರ ಪ್ರಭೋ ।
ತ್ವಂ ಪಿತಾ ಜಗತಾಂ ತಾತ ಸತೀ ಮಾತಾಖಿಲಸ್ಯ ಚ ॥ ೩ ॥

ಯುವಾಂ ಲೀಲಾವತಾರೌ ವೈ ಸತಾಂ ಕ್ಷೇಮಾಯ ಸರ್ವದಾ ।
ಖಲಾನಾಂ ನಿಗ್ರಹಾರ್ಥಾಯ ಶ್ರುತಿರೇಷಾ ಸನಾತನೀ ॥ ೪ ॥

ಸ್ನಿಗ್ಧನೀಲಾಂಜನಶ್ಯಾಮಶೋಭಯಾ ಶೋಭಸೇ ಹರ ।
ದಾಕ್ಷಾಯಣ್ಯಾ ಯಥಾ ಚಾಹಂ ಪ್ರತಿಲೋಮೇನ ಪದ್ಮಯಾ ॥ ೫ ॥

ದೇವಾನಾಂ ವಾ ನೃಣಾಂ ರಕ್ಷಾಂ ಕುರು ಸತ್ಯಾ ನಯಾ ಸತಾಂ ।
ಸಂಸಾರಸಾರಿಣಾಂ ಶಂಭೋ ಮಂಗಲಂ ಸರ್ವದಾ ತಥಾ ॥ ೬ ॥

---

೩. ವಿಷ್ಣುವು ಹೇಳಿದನು:—ದೇವದೇವನೂ, ಕರುಣಾಸಮುದ್ರನೂ, ಜಗದೊಡೆಯನೂ ಆದ ಓ ಮಹಾದೇವನೆ, ನೀನು ಜಗತ್ತಿಗೆಲ್ಲಾ ತಂದೆಯು. ಸತೀದೇವಿಯು ಮಾತೆಯು.

೪. ನೀವೀರ್ವರೂ ಸಹ ಸತ್ಪುರುಷರಿಗೆ ಕ್ಷೇಮವನ್ನುಂಟುಮಾಡಲೂ ದುಷ್ಟರನ್ನು ನಿಗ್ರಹಿಸಲೂ ಸಹ ಲೀಲೆಯಿಂದ ಅವತರಿಸಿರುವಿರಿ. ಅನಾದಿಯಾದ ವೇದವೂ ಸಹ ಹಾಗೆಯೇ ಹೇಳುವುದು.

೫. ಎಲೈ ಶಂಕರನೇ, ನೀನು ನಯವಾದ ಕಾಡಿಗೆಯಂತೆ ಕಪ್ಪಾದ ಶರೀರ ಕಾಂತಿಯುಳ್ಳ ಈ ಸತಿಯಿಂದ, ಶ್ಯಾಮವರ್ಣವುಳ್ಳ ನಾನು ಶುಭ್ರಳಾದ ಲಕ್ಷ್ಮಿಯಿಂದ ಕೂಡಿ ಶೋಭಿಸುವಂತೆ ಶೋಭಿಸುತ್ತಿರುವೆ. ಆದರೆ ನಿಮ್ಮ ಪತಿಪತ್ನೀಭಾವವು ನಮ ಪತಿಪತ್ನೀಭಾವಕ್ಕೆ ವ್ಯತಿರಿಕ್ತವಾಗಿವೆ. ಹೇಗೆಂದರೆ ನಾನು ಶ್ಯಾಮವರ್ಣವುಳ್ಳವನು, ನನ್ನ ಪತ್ನಿಯಾದ ಲಕ್ಷ್ಮಿಯು ಶುಭ್ರವಾದ ವರ್ಣವುಳ್ಳವಳು. ಬೇರೆ ಬೇರೆ ವರ್ಣವುಳ್ಳ ನಾವು ಒಂದಾಗಿ ಕಲೆತು ಶೋಭಿಸುವಂತೆ ನೀನೂ ಶೋಭಿಸುವೆ. ಆದರೆ ನಿಮ್ಮಿಬ್ಬರಲ್ಲಿ ನೀನು ಶುಭ್ರವಾದ ಶರೀರಕಾಂತಿಯುಳ್ಳವನು. ನಿನ್ನ ಪತ್ನಿಯಾದ ಸತಿಯು ಕಪ್ಪುಬಣ್ಣವುಳ್ಳವಳು ಆದುದರಿಂದ ನಮಗೆ ವ್ಯತಿರಿಕ್ತವಾದ ಬಣ್ಣವುಳ್ಳವರಾದರೂ ನೀವು ಒಟ್ಟಿಗೆ ಕಲೆತು ನಮ್ಮಂತೆಯೇ ಶೋಭಿಸುತ್ತಿರುವಿರಿ.

೬. ಓ ಶಂಕರ, ಈ ಸತೀದೇವಿಯೊಡನೆ ನೀನು ಸತ್ಪುರುಷರಾದಂತಹ ದೇವತೆಗಳಿಗೂ ಮಾನವರಿಗೂ ಸಹ ಸಂಸಾರದುಃಖವನ್ನು ತಪ್ಪಿಸಿ ರಕ್ಷಿಸಿ, ಸದಾ ಮಂಗಳವನ್ನುಂಟುಮಾಡು.

ಯ ಏನಾಂ ಸಾಭಿಲಾಷೋ ವೈ ದೃಷ್ಟ್ವಾ ಶ್ರುತ್ವಾಥವಾ ಭವೇತ್ ।
ತಂ ಹನ್ಯಾಸ್ಸರ್ವಭೂತೇಶ ವಿಜ್ಞಪ್ತಿರಿತಿ ಮೇ ಪ್ರಭೋ　　　　॥ ೭ ॥

॥ ಬ್ರಹ್ಮೋವಾಚ ॥

ಇತಿ ಶ್ರುತ್ವಾ ವಚೋ ವಿಷ್ಣೋರ್ವಿಹಸ್ಯ ಪರಮೇಶ್ವರಃ ।
ಏವಮಸ್ತ್ವಿತಿ ಸರ್ವಜ್ಞ ಪ್ರೋವಾಚ ಮಧುಸೂದನಂ　　　　॥ ೮ ॥

ಸ್ವಸ್ಥಾನಂ ಹರಿರಾಗತ್ಯ ಸ್ಥಿತ ಆಸೀನ್ಮುನೀಶ್ವರ ।
ಉತ್ಸವಂ ಕಾರಯಾಮಾಸ ಜುಗೋಪ ಚರಿತಂ ಚ ತತ್　　　　॥ ೯ ॥

ಅಹಂ ದೇವೀ ಸಮಾಗತ್ಯ ಗೃಹ್ಯೋಕ್ತವಿಧಿನಾऽಖಿಲಂ ।
ಅಗ್ನಿಕಾರ್ಯಂ ಯಥೋದ್ದಿಷ್ಟಮಕಾರ್ಷಂ ಚ ಸುವಿಸ್ತರಂ　　　　॥ ೧೦ ॥

---

೭. ಈ ಸತೀದೇವಿಯನ್ನು ಯಾವನಾದರೂ ನೋಡಿಯಾಗಲೀ ಅಥವಾ ಇವಳ ಸೌಂದರ್ಯವನ್ನು ಕೇಳಿಯಾಗಲಿ ಇವಳಲ್ಲಿ ಕಾಮವಿಕಾರವುಳ್ಳವನಾದರೆ ಅಂತಹವನನ್ನು ಸಂಹರಿಸು ಎಂದು ವಿಜ್ಞಾಪಿಸಿಕೊಳ್ಳುವೆನು ಎಂದನು.

೮. ಬ್ರಹ್ಮನು ಹೇಳಿದನು :—ಎಲೈ ನಾರದ ! ವಿಷ್ಣುವಿನ ಈ ರೀತಿಯಾದ ಮಾತುಗಳನ್ನು ಕೇಳಿ ಸರ್ವಜ್ಞನಾದ ಶಂಕರನು ಮಂದಹಾಸವನ್ನು ಸೂಸುತ್ತ ಹಾಗೆಯೇ ಆಗಲಿ ಎಂದು ಅಂಗೀಕರಿಸಿದನು.

೯. ಬಳಿಕ ಹರಿಯು ತನ್ನ ಸ್ಥಾನಕ್ಕೆ ಬಂದು ಕುಳಿತು ಉತ್ಸವವನ್ನು ಸಾಂಗಗೊಳಿಸಿದನು. ಮತ್ತು ಸತಿಯನ್ನು ಕಾಮಿಸಿದವರನ್ನು ಹರನು ಕೊಲ್ಲುವನೆಂಬ ಸಮಾಚಾರವನ್ನು ಅವನು ಪ್ರಕಟಿಸಲಿಲ್ಲ.

೧೦. ನಾನು ಗೃಹ್ಯಸೂತ್ರದಲ್ಲಿ ಹೇಳಿರುವ ವಿಧಿಯಂತೆ ಶಿವ ಮತ್ತು ಸತೀದೇವಿಯರಿಗೆ ಸಂಪೂರ್ಣವಾಗಿ ವಿವಾಹಹೋಮ ಮುಂತಾದ ಅಗ್ನಿಕಾರ್ಯಗಳನ್ನು ಮಾಡಿಸಿದೆನು.

ತತಶ್ಶಿವಾ ಶಿವಶ್ಚೈವಯಥಾವಿಧಿ ಪ್ರಹೃಷ್ಟವತ್ ।
ಅಗ್ನೇಃ ಪ್ರದಕ್ಷಿಣಂ ಚಕ್ರೇ ಮುದಾಚಾರ್ಯದ್ವಿಜಾಜ್ಞಯಾ ॥ ೧೧ ॥

ತದಾ ಮಹೋತ್ಸವಸ್ತತ್ರಾದ್ಭುತೋಽಭೂದ್ದ್ವಿಜಸತ್ತಮ ।
ಸರ್ವೇಷಾಂ ಸುಖದಂ ವಾದ್ಯಂ ಗೀತನೃತ್ಯಪುರಸ್ಸರಂ ॥ ೧೨ ॥

ತದಾನೀಮದ್ಭುತಂ ತತ್ರ ಚರಿತಂ ಸಮಭೂದತಿ ।
ಸುವಿಸ್ಮಯಕರಂ ತಾತ ತಚ್ಛೃಣು ತ್ವಂ ವದಾಮಿ ತೇ ॥ ೧೩ ॥

ದುರ್ಜ್ಞೇಯಾ ಶಾಂಭವೀ ಮಾಯಾ ತಯಾ ಸಂಮೋಹಿತಂ ಜಗತ್ ।
ಸಚರಾಚರಮತ್ಯಂತಂ ಸದೇವಾಸುರಮಾನುಷಂ ॥ ೧೪ ॥

ಯೋಽಹಂ ಶಂಭುಂ ಮೋಹಯಿತುಂ ಪುರೇಚ್ಛಂ ಕಪಟೇನ ಹ ।
ಮಾಂ ಚ ತಂ ಶಂಕರಸ್ತಾತ ಮೋಹಯಾಮಾಸ ಲೀಲಯಾ ॥ ೧೫ ॥

---

೧೧. ಆಗ ಶಿವ ಮತ್ತು ಸತೀದೇವಿಯರು ಪುರೋಹಿತನಾದ ನನ್ನ ಅಪ್ಪಣೆಯಂತೆ ವಿಧಿವತ್ತಾಗಿ ಸಂತೋಷದಿಂದ ಅಗ್ನಿಗೆ ಪ್ರದಕ್ಷಿಣೆಯನ್ನು ಮಾಡಿದರು.

೧೨. ಬ್ರಾಹ್ಮಣೋತ್ತಮನಾದ ಎಲೈ ನಾರದ, ಆಗ ಅಲ್ಲಿ ಮಹೋತ್ಸವವು ಬಹು ವಿಜೃಂಭಣೆಯಿಂದ ನಡೆಯಿತು. ಎಲ್ಲರಿಗೂ ಆನಂದವಾಗುವಂತೆ ಗಾನ ನರ್ತನ ಮುಂತಾದುವುಗಳೊಡನೆ ನಾನಾವಾದ್ಯಗಳು ಬಾರಿಸಲ್ಪಟ್ಟವು.

೧೩. ಆಗ ಅಲ್ಲಿ ಇನ್ನೊಂದು ಅತ್ಯಾಶ್ಚರ್ಯಕರವಾದ ಸಮಾಚಾರವು ನಡೆಯಿತು. ಅದನ್ನು ನಿನಗೆ ಹೇಳುವೆನು ಕೇಳು.

೧೪. ಶಂಕರನ ಮಾಯೆಯನ್ನು ತಿಳಿಯಲು ಯಾರಿಗೂ ಸಾಧ್ಯವಿಲ್ಲ. ಆ ಮಾಯೆಯಿಂದ ಸ್ಥಾವರಜಂಗಮರೂಪವಾದ ಈ ಜಗತ್ತೆಲ್ಲವೂ ಎಂದರೆ ದೇವತೆಗಳು, ಅಸುರರು, ಮನುಷ್ಯರು ಮೊದಲಾದವರು ಮೋಹಗೊಳಿಸಲ್ಪಟ್ಟರು.

೧೫. ಯಾವ ಶಂಕರನನ್ನು ನಾನು ಹಿಂದೆ ಕಪಟದಿಂದ ಮೋಹಗೊಳಿಸಬೇಕೆಂದಿದ್ದೆನೋ ಆ ಶಂಕರನೇ ಆಗ ನನ್ನನ್ನು ತನ್ನ ಲೀಲೆಯಿಂದ ಮೋಹಗೊಳಿಸಿದನು.

ಇಚ್ಛೇತ್ಪರಾಪಕಾರಂ ಯಸ್ಸತಸ್ಯೈವ ಭವೇದ್ಧ್ರುವಂ ।
ಇತಿ ಮತ್ವಾಽಪಕಾರಂ ನೋ ಕುರ್ಯಾದನ್ಯಸ್ಯ ಪೂರುಷಃ ॥ ೧೬ ॥

ಪ್ರದಕ್ಷಿಣಾಂ ಪ್ರಕುರ್ವಂತ್ಯಾ ವಹ್ನೇಸ್ಸತ್ಯಾಃ ಪದದ್ವಯಂ ।
ಆವಿರ್ಬಭೂವ ವಸನಾತ್ತದದ್ರಾಕ್ಷಮಹಂ ಮುನೇ ॥ ೧೭ ॥

ಮದನಾವಿಷ್ಟಚೇತಾಶ್ಚ ಭೂತ್ವಾಂಗಾನಿ ವ್ಯಲೋಕಯಂ ।
ಅಹಂ ಸತ್ಯಾ ದ್ವಿಜಶ್ರೇಷ್ಠ ಶಿವಮಾಯಾವಿಮೋಹಿತಃ ॥ ೧೮ ॥

ಯಥಾ ಯಥಾಹಂ ರಮ್ಯಾಣಿ ವ್ಯೈಕ್ಷಮಂಗಾನಿ ಕೌತುಕಾತ್ ।
ಸತ್ಯಾ ಬಭೂವ ಸಂಹೃಷ್ಟಃ ಕಾಮಾರ್ತೋ ಹಿ ತಥಾ ತಥಾ ॥ ೧೯ ॥

ಅಹಮೇವಂ ತಥಾ ದೃಷ್ಟ್ವಾ ದಕ್ಷಜಾಂ ಚ ಪತಿವ್ರತಾಂ ।
ಸ್ಮರಾವಿಷ್ಟಮನಾ ವಕ್ತ್ರಂ ದ್ರಷ್ಟುಕಾಮೋಽಭವಂ ಮುನೇ ॥ ೨೦ ॥

---

೧೬. ಪರರಿಗೆ ಕೆಡುಕನ್ನು ಬಯಸಿದರೆ ಅದು ತನಗೇ ಬರುವುದು. ಇದು ನಿಶ್ಚಯವು. ವಿವೇಕಿಯಾದವನು ಇದನ್ನು ತಿಳಿದು ಪರರಿಗೆ ಕೆಡಕನ್ನೆಣಿಸಬಾರದು, ಮಾಡಲೂ ಬಾರದು.

೧೭. ಸತೀದೇವಿಯು ಅಗ್ನಿಗೆ ಪ್ರದಕ್ಷಿಣೆಯನ್ನು ಮಾಡುತ್ತಿರುವಾಗ ಸ್ವಲ್ಪ ಸೀರೆಯು ವ್ಯತ್ಯಾಸವಾಗಿ ಅವಳ ಸುಂದರವಾದ ಪಾದಗಳು ನನಗೆ ಕಾಣಿಸಿದುವು.

೧೮. ಎಲೈ ನಾರದ, ಶಿವಮಾಯಾಮೋಹಿತನಾದ ನಾನು ಮನ್ಮಥವಿಕಾರವನ್ನು ಹೊಂದಿದವನಾಗಿ ಆ ಸತೀದೇವಿಯ ಸುಂದರವಾದ ಅಂಗಗಳನ್ನು ಸಾಭಿಲಾಷೆಯಿಂದ ನೋಡಿದೆನು.

೧೯. ಔತ್ಸುಕ್ಯದಿಂದ ಸತೀದೇವಿಯ ರಮಣೀಯವಾದ ಅಂಗಗಳನ್ನು ಒಂದೊಂದಾಗಿ ನೋಡುತ್ತಿರುವಷ್ಟೂ ನನ್ನ ಕಾಮವಿಕಾರವು ಮತ್ತಷ್ಟು ಹೆಚ್ಚಾಯಿತು.

೨೦. ಎಲೈ ನಾರದ, ಹೀಗೆ ಪತಿವ್ರತೆಯಾದ ಸತಿಯ ಅಂಗಗಳನ್ನೂ ನೋಡಿ ನಾನು ಮನ್ಮಥವಿಕಾರವುಳ್ಳವನಾಗಿ ಅವಳ ಮುಖವನ್ನು ನೋಡಲುದ್ಯುಕ್ತನಾದೆನು.

ನ ಶಂಭೋರ್ಲಜ್ಜಯಾ ವಕ್ತ್ರಂ ಪ್ರತ್ಯಕ್ಷಂ ಚ ವಿಲೋಕಿತಂ ।
ನ ಚ ಸಾ ಲಜ್ಜಯಾವಿಷ್ಟಾ ಕರೋತಿ ಪ್ರಕಟಂ ಮುಖಂ ॥ ೨೧ ॥

ತತಸ್ತದ್ದರ್ಶನಾರ್ಥಾಯ ಸದುಪಾಯಂ ವಿಚಾರಯನ್ ।
ಧೂಮ್ರಘೋರೇಣ ಕಾಮಾರ್ತೋಽಕಾರ್ಷಂ ತಚ್ಚ ತತಃ ಪರಂ ॥ ೨೨ ॥

ಆರ್ದ್ರೇಂಧನಾನಿ ಭೂರೀಣಿ ಕ್ಷಿಪ್ತ್ವಾ ತತ್ರ ವಿಭಾವಸೌ ।
ಸ್ವಲ್ಪಾಜ್ಯಾಹುತಿವಿನ್ಯಾಸಾದಾರ್ದ್ರದ್ರವ್ಯೋದ್ಭವಸ್ತಥಾ ॥ ೨೩ ॥

ಪ್ರಾದುರ್ಭೂತಸ್ತತೋ ಧೂಮೋ ಭೂಯಾಂಸ್ತತ್ರ ಸಮಂತತಃ ।
ತಾದೃಗ್ಯೇನ ತಮೋಭೂತಂ ವೇದಿಭೂಮಿವಿನಿರ್ಮಿತಂ ॥ ೨೪ ॥

ತತೋ ಧೂಮಾಕುಲೇ ನೇತ್ರೇ ಮಹೇಶಃ ಪರಮೇಶ್ವರಃ ।
ಹಸ್ತಾಭ್ಯಾಂ ಛಾದಯಾಮಾಸ ಬಹುಲೀಲಾಕರಃ ಪ್ರಭುಃ ॥ ೨೫ ॥

---

೨೧. ಆದರೆ ಅವಳು ತನ್ನ ಮುಖವನ್ನು ಶಂಕರನು ನೋಡುವನೆಂಬ ಲಜ್ಜೆಯಿಂದ ಮುಚ್ಚಿಕೊಂಡಿದ್ದಳು. ಲಜ್ಜೆಯಿಂದ ಕೂಡಿದ ಆ ಸತಿಯು ತನ್ನ ಮುಖವನ್ನು ಹೊರಗೆ ತೋರಿಸುತ್ತಲೂ ಇರಲಿಲ್ಲ.

೨೨. ಬಳಿಕ ಆ ಸತಿಯ ಮುಖವನ್ನು ನೋಡಲೋಸುಗ ಅಲ್ಲಿ ಹೆಚ್ಚಾಗಿ ಧೂಮವುಂಟಾಗುವಂತೆ ಒಂದು ಉಪಾಯವನ್ನು ಮಾಡಿದೆನು.

೨೩. ಹಸಿಯ ಸೌದೆಗಳನ್ನು ಆ ವಿವಾಹಾಗ್ನಿಯಲ್ಲಿ ಹೆಚ್ಚಾಗಿ ಹಾಕಿ ಆಜ್ಯ (ತುಪ್ಪ) ವನ್ನು ಸ್ವಲ್ಪವೇ ಹೋಮಮಾಡುತ್ತಾ ಹೊಗೆಯನ್ನೆಬ್ಬಿಸಿದೆನು.

೨೪. ಆಗ ಹೊಗೆಯು ವೇದಿಕೆಯಿಂದ ಹೆಚ್ಚಾಗಿ ಎದ್ದು ಅಲ್ಲೆಲ್ಲಾ ಹರಡಿ ಕಣ್ಣು ಕಾಣಿಸದಂತೆ ಆಯಿತು.

೨೫. ಕಣ್ಣುಗಳಿಗೆ ಹೊಗೆಯು ತುಂಬಲು ಲೀಲಾಮಯನಾದ ಪರಮೇಶ್ವರನು ತನ್ನೆರಡು ಕೈಗಳಿಂದ ಕಣ್ಣುಗಳನ್ನು ಮುಚ್ಚಿಕೊಂಡನು.

ತತೋ ವಸ್ತ್ರಂ ಸಮುತ್ಕ್ಷಿಪ್ಯ ಸತೀವಕ್ತ್ರಮಹಂ ಮುನೇ ।
ಅವೇಕ್ಷಂ ಕಿಲ ಕಾಮಾರ್ತಃ ಪ್ರಹೃಷ್ಟೇನಾಂತರಾತ್ಮನಾ　　॥ ೨೬ ॥

ಮುಹುರ್ಮುಹುರಹಂ ತಾತ ಪಶ್ಯಾಮಿ ಸ್ಮ ಸತೀಮುಖಂ ।
ಅಥೇಂದ್ರಿಯವಿಕಾರಂ ಚ ಪ್ರಾಪ್ತವಾನಸ್ಮಿ ಸೋಽವಶಃ　　॥ ೨೭ ॥

ಮಮ ರೇತಃ ಪ್ರಚಸ್ಕಂದ ತಶಸ್ತದ್ವೀಕ್ಷಣಾದ್ಧ್ರುತಂ ।
ಚತುರ್ಬಿಂದುಮಿತಂ ಭೂಮೌ ತುಷಾರಚಯಸಂನಿಭಂ　　॥ ೨೮ ॥

ತತೋಽಹಂ ಶಂಕಿತೋ ಮೌನೀ ತತ್ಕ್ಷಣಂ ವಿಸ್ಮಿತೋ ಮುನೇ ।
ಅಚ್ಛಾದಯೇ ಸ್ಮ ತದ್ರೇತೋ ಯಥಾ ಕಶ್ಚಿದ್ಬುಬೋಧ ನ　　॥ ೨೯ ॥

ಅಥ ತದ್ಭಗವಾನ್ಶಂಭುರ್ಜ್ಞಾತ್ವಾ ದಿವ್ಯೇನ ಚಕ್ಷುಷಾ ।
ರೇತೋಽವಸ್ಕಂದನಾತ್ತಸ್ಯ ಕೋಪಾದೇತದುವಾಚ ಹ　　॥ ೩೦ ॥

॥ ರುದ್ರ ಉವಾಚ ॥

ಕಿಮೇತದ್ವಿಹಿತಂ ಪಾಪ ತ್ವಯಾ ಕರ್ಮ ವಿಗರ್ಹಿತಂ ।
ವಿವಾಹೇ ಮಮ ಕಾಂತಾಯಾ ವಕ್ತ್ರಂ ದೃಷ್ಟಂ ನ ರಾಗತಃ　　॥ ೩೧ ॥

---

೨೬. ಆಗ ಕಾಮುಕನಾದ ನಾನು ಸತೀದೇವಿಯ ಮುಖವಸ್ತ್ರವನ್ನು ತೆಗೆದು ಅವಳ ಸುಂದರಮುಖವನ್ನು ಮಹಾಸಂತೋಷದಿಂದ ನೋಡಿದೆನು.

೨೭. ಕಾಮವಿಕಾರಕ್ಕೊಳಗಾಗಿ ಸತೀಮುಖವನ್ನು ನಾನು ಪುನಃ ಪುನಃ ನೋಡುತ್ತಲಿರಲು ನನ್ನ ಇಂದ್ರಿಯವು ತುಂಬಾ ಉದ್ರೇಕವನ್ನು ಹೊಂದಿತು.

೨೮. ಆಗ ನನ್ನ ವೀರ್ಯವು ನಾಲ್ಕು ಬಿಂದುವಿನಷ್ಟು ಹಿಮದ ತುಂತುರಿನಂತೆ ಭೂಮಿಯಲ್ಲಿ ಬಿದ್ದಿತು.

೨೯. ಇದನ್ನು ಕಂಡು ನಾನು ಹೆದರಿ ವಿಸ್ಮಯಗೊಂಡು ಆ ಕೂಡಲೇ ಮೌನದಿಂದ ನನ್ನ ರೇತಸ್ಸನ್ನು ಒಬ್ಬರಿಗೂ ಕಾಣಿಸದಂತೆ ಮುಚ್ಚಿಹಾಕಿದೆನು.

೩೦. ಆಗ ಭಗವಾನ್ ಶಂಕರನು ದಿವ್ಯದೃಷ್ಟಿಯಿಂದ ನಾನು ಮಾಡಿದ ವಿಷಯವನ್ನು ತಿಳಿದು ತುಂಬಾ ಕೋಪಗೊಂಡು ನನ್ನನ್ನು ಕುರಿತು,

೩೧. ರುದ್ರನು ಹೇಳಿದನು:--ಎಲೈ ಪಾಪಿಯಾದ ಬ್ರಹ್ಮನೆ! ಇದೇನು ಮಾಡಿದೆ? ವಿವಾಹದಲ್ಲಿ ನನ್ನ ಕಾಂತೆಯ ಮುಖವನ್ನು ಅನುರಾಗದಿಂದ ನೋಡುತ್ತಿರುವೆಯಲ್ಲಾ! ನಿಂದಿತವಾದ ಈ ಕರ್ಮವನ್ನು ಏಕೆ ಮಾಡಿರುವೆ?

ತ್ವಂ ವೇತ್ಸಿ ಶಂಕರೇಣೈತತ್ಕರ್ಮ ಜ್ಞಾತಂ ನ ಕಿಂಚನ ।
ತ್ರೈಲೋಕ್ಯೇಽಪಿ ನ ಮೇಽಜ್ಞಾತಂ ಗೂಢಂ ತಸ್ಮಾತ್ಕಥಂ ವಿಧೇ ॥ ೩೨ ॥

ಯತ್ಕಿಂಚಿತ್ತ್ರಿಷು ಲೋಕೇಷು ಜಂಗಮಂ ಸ್ಥಾವರಂ ತಥಾ ।
ತಸ್ಯಾಹಂ ಮಧ್ಯಗೋ ಮೂಢ ತೈಲಂ ಯದ್ವತ್ತಿಲಾಂತಿಗಂ ॥ ೩೩ ॥

॥ ಬ್ರಹ್ಮೋವಾಚ ॥
ಇತ್ಯುಕ್ತ್ವಾ ಪ್ರಿಯವಿಷ್ಣುರ್ಮಾಂ ತದಾ ವಿಷ್ಣುವಚಃ ಸ್ಮರನ್ ।
ಇಯೇಷ ಹಂತುಂ ಬ್ರಹ್ಮಾಣಂ ಶೂಲಮುದ್ಯಮ್ಯ ಶಂಕರಃ ॥ ೩೪ ॥

ಶಂಭುನೋದ್ಯಮಿತೇ ಶೂಲೇ ಮಾಂ ಚ ಹಂತುಂ ದ್ವಿಜೋತ್ತಮ ।
ಮರೀಚಿಪ್ರಮುಖಾಸ್ತೇ ವೈ ಹಾಹಾಕಾರಂ ಚ ಚಕ್ರಿರೇ ॥ ೩೫ ॥

ತತೋ ದೇವಗಣಾಸ್ಸರ್ವೇ ಮುನಯಶ್ಚಾಖಿಲಾಸ್ತಥಾ ।
ತುಷ್ಟುವುಶ್ಶಂಕರಂ ತತ್ರ ಪ್ರಜ್ವಲಂತಂ ಭಯಾತುರಾಃ ॥ ೩೬ ॥

---

೩೨. ಈ ನಿನ್ನ ಕರ್ಮವು ನನಗೆ ತಿಳಿದಿಲ್ಲವೆಂದು ಎಂದುಕೊಂಡಿರುವೆಯಾ? ಮೂರು ಲೋಕಗಳಲ್ಲಿ ಶಂಕರನಿಗೆ ತಿಳಿಯದಿರುವುದು ಯಾವುದೂ ಇಲ್ಲ. ಎಂದಮೇಲೆ ಈ ನಿನ್ನ ರಹಸ್ಯವಾದ ಅವಿವೇಕವು ನನಗೆ ತಿಳಿಯಲಾರದೆ?

೩೩. ಎಲೈ ಮೂಢ, ಎಳ್ಳಿನಲ್ಲಿ ಹೇಗೆ ಎಣ್ಣೆಯು ಅಡಗಿರುವುದೋ ಅದರಂತೆ ನಾನೂ ಸಹ ಮೂರು ಲೋಕಗಳಲ್ಲಿರುವ ಸ್ಥಿರಚರರೂಪಗಳಾದ ಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿ ವ್ಯಾಪಿಸಿರುವೆನು. ನನಗೆ ತಿಳಿಯದಿರುವ ಸಮಾಚಾರವು ಒಂದೂ ಇಲ್ಲ.

೩೪. ಬ್ರಹ್ಮನು ಹೇಳಿದನು:—ಹೀಗೆ ಹೇಳಿ ವಿಷ್ಣುವತ್ಸಲನಾದ ಆ ಶಿವನು ಸತಿಯನ್ನು ಯಾವನು ಕಾಮಿಸುವನೋ ಅವನನ್ನು ವಧಿಸು ಎಂಬ ವಿಷ್ಣುವಿನ ಮಾತನ್ನು ಜ್ಞಾಪಿಸಿಕೊಂಡು ಶೂಲವನ್ನೆತ್ತಿ ನನ್ನನ್ನು ಕೊಲ್ಲಲುದ್ಯುಕ್ತನಾದನು.

೩೫. ರುದ್ರನು ನನ್ನನ್ನು ಸಂಹರಿಸಲು ತ್ರಿಶೂಲವನ್ನೆತ್ತಲು ಮರೀಚಿಮುನಿ ಮೊದಲಾದವರು ಭಯದಿಂದ ಹಾಹಾಕಾರವನ್ನು ಮಾಡಿದರು.

೩೬. ಬಳಿಕ ಎಲ್ಲ ದೇವತೆಗಳು ಮತ್ತು ಮುನಿಗಳು ಭಯಗೊಂಡು ಕೋಪದಿಂದ ಜ್ವಲಿಸುತ್ತಲಿರುವ ಶಂಕರನನ್ನು ಹೀಗೆ ಸ್ತೋತ್ರಮಾಡಿದರು.

॥ ದೇವಾ ಊಚುಃ ॥

ದೇವದೇವ ಮಹಾದೇವ ಶರಣಾಗತವತ್ಸಲ ।
ಬ್ರಹ್ಮಾಣಂ ರಕ್ಷ ರಕ್ಷೇಶ ಕೃಪಾಂ ಕುರು ಮಹೇಶ್ವರ ॥ ೩೭ ॥

ಜಗತ್ಪಿತಾ ಮಹೇಶ ತ್ವಂ ಜಗನ್ಮಾತಾ ಸತೀ ಮತಾ ।
ಹರಿಬ್ರಹ್ಮಾದಯಸ್ಸರ್ವೇ ತವ ದಾಸಾಸ್ಸುರಪ್ರಭೋ ॥ ೩೮ ॥

ಅದ್ಭುತಾಕೃತಿಲೀಲಸ್ತ್ವಂ ತವ ಮಾಯಾದ್ಭುತಾ ಪ್ರಭೋ ।
ತಯಾ ವಿಮೋಹಿತಂ ಸರ್ವಂ ವಿನಾ ತ್ವದ್ಭಕ್ತಿಮೀಶ್ವರ ॥ ೩೯ ॥

॥ ಬ್ರಹ್ಮೋವಾಚ ॥

ಇತ್ಥಂ ಬಹುತರಂ ದೀನಾ ನಿರ್ಜರಾ ಮುನಯಶ್ಚ ತೇ ।
ತುಷ್ಟುವುರ್ದೇವದೇವೇಶಂ ಕ್ರೋಧಾವಿಷ್ಟಂ ಮಹೇಶ್ವರಂ ॥ ೪೦ ॥

ದಕ್ಷೋ ನ್ಯೈವಂ ನ್ಯೈವಮಿತಿ ಪಾಣಿಮುದ್ಯಮ್ಯ ಶಂಕಿತಃ ।
ವಾರಯಾಮಾಸ ಭೂತೇಶಂ ಕ್ಷಿಪ್ರಮೇತ್ಯ ಪುರೋಗತಃ ॥ ೪೧ ॥

---

೩೭. ದೇವತೆಗಳು ಹೇಳಿದರು :—ದೇವದೇವನೂ ಮರೆಹೊಕ್ಕವರನ್ನು ಸಲಹುವವನೂ ಆದಂತಹ ಓ ಮಹಾದೇವನೇ, ಶಾಂತನಾಗು. ಅನುಗ್ರಹವನ್ನು ಮಾಡಿ ಈ ಬ್ರಹ್ಮನನ್ನು ರಕ್ಷಿಸು.

೩೮. ಓ ಮಹೇಶ್ವರ! ನೀನು ಜಗತ್ತಿಗೆ ತಂದೆಯು. ಸತಿಯು ಮಾತೆಯು. ಓ ಸ್ವಾಮಿ! ಹರಿಬ್ರಹ್ಮ ಮೊದಲಾದವರು ದೇವದೇವನಾದ ನಿನ್ನ ದಾಸಾನುದಾಸರು.

೩೯. ಓ ಪರಮೇಶ್ವರ! ನೀನು ಅದ್ಭುತವಾದ ಆಕಾರ ಮತ್ತು ಲೀಲೆಯುಳ್ಳವನು ನಿನ್ನ ಮಾಯೆಯು ಅದ್ಭುತವಾದುದು. ಆ ಮಾಯೆಯು ನಿನ್ನ ಭಕ್ತಿಯಿಲ್ಲದ ಪ್ರಾಣಿಗಳನ್ನೆಲ್ಲಾ ಮೋಹಗೊಳಿಸುವುದು ಎಂದು ಬಹುವಿಧವಾಗಿ ಸ್ತೋತ್ರ ಮಾಡಿದರು.

೪೦ ಬ್ರಹ್ಮನು ಹೇಳಿದನು :—ಹೀಗೆ ಅನೇಕ ವಿಧವಾಗಿ ದೇವತೆಗಳು ಮತ್ತು ಮುನಿಗಳು ಕೋಪಗೊಂಡಿರುವ ಮಹೇಶ್ವರನನ್ನು ದೀನತೆಯಿಂದ ಸ್ತುತಿಸಿದರು.

೪೧. ದಕ್ಷನು ಬೇಡ ಬೇಡ ಎಂದು ಹೇಳುತ್ತಾ ಭಯದಿಂದ ಕೈಗಳನ್ನೆತ್ತಿ ಜಾಗ್ರತೆಯಾಗಿ ಬಂದು ಎದುರಿಗೆ ನಿಂತು ಶಿವನನ್ನು ತಡೆದನು.

ಅಥಾಗ್ರೇಶಂ ಗತಂ ವೀಕ್ಷ್ಯ ತದಾ ದಕ್ಷಂ ಮಹೇಶ್ವರಃ ।
ಪ್ರತ್ಯುವಾಚಾಪ್ರಿಯಮಿದಂ ಸಂಸ್ಮರನ್ಪ್ರಾರ್ಥನಾಂ ಹರೇಃ ॥ ೪೨ ॥

॥ ಮಹೇಶ್ವರ ಉವಾಚ ॥

ವಿಷ್ಣುನಾ ಮೇಽತಿಭಕ್ತೇನ ಯದಿದಾನೀಮುದೀರಿತಂ ।
ಮಯಾಪ್ಯಂಗೀಕೃತಂ ಕರ್ತುಂ ತದಿಹೈವ ಪ್ರಜಾಪತೇ ॥ ೪೩ ॥

ಸತೀಂ ಯಸ್ಸಾಭಿಲಾಷಸ್ಸನ್ ವೀಕ್ಷೇತ ವಧ ತಂ ಪ್ರಭೋ ।
ಇತಿ ವಿಷ್ಣುವಚಸ್ಸತ್ಯಂ ವಿಧಿಂ ಹತ್ವಾ ಕರೋಮ್ಯಹಂ ॥ ೪೪ ॥

ಸಾಭಿಲಾಷಃ ಕಥಂ ಬ್ರಹ್ಮಾ ಸತೀಂ ಸಮವಲೋಕಯತ್ ।
ಅಭವತ್ತ್ಯಕ್ತರೇತಾಸ್ತು ತತೋ ಹನ್ಮಿ ಕೃತಾಗಸಂ ॥ ೪೫ ॥

॥ ಬ್ರಹ್ಮೋವಾಚ ॥

ಇತ್ಯುಕ್ತವತಿ ದೇವೇಶೇ ಮಹೇಶೇ ಕ್ರೋಧಸಂಕುಲೇ ।
ಚಕಂಪಿರೇ ಜನಾಃ ಸರ್ವೇ ಸದೇವಮುನಿಮಾನುಷಾಃ ॥ ೪೬ ॥

---

೪೨. ಬಳಿಕ ಶಿವನು ವಿಷ್ಣುವಾಕ್ಯವನ್ನು ಜ್ಞಾಪಿಸಿಕೊಳ್ಳುತ್ತಾ ಎದುರಿಗೆ ಬಂದು ನಿಂತಿರುವ ದಕ್ಷಪ್ರಜಾಪತಿಯನ್ನು ಕುರಿತು ಕ್ರೂರವಾಗಿ ಹೀಗೆ ಹೇಳಿದನು.

೪೩. ಶಿವನು ಹೇಳಿದನು:—ಎಲೈ ದಕ್ಷಬ್ರಹ್ಮನೇ, ನನ್ನ ಪ್ರಿಯಭಕ್ತನಾದ ಹರಿಯು, ಸತಿಯನ್ನು ಕಾಮಿಸಿದವರನ್ನು ಸಂಹರಿಸು ಎಂದು ಯಾವುದನ್ನು ಹೇಳಿರುವನೋ ಅದನ್ನು ನಾನು ಅಂಗೀಕರಿಸಿರುವೆನು. ಅದನ್ನು ಮೀರಲು ಸಾಧ್ಯವಿಲ್ಲ.

೪೪. ಸತೀದೇವಿಯನ್ನು ಯಾವನಾದರೂ ಕಾಮುಕದೃಷ್ಟಿಯಿಂದ ನೋಡಿದರೆ ಅವನನ್ನು ಸಂಹರಿಸು ಎಂದು ವಿಷ್ಣುವು ಪ್ರಾರ್ಥಿಸಿರುವನು. ಅದರಂತೆ ಈಗ ಬ್ರಹ್ಮನನ್ನು ಸಂಹರಿಸಿ ಹರಿಯ ಪ್ರಾರ್ಥನೆಯನ್ನು ಸತ್ಯವಾಗಿ ಮಾಡುವೆನು.

೪೫. ಈ ಬ್ರಹ್ಮನು ಸತಿಯನ್ನು ಕಾಮುಕದೃಷ್ಟಿಯಿಂದ ನೋಡಿದನು. ಅದರಿಂದ ಅವನ ರೇತಸ್ಸು ಸ್ರವಿಸಿ ಭೂಮಿಯಲ್ಲಿ ಬಿದ್ದಿರುವುದು. ಹೀಗೆ ಅಪರಾಧಿಯಾದ ವಿಧಿಯನ್ನು ಸಂಹರಿಸುವೆನು ಎಂದನು.

೪೬. ಬ್ರಹ್ಮನು ಹೇಳಿದನು:—ಎಲೈ ನಾರದ, ದೇವದೇವನಾದ ಪರಮೇಶ್ವರನು ಕೋಪದಿಂದ ಹಾಗೆ ಹೇಳಲು, ದೇವತೆಗಳು ಮುನಿಗಳು ಮುಂತಾದವರೆಲ್ಲರೂ ಭಯದಿಂದ ನಡುಗಿದರು.

ಹಾಹಾಕಾರೋ ಮಹಾನಾಸೀದ್ಗೌದಾಸೀನ್ಯಂ ಚ ಸರ್ವಶಃ ।
ಅಭೂವಂ ವಿಕಲೋಽತೀವ ತದಾಹಂ ತದ್ವಿಮೋಹಕಃ　　॥ ೪೭ ॥

ಅಥ ವಿಷ್ಣುರ್ಮಹೇಶಾತಿಪ್ರಿಯಕಾರ್ಯವಿಚಕ್ಷಣಃ ।
ತಮೇವಂವಾದಿನಂ ರುದ್ರ ತುಷ್ಟಾವ ಪ್ರಣತಸ್ಸುಧೀಃ　　॥ ೪೮ ॥

ಸ್ತುತ್ವಾ ಚ ವಿವಿಧೈಃ ಸ್ತೋತ್ರೈಶ್ಶಂಕರಂ ಭಕ್ತವತ್ಸಲಂ ।
ಇದಮೂಚೇ ವಾರಯಂಸ್ತಂ ಕ್ಷಿಪ್ರಂ ಭೂತ್ವಾ ಪುರಸ್ಸರಃ　　॥ ೪೯ ॥

॥ ವಿಷ್ಣುರುವಾಚ ॥

ವಿಧಿಂ ನ ಜಹಿ ಭೂತೇಶ ಸ್ರಷ್ಟಾರಂ ಜಗತಾಂ ಪ್ರಭುಂ ।
ಅಯಂ ಶರಣಗಸ್ತೇಽದ್ಯ ಶರಣಾಗತವತ್ಸಲಃ　　॥ ೫೦ ॥

ಅಹಂ ತೇಽತಿಪ್ರಿಯೋ ಭಕ್ತೋ ಭಕ್ತರಾಜ ಇತೀರಿತಃ ।
ವಿಜ್ಞಪ್ತಿಂ ಹೃದಿ ಮೇ ಮತ್ವಾ ಕೃಪಾಂ ಕುರು ಮಮೋಪರಿ　　॥ ೫೧ ॥

---

೪೭. ಆಗ ಅಲ್ಲಿ ಎಲ್ಲರೂ ಹಾಹಾಕಾರವನ್ನು ಮಾಡಿದರು. ನಿರಾಶೆಯು ಎಲ್ಲರಲ್ಲಿಯೂ ಮೂಡಿತು. ನಾನು ಆಗ ತುಂಬಾ ದೀನನಾಗಿ ಭಯಗೊಂಡೆನು.

೪೮. ಬಳಿಕ ಶಿವನಿಗೆ ತುಂಬಾ ಪ್ರಿಯನೂ, ಉಪಾಯದಿಂದ ಕಾರ್ಯವನ್ನು ಸಾಧಿಸುವವನೂ ಆದಂತ ಹರಿಯು ಆ ರೀತಿ ಹೇಳುತ್ತಲಿರುವ ಶಿವನನ್ನು ನಮಸ್ಕರಿಸಿ ಸ್ತೋತ್ರಮಾಡಿದನು.

೪೯. ಅನೇಕ ಸ್ತೋತ್ರಗಳಿಂದ ಭಕ್ತವತ್ಸಲನಾದ ಶಂಕರನನ್ನು ಸ್ತುತಿಸಿ, ವಿಷ್ಣುವು ಎದುರಿಗೆ ಬಂದು ಆ ಶಿವನನ್ನು ತಡೆದು ಹೀಗೆ ಹೇಳಿದನು.

೫೦. ಹರಿಯು ಹೇಳಿದನು :—ಓ ಶಂಕರ! ಜಗತ್ತಿಗೆ ಸೃಷ್ಟಿಕರ್ತನೂ, ಪ್ರಭುವೂ ಆದ ಈ ವಿಧಿಯನ್ನು ಕೊಲ್ಲಬೇಡ, ಇವನು ಮರೆಹೊಕ್ಕವರನ್ನು ಸಲಹುವ ನಿನ್ನನ್ನೇ ಶರಣು ಹೊಂದಿರುವನು.

೫೧. ನಾನು ನಿನಗೆ ಪ್ರಿಯನಾದ ಭಕ್ತನು. ಮತ್ತು ನಿನ್ನ ಭಕ್ತರಲ್ಲಿ ಉತ್ತಮನು. ಇಂತಹ ನನ್ನ ವಿಜ್ಞಾನೆಯನ್ನು ಮನ್ನಿಸಿ ಇವನಲ್ಲಿ ಅನುಗ್ರಹವನ್ನು ಮಾಡು.

ಅನ್ಯಚ್ಚ ಶೃಣು ಮೇ ನಾಥ ವಚನಂ ಹೇತುಗರ್ಭಿತಂ ।
ತನ್ಮನುಷ್ವ ಮಹೇಶಾನ ಕೃಪಾಂ ಕೃತ್ವಾ ಮಮೋಪರಿ ॥ ೫೨ ॥

ಪ್ರಜಾಸ್ಸ್ರಷ್ಟುಮಯಂ ಶಂಭೋ ಪ್ರಾದುರ್ಭೂತಶ್ಚತುರ್ಮುಖಃ ।
ಅಸ್ಮಿನ್ಹತೇ ಪ್ರಜಾಸ್ರಷ್ಟಾ ನಾಸ್ತ್ಯನ್ಯಃ ಪ್ರಾಕೃತೋಽಧುನಾ ॥ ೫೩ ॥

ಸೃಷ್ಟಿಸ್ಥಿತ್ಯಂತಕರ್ಮಾಣಿ ಕರಿಷ್ಯಾಮಃ ಪುನಃ ಪುನಃ ।
ತ್ರಯೋ ದೇವಾ ವಯಂ ನಾಥ ಶಿವರೂಪ ತ್ವದಾಜ್ಞಯಾ ॥ ೫೪ ॥

ಏತಸ್ಮಿನ್ನಿಹತೇ ಶಂಭೋ ಕಸ್ತ್ವತ್ಕರ್ಮ ಕರಿಷ್ಯತಿ ।
ತಸ್ಮಾನ್ನ ವಧ್ಯೋ ಭವತಾ ಸೃಷ್ಟಿಕೃಲ್ಲಯಕೃದ್ವಿಭೋ ॥ ೫೫ ॥

ಅನೇನೈವ ಸತೀ ಕನ್ಯಾ ದಕ್ಷಸ್ಯ ಚ ಶಿವಾ ವಿಭೋ ।
ಸದುಪಾಯೇನ ವೈ ಭಾರ್ಯಾ ಭವದರ್ಥೇ ಪ್ರಕಲ್ಪಿತಾ ॥ ೫೬ ॥

---

೫೨. ಓ ಮಹೇಶ್ವರ! ಇನ್ನೊಂದು ಯುಕ್ತಿಯುಕ್ತವಾದ ಮಾತನ್ನು ಹೇಳು ವೆನು. ನನ್ನಲ್ಲಿ ಅನುಗ್ರಹವನ್ನಿಟ್ಟು ಆ ಮಾತನ್ನು ನೆರವೇರಿಸು.

೫೩. ಈ ಚತುರ್ಮುಖಬ್ರಹ್ಮನು ಪ್ರಜೆಗಳನ್ನು ಸೃಷ್ಟಿಸುವುದಕ್ಕಾಗಿ ಆವಿರ್ಭವಿಸಿರುವನು. ಇವನು ಕೊಲ್ಲಲ್ಪಟ್ಟರೆ ಇನ್ನಾರೂ ಈ ಜಗತ್ತನ್ನು ಸೃಷ್ಟಿಸು ವವರಿಲ್ಲ.

೫೪. ಓ ದೇವ, ಶಿವಸ್ವರೂಪನಾದ ನಿನ್ನ ಆಜ್ಞೆಯಿಂದಲೇ ನಾವು ತ್ರಿಮೂರ್ತಿ ಗಳು ಪ್ರತ್ಯೇಕವಾಗಿ ಸೃಷ್ಟಿ ಪಾಲನೆ ನಾಶಗಳನ್ನು ಪುನಃ ಪುನಃ ಮಾಡುತ್ತಲಿರುವೆವು.

೫೫. ಹೀಗಿರಲು ಈ ಬ್ರಹ್ಮನನ್ನು ನೀನು ಸಂಹರಿಸಿದರೆ ನೀನು ನಿಯಮಿಸಿದ ಸೃಷ್ಟಿಕರ್ಮವನ್ನು ಮಾಡುವವರು ಯಾರು? ಯಾರೂ ಇಲ್ಲವಷ್ಟೆ? ಆದುದರಿಂದ ಜಗತ್ತಿನ ಪ್ರಳಯಮಾಡುವ ಓ ಸ್ವಾಮಿ! ಈ ವಿಧಿಯನ್ನು ಸಂಹರಿಸಬೇಡ.

೫೬. ಈ ವಿಧಿಯೇ ದಕ್ಷಪುತ್ರಿಯಾದ ಸತೀದೇವಿಯನ್ನು ಅನೇಕ ಸದುಪಾಯ ಗಳಿಂದ ನಿನ್ನ ಪತ್ನಿಯಾಗುವಂತೆ ಮಾಡಿರುವನು ಎಂದನು.

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ಮಹೇಶಸ್ತು ವಿಜ್ಞಪ್ತಿಂ ವಿಷ್ಣುನಾ ಕೃತಾಂ ।
ಪ್ರತ್ಯುವಾಚಾಖಿಲಾಂಸ್ತಾಂಶ್ಚ ಶ್ರಾವಯಂಶ್ಚ ದೃಢವ್ರತಃ ॥ ೫೭ ॥

॥ ಮಹೇಶ ಉವಾಚ ॥

ದೇವದೇವ ರಮೇಶಾನ ವಿಷ್ಣೋ ಮತ್ಪ್ರಾಣವಲ್ಲಭ ।
ನ ನಿವಾರಯ ಮಾಂ ತಾತ ವಧಾದಸ್ಯ ಖಲಸ್ತ್ವಯಂ ॥ ೫೮ ॥

ಪೂರಯಿಷ್ಯಾಮಿ ವಿಜ್ಞಪ್ತಿಂ ಪೂರ್ವಾಂ ತೇಽಂಗೀಕೃತಾಂ ಮಯಾ ।
ಮಹಾಪಾಪಕರಂ ದುಷ್ಟಂ ಹನ್ಮ್ಯೇನಂ ಚತುರಾನನಂ ॥ ೫೯ ॥

ಅಹಮೇವ ಪ್ರಜಾಸ್ಸ್ರಕ್ಷ್ಯೇ ಸರ್ವಾಃ ಸ್ಥಿರಚರಾ ಅಪಿ ।
ಅನ್ಯಂ ಸ್ರಕ್ಷ್ಯೇ ಸೃಷ್ಟಿಕರಮಥವಾಹಂ ಸ್ವತೇಜಸಾ ॥ ೬೦ ॥

ಹತ್ವೈನಂ ವಿಧಿಮೇವಾಹಂ ಸ್ವಪಣಂ ಪೂರಯನ್ಕೃತಂ ।
ಸ್ರಷ್ಟಾರಮೇಕಂ ಸ್ರಕ್ಷ್ಯಾಮಿ ನ ನಿವಾರಯ ಮೇಶ ಮಾಂ ॥ ೬೧ ॥

---

೫೭. ಬ್ರಹ್ಮನು ಹೇಳಿದನು:—ಹೀಗೆ ವಿಷ್ಣುವು ಹೇಳಿದ ವಿಜ್ಞಾಪನೆಯನ್ನು ಕೇಳಿ ಮಹಾದೇವನು ದೃಢವಾದ ನಿಶ್ಚಯವುಳ್ಳವನಾಗಿ ಅವರೆಲ್ಲರಿಗೂ ಕೇಳಿಸುವಂತೆ ಹರಿಯನ್ನು ಕುರಿತು,

೫೮. ಪರಮೇಶ್ವರನು ಹೇಳಿದನು:—ದೇವದೇವನೂ ರಮಾಪತಿಯೂ ನನಗೆ ತುಂಬಾ ಪ್ರಿಯನೂ ಆದ ಎಲೈ ವಿಷ್ಣುವೇ, ಬ್ರಹ್ಮನನ್ನು ಕೊಲ್ಲುವುದನ್ನು ತಡೆಯಬೇಡ. ಇವನು ಮಹಾದುಷ್ಟನು.

೫೯. ನೀನು ಹಿಂದೆ ಮಾಡಿದ ಮತ್ತು ನಾನು ಅಂಗೀಕರಿಸಿರುವ ವಿಜ್ಞಾಪನೆಯನ್ನು ಈಗ ನಾನು ಪೂರಯಿಸುವೆನು. ಮಹಾಪಾಪಿಯೂ ದುಷ್ಟನೂ ಆದಂತಹ ಈ ಬ್ರಹ್ಮನನ್ನು ಸಂಹರಿಸುವೆನು. ನೀನು ತಡೆಯಲಾಗದು.

೬೦. ನಾನೇ ಎಲ್ಲ ಪ್ರಜೆಗಳನ್ನು ಸೃಷ್ಟಿಸುವೆನು. ಅಥವಾ ನನ್ನ ಶಕ್ತಿಯಿಂದ ಇನ್ನೊಬ್ಬ ಸೃಷ್ಟಿಕರ್ತನನ್ನೇ ಸೃಷ್ಟಿಸುವೆನು.

೬೧. ನನ್ನ ನಿಯಮದಂತೆ ಈ ಬ್ರಹ್ಮನನ್ನು ಮೊದಲು ಸಂಹರಿಸಿ ಬಳಿಕ ಇನ್ನೋರ್ವ ಬ್ರಹ್ಮನನ್ನು ಸೃಷ್ಟಿಸುವೆನು ಆದುದರಿಂದ ಎಲೈ ವಿಷ್ಣು, ನನ್ನನ್ನು ತಡೆಯಬೇಡ.

॥ ಬ್ರಹ್ಮೋವಾಚ ॥

ಇತಿ ತಸ್ಯ ವಚಶ್ಶ್ರುತ್ವಾ ಗಿರೀಶಸ್ಯಾಹ ಚಾಚ್ಯುತಃ ।
ಸ್ಮಿತಪ್ರಭಿನ್ನಹೃದಯಃ ಪುನರ್ನ್ಯೈವಮಿತೀರಯನ್ ॥ ೬೨ ॥

॥ ಅಚ್ಯುತ ಉವಾಚ ॥

ಪ್ರತಿಜ್ಞಾಪೂರಣಂ ಯೋಗ್ಯಂ ಪರಸ್ಮಿನ್ಪುರುಷೇಽಸ್ತಿ ವೈ ।
ವಿಚಾರಯಸ್ವ ವಧ್ಯೇಶ ಭವತ್ಯಾತ್ಮನಿ ನ ಪ್ರಭೋ ॥ ೬೩ ॥

ತ್ರಯೋ ದೇವಾ ವಯಂ ಶಂಭೋ ತ್ವದಾತ್ಮಾನಃ ಪರಾ ನಹಿ ।
ಏಕರೂಪಾ ನ ಭಿನ್ನಾಶ್ಚ ತತ್ತ್ವತಸ್ಸುವಿಚಾರಯ ॥ ೬೪ ॥

ತತಸ್ತದ್ವಚನಂ ಶ್ರುತ್ವಾ ವಿಷ್ಣೋಸ್ಸ್ವಾತಿಪ್ರಿಯಸ್ಯ ಸಃ ।
ಶಂಭುರೂಚೇ ಪುನಸ್ತಂ ವೈ ಖ್ಯಾಪಯನ್ನಾತ್ಮನೋ ಗತಿಂ ॥ ೬೫ ॥

॥ ಶಂಭುರುವಾಚ ॥

ಹೇ ವಿಷ್ಣೋ ಸರ್ವಭಕ್ತೇಶ ಕಥಮಾತ್ಮಾ ವಿಧಿರ್ಮಮ ।
ಲಕ್ಷ್ಯತೇ ಭಿನ್ನ ಏವಾಯಂ ಪ್ರತ್ಯಕ್ಷೇಣಾಗ್ರತಃ ಸ್ಥಿತಃ ॥ ೬೬ ॥

---

೬೨-೬೩. ಬ್ರಹ್ಮನು ಹೇಳಿದನು :—ಈ ರೀತಿಯಾದ ರುದ್ರವಚನವನ್ನು ಕೇಳಿ ಹರಿಯು ದುಃಖಗೊಂಡು ತಿರುಗಿ ಹರಿಯು ಹೇಳಿದನು :—ಓ ಪರಮೇಶ್ವರ! ಹಾಗೆ ಮಾಡಬೇಡ. ನಿನ್ನ ಪ್ರತಿಜ್ಞೆಯನ್ನು ಬೇರೆ ಪುರುಷನಲ್ಲಿ ಪೂರಯಿಸು, ಬ್ರಹ್ಮನಲ್ಲಿ ಬೇಡ, ನಮ್ಮ ಆತ್ಮಸ್ವರೂಪದಲ್ಲಿ ವಧೆಯೇ ಇಲ್ಲ. ವಿಚಾರಮಾಡಿನೋಡು ಆತ್ಮನನ್ನು ಕೊಲ್ಲಲು ಅಸಾಧ್ಯವು.

೬೪. ಓ ಶಂಭು! ನಾವು ತ್ರಿಮೂರ್ತಿಗಳೂ ನಿನ್ನ (ಶಿವನ) ಸ್ವರೂಪರು. ಭಿನ್ನರಲ್ಲ. ಒಂದೇ ಸ್ವರೂಪರು. ಈ ವಿಷಯವನ್ನು ತತ್ವತಃ ವಿಚಾರಮಾಡು ಎನ್ನಲು,

೬೫. ತನಗೆ ಪ್ರಿಯಭಕ್ತನಾದ ಹರಿಯ ಮಾತನ್ನು ಕೇಳಿ ಶಿವನು ತನ್ನ ಸ್ವರೂಪವನ್ನು ಮಿಕ್ಕವರಿಗೆಲ್ಲ ತಿಳಿಸುವ ಉದ್ದೇಶದಿಂದ ಮತ್ತೆ ಹರಿಯನ್ನು ಕುರಿತು.

೬೬. ಶಂಕರನು ಹೇಳಿದನು :—ನನ್ನ ಭಕ್ತಶ್ರೇಷ್ಠನಾದ ಎಲೈ ವಿಷ್ಣುವೆ, ಬ್ರಹ್ಮನು ನನ್ನ ಆತ್ಮಸ್ವರೂಪನೆಂದು ಹೇಳಿದೆಯಲ್ಲಾ, ಅದು ಹೇಗೆ? ಪ್ರತ್ಯಕ್ಷವಾಗಿ ಇವನು ಎದುರಿಗೆ ಬೇರೆಯಾಗಿ ನಿಂತಿರುವನಲ್ಲವೆ?

॥ ಬ್ರಹ್ಮೋವಾಚ ॥

ಇತ್ಯಾಜ್ಞಪ್ತೋ ಮಹೇಶೇನ ಸರ್ವೇಷಾಂ ಪುರತಸ್ತದಾ ।
ಇದಮೂಚೇ ಮಹಾದೇವಂ ತೋಷಯನ್ಗರುಡಧ್ವಜಃ ॥ ೬೭ ॥

॥ ವಿಷ್ಣುರುವಾಚ ॥

ನ ಬ್ರಹ್ಮಾ ಭವತೋ ಭಿನ್ನೋ ನ ತ್ವಂ ತಸ್ಮಾತ್ಸದಾಶಿವ ।
ನ ವಾಹಂ ಭವತೋ ಭಿನ್ನೋ ನ ಮತ್ತ್ವಂ ಪರಮೇಶ್ವರ ॥ ೬೮ ॥

ಸರ್ವಂ ಜಾನಾಸಿ ಸರ್ವಜ್ಞ ಪರಮೇಶ ಸದಾಶಿವ ।
ಮನ್ಮುಖಾದಖಿಲಾತ್ಸರ್ವಂ ಸಂಶ್ರಾವಯಿತುಮಿಚ್ಛಸಿ ॥ ೬೯ ॥

ತ್ವದಾಜ್ಞಯಾ ವದಾಮೀಶ ಶೃಣ್ವಂತು ನಿಖಿಲಾಸ್ಸುರಾಃ ।
ಮುನಯಶ್ಚಾಪರೇ ಶೈವಂ ತತ್ತ್ವಂ ಸಂಧಾರ್ಯ ಸ್ವಂ ಮನಃ ॥ ೭೦ ॥

ಪ್ರಧಾನಸ್ಯಾಽಪ್ರಧಾನಸ್ಯ ಭಾಗಾಭಾಗಸ್ಯ ರೂಪಿಣಃ ।
ಜ್ಯೋತಿರ್ಮಯಸ್ಯ ಭಾಗಾಸ್ತೇ ವಯಂ ದೇವಾಃ ಪ್ರಭೋಸ್ತ್ರಯಃ ॥ ೭೧ ॥

---

೬೭. ಬ್ರಹ್ಮನು ಹೇಳಿದನು:—ಹೀಗೆ ಶಿವನು ಆಜ್ಞಾಪಿಸಲು ಹರಿಯು ಎಲ್ಲರ ಎದುರಿಗೆ ಶಿವನನ್ನು ಸಂತೋಷಗೊಳಿಸಲು,

೬೮. ವಿಷ್ಣುವು ಹೇಳಿದನು:—ಓ ಸದಾಶಿವ! ಬ್ರಹ್ಮನು ನಿನಗಿಂತಲೂ ಬೇರೆಯಲ್ಲ. ನೀನೂ ಬ್ರಹ್ಮನಿಗಿಂತ ಬೇರೆಯಲ್ಲ. ನಾನೂ ಸಹ ನಿನ್ನಿಂದ ಬೇರೆಯಲ್ಲ. ನೀನೂ ನನಗಿಂತ ಬೇರೆಯಲ್ಲ.

೬೯. ಓ ಪರಮೇಶ್ವರ! ಸರ್ವಜ್ಞನಾದ ನೀನು ಇದೆಲ್ಲವನ್ನೂ ತಿಳಿದೇ ಇರುವೆ. ಆದರೂ ನನ್ನ ಮುಖದಿಂದ ಈ ವಿಷಯವನ್ನು ತಿಳಿಯಲು ಅಪೇಕ್ಷಿಸಿರುವೆ.

೭೦. ನಿನ್ನ ಆಜ್ಞೆಯಂತೆ ಈ ಶಿವತತ್ತ್ವವನ್ನು ಹೇಳುತ್ತಲಿರುವೆನು. ಇಲ್ಲಿ ಸೇರಿರುವ ಎಲ್ಲ ದೇವತೆಗಳು ಮತ್ತು ಮುನಿಗಳು ತಮ್ಮ ಮನಸ್ಸನ್ನು ಸ್ಥಿರವಾಗಿಟ್ಟು ಕೊಂಡು ಸಾವಧಾನತೆಯಿಂದ ಕೇಳಲಿ.

೭೧. ಓ ಸ್ವಾಮಿ! ಕಾರ್ಯ ಮತ್ತು ಕಾರಣರೂಪನೂ ಅಂಶ ಮತ್ತು ಅಂಶಿ ಸ್ವರೂಪನೂ, ಜ್ಞಾನಜ್ಯೋತಿಪ್ರಕಾಶಸ್ವರೂಪನೂ, ಪರಬ್ರಹ್ಮಸ್ವರೂಪನೂ ಆದ ನಿನ್ನ ಮೂರು ಅಂಶಗಳು ನಾವು. ತ್ರಿಮೂರ್ತಿಗಳಾಗಿರುವೆವು.

**ಕಸ್ತ್ವಂ ಕೋऽಹಂ ಚ ಕೋ ಬ್ರಹ್ಮಾ ತವೈವ ಪರಮಾತ್ಮನಃ ।**
**ಅಂಶತ್ರಯಮಿದಂ ಭಿನ್ನಂ ಸೃಷ್ಟಿಸ್ಥಿತ್ಯಂತಕಾರಣಂ ॥ ೭೨ ॥**

**ಚಿಂತಯಸ್ವಾತ್ಮನಾತ್ಮಾನಂ ಸ್ವಲೀಲಾಧೃತವಿಗ್ರಹಃ ।**
**ಏಕಸ್ತ್ವಂ ಬ್ರಹ್ಮ ಸಗುಣೋ ಹ್ಯಂಶಭೂತಾ ವಯಂ ತ್ರಯಃ ॥ ೭೩ ॥**

**ಶಿರೋಗ್ರೀವಾದಿಭೇದೇನ ಯಥೈಕಸ್ಯೈವ ವರ್ಷ್ಮಣಃ ।**
**ಅಂಗಾನಿ ತೇ ತಥೇಶಸ್ಯ ತಸ್ಯ ಭಾಗತ್ರಯಂ ಹರ ॥ ೭೪ ॥**

**ಯಜ್ಜ್ಯೋತಿರಭ್ರಂ ಸ್ವಪುರಂ ಪುರಾಣಂ**
**ಕೂಟಸ್ಥಮವ್ಯಕ್ತಮನಂತರೂಪಂ ।**
**ನಿತ್ಯಂ ಚ ದೀರ್ಘಾದಿವಿಶೇಷಣಾದ್ಯೈರ್ಹೀನಂ**
**ಶಿವಸ್ತ್ವಂ ತತ ಏವ ಸರ್ವಂ ॥ ೭೫ ॥**

---

೭೨. ಆ ಪರಮಾತ್ಮಸ್ವರೂಪವನ್ನು ಹೊರತು ಮತ್ತಾವ ವಸ್ತುವೂ ಇಲ್ಲದಿರುವಾಗ ನಾನೆಲ್ಲಿ? ನೀನಾರು? ಬ್ರಹ್ಮನಾರು? ನಾವು ಮೂವರೂ ಆ ಪರಮಾತ್ಮನ ಸ್ವರೂಪರು. ಸೃಷ್ಟಿ, ಸ್ಥಿತಿ, ಮತ್ತು ಲಯಗಳಿಗಾಗಿ ಬೇರೆ ಬೇರೆ ರೂಪದಿಂದಿರುವೆವು.

೭೩. ಲೀಲಾರುದ್ರರೂಪನಾದ ನೀನು ನಿನ್ನ ಸ್ವರೂಪವನ್ನು ನೋಡಿಕೋ, ನೀನು ಸಗುಣನಾದ ಪರಮೇಶ್ವರನು, ನಿರ್ಗುಣಸ್ವರೂಪನು, ತನ್ನ ಮಾಯೆಯಿಂದ ಸಗುಣನಾದ ನಿನ್ನ ಮೂರು ಅಂಶಗಳೇ ನಾವು ತ್ರಿಮೂರ್ತಿಗಳು.

೭೪. ಒಂದೇ ಶರೀರಕ್ಕೆ, ಶಿರಸ್ಸು, ಕತ್ತು, ಮೊದಲಾದ ಭೇದದಿಂದ ಹೇಗೆ ಅನೇಕ ಅಂಗಗಳಿರುವವೋ ಅದರಂತೆ ನಾವು ಓರ್ವನೇ ಆದ ಪರಮೇಶ್ವರನ ಅಂಶಗಳಾಗಿರುವೆವು.

೭೫. ಓ ಶಿವನೆ! ನೀನು ವ್ಯಾಪಕವೂ, ಪ್ರಕಾಶಸ್ವರೂಪವೂ, ಅಂತರ್ಯಾಮಿಯೂ, ಅನಾದಿಯೂ, ವಿಕಾರವಿಲ್ಲದುದೂ, ಚರ್ಮಚಕ್ಷುಸ್ಸುಗಳಿಗೆ ಕಾಣಿಸದಿರುವುದೂ, ಮಾಯಾಮಯವಾದ ಅನೇಕ ಜೀವರೂಪವುಳ್ಳದುದೂ, ನಿತ್ಯವೂ, ದೀರ್ಘತೆ ಸ್ಥೂಲತೆ ಮುಂತಾದ ದ್ರವ್ಯಧರ್ಮವಿಲ್ಲದುದೂ ಆದಂತಹ ಬ್ರಹ್ಮವಸ್ತುವಿನ ಸ್ವರೂಪನು. ಆ ಬ್ರಹ್ಮವಸ್ತುವಿನಿಂದಲೇ ಈ ಜಗತ್ತೆಲ್ಲವೂ ಜನಿಸುವುದು, ಕೆಲವು ಕಾಲ ಇರುವುದು. ಕೊನೆಯಲ್ಲಿ ಲಯವನ್ನು ಹೊಂದುವುದು.

॥ ಬ್ರಹ್ಮೋವಾಚ ॥

ಏತಚ್ಛ್ರುತ್ವಾ ವಚಸ್ತಸ್ಯ ಮಹಾದೇವೋ ಮುನೀಶ್ವರ ।
ಬಭೂವ ಸುಪ್ರಸನ್ನಶ್ಚ ನ ಜಘಾನ ಸ ಮಾಂ ತತಃ ॥ ೭೬ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ದ್ವಿತೀಯೇ ಸತೀಖಂಡೇ ಸತೀವಿವಾಹಶಿವಲೀಲಾವರ್ಣನಂ
ನಾಮ ಏಕೋನವಿಂಶೋಽಧ್ಯಾಯಃ



---

೭೬. ಬ್ರಹ್ಮನು ಹೇಳಿದನು:—ಎಲೈ ನಾರದ! ಈ ರೀತಿಯಾಗಿ ಹೇಳಿದ ವಿಷ್ಣುವಿನ ಮಾತನ್ನು ಕೇಳಿ ಮಹಾದೇವನು ತುಂಬಾ ಪ್ರಸನ್ನನಾದನು. ಬಳಿಕ ಆ ಶಿವನು ನನ್ನನ್ನು ಸಂಹರಿಸಲಿಲ್ಲ.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಹತ್ತೊಂಭತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ವಿಂಶೋಽಧ್ಯಾಯಃ

---

॥ ನಾರದ ಉವಾಚ ॥

ಬ್ರಹ್ಮನ್ ವಿಧೇ ಮಹಾಭಾಗ ಶಿವಭಕ್ತ ವರಪ್ರಭೋ ।
ಶ್ರಾವಿತಂ ಚರಿತಂ ಶಂಭೋರದ್ಭುತಂ ಮಂಗಲಾಯನಂ ॥ ೧ ॥

ತತಃ ಕಿಮಭವತ್ತಾತ ಕಥ್ಯತಾಂ ಶಶಿಮೌಲಿನಾ ।
ಸತ್ಯಾಶ್ಚ ಚರಿತಂ ದಿವ್ಯಂ ಸರ್ವಾಘೌಘವಿನಾಶನಂ ॥ ೨ ॥

---

### ಇಪ್ಪತ್ತನೆಯ ಅಧ್ಯಾಯವು.

೧. ನಾರದನು ಕೇಳಿದನು :—ಮಹಾಮಹಿಮನೂ ಶಿವಭಕ್ತಶ್ರೇಷ್ಠನೂ ಜಗದೊಡೆಯನೂ ಆದ ಓ ಬ್ರಹ್ಮನೆ, ಇದುವರಿಗೂ ನೀನು ಮಂಗಳಕರವೂ ಅದ್ಭುತವೂ ಆದ ಶಿವಕಥೆಯನ್ನು ಹೇಳಿರುವೆ.

೨. ಓ ತಂದೆಯೆ, ಮುಂದೆ ಏನಾಯಿತು ? ಆ ಮುಂದಿನ ಪಾಪನಾಶಕವಾದ ಶಿವಪಾರ್ವತಿಯರ ದಿವ್ಯಚರಿತ್ರೆಯನ್ನು ಹೇಳು ಎಂದನು.

॥ ಬ್ರಹ್ಮೋವಾಚ ॥

ನಿವೃತ್ತೇ ಶಂಕರೇ ಚಾಸ್ಮದ್ವಧಾದ್ಭಕ್ತಾನುಕಂಪಿನಿ ।
ಅಭವನ್ನಿರ್ಭಯಾಸ್ಸರ್ವೇ ಸುಖಿನಸ್ಸುಪ್ರಸನ್ನಕಾಃ ॥ ೩ ॥

ನತಸ್ಕಂಧಾಸ್ಸಾಂಜಲಯಃ ಪ್ರಣೇಮುರ್ನಿಖಿಲಾಶ್ಚ ತೇ ।
ತುಷ್ಟುವುಶ್ಶಂಕರಂ ಭಕ್ತ್ಯಾ ಚಕ್ರುರ್ಜಯರವಂ ಮುದಾ ॥ ೪ ॥

ಏತಸ್ಮಿನ್ನೇವ ಕಾಲೇಽಹಂ ಪ್ರಸನ್ನೋ ನಿರ್ಭಯೋ ಮುನೇ ।
ಅಸ್ತವಂ ಶಂಕರಂ ಭಕ್ತ್ಯಾ ವಿವಿಧೈಶ್ಚ ಶುಭಸ್ತವೈಃ ॥ ೫ ॥

ತತಸ್ತುಷ್ಟಮನಾಶ್ಶಂಭುರ್ಬಹುಲೀಲಾಕರಃ ಪ್ರಭುಃ ।
ಮುನೇ ಮಾಂ ಸಮುವಾಚೇದಂ ಸರ್ವೇಷಾಂ ಶೃಣ್ವತಾಂ ತದಾ ॥ ೬ ॥

॥ ರುದ್ರ ಉವಾಚ ॥

ಬ್ರಹ್ಮನ್ ತಾತ ಪ್ರಸನ್ನೋಽಹಂ ನಿರ್ಭಯಸ್ತ್ವಂ ಭವಾಧುನಾ ।
ಸ್ವಶೀರ್ಷಂ ಸ್ಪೃಶ ಹಸ್ತೇನ ಮದಾಜ್ಞಾಂ ಕುರ್ವಸಂಶಯಂ ॥ ೭ ॥

---

೩. ಬ್ರಹ್ಮನು ಹೇಳಿದನು :—ಭಕ್ತಾನುಗ್ರಹಶಾಲಿಯಾದ ಶಿವನು ನನ್ನನ್ನು ಕೊಲ್ಲದೆ ಬಿಟ್ಟುಬಿಡಲು, ದೇವತೆಗಳು ಮೊದಲಾದವರು ಭಯರಹಿತರಾಗಿ ಸಂತೋಷವನ್ನು ಹೊಂದಿದರು.

೪. ಮತ್ತು ಅವರೆಲ್ಲರೂ ಕೈಗಳನ್ನು ಮುಗಿದುಕೊಂಡು ಶಿರವನ್ನು ಬಗ್ಗಿಸಿ ಶಿವನನ್ನು ಸ್ತುತಿಸಿದರು ಮತ್ತು ಜಯಶಬ್ದವನ್ನು ಮಾಡಿದರು.

೫. ಎಲೈ ನಾರದ, ಆ ಕಾಲದಲ್ಲಿ ನಾನೂ ಸಹ ಭಯವನ್ನುಬಿಟ್ಟು ಶಾಂತನಾಗಿ ಭಕ್ತಿಪೂರ್ವಕವಾಗಿ ಶಂಕರನನ್ನು ಅನೇಕ ಸ್ತೋತ್ರಗಳಿಂದ ಸ್ತೋತ್ರಮಾಡಿದೆನು.

೬. ಅನೇಕ ಲೀಲಾಮಯನಾದ ಶಿವನು ಸಂತುಷ್ಟನಾಗಿ ಎಲ್ಲರೂ ಕೇಳುವಂತೆ ನನ್ನನ್ನು ಕುರಿತು ಹೀಗೆ ಹೇಳಿದನು.

೭. ರುದ್ರನು ಹೇಳಿದನು :—ಎಲೈ ಬ್ರಹ್ಮನೆ, ಈಗ ನಿನ್ನಲ್ಲಿ ನಾನು ಪ್ರಸನ್ನನಾಗಿರುವೆನು. ಆದಕಾರಣ ನೀನು ಭಯವನ್ನು ತ್ಯಜಿಸು ಮತ್ತು ನಿನ್ನ ಶಿರಸ್ಸನ್ನೊಮ್ಮೆ ಕೈನಿಂದ ಮುಟ್ಟಿಕೋ. ಯಾವ ಸಂಶಯವೂ ಇಲ್ಲದೆ ಈ ನನ್ನ ಆಜ್ಞೆಯನ್ನು ನೆರವೇರಿಸು.

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಶ್ಶಂಭೋರ್ಬಹುಲೀಲಾಕೃತಃ ಪ್ರಭೋಃ ।
ಸ್ಪೃಶನ್ ಸ್ವಂ ಕಂ ತಥಾ ಭೂತ್ವಾ ಪ್ರಾಣಮಂ ವೃಷಭಧ್ವಜಂ ॥ ೮ ॥

ಯಾವದೇವಮಹಂ ಸ್ವಂ ಕಂ ಸ್ಪೃಶಾಮಿ ನಿಜಪಾಣಿನಾ ।
ತಾವತ್ತತ್ರ ಸ್ಥಿತಂ ಸದ್ಯಸ್ತದ್ರೂಪವೃಷವಾಹನಂ ॥ ೯ ॥

ತತೋ ಲಜ್ಜಾಪರೀತಾಂಗಃ ಸ್ಥಿತಶ್ಚಾಹಮಧೋಮುಖಃ ।
ಇಂದ್ರಾದ್ಯೈರಮರೈಸ್ಸರ್ವೈಸ್ಸುದೃಷ್ಟಸ್ಸರ್ವತಃ ಸ್ಥಿತೈಃ ॥ ೧೦ ॥

ಅಥಾಹಂ ಲಜ್ಜಯಾವಿಷ್ಟಃ ಪ್ರಣಿಪತ್ಯ ಮಹೇಶ್ವರಂ ।
ಪ್ರಾವೋಚಂ ಸಂಸ್ತುತಿಂ ಕೃತ್ವಾ ಕ್ಷಮ್ಯತಾಂ ಕ್ಷಮ್ಯತಾಮಿತಿ ॥ ೧೧ ॥

ಅಸ್ಯ ಪಾಪಸ್ಯ ಶುದ್ಧ್ಯರ್ಥಂ ಪ್ರಾಯಶ್ಚಿತ್ತಂ ವದ ಪ್ರಭೋ ।
ನಿಗ್ರಹಂ ಚ ತಥಾ ನ್ಯಾಯಂ ಯೇನ ಪಾಪಂ ಪ್ರಯಾತು ಮೇ ॥ ೧೨ ॥

---

೮. ಬ್ರಹ್ಮನು ಹೇಳಿದನು :—ಅನೇಕ ಮಾಯಾಲೀಲೆಗಳನ್ನು ಪ್ರದರ್ಶಿಸುವ ಆ ಶಂಕರನ ಈರೀತಿಯಾದ ಮಾತನ್ನು ಕೇಳಿ ನಾನು ನನ್ನ ಶಿರಸ್ಸನ್ನು ಕೈನಿಂದ ಮುಟ್ಟಿಕೊಂಡು ಅವನನ್ನು ನಮಸ್ಕರಿಸಿದೆನು.

೯. ನಾನು ಯಾವಾಗ ನನ್ನ ಶಿರವನ್ನು ಮುಟ್ಟಿಕೊಂಡೆನೋ ಆಗಲೇ ನನ್ನ ಶಿರಸ್ಸು ರುದ್ರನ ಶಿರಸ್ಸಿನ ರೂಪವುಳ್ಳದ್ದಾಯಿತು.

೧೦-೧೧. ಆಗ ಇಂದ್ರನೇ ಮೊದಲಾದ ದೇವತೆಗಳು ನನ್ನನ್ನು ಆಶ್ಚರ್ಯದಿಂದ ನೋಡಿದರು. ಅದರಿಂದ ನಾನು ತುಂಬಾ ಲಜ್ಜೆಗೊಂಡು ಮುಖವನ್ನು ಬಗ್ಗಿಸಿ ಕೊಂಡು ಶಂಕರನನ್ನು ನಮಸ್ಕರಿಸಿ ಸ್ತೋತ್ರಮಾಡಿ ಓ ಶಿವ, ನನ್ನನ್ನು ಕ್ಷಮಿಸು ಕ್ಷಮಿಸು ಎಂದು ಪ್ರಾರ್ಥಿಸಿದೆನು.

೧೨. ಬ್ರಹ್ಮನು ಹೇಳಿದನು :—ಓ ಸ್ವಾಮಿ, ಶಿವನೆ, ಈ ನನ್ನ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಹೇಳು. ಮತ್ತು ತಕ್ಕ ಶಿಕ್ಷೆಯನ್ನೂ ವಿಧಿಸು. ಅದರಿಂದ ನನ್ನ ಪಾಪವು ಹೋಗಬೇಕು ಎಂದು ಕೇಳಲು,

ಇತ್ಯುಕ್ತಸ್ತು ಮಯಾ ಶಂಭುರುವಾಚ ಪ್ರಣತಂ ಹಿ ತಂ ।
ಸುಪ್ರಸನ್ನತರೋ ಭೂತ್ವಾ ಸರ್ವೇಶೋ ಭಕ್ತವತ್ಸಲಃ　　॥ ೧೩ ॥

॥ ಶಂಭುರುವಾಚ ॥

ಅನೇನೈವ ಸ್ವರೂಪೇಣ ಮದಧಿಷ್ಠಿತಕೇನ ಹಿ ।
ತಪಃ ಕುರು ಪ್ರಸನ್ನಾತ್ಮಾ ಮದಾರಾಧನತತ್ಪರಃ　　॥ ೧೪ ॥

ಖ್ಯಾತಿಂ ಯಾಸ್ಯಸಿ ಸರ್ವತ್ರ ನಾಮ್ನಾ ರುದ್ರಶಿರಃ ಕ್ಷಿತೌ ।
ಸಾಧಕಃ ಸರ್ವಕೃತ್ಯಾನಾಂ ತೇಜೋಭಾಜಾಂ ದ್ವಿಜನ್ಮನಾಂ　　॥ ೧೫ ॥

ಮನುಷ್ಯಾಣಾಮಿದಂ ಕೃತ್ಯಂ ಯಸ್ಮಾದ್ವೀರ್ಯಂ ತ್ವಯಾಽಧುನಾ ।
ತಸ್ಮಾತ್ತ್ವಂ ಮಾನುಷೋ ಭೂತ್ವಾ ವಿಚರಿಷ್ಯಸಿ ಭೂತಲೇ　　॥ ೧೬ ॥

ಯಸ್ತ್ವಾಂ ಚಾನೇನ ರೂಪೇಣ ದೃಷ್ಟ್ವಾ ಕೌ ವಿಚರಿಷ್ಯತಿ ।
ಕಿಮೇತದ್ಬ್ರಹ್ಮಣೋ ಮೂರ್ಧ್ನಿ ವದನ್ನಿತಿ ಪುರಾಂತಕಃ　　॥ ೧೭ ॥

---

೧೩. ಭಕ್ತವತ್ಸಲನೂ ಸರ್ವೇಶ್ವರನೂ ಆದ ಶಿವನು ಪ್ರಸನ್ನನಾಗಿ ವಿನಯದಿಂದ ಬಗ್ಗಿನಿಂತಿರುವ ನನ್ನನ್ನು ಕುರಿತು,

೧೪. ರುದ್ರನು ಹೇಳಿದನು ;—ಎಲೈ ಬ್ರಹ್ಮನೇ, ಈ ರುದ್ರಶಿರಸ್ಸನ್ನು ಧರಿಸಿ ನೀನು ಪ್ರಸನ್ನತೆಯಿಂದ ನನ್ನನ್ನು ಆರಾಧಿಸುತ್ತಾ ತಪಸ್ಸನ್ನು ಮಾಡು.

೧೫. "ರುದ್ರಶಿರಾ" ಎಂಬ ಹೆಸರಿನಿಂದ ನೀನು ಭೂಲೋಕದಲ್ಲಿ ಪ್ರಸಿದ್ಧಿಯನ್ನು ಹೊಂದುವೆ. ನೀನು ಜನಗಳಿಗೆ ಎಲ್ಲಾ ಕಾರ್ಯಗಳನ್ನೂ ಸಾಧಿಸಿಕೊಡುವವನಾಗುವೆ.

೧೬. ಪರಸ್ತ್ರೀಯಲ್ಲಿನ ಅನುರಾಗದಿಂದ ವೀರ್ಯವನ್ನು ಸ್ರವಿಸುವುದು ಮನುಷ್ಯರ ಸ್ವಭಾವವು. ಅದನ್ನು ಈಗ ನೀನು ಮಾಡಿರುವೆ. ಆದುದರಿಂದ ನೀನು ಮನುಷ್ಯನಾಗಿ ಜನಿಸಿ ಭೂಮಿಯಲ್ಲಿ ಸಂಚರಿಸುವೆ.

೧೭-೧೮. ಭೂಮಿಯಲ್ಲಿ ಈ ರುದ್ರಶಿರಸ್ಸನ್ನು ಧರಿಸಿ ತಿರುಗುತ್ತಿರುವ ನಿನ್ನನ್ನು ನೋಡಿ ಇದೇನು ? ಬ್ರಹ್ಮನ ಶಿರಸ್ಸಿನಲ್ಲಿ ರುದ್ರನೇಕೆ ಇರುವನು ಎಂದು ವಿಮರ್ಶಿ

ತತಸ್ತೇ ಚೇಷ್ಟಿತಂ ಸರ್ವಂ ಕೌತುಕಾಚ್ಛ್ರೋಷ್ಯತೀತಿ ಯಃ ।
ಪರದಾರಕೃತಾತ್ತ್ಯಾಗಾನ್ಮುಕ್ತಿಂ ಸದ್ಯಸ್ಸ ಯಾಸ್ಯತಿ ॥ ೧೮ ॥

ಯಥಾ ಯಥಾ ಜನಶ್ಚೈತತ್ಕೃತ್ಯಂತೇ ಕೀರ್ತಯಿಷ್ಯತಿ ।
ತಥಾ ತಥಾ ವಿಶುದ್ಧಿಸ್ತೇ ಪಾಪಸ್ಯಾಸ್ಯ ಭವಿಷ್ಯತಿ ॥ ೧೯ ॥

ಏತದೇವ ಹಿ ತೇ ಬ್ರಹ್ಮನ್ ಪ್ರಾಯಶ್ಚಿತ್ತಂ ಮಯೇರಿತಂ ।
ಜನಹಾಸ್ಯಕರಂ ಲೋಕೇ ತವ ಗರ್ಹಾಕರಂ ಪರಂ ॥ ೨೦ ॥

ಏತಚ್ಚ ತವ ವೀರ್ಯಂ ಹಿ ಪತಿತಂ ವೇದಿಮಧ್ಯಗಂ ।
ಕಾಮಾರ್ತಸ್ಯ ಮಯಾ ದೃಷ್ಟಂ ನೈತದ್ಧಾರ್ಯಂ ಭವಿಷ್ಯತಿ ॥ ೨೧ ॥

ಚತುರ್ಬಿಂದುಮಿತಂ ರೇತಃ ಪತಿತಂ ಯತ್ಕ್ಷಿತೌ ತವ ।
ತನ್ಮಿತಾಸ್ತೋಯದಾ ವ್ಯೋಮ್ನಿ ಭವೇಯುಃ ಪ್ರಲಯಂಕರಾಃ ॥ ೨೨ ॥

---

ಸುತ್ತಾ ನೀನು ಈಗ ಮಾಡಿರುವ ಕೃತ್ಯವನ್ನು ಕೌತುಕದಿಂದ ಯಾವನು ಕೇಳು ವನೋ ಅವನು ಪರಸ್ತ್ರೀಸಂಗಮಾಡಿದ ಪಾಪದಿಂದ ಮುಕ್ತಿಯನ್ನು ಹೊಂದುವನು. ಆ ಪಾಪವಿಲ್ಲದವನಾಗುವನು.

೧೯. ಜನಗಳು ನಿನ್ನ ಈ ಪಾಪಕೃತ್ಯವನ್ನು ಎಷ್ಟೆಷ್ಟುಬಾರಿ ಕೇಳಿ ಕೀರ್ತನ ಮಾಡುವರೋ ನಿನ್ನ ಪಾಪವು ಅಷ್ಟಷ್ಟು ಹೆಚ್ಚಾಗಿ ನಾಶವಾಗುವುದು.

೨೦. ಎಲೈ ಬ್ರಹ್ಮನೆ, ಇದೇ ನಿನಗೆ ಪ್ರಾಯಶ್ಚಿತ್ತವು. ಇದರಿಂದ ಜನಗಳು ನಿನ್ನನ್ನು ಹಾಸ್ಯಮಾಡಿ ನಿಂದಿಸುವುದರಿಂದ ನಿನ್ನ ಪಾಪವು ನಾಶವಾಗುವುದು.

೨೧. ಕಾಮುಕನಾದ ನಿನ್ನಿಂದ ಸ್ರವಿಸಿ ಅಗ್ನಿವೇದಿಮಧ್ಯದಲ್ಲಿ ಬಿದ್ದಿರುವ ನಿನ್ನ ರೇತಸ್ಸನ್ನು ನಾನು ನೋಡಿರುವೆನು. ಆದಕಾರಣ ಇದನ್ನು ತೆಗೆಯುಲ ಸಾಧ್ಯವು.

೨೨. ಭೂಮಿಯಲ್ಲಿ ಬಿದ್ದಿರುವ ನಿನ್ನ ನಾಲ್ಕು ಬಿಂದುವಿನಷ್ಟು ರೇತಸ್ಸಿನಿಂದ "ಬಿಂದುಮಿತ" ಗಳೆಂಬ ಮೇಘಗಳು ಆಗುವುವು. ಅವು ಜಗತ್ತಿನ ಪ್ರಳಯವನ್ನು ಮಾಡಲು ಸಹಾಯವಾಗುವುವು ಎನ್ನಲು,

ಏತಸ್ಮಿನ್ನಂತರೇ ತತ್ರ ದೇವರ್ಷೀಣಾಂ ಪುರೋ ದ್ರುತಂ ।
ತದ್ರೇತಸಸ್ಸಮಭವಂಸ್ತನ್ಮಿತಾಶ್ಚ ಬಲಾಹಕಾಃ ॥ ೨೩ ॥

ಸಂವರ್ತಕಸ್ತಥಾವರ್ತಃ ಪುಷ್ಕರೋ ದ್ರೋಣ ಏವ ಚ ।
ಏತೇ ಚತುರ್ವಿಧಾಸ್ತಾತ ಮಹಾಮೇಘಾ ಲಯಂಕರಾಃ ॥ ೨೪ ॥

ಗರ್ಜಂತಶ್ಚಾಥ ಮುಂಚತಸ್ತೋಯಾನೀಷಚ್ಛಿವೇಚ್ಛಯಾ ।
ಘೇಲುರ್ವ್ಯೋಮಿ ಮುನಿಶ್ರೇಷ್ಠ ತೋಯದಾಸ್ತೇ ಕದಾರವಾಃ ॥ ೨೫ ॥

ತೈಸ್ತು ಸಂಛಾದಿತೇ ವ್ಯೋಮ್ನಿ ಸುಗರ್ಜದ್ಭಿಶ್ಚ ಶಂಕರಃ ।
ಪ್ರಶಾಸ್ತಾಕ್ಷಾಯಣೀ ದೇವೀ ಭೃಶಂ ಶಾಂತೋऽಭವದ್ದ್ರುತಂ ॥ ೨೬ ॥

ಅಥ ಚಾಹಂ ವೀತಭಯಶ್ಶಂಕರಸ್ಯಾಜ್ಞಯಾ ತದಾ ।
ಶೇಷಂ ವೈವಾಹಿಕಂ ಕರ್ಮ ಸಮಾಪ್ತಿಮನಯಂ ಮುನೇ ॥ ೨೭ ॥

---

೨೩. ಅದೇ ಸಮಯದಲ್ಲಿ ದೇವತೆಗಳೆದುರಿನಲ್ಲಿಯೇ ಆ ಬ್ರಹ್ಮರೇತಸ್ಸಿನಿಂದ ನಾಲ್ಕು ಮೇಘರಾಶಿಗಳು ಜನಿಸಿದುವು.

೨೪. ಶಿವೇಚ್ಛೆಯಿಂದ ಜನಿಸಿದ ಆ ಮೇಘಗಳು ಘೋರವಾಗಿ ಗರ್ಜಿಸುತ್ತಾ ನೀರನ್ನು ಸುರಿಸುತ್ತಾ ಆಕಾಶದಲ್ಲಿ ಸಂಚರಿಸಿದವು.

೨೫. ಎಲೈ ನಾರದ, ಆ ನಾಲ್ಕುಜಾತಿ ಭಯಂಕರಗಳಾದ ಪ್ರಳಯಮೇಘಗಳಿಗೆ ಸಂವರ್ತ, ಆವರ್ತ, ಪುಷ್ಕರ, ದ್ರೋಣಗಳೆಂದು ಹೆಸರು.

೨೬. ಆ ಮೇಘಗಳು ಘರ್ಜನೆಮಾಡುತ್ತಾ ಆಕಾಶವನ್ನು ವ್ಯಾಪಿಸಲು ಶಂಕರನು ಔತ್ಸುಕ್ಯದಿಂದ ಸತೀದೇವಿಯನ್ನು ನೋಡುತ್ತಾ ಸಂಪೂರ್ಣವಾಗಿ ಶಾಂತನಾದನು.

೨೭. ಬಳಿಕ ನಾನು ಯಾವ ಹೆದರಿಕೆಯೂ ಇಲ್ಲದೆ ಶಂಕರನ ಅಪ್ಪಣೆಯಂತೆ ಮಿಕ್ಕ ವಿವಾಹಕರ್ಮವನ್ನು ಮಾಡಿಸಿ ಮುಗಿಸಿದೆನು.

ಪಪಾತ ಪುಷ್ಪವೃಷ್ಟಿಶ್ಚ ಶಿವಾಶಿವಶಿರಸ್ಕಯೋಃ ।
ಸರ್ವತ್ರ ಚ ಮುನಿಶ್ರೇಷ್ಠ ಮುದಾ ದೇವಗಣೋಜ್ಝಿತಾ ॥ ೨೮ ॥

ವಾದ್ಯಮಾನೇಷು ವಾದ್ಯೇಷು ಗಾಯಮಾನೇಷು ತೇಷು ಚ ।
ಪಠತ್ಸು ವಿಪ್ರವರ್ಗೇಷು ವಾದಾನ್ಭಕ್ತ್ಯನ್ವಿತೇಷು ಚ ॥ ೨೯ ॥

ರಂಭಾದಿಷು ಪುರಂಧ್ರೀಷು ನೃತ್ಯಮಾನಾಸು ಸಾದರಂ ।
ಮಹೋತ್ಸವೋ ಮಹಾನಾಸೀದ್ದೇವಪತ್ನೀಷು ನಾರದ ॥ ೩೦ ॥

ಅಥ ಕರ್ಮವಿತಾನೇಶಃ ಪ್ರಸನ್ನಃ ಪರಮೇಶ್ವರಃ ।
ಪ್ರಾಹ ಮಾಂ ಪ್ರಾಂಜಲಿಂ ಪ್ರೀತ್ಯಾ ಲೌಕಿಕೀಂ ಗತಿಮಾಶ್ರಿತಃ ॥ ೩೧ ॥

॥ ಈಶ್ವರ ಉವಾಚ ॥

ಹೇ ಬ್ರಹನ್ಸುಕೃತಂ ಕರ್ಮ ಸರ್ವಂ ವೈವಾಹಿಕಂ ಚ ಯತ್ ।
ಪ್ರಸನ್ನೋಽಸ್ಮಿ ತ್ವಮಾಚಾರ್ಯೋ ದದ್ಯಾಂ ತೇ ದಕ್ಷಿಣಾಂ ಚ ಕಾಂ ॥

---

೨೮. ಆಗ ದೇವತೆಗಳು ಸಂತೋಷದಿಂದ ಶಿವ ಮತ್ತು ಸತೀದೇವಿಯರ ಶಿರಸ್ಸಿನಮೇಲೆ ಹೂಮಳೆಯನ್ನು ಸುರಿಸಿದರು.

೨೯-೩೦. ಆಗ ಅನೇಕ ಮಂಗಳವಾದ್ಯಗಳನ್ನು ದೇವತೆಗಳು ಬಾರಿಸಿದರು. ಗೀತಗಳನ್ನು ಹಾಡಿದರು. ಬ್ರಾಹ್ಮಣರು ಮಂಗಳಾಶೀರ್ವಾದಮಂತ್ರಗಳನ್ನು ಭಕ್ತಿಯಿಂದ ಹೇಳಿದರು. ರಂಭೆ ಮೊದಲಾದ ದೇವತಾಸುಂದರಿಯರು ನರ್ತನಮಾಡಿದರು. ಹೀಗೆ ಮಹಾವಿಜೃಂಭಣೆಯಿಂದ ಉತ್ಸವವು ನಡೆಯಿತು.

೩೧. ಬಳಿಕ ಲೌಕಿಕ ಮತ್ತು ವೈದಿಕಕರ್ಮಗಳಿಗೆ ಫಲದಾತೃವಾದ ಶಿವನು ಪ್ರಸನ್ನನಾಗಿ ಅಂಜಲಿಯನ್ನು ಧರಿಸಿ ನಿಂತಿರುವ ನನ್ನನ್ನು ಕುರಿತು ಲೋಕವ್ಯವಹಾರದಂತೆ ಹೀಗೆ ಹೇಳಿದನು.

೩೨. ಈಶ್ವರನು ಹೇಳಿದನು ;—ಎಲೈ ಬ್ರಹ್ಮನೇ, ನೀನು ವಿವಾಹಕರ್ಮವನ್ನು ಚನ್ನಾಗಿಮಾಡಿಸಿರುವೆ. ಇದರಿಂದ ನಾನು ತುಂಬಾ ಪ್ರಸನ್ನನಾಗಿರುವೆನು. ಆಚಾರ್ಯ (ಪುರೋಹಿತ) ನಾದ ನಿನಗೆ ಏನು ದಕ್ಷಿಣೆಯನ್ನು ಕೊಡಲಿ ಹೇಳು.

ಯಾಚಸ್ವ ತಾಂ ಸುರಜ್ಯೇಷ್ಠ ಯದ್ಯಪಿ ಸ್ಯಾತ್ಸುದುರ್ಲಭಾ ।
ಬ್ರೂಹಿ ಶೀಘ್ರಂ ಮಹಾಭಾಗ ನಾದೇಯಂ ವಿದ್ಯತೇ ಮಮ ॥ ೩೩ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ಸೋಽಹಂ ಶಂಕರಸ್ಯ ಕೃತಾಂಜಲಿಃ ।
ಮುನೇಽವೋಚಂ ವಿನೀತಾತ್ಮಾ ಪ್ರಣಮ್ಯೇಶಂ ಮುಹುರ್ಮುಹುಃ ॥ ೩೪ ॥

॥ ಬ್ರಹ್ಮೋವಾಚ ॥

ಯದಿ ಪ್ರಸನ್ನೋ ದೇವೇಶ ವರಯೋಗ್ಯೋಽಸ್ಮ್ಯಹಂ ಯದಿ ।
ತತ್ಕುರು ತ್ವಂ ಮಹೇಶಾನ ಸುಪ್ರೀತ್ಯಾ ಯದ್ವದಾಮ್ಯಹಂ ॥ ೩೫ ॥

ಅನೇನೈವ ತು ರೂಪೇಣ ವೇದ್ಯಾಮಸ್ಯಾಂ ಮಹೇಶ್ವರ ।
ತ್ವಯಾ ಸ್ಥೇಯಂ ಸದೈವಾತ್ರ ನೃಣಾಂ ಪಾಪವಿಶುದ್ಧಯೇ ॥ ೩೬ ॥

ಯೇನಾಸ್ಯ ಸಂನಿಧೌ ಕೃತ್ವಾ ಸ್ವಾಶ್ರಮಂ ಶಶಿಶೇಖರ ।
ತಪಃ ಕುರ್ಯಾಂ ವಿನಾಶಾಯ ಸ್ವಪಾಪಸ್ಯಾಸ್ಯ ಶಂಕರ ॥ ೩೭ ॥

---

೩೩. ಎಲೈ ದೇವಶ್ರೇಷ್ಠನಾದ ವಿಧಿಯೇ, ನೀನು ಕೇಳುವ ದಕ್ಷಿಣೆಯು ದುರ್ಲಭವಾದುದಾದರೂ ಬಾಧಕವಿಲ್ಲ. ನಾನು ಎಲ್ಲವನ್ನೂ ಕೊಡುವೆನು. ಜಾಗ್ರತೆ ಕೇಳು. ನನಗೆ ಕೊಡಲಸಾಧ್ಯವಾದುದು ಯಾವುದೂ ಇಲ್ಲ ಎನ್ನಲು,

೩೪. ಬ್ರಹ್ಮನು ಹೇಳಿದನು :—ಈರೀತಿಯಾದ ಶಂಕರನ ಮಾತನ್ನು ಕೇಳಿ ಆಗ ನಾನು ವಿನಯದಿಂದ ಶಿರವನ್ನು ಬಗ್ಗಿಸಿ ಪುನಃಪುನಃ ನಮಸ್ಕರಿಸಿ ಅಂಜಲಿಯನ್ನು ಧರಿಸಿ ಹೀಗೆ ಹೇಳಿದೆನು.

೩೫. ಬ್ರಹ್ಮನು ಹೇಳಿದನು !—ಓ ದೇವದೇವ, ನೀನು ನನ್ನಲ್ಲಿ ಪ್ರಸನ್ನನಾಗಿದ್ದರೆ ಮತ್ತು ನಾನು ವರಕ್ಕೆ ಯೋಗ್ಯನಾಗಿದ್ದರೆ ಮುಂದೆ ನಾನು ಹೇಳುವುದನ್ನು ಪ್ರೀತಿಯಿಂದ ನಡೆಯಿಸಿಕೊಡು.

೩೬. ಓ ಪರಮೇಶ್ವರ, ನೀನು ಈ ರೂಪದಿಂದಲೇ ಈ ವೇದಿಕೆಯಲ್ಲಿ ಸ್ಥಿರವಾಗಿ ನೆಲಸಿದ್ದು ಭಕ್ತರನ್ನನುಗ್ರಹಿಸಿ ಪಾಪಪರಿಶುದ್ಧರನ್ನಾಗಿ ಮಾಡಬೇಕು.

೩೭. ಇಲ್ಲಿ ನೆಲಸಿರುವ ನಿನ್ನ ಮೂರ್ತಿಯ ಸನ್ನಿಧಿಯಲ್ಲಿ ಆಶ್ರಮವನ್ನು ಕಟ್ಟಿಕೊಂಡಿದ್ದು ನನ್ನ ಪಾಪನಾಶಕ್ಕಾಗಿ ತಪಸ್ಸನ್ನಾಚರಿಸುವೆನು.

ಚೈತ್ರಶುಕ್ಲತ್ರಯೋದಶ್ಯಾಂ ನಕ್ಷತ್ರೇ ಭಗದೈವತೇ ।
ಸೂರ್ಯವಾರೇ ಚ ಯೋ ಭಕ್ತ್ಯಾ ವಿಕ್ಷೇತ ಭುವಿ ಮಾನವಃ ॥ ೩೮ ॥

ತದೈವ ತಸ್ಯ ಪಾಪಾನಿ ಪ್ರಯಾಂತು ಹರ ಸಂಕ್ಷಯಂ ।
ವರ್ಧತೇ ವಿಪುಲಂ ಪುಣ್ಯಂ ರೋಗಾ ನಶ್ಯಂತು ಸರ್ವಶಃ ॥ ೩೯ ॥

ಯಾ ನಾರೀ ದುರ್ಭಗಾ ವಂಧ್ಯಾ ಕಾಣಾ ರೂಪವಿವರ್ಜಿತಾ ।
ಸಾಪಿ ತ್ವದ್ದರ್ಶನಾದೇವ ನಿರ್ದೋಷಾ ಸಂಭವೇದ್ಧ್ರುವಂ ॥ ೪೦ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚೋ ಮೇ ಹಿ ಸ್ವಾತ್ಮಸರ್ವಸುಖಾವಹಂ ।
ತಥಾಸ್ತ್ವಿತಿ ಶಿವಃ ಪ್ರಾಹ ಸುಪ್ರಸನ್ನೇನ ಚೇತಸಾ ॥ ೪೧ ॥

॥ ಶಿವ ಉವಾಚ ॥

ಹಿತಾಯ ಸರ್ವಲೋಕಸ್ಯ ವೇದ್ಯಾಂ ತಸ್ಯಾಂ ವ್ಯವಸ್ಥಿತಃ ।
ಸ್ಥಾಸ್ಯಾಮಿ ಸಹಿತಃ ಪತ್ನ್ಯಾ ಸತ್ಯಾ ತ್ವದ್ವಚನಾದ್ವಿಧೇ ॥ ೪೨ ॥

---

೩೮-೩೯. ಚೈತ್ರ ಶುಕ್ಲ ತ್ರಯೋದಶೀ ಭಾನುವಾರ ಪೂರ್ವಫಲ್ಗುನೀ ನಕ್ಷತ್ರದಲ್ಲಿ ಯಾವ ಮಾನವನು ಇಲ್ಲಿ ನೆಲಸಿರುವ ನಿನ್ನನ್ನು ನೋಡುವನೋ ಅವನ ಪಾಪಗಳು ನಷ್ಟವಾಗಲಿ ಅವನಿಗೆ ಹೆಚ್ಚಾಗಿ ಪುಣ್ಯವು ಲಭಿಸಲಿ. ರೋಗಗಳೆಲ್ಲವೂ ನಷ್ಟವಾಗಲಿ.

೪೦. ಮತ್ತು ವ್ಯಭಿಚಾರಿಣಿಯೂ ಬಂಜೆಯೂ ಕುರುಡಳೂ ಕುರೂಪಿಯೂ ಆದಂತಹ ಸ್ತ್ರೀಯು ನಿನ್ನ ದರ್ಶನಮಾಡಿದಮಾತ್ರದಿಂದ ಪವಿತ್ರಳಾಗಬೇಕು. ನಿನ್ನನ್ನು ಧ್ಯಾನಮಾಡಿದರೆ ಪರಿಶುದ್ಧಳಾಗಬೇಕು ಎಂದು ಕೇಳಿದೆನು.

೪೧-೪೨. ಬ್ರಹ್ಮನು ಹೇಳಿದನು :—ಶಿವನು ಆರೀತಿ ನನಗೂ ಮಿಕ್ಕ ಎಲ್ಲಾ ಜನಗಳಿಗೂ ಹಿತವಾದಂತಹ ನನ್ನ ಮಾತುಗಳನ್ನು ಕೇಳಿ ಪ್ರಸನ್ನತೆಯಿಂದ ಹಾಗೆಯೇ ಆಗಲಿ ಎಂದು ಅಂಗೀಕರಿಸಿ ಎಲೈ ವಿಧಿ, ನಿನ್ನ ಮಾತಿನಂತೆ ಈ ವೇದಿಕೆಯಲ್ಲಿ ಸಕಲ ಜನಗಳಿಗೆ ಹಿತವನ್ನು ಮಾಡಲೋಸುಗ ನನ್ನ ಪತ್ನಿಯಾದ ಈ ಸತಿಯೊಡನೆ ನೆಲಸಿರುವೆನು ಎಂದು ಹೇಳಿದನು.

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಭಗವಾಂಸ್ತತ್ರ ಸಭಾರ್ಯೋ ವೃಷಭಧ್ವಜಃ ।
ಉವಾಚ ವೇದಿಮಧ್ಯಸ್ಥೋ ಮೂರ್ತಿಂ ಕೃತ್ವಾಂಶರೂಪಿಣೀಂ ॥ ೪೩ ॥

ತತೋ ದಕ್ಷಂ ಸಮಾಮಂತ್ರ್ಯ ಶಂಕರಃ ಪರಮೇಶ್ವರಃ ।
ಪತ್ನ್ಯಾ ಸತ್ಯಾ ಗಂತುಮನಾ ಅಭೂತ್ಸ್ವಜನವತ್ಸಲಃ ॥ ೪೪ ॥

ಏತಸ್ಮಿನ್ನಂತರೇ ದಕ್ಷೋ ವಿನಯಾವನತಸ್ಸುಧೀಃ ।
ಸಾಂಜಲಿರ್ನತಕಃ ಪ್ರೀತ್ಯಾ ತುಷ್ಟಾವ ವೃಷಭಧ್ವಜಂ ॥ ೪೫ ॥

ವಿಷ್ಣ್ವಾದಯಸ್ಸುರಾಸ್ಸರ್ವೇ ಮುನಯಶ್ಚ ಗಣಾಸ್ತದಾ ।
ನತ್ವಾ ಸಂಸ್ತೂಯ ವಿವಿಧಂ ಚಕ್ರುರ್ಜಯರವಂ ಮುದಾ ॥ ೪೬ ॥

ಆರೋಪ್ಯ ವೃಷಭೇ ಶಂಭುಸ್ಸತೀಂ ದಕ್ಷಾಜ್ಞಯಾ ಮುದಾ ।
ಜಗಾಮ ಹಿಮವತ್ಪ್ರಸ್ಥಂ ವೃಷಭಸ್ಥಸ್ಸ್ವಯಂ ಪ್ರಭುಃ ॥ ೪೭ ॥

---

೪೩-೪೪. ಬ್ರಹ್ಮನು ಹೇಳಿದನು :—ಹೀಗೆ ಹೇಳಿ ಭಗವಂತನಾದ ಶಿವನು ವೇದಿಮಧ್ಯದಲ್ಲಿ ಪತ್ನಿಯೊಡನೆ ನಿಂತು ಅಲ್ಲಿ ತಮ್ಮಿಬ್ಬರ ಸ್ವರೂಪವಾದ ಮೂರ್ತಿಯನ್ನು ಕಲ್ಪಿಸಿದನು. ಬಳಿಕ ಸ್ವಜನವತ್ಸಲನಾದ ಶಂಕರನು ದಕ್ಷಬ್ರಹ್ಮನ ಅನುಮತಿಯನ್ನು ಪಡೆದು ಪತ್ನಿಯೊಡನೆ ತನ್ನ ಸ್ಥಾನಕ್ಕೆ ತೆರಳಲುದ್ಯುಕ್ತನಾದನು.

೪೫. ಆ ಸಮಯದಲ್ಲಿ ಬುದ್ಧಿಶಾಲಿಯಾದ ದಕ್ಷನು ವಿನಯದಿಂದ ಬಗ್ಗಿ ನಮಸ್ಕರಿಸಿ ಕೈಗಳನ್ನು ಮುಗಿದುಕೊಂಡು ಭಕ್ತಿಯಿಂದ ಶಿವನನ್ನು ಸ್ತುತಿಸಿದನು.

೪೬. ಅಲ್ಲದೇ ವಿಷ್ಣು ಮೊದಲಾದ ದೇವತೆಗಳು, ಮುನಿಗಳು, ಗಣಗಳು, ಇವರೆಲ್ಲರೂ ಪರಮೇಶ್ವರನನ್ನು ನಮಸ್ಕರಿಸಿ ಭಕ್ತಿಯಿಂದ ಸ್ತೋತ್ರಮಾಡಿ ಜಯಶಬ್ದವನ್ನು ಮಾಡಿದರು.

೪೭. ಆಮೇಲೆ ಶಿವನು ದಕ್ಷನ ಅನುಮತಿಯನ್ನು ಪಡೆದು ಸತೀದೇವಿಯನ್ನು ನಂದಿಯಮೇಲೆ ಕೂರಿಸಿ ತಾನೂ ಕುಳಿತು ಹಿಮಾಲಯದ ತಪ್ಪಲಲ್ಲಿರುವ ತನ್ನ ಸ್ಥಾನಕ್ಕೆ ತೆರಳಿದನು.

**ಅಥ ಸಾ ಶಂಕರಾಭ್ಯಾಶೇ ಸುದತೀ ಚಾರುಹಾಸಿನೀ ।**
**ವಿರೇಜೇ ವೃಷಭಸ್ಥಾ ವೈ ಚಂದ್ರಾಂತೇ ಕಾಲಿಕಾ ಯಥಾ ॥ ೪೮ ॥**

**ವಿಷ್ಣ್ವಾದಯಃ ಸುರಾಸ್ಸರ್ವೇ ಮರೀಚ್ಯಾದ್ಯಾಸ್ತಥರ್ಷಯಃ ।**
**ದಕ್ಷೋಽಪಿ ಮೋಹಿತಶ್ಚಾಸೀತ್ತಥಾನ್ಯೇ ನಿಶ್ಚಲಾ ಜನಾಃ ॥ ೪೯ ॥**

**ಕೇಚಿದ್ವಾದ್ಯಾನ್ವಾದಯಂತೋ ಗಾಯಂತಸ್ಸುಸ್ವರಂ ಪರೇ ।**
**ಶಿವಂ ಶಿವಯಶಶ್ಶುದ್ಧಮನುಜಗ್ಮುಃ ಶಿವಂ ಮುದಾ ॥ ೫೦ ॥**

**ಮಧ್ಯಮಾರ್ಗಾದ್ವಿಸೃಷ್ಟೋ ಹಿ ದಕ್ಷಃ ಪ್ರೀತ್ಯಾಥ ಶಂಭುನಾ ।**
**ಸ್ವಧಾಮ ಪ್ರಾಪ ಸಗಣಃ ಶಂಭುಃ ಪ್ರೇಮಸಮಾಕುಲಃ ॥ ೫೧ ॥**

**ವಿಸೃಷ್ಟಾ ಅಪಿ ವಿಷ್ಣ್ವಾದ್ಯಾಶ್ಶಂಭುನಾ ಪುನರೇವ ತೇ ।**
**ಅನುಜಗ್ಮುಶ್ಶಿವಂ ಭಕ್ತ್ಯಾ ಸುರಾಃ ಪರಮಯಾ ಮುದಾ ॥ ೫೨ ॥**

---

೪೮. ಆಗ ನಂದಿಯಮೇಲೆ ಶಂಕರನ ಬಳಿಯಲ್ಲಿ ಕುಳಿತಿದ್ದು ಮಂದಹಾಸವನ್ನು ಬೀರುತ್ತಲಿರುವ ಆ ಸತೀದೇವಿಯು ಚಂದ್ರನಲ್ಲಿರುವ ಕಳಂಕಕಲೆಯಂತೆ ಶೋಭಿಸುತ್ತಲಿದ್ದಳು.

೪೯. ವಿಷ್ಣು ಮೊದಲಾದ ದೇವತೆಗಳು, ಮರೀಚಿ ಮೊದಲಾದ ಮುನಿಗಳು, ದಕ್ಷ ಇವರೆಲ್ಲರೂ, ಇತರರೂ ತುಂಬಾ ಸಂತೋಷಗೊಂಡರು.

೫೦. ಕೆಲವರು ವಾದ್ಯಗಳನ್ನು ಬಾರಿಸುತ್ತಲೂ ಕೆಲವರು ಶಿವನ ನಿರ್ಮಲವಾದ ಯಶಸ್ಸನ್ನು ಗಾನಮಾಡುತ್ತಲೂ ಆ ಶಿವನನ್ನು ಹಿಂಬಾಲಿಸಿ ನಡೆದರು.

೫೧. ದಕ್ಷನು ಶಿವನನ್ನು ಮಧ್ಯಮಾರ್ಗದವರೆಗೆ ಹಿಂಬಾಲಿಸಿ ಹೋಗಿ ಬಳಿಕ ಶಿವನಿಂದ ಪ್ರೀತಿಪೂರ್ವಕವಾಗಿ ಬೀಳ್ಕೊಂಡು ತನ್ನ ಪರಿವಾರದೊಡನೆ ಮನೆಗೆ ಬಂದನು. ಅತ್ತಲಾಗಿ ಶಿವನು ಗಣಗಳೊಂದಿಗೆ ತನ್ನ ಮನೆಗೆ ತೆರಳಿದನು.

೫೨. ನಿಮ್ಮನಿಮ್ಮ ಸ್ಥಾನಗಳಿಗೆ ಹೋಗಬಹುದೆಂದು ಶಿವನು ಅನುಮತಿಯಿತ್ತನು. ವಿಷ್ಣುವೇ ಮೊದಲಾದ ದೇವತೆಗಳು ಭಕ್ತಿಪರವಶತೆಯಿಂದ ಆ ಶಿವನನ್ನು ಮತ್ತೆ ಹಿಂಬಾಲಿಸಿ ಹೋದರು.

ತೈಸ್ಸರ್ವೈಸ್ಸಗಣೈಶ್ಶಂಭುಸ್ಸತ್ಯಾ ಚ ಸ್ವಸ್ತ್ರಿಯಾ ಯುತಃ ।
ಪ್ರಾಪ ಸ್ವಂ ಧಾಮ ಸಂಹೃಷ್ಟೋ ಹಿಮವದ್ಗಿರಿಶೋಭಿತಂ　|| ೫೩ ||

ತತ್ರ ಗತ್ವಾಖಿಲಾನ್ದೇವಾನ್ಮುನೀನಪಿ ಪರಾಂಸ್ತಥಾ ।
ಮುದಾ ವಿಸರ್ಜಯಾಮಾಸ ಬಹು ಸನ್ಮಾನ್ಯ ಸಾದರಂ　|| ೫೪ ||

ಶಂಭುಮಾಭಾಷ್ಯ ತೇ ಸರ್ವೇ ವಿಷ್ಣ್ವಾದ್ಯಾ ಮುದಿತಾನನಾಃ ।
ಸ್ವಂ ಸ್ವಂ ಧಾಮ ಯಯುರ್ನತ್ವಾ ಸ್ತುತ್ವಾ ಚ ಮುನಯಸ್ಸುರಾಃ　|| ೫೫ ||

ಶಿವೋಽಪಿ ಮುದಿತೋಽತ್ಯರ್ಥಂ ಸ್ವಪತ್ನ್ಯಾ ದಕ್ಷಕನ್ಯಯಾ ।
ಹಿಮವತ್ಪ್ರಸ್ಥಸಂಸ್ಥೋ ಹಿ ವಿಜಹಾರ ಭವಾನುಗಃ　|| ೫೬ ||

ತತಸ್ಸ ಶಂಕರಸ್ಸತ್ಯಾ ಸಗಣಸ್ಸ್ವಾತಿಕೈನ್ಮುನೇ ।
ಪ್ರಾಪ ಸ್ವಂ ಧಾಮ ಸಂಹೃಷ್ಟಃ ಕೈಲಾಸಂ ಪರ್ವತೋತ್ತಮಂ　|| ೫೭ ||

ಏತದ್ವಸ್ಸರ್ವಮಾಖ್ಯಾತಂ ಯಥಾ ತಸ್ಯ ಪುರಾಽಭವತ್ ।
ವಿವಾಹೋ ವೃಷಯಾನಸ್ಯ ಮನುಸ್ವಾಯಂಭುವಾಂತರೇ　|| ೫೮ ||

---

೫೩-೫೪. ಆ ಎಲ್ಲಾ ದೇವತೆಗಳೊಡನೆಯೂ ತನ್ನ ಪತ್ನಿಯಾದ ಸತೀದೇವಿಯೊಡನೆಯೂ ಹಿಮಾಲಯ ತಪ್ಪಲಲ್ಲಿರುವ ತನ್ನ ಸ್ಥಾನಕ್ಕೆ ಸಂತೋಷದಿಂದ ಹೋಗಿ ಶಿವನು ಎಲ್ಲಾ ದೇವತೆಗಳಿಗೂ ಮುನಿಗಳಿಗೂ ತುಂಬಾ ಸನ್ಮಾನವನ್ನು ಮಾಡಿ ಆದರದಿಂದ ಅವರನ್ನು ಬೀಳ್ಕೊಟ್ಟನು.

೫೫. ವಿಷ್ಣು ಮೊದಲಾದ ದೇವತೆಗಳೂ ಮುನಿಗಳೂ ಸಹ ಶಂಕರನನ್ನು ಭಕ್ತಿಯಿಂದ ನಮಸ್ಕರಿಸಿ, ಸ್ತುತಿಸಿ ಶಂಕರನ ಅಪ್ಪಣೆಯನ್ನು ಪಡೆದು ಸಂತೋಷದಿಂದ ತಮ್ಮತಮ್ಮ ಮನೆಗಳಿಗೆ ತೆರಳಿದರು.

೫೬. ಶಿವನೂ ಸಹ ಹಿಮಾಲಯದ ತಪ್ಪಲುಗಳಲ್ಲಿ ತನ್ನ ಹೆಂಡತಿಯಾದ ಸತಿಯೊಡನೆ ಕಾಮಸುಖವನ್ನನುಭವಿಸುತ್ತಾ ಸಂತೋಷದಿಂದ ವಿಹರಿಸಿದನು.

೫೭. ಎಲೈ ನಾರದ, ಬಳಿಕ ಆ ಶಿವನು ಸತೀದೇವಿ ಮತ್ತು ಗಣಗಳೊಡನೆ ತನ್ನ ಪೂರ್ವಸ್ಥಾನವಾದ ಕೈಲಾಸಪರ್ವತಕ್ಕೆ ಸಂತೋಷದಿಂದ ತೆರಳಿದನು.

೫೮. ಹೀಗೆ ಸ್ವಾಯಂಭುವಮನ್ವಂತರದಲ್ಲಿ ನಡೆದಿರುವ ಶಿವಸತೀದೇವಿಯರ ವಿವಾಹವೃತ್ತಾಂತವನ್ನು ಸಂಪೂರ್ಣವಾಗಿ ನಿನಗೆ ಹೇಳಿರುವೆನು.

ವಿವಾಹಸಮಯೇ ಯಜ್ಞೇ ಪ್ರಾರಂಭೇ ವಾ ಶೃಣೋತಿ ಯಃ ।
ಏತದಾಖ್ಯಾನಮವ್ಯಗ್ರಸ್ಸಂಪೂಜ್ಯ ವೃಷಭಧ್ವಜಂ ॥ ೫೯ ॥

ತಸ್ಯಾಽವಿಘ್ನಂ ಭವೇತ್ಸರ್ವಂ ಕರ್ಮ ವೈವಾಹಿಕಂ ಚ ಯತ್ ।
ಶುಭಾಖ್ಯಮಪರಂ ಕರ್ಮ ನಿರ್ವಿಘ್ನಂ ಸರ್ವದಾ ಭವೇತ್ ॥ ೬೦ ॥

ಕನ್ಯಾ ಚ ಸುಖಸೌಭಾಗ್ಯಶೀಲಾಚಾರಗುಣಾನ್ವಿತಾ ।
ಸಾಧ್ವೀ ಸ್ಯಾತ್ಪುತ್ರಿಣೀ ಪ್ರೀತ್ಯಾ ಶ್ರುತ್ವಾಖ್ಯಾನಮಿದಂ ಶುಭಂ ॥ ೬೧ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ದ್ವಿತೀಯೇ ಸತೀಖಂಡೇ ಸತೀವಿವಾಹವರ್ಣನಂನಾಮ
ವಿಂಶೋಽಧ್ಯಾಯಃ



೫೯-೬೦. ಈ ಕಥೆಯನ್ನು ಮದುವೆಯ ಮತ್ತು ಯಜ್ಞದ ಸಮಯದಲ್ಲಿ ಶಿವನನ್ನು ಪೂಜಿಸಿ ಶ್ರದ್ಧೆಯಿಂದ ಕೇಳಿದರೆ ಆ ಮದುವೆಯೂ ಯಜ್ಞವೂ ನಿರ್ವಿಘ್ನವಾಗಿ ನೆರವೇರುವುದು ಮತ್ತು ಮಂಗಳವುಂಟಾಗುವುದು.

೬೧. ಕನ್ಯೆಯು ಈ ಕಥೆಯನ್ನು ಕೇಳಿದರೆ ಸುಖ, ಸೌಭಾಗ್ಯ ಶೀಲ, ಆಚಾರ ಮತ್ತು ಗುಣ ಇವುಗಳುಳ್ಳವಳಾಗುವಳಲ್ಲದೆ ಉತ್ತಮ ಪತಿವ್ರತೆಯಾಗಿದ್ದು ಸತ್ಪುತ್ರರನ್ನು ಪಡೆಯುವಳು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಇಪ್ಪತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಏಕವಿಂಶೋಽಧ್ಯಾಯಃ

---

॥ ನಾರದ ಉವಾಚ ॥

**ಸಮೀಚೀನಂ ವಚಸ್ತಾತ ಸರ್ವಜ್ಞಸ್ಯ ತವಾನಘ ।**
**ಮಹಾದ್ಭುತಂ ಶ್ರುತಂ ನೋ ವೈ ಚರಿತಂ ಶಿವಯೋಶ್ಶುಭಂ ॥ ೧ ॥**

**ವಿವಾಹಶ್ಚ ಶ್ರುತಸ್ಸಮ್ಯಕ್ಸರ್ವಮೋಹಾಪಹಾರಕಃ ।**
**ಪರಮಜ್ಞಾನಸಂಪನ್ನೋ ಮಂಗಲಾಲಯ ಉತ್ತಮಃ ॥ ೨ ॥**

---

## ಇಪ್ಪತ್ತೊಂದನೆಯ ಅಧ್ಯಾಯವು.

೧. ನಾರದನು ಕೇಳಿದನು :—ಎಲೈ ತಂದೆಯೇ, ಸರ್ವಜ್ಞನಾದ ನಿನ್ನ ಮಾತು ತುಂಬಾ ಶ್ರೇಷ್ಠವಾದುದು. ಪುಣ್ಯವಂತನಾದ ನಿನ್ನಿಂದ ಅತ್ಯದ್ಭುತವಾದ ಶಿವ ಸತೀದೇವಿಯರ ಚರಿತ್ರೆಯನ್ನು ನಾನು ಕೇಳಿದೆನು.

೨. ಮತ್ತು ಉತ್ತಮಜ್ಞಾನವನ್ನುಂಟುಮಾಡಿ ತನ್ಮೂಲಕವಾಗಿ ಅಜ್ಞಾನ ವನ್ನು ತೊಲಗಿಸಿ ಮುಕ್ತಿಯನ್ನು ದೊರಕಿಸಿಕೊಡುವಂತಹ ಶಿವಸತೀದೇವಿಯರ ವಿವಾಹವೃತ್ತಾಂತವನ್ನು ನೀನು ನನಗೆ ಹೇಳಿರುವೆ.

ಭೂಯ ಏವ ವಿವಿತ್ಸಾ ಮೇ ಚರಿತಂ ಶಿವಯೋಶ್ಶುಭಂ ।
ತದ್ವರ್ಣಯ ಮಹಾಪ್ರಾಜ್ಞ ಕೃಪಾಂ ಕೃತ್ವಾಽತುಲಾಮರಂ ॥ ೩ ॥

॥ ಬ್ರಹ್ಮೋವಾಚ ॥

ಸಮ್ಯಕ್ಕಾರುಣಿಕಸ್ಯೈವ ಮುನೇ ತೇ ವಿಚಿಕಿತ್ಸಿತಂ ।
ಯದಹಂ ನೋದಿತಸ್ಸೌಮ್ಯ ಶಿವಲೀಲಾನುವರ್ಣನೇ ॥ ೪ ॥

ವಿವಾಹ್ಯ ದಕ್ಷಜಾಂ ದೇವೀಂ ಸತೀಂ ತ್ರೈಲೋಕ್ಯಮಾತರಂ ।
ಗತ್ವಾ ಸ್ವಧಾಮ ಸುಪ್ರೀತ್ಯಾ ಯದಕಾರ್ಷೀನ್ನಿಬೋಧ ಮೇ ॥ ೫ ॥

ತತೋ ಹರಸ್ಸತ್ವಗುಣಸ್ಸ್ವಸ್ಥಾನಂ ಪ್ರಾಪ್ಯ ಮೋದನಂ ।
ದೇವರ್ಷೇ ತತ್ರ ವೃಷಭಾದವಾತರದತಿಪ್ರಿಯಾತ್ ॥ ೬ ॥

ಯಥಾಯೋಗ್ಯಂ ನಿಜಸ್ಥಾನಂ ಪ್ರವಿಶ್ಯ ಸ ಸತೀಸಖಃ ।
ಮುಮುದೇಽತೀವ ದೇವರ್ಷೇ ಭವಾಚಾರಕರಶ್ಶಿವಃ ॥ ೭ ॥

---

೩. ನನಗೆ ಇನ್ನೂ ಆ ಶಿವಪಾರ್ವತಿಯರ ಶುಭವಾದ ಚರಿತ್ರೆಯನ್ನು ಕೇಳಬೇಕೆಂದು ಇಚ್ಛೆಯು ಇರುವುದು. ಆದುದರಿಂದ ಸರ್ವಜ್ಞನಾದ ಓ ವಿಧಿಯೇ, ನನ್ನಲ್ಲಿ ಅನುಗ್ರಹವನ್ನಿಟ್ಟು ಮುಂದಿನ ಕಥೆಯನ್ನು ಹೇಳು ಎಂದು ಕೇಳಿದನು.

೪. ಬ್ರಹ್ಮನು ಹೇಳಿದನು :—ಸೌಮ್ಯನಾದ ಎಲೈ ನಾರದಮುನಿ, ನೀನು ಶಿವನಲ್ಲಿ ತುಂಬಾ ಭಕ್ತಿಯುಳ್ಳವನು. ಆದಕಾರಣ ನೀನು ಶಿವಲೀಲೆಗಳನ್ನು ಹೇಳುವಂತೆ ನನ್ನನ್ನು ಪ್ರೇರಿಸುತ್ತಲಿರುವೆ. ಇಂತಹ ನೀನು ಧನ್ಯನು.

೫. ಮೂರು ಲೋಕಗಳಿಗೆ ಮಾತೆಯಾದ ಸತೀದೇವಿಯನ್ನು ಮದುವೆಯಾಗಿ ಶಂಕರನು ತನ್ನ ಸ್ಥಾನಕ್ಕೆ ತೆರಳಿದ ಮೇಲೆ ಮುಂದೆ ಏನು ಮಾಡಿದನೆಂಬುದನ್ನು ಈಗ ನಿನಗೆ ಹೇಳುವೆನು ಭಕ್ತಿಯಿಂದ ಕೇಳು.

೬. ಹಿಂದೆ ಹೇಳಿದಂತೆ ಶಿವನು ಗಣಗಳೊಡನೆ ಹೊರಟು ಸಂತೋಷಪ್ರದವಾದ ತನ್ನ ಸ್ಥಾನವನ್ನು ಸೇರಿ ಅಲ್ಲಿ ತನ್ನ ಪ್ರಿಯವಾಹನವಾದ ನಂದಿಕೇಶ್ವರನಿಂದ ಕೆಳಗಿಳಿದು,

೭. ಸತೀದೇವಿಯೊಡನೆ ತನ್ನ ಮನೆಗೆ ಪ್ರವೇಶಿಸಿದನು. ಅಲ್ಲಿ ವಾಸಿಸುತ್ತಾ ಸತಿಯಿಂದ ಆಯಾಯ ಸಂಸಾರಸುಖಗಳನ್ನನುಭವಿಸುತ್ತಾ ತುಂಬಾ ಸಂತೋಷದಿಂದ ಇರತೊಡಗಿದನು.

ತತೋ ವಿರೂಪಾಕ್ಷ ಇಮಾಂ ಪ್ರಾಪ್ಯ ದಾಕ್ಷಾಯಣೀಂ ಗಣಾನ್ ।
ಸ್ವೀಯಾನ್ನಿರ್ಯಾಪಯಾಮಾಸ ನಂದ್ಯಾದೀನ್ಗಿರಿಕಂದರಾತ್ ॥ ೮ ॥

ಉವಾಚ ಚೈತಾಂಸ್ತಾನ್ಸರ್ವಾನ್ನಂದ್ಯಾದೀನತಿಸೂನೃತಂ ।
ಲೌಕಿಕೀಂ ರೀತಿಮಾಶ್ರಿತ್ಯ ಕರುಣಾಸಾಗರಃ ಪ್ರಭುಃ ॥ ೯ ॥

॥ ಮಹೇಶ ಉವಾಚ ॥

ಯದಾಹಂ ಚ ಸ್ಮರಾಮ್ಯತ್ರ ಸ್ಮರಣಾದರಮಾನಸಾಃ ।
ಸಮಾಗಮಿಷ್ಯಥ ತದಾ ಮತ್ಪಾರ್ಶ್ವಂ ಮೇ ಗಣಾ ದ್ರುತಂ ॥ ೧೦ ॥

ಇತ್ಯುಕ್ತೇ ವಾಮದೇವೇನ ನಂದ್ಯಾದ್ಯಾಸ್ಸ್ವಗಣಾಶ್ಚ ತೇ ।
ಮಹಾವೇಗಾ ಮಹಾವೀರಾ ನಾನಾಸ್ಥಾನೇಷು ಸಂಯಯುಃ ॥ ೧೧ ॥

ಈಶ್ವರೋಽಪಿ ತಯಾ ಸಾರ್ಧಂ ತೇಷು ಯಾತೇಷು ವಿಭ್ರಮಾ ।
ದಾಕ್ಷಾಯಣ್ಯಾ ಸಮಂ ರೇಮೇ ರಹಸ್ಯೇ ಮುದಿತೋ ಭೃಶಂ ॥ ೧೨ ॥

ಕದಾಚಿದ್ವನ್ಯಪುಷ್ಪಾಣಿ ಸಮಾಹೃತ್ಯ ಮನೋಹರಾಂ ।
ಮಾಲಾಂ ವಿಧಾಯ ಸತ್ಯಾಸ್ತು ಹಾರಸ್ಥಾನೇ ಸ ಯೋಜಯತ್ ॥ ೧೩ ॥

---

೮. ಬಳಿಕ ಆ ಈಶ್ವರನು ಸತೀದೇವಿಯನ್ನು ಸಹಚಾರಿಣಿಯನ್ನಾಗಿ ಪಡೆದುದರಿಂದ ತನ್ನ ಗಣಗಳಾದ ನಂದಿಕೇಶ್ವರ ಮುಂತಾದವರನ್ನು ಅಲ್ಲಿಂದ ಬೇರೆ ಗಿರಿ ಮತ್ತು ಗಿರಿಗುಹೆಗಳಿಗೆ ಕಳುಹಿಸಿದನು,

೯-೧೧. ನಂದಿಕೇಶ್ವರ ಮುಂತಾದ ತನ್ನ ಗಣಗಳನ್ನು ಕಳುಹಿಸುವಾಗ ಕರುಣಾಮಯನಾದ ಆ ಶಿವನು ಸಾದರವಾಗಿ ಲೋಕರೀತಿಯಂತೆ ಹೀಗೆ ಹೇಳಿದನು. ಎಲೈ ಗಣಗಳೇ, ನಾನು ಯಾವಾಗ ಸ್ಮರಿಸುವೆನೋ ಆ ಕೂಡಲೇ ನನ್ನ ಬಳಿಗೆ ಬನ್ನಿರಿ ಎನ್ನಲು, ಅಪ್ಪಣೆಯೆಂದು ಹೇಳಿ ನಂದಿ ಮೊದಲಾದ ವೇಗಶಾಲಿಗಳೂ, ವೀರರೂ ಆದ ಶಿವಗಣಗಳು ಬೇರೆಬೇರೆಯಾದ ಅನೇಕ ಸ್ಥಳಗಳಿಗೆ ಆ ಕೂಡಲೇ ಹೊರಟು ಹೋದರು.

೧೨. ಆ ಗಣಗಳೆಲ್ಲವೂ ಹೊರಟುಹೋಗಲು, ಈಶ್ವರನು ಸತೀದೇವಿಯೊಡನೆ ಏಕಾಂತದಲ್ಲಿ ಕಾಮಸುಖಾಸಕ್ತನಾಗಿ ಯಥೇಚ್ಛವಾಗಿ ರಮಿಸಿದನು.

೧೩. ಒಮ್ಮೆ ಆ ಶಿವನು ವನದಲ್ಲಿ ಸಿಗುವ ಮನೋಹರ ಪುಷ್ಪಗಳನ್ನು ತಂದು ಸುಂದರವಾದ ಪುಷ್ಪಹಾರವನ್ನು ರಚಿಸಿ ಸತೀದೇವಿಯ ಕೊರಳಲ್ಲಿ ಹಾಕಿ ಅಲಂಕರಿಸುವನು.

ಕದಾಚಿದ್ದರ್ಪಣೇ ಚೈವ ವೀಕ್ಷಂತೀಮಾತ್ಮನಸ್ಸತೀಂ ।
ಅನುಗಮ್ಯ ಹರೋ ವಕ್ತ್ರಂ ಸ್ವೀಯಮಪ್ಯವಲೋಕಯತ್ ॥ ೧೪ ॥

ಕದಾಚಿತ್ಕುಂಡಲಂ ತಸ್ಯಾ ಉಲ್ಲಾಸ್ಯೋಲ್ಲಾಸ್ಯ ಸಂಗತಃ ।
ಬಧ್ನಾತಿ ಮೋಚಯತ್ಯೇವ ಸಾ ಸ್ವಯಂ ಮಾರ್ಜಯತ್ಯಪಿ ॥ ೧೫ ॥

ಸರಾಗೌ ಚರಣಾವಸ್ಯಾಃ ಪಾವಕೇನೋಜ್ಜ್ವಲೇನ ಚ ।
ನಿಸರ್ಗರಕ್ತೌ ಕುರುತೇ ಪೂರ್ಣರಾಗೌ ವೃಷಧ್ವಜಃ ॥ ೧೬ ॥

ಉಚ್ಚೈರಪಿ ಯದಾಖ್ಯೇಯಮನ್ಯೇಷಾಂ ಪುರತೋ ಬಹು ।
ತತ್ಕರ್ಣೇ ಕಥಯತ್ಯಸ್ಯಾ ಹರೋ ದ್ರಷ್ಟುಂ ತದಾನನಂ ॥ ೧೭ ॥

ನ ದೂರಮಪಿ ಗಂತಾಸೌ ಸಮಾಗತ್ಯ ಪ್ರಯತ್ನತಃ ।
ಅನುಬಧ್ನಾತಿ ವಾಮಾಕ್ಷೀಂ ಪೃಷ್ಠದೇಶೇಽನ್ಯಮಾನಸಾಂ ॥ ೧೮ ॥

---

೧೪. ಒಮ್ಮೆ ಸತೀದೇವಿಯು ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಳ್ಳುತ್ತಲಿರಲು ಶಿವನೂ ಸಹ ಅವಳೊಡನೆ ಹೋಗಿ ನಿಂತು ತನ್ನ ಮುಖವನ್ನು ಅವಳ ಮುಖದೊಡನೆ ಸೇರಿಸಿನೋಡಿಕೊಳ್ಳುವನು.

೧೫. ಮತ್ತೊಮ್ಮೆ ಶಿವನು ಸತೀದೇವಿಯ ಕುಂಡಲಗಳನ್ನು ಅಲಗಾಡಿಸಿ ಅಲುಗಾಡಿಸಿ, ಅವಳು ಬೇಡವೆನ್ನುತ್ತಿದ್ದರೂ ಆ ಕುಂಡಲವನ್ನುತೆಗೆದು ಪುನಃ ತಾನೇ ಅವಳ ಕಿವಿಗಳಲ್ಲಿ ತೊಡಿಸುವನು.

೧೬. ಸ್ವಭಾವವಾಗಿಯೇ ಕೆಂಪಾಗಿರುವ ಸತೀದೇವಿಯ ಹೆಜ್ಜೆಗಳಿಗೆ ಶಿವನು ಅರಗನ್ನು ಲೇಪಿಸಿ ಮತ್ತಷ್ಟು ಕೆಂಪಾಗಿ ಮಾಡುವನು.

೧೭. ಅಷ್ಟು ರಹಸ್ಯವಲ್ಲದೆ ಎಲ್ಲರ ಎದುರಿನಲ್ಲಿ ಹೇಳಬಹುದಂತಹ ವಿಷಯವನ್ನೂ ಸಹ ಶಿವನು ಸತೀದೇವಿಯ ಮುಖವನ್ನು ನೋಡಲಿಚ್ಛೆಯಿಂದ ಅವಳ ಕಿವಿಯಲ್ಲಿ ಹೇಳುವನು.

೧೮. ಒಮ್ಮೆ ಆ ಶಿವನು ಬಹಳ ದೂರಹೋದಂತೆ ಮಾಡಿ ತಿರುಗಿ ಸತಿಯ ಹಿಂಭಾಗದಿಂದ ಬಂದು ಅವಳ ಕಣ್ಣುಗಳನ್ನು ಬಲವಾಗಿ ಮುಚ್ಚುವನು ಮತ್ತು ಕಣ್ಣುಮುಚ್ಚಿದವರಾರೆಂದು ಹೆಸರನ್ನು ಕೇಳುವನು.

**ಅಂತರ್ಹಿತಸ್ತು ತತ್ರೈವ ಮಾಯಯಾ ವೃಷಭಧ್ವಜಃ ।**
**ತಾಮಾಲಿಲಿಂಗ ಭೀತ್ಯಾ ಸ್ವಂ ಚಕಿತಾ ವ್ಯಾಕುಲಾಽಭವತ್ ॥ ೧೯ ॥**

**ಸೌವರ್ಣಪದ್ಮಕಲಿಕಾತುಲ್ಯೇ ತಸ್ಯಾ ಕುಚದ್ವಯೇ ।**
**ಚಕಾರ ಭ್ರಮರಾಕಾರಂ ಮೃಗನಾಭಿವಿಶೇಷಕಂ ॥ ೨೦ ॥**

**ಹಾರಮುಸ್ಯಾಃ ಕುಚಯುಗಾದ್ವಿಯೋಜ್ಯ ಸಹಸಾ ಹರಃ ।**
**ನ್ಯಯೋಜಯಚ್ಚ ತತ್ರೈವ ಸ್ವಕರಸ್ಪರ್ಶನಂ ಮುಹುಃ ॥ ೨೧ ॥**

**ಅಂಗದಾನ್ವಲಯಾನೂರ್ಮಾನ್ವಿಶ್ಲೇಷ್ಯ ಚ ಪುನಃ ಪುನಃ ।**
**ತತ್ಸ್ಥಾನಾತ್ಪುನರೇವಾಸೌ ತತ್ಸ್ಥಾನೇ ಪ್ರತ್ಯಯೋಜಯತ್ ॥ ೨೨ ॥**

**ಕಾಲಿಕೇತಿ ಸಮಾಯಾತಿ ಸವರ್ಣಾ ತೇ ಸಖೀ ತ್ವಿಮಾಂ ।**
**ಯಾಸ್ಯತ್ವಸ್ಯಾಸ್ತಥೇಕ್ಷಂತ್ಯಾಃ ಪ್ರೋತ್ತುಂಗೌ ಸಾಹಸಂ ಕುಚೌ ॥ ೨೩ ॥**

---

೧೯. ಮತ್ತೊಮ್ಮೆ ಆ ಶಂಕರನು ಮಾಯೆಯಿಂದ ಅಂತರ್ಧಾನನಾಗಿದ್ದು ಸತೀದೇವಿಯನ್ನು ಆಲಂಗಿಸುವನು. ಆಗ ಆ ಸತಿಯು ಚಕಿತಳಾಗಿ ಹೆದರುವಳು.

೨೦. ಮಗದೊಮ್ಮೆ ಚಿನ್ನದ ಪದ್ಮದ ಮೊಗ್ಗಿನಂತೆ ಇರುವ ಆ ಸತಿಯ ಸ್ತನಗಳೆರಡರಲ್ಲಿ ಶಿವನು ಕಸ್ತೂರಿಯಿಂದ ಭ್ರಮರಗಳನ್ನು ಸುಂದರವಾಗಿ ಬರೆಯುವನು.

೨೧. ಸತೀದೇವಿಯ ಸ್ತನಗಳ ಮೇಲಿರುವ ಹಾರವನ್ನು ಆಗಾಗ ತೆಗೆದು ಶಿವನು ಪುನಃ ಆ ಸ್ತನಗಳಲ್ಲಿ ಕೈಸ್ಪರ್ಶಪೂರ್ವಕವಾಗಿ ಇರಿಸುತ್ತಾ ಆ ಸ್ತನಸ್ಪರ್ಶದಿಂದ ಸುಖವನ್ನು ಅನುಭವಿಸುವನು.

೨೨. ವಂಕಿಬಳೆ, ಉಂಗುರ ಈ ಅಲಂಕಾರಗಳನ್ನು ಆಯಾಯ ಸ್ಥಾನಗಳಿಂದ ಪುನಃ ಪುನಃ ತೆಗೆದು ಮತ್ತೆ ಆಯಾಯ ಸ್ಥಾನಗಳಲ್ಲಿಯೇ ಆನಂದದಿಂದ ತೊಡಿಸುವನು.

೨೩. ಒಮ್ಮೆ ಸತಿಯು ತನ್ನ ಸುಂದರವಾದ ಸ್ತನಗಳನ್ನು ನೋಡಿಕೊಳ್ಳುತ್ತಲಿರುವಾಗ ಶಿವನು ಅಕಸ್ಮಾತ್ತಾಗಿ ಬಂದು ಎಲೌ ಕಾಳಿಕೆ, ಈ ಸ್ತನಗಳೆರಡು ನಿನಗೆ ಅನುರೂಪಗಳಾದ ಸಖಿಯರಂತಿರುವುವು ಎಂದು ಹೇಳಿದನು.

ಕದಾಚಿನ್ಮದನೋನ್ಮಾದಚೇತನಃ ಪ್ರಮಥಾಧಿಪಃ ।
ಚಕಾರ ನರ್ಮ ಶರ್ಮಾಣಿ ತಥಾ ಕ್ಷಿಪ್ರಿಯಯಾ ಮುದಾ ॥ ೨೪ ॥

ಆಹೃತ್ಯ ಪದ್ಮಪುಷ್ಪಾಣಿ ರಮ್ಯಪುಷ್ಪಾಣಿ ಶಂಕರಃ ।
ಸರ್ವಾಂಗೇಷು ಕರೋತಿ ಸ್ಮ ಪುಷ್ಪಾಭರಣಮಾದರಾತ್ ॥ ೨೫ ॥

ಗಿರಿಕುಂಜೇಷು ರಮ್ಯೇಷು ಸತ್ಯಾ ಸಹ ಮಹೇಶ್ವರಃ ।
ವಿಜಹಾರ ಸಮಸ್ತೇಷು ಪ್ರಿಯಯಾ ಭಕ್ತವತ್ಸಲಃ ॥ ೨೬ ॥

ತಯಾ ವಿನಾ ಸ್ಮ ನೋ ಯಾತಿ ನಾಸ್ಥಿತೋ ನ ಸ್ಮ ಚೇಷ್ಟತೇ ।
ತಯಾ ವಿನಾ ಕ್ಷಣಮಪಿ ಶರ್ಮ ಲೇಭೇ ನ ಶಂಕರಃ ॥ ೨೭ ॥

ವಿಹೃತ್ಯ ಸುಚಿರಂ ಕಾಲಂ ಕೈಲಾಸಗಿರಿಕುಂಜರೇ ।
ಅಗಮದ್ಧಿಮವತ್ಪ್ರಸ್ಥಂ ಸಸ್ಮಾರ ಸ್ವೇಚ್ಛಯಾ ಸ್ಮರಂ ॥ ೨೮ ॥

---

೨೪. ಒಮ್ಮೆ ಕಾಮೋದ್ರಿಕ್ತನಾಗಿ ಪರಮೇಶ್ವರನು ತುಂಬಾ ಉತ್ಸುಕತೆಯಿಂದ ಸತೀದೇವಿಯೊಡನೆ ಅನೇಕ ಶೃಂಗಾರಚೇಷ್ಟೆಗಳನ್ನು ಮಾಡಿ ಅದರ ಆನಂದವನ್ನು ಅನುಭವಿಸುವನು.

೨೫. ಮತ್ತೊಮ್ಮೆ ಶಂಕರನು ಮನೋಹರವಾದ ತಾವರೆ ಹೂವುಗಳನ್ನು ತುಂಬಾತಂದು ಅವುಗಳಿಂದ ಸತೀದೇವಿಯ ಪ್ರತಿಯೊಂದು ಸುಂದರ ಅವಯವಗಳನ್ನೂ ಅಲಂಕರಿಸುವನು.

೨೬. ಭಕ್ತವತ್ಸಲನಾದ ಆ ಪರಮೇಶ್ವರನು ಆ ಗಿರಿಯಲ್ಲಿರುವ ರಮ್ಯವಾದ ಲತಾಗೃಹಗಳಲ್ಲಿ ಸತೀದೇವಿಯೊಡನೆ ತುಂಬಾ ವಿಹರಿಸಿದನು.

೨೭. ಆ ಸತೀದೇವಿಯನ್ನು ಬಿಟ್ಟು ಆ ಶಂಕರನು ಎಲ್ಲಿಗೂ ಹೋಗುತ್ತಲಿರಲಿಲ್ಲ. ಅವಳೊಡನೆಯೇ ಹೋಗುತ್ತಲಿದ್ದನು. ಅವಳ ಹೊರತು ನಿಲ್ಲುತ್ತಲಿರಲಿಲ್ಲ. ಅವಳನ್ನು ಬಿಟ್ಟು ಯಾವ ಕೆಲಸವನ್ನೂ ಮಾಡುತ್ತಲಿರಲಿಲ್ಲ. ಆ ಸತೀದೇವಿಯಿಲ್ಲದೆ ಒಂದು ಕ್ಷಣವೂ ಸುಖವನ್ನು ಹೊಂದುತ್ತಲಿರಲಿಲ್ಲ.

೨೮. ಹೀಗೆ ಬಹಳ ಕಾಲ ಕೈಲಾಸಗಿರಿಯ ಲತಾಗೃಹಗಳಲ್ಲಿ ವಿಹರಿಸಿ ಬಳಿಕ ಹಿಮಾಲಯದ ತಪ್ಪಲಿಗೆ ತೆರಳಿದನು. ಅಲ್ಲಿ ತನ್ನಿಚ್ಛೆಯಂತೆ ಮನ್ಮಥನನ್ನು ಸ್ಮರಿಸಿದನು.

ತಸ್ಮಿನ್ಪ್ರವಿಷ್ಟೇ ಕಾಮೇ ತು ವಸಂತಶ್ಶಂಕರಾಂತಿಕೇ ।
ವಿತಸ್ತಾರ ನಿಜಂ ಭಾವಂ ಹಾರ್ದಂ ವಿಜ್ಞಾಯ ತತ್ಪ್ರಭೋಃ ॥ ೨೯ ॥

ಸರ್ವೇ ಚ ಪುಷ್ಪಿತಾ ವೃಕ್ಷಾ ಲತಾಶ್ಚಾನ್ಯಾಶ್ಚ ಪುಷ್ಪಿತಾಃ ।
ಅಂಭಾಂಸಿ ಫುಲ್ಲಪದ್ಮಾನಿ ಪದ್ಮಾಸ್ಸಭ್ರಮರಾಸ್ತಥಾ ॥ ೩೦ ॥

ಪ್ರವಿಷ್ಟೇ ತತ್ರ ಸದೃಶೌ ವವೌ ಸ ಮಲಯೋ ಮರುತ್ ।
ಸುಗಂಧಿಗಂಧಪುಷ್ಪೇಣ ಮೋದಕಶ್ಚ ಸುಗಂಧಿಯುಕ್ ॥ ೩೧ ॥

ಸಂಧ್ಯಾರ್ಧಚಂದ್ರಸಂಕಾಶಾಃ ಪಲಾಶಾಶ್ಚ ವಿರೇಜಿರೇ ।
ಕಾಮಾಸ್ತ್ರವತ್ಸುಮನಸಃ ಪ್ರಮೋದಾತ್ಪಾದಪಾಧರಃ ॥ ೩೨ ॥

ಬಭುಃ ಪಂಕಜಪುಷ್ಪಾಣಿ ಸರಸ್ಸು ಸಕಲಾನ್ ಜನಾನ್ ।
ಸಂಮೋಹಯಿತುಮುದ್ಯುಕ್ತಾ ಸುಮುಖೀ ವಾಯುದೇವತಾ ॥ ೩೩ ॥

---

೨೯. ಆಗ ಮನ್ಮಥನು ಪ್ರಭುವಾದ ಶಂಕರನ ಅಭಿಪ್ರಾಯವನ್ನು ತಿಳಿದು ಅವನ ಬಳಿಗೆ ಬಂದನು. ವಸಂತನೂ ಸಹ ಅಲ್ಲಿಗೆ ಬಂದು ತನ್ನ ಸಮೃದ್ಧಿಯನ್ನು ಶಂಕರನಿರುವ ಪ್ರದೇಶದಲ್ಲಿ ಹರಡಿದನು.

೩೦. ಆಗ ಮರಗಳಲ್ಲಿಯೂ ಲತೆಗಳಲ್ಲಿಯೂ ಹೂವರಳಿದುವು. ಸರೋವರಗಳಲ್ಲಿ ತಾವರೆಗಳರಳಿದುವು. ಆ ತಾವರೆಗಳಲ್ಲಿ ದುಂಬಿಗಳು ಮುತ್ತಿ ಮಧುವನ್ನು ಕುಡಿಯತೊಡಗಿದುವು.

೩೧. ವಸಂತಋತುವು ಅಲ್ಲೆಲ್ಲಾ ಹರಡಲು ಆನಂದವಾದ ಸುವಾಸನೆಯನ್ನು ಬೀರುತ್ತಾ ಮಲಯಪರ್ವತದ ಸುಗಂಧವಾಯುವು ಮೆಲ್ಲನೆ ಬೀಸತೊಡಗಿತು.

೩೨. ಸಂಧ್ಯಾಕಾಲದ ಅರ್ಧೋದಿತ ಚಂದ್ರನಂತೆ ಕೆಂಪಾದ ಮುತ್ತುಗದ ಹೂವುಗಳು ಮನ್ಮಥನ ಬಾಣಗಳಂತೆ ರಾರಾಜಿಸಿದುವು. ಲತೆಗಳು ಮರವನ್ನಾಶ್ರಯಿಸಿ ಪುರುಷರೊಡನೆ ಸೇರಿರುವ ಸುಂದರಿಯಂತೆ ಶೋಭಿಸಿದುವು.

೩೩. ಸರಸ್ಸುಗಳಲ್ಲಿರುವ ಸುಂದರ ತಾವರೆಗಳು ಜನಗಳನ್ನು ಮೋಹಗೊಳಿಸಲುದ್ಯುಕ್ತಳಾದ ವಾಯುದೇವತೆಯ ಅಥವ ಜಲದೇವತೆಯ ಸುಂದರಮುಖದಂತೆ ಶೋಭಿಸುತ್ತಲಿದ್ದುವು.

ನಾಗಕೇಶರವೃಕ್ಷಾಶ್ಚ ಸ್ವರ್ಣವರ್ಣೈಃ ಪ್ರಸೂನಕೈಃ ।
ಬಭುರ್ಮದನಕೇತ್ವಾಮ್ರಾ ಮನೋಜ್ಞಾಶ್ಶಂಕರಾಂತಿಕೇ ॥ ೩೪ ॥

ಲವಂಗವಲ್ಲೀ ಸುರಭಿಗಂಧೇನೋದ್ವಾಸ್ಯ ಮಾರುತಂ ।
ಮೋಹಯಾಮಾಸ ಚೇತಾಂಸಿ ಭೃಶಂ ಕಾಮಿಜನೇ ಪುರಾ ॥ ೩೫ ॥

ಚಾರುಪಾವಕಚರ್ಚಿತ್ಸು ಸುಸ್ವರಾಶ್ಚೂತಶಾಲಿನಃ ।
ಬಭುರ್ಮದನಬಾಣೌಘಪರ್ಯಂಕಮುದಾವೃತಾಃ ॥ ೩೬ ॥

ಅಂಭಾಂಸಿ ಮಲಹೀನಾನಿ ರೇಜುಃ ಫುಲ್ಲಕುಶಾಶಯಾಃ ।
ಮುನೀನಾಮಿವ ಚೇತಾಂಸಿ ಪ್ರವ್ಯಕ್ತಜ್ಯೋತಿರುದ್ಗಮಂ ॥ ೩೭ ॥

ತುಷಾರಾಸ್ಸೂರ್ಯರಶ್ಮೀನಾಂ ಸಂಗಮಾದಗಮನ್ಸ್ವಹಿಃ ।
ಪ್ರಮತ್ತಾನೀಕ್ಷ್ಯತೇಕ್ಷಾಶ್ಚ ಸಲಿಲೀಹೃದಯಾಸ್ತದಾ ॥ ೩೮ ॥

ಪ್ರಸನ್ನಾಸ್ಸಹ ಚಂದ್ರೇಣ ನಿನಿಷಾರಾಸ್ತದಾಽಭವನ್ ।
ವಿಭಾವರ್ಯಃ ಪ್ರಿಯೇಣೈವಂ ಕಾಮಿನ್ಯಸ್ಸುಮನೋಹರಾಃ ॥ ೩೯ ॥

---

೩೪. ನಾಗಕೇಸರವೃಕ್ಷಗಳು ಚಿನ್ನದ ವರ್ಣವುಳ್ಳ ಹೂವುಗಳಿಂದ ಕೂಡಿದುವುಗಳಾಗಿ ಮನ್ಮಥನ ಕೇತುವಿನಂತೆ ಸುಂದರವಾಗಿ ಪ್ರಕಾಶಿಸಿದುವು.

೩೫. ಲವಂಗಲತೆಯು ತನ್ನ ಸುವಾಸನೆಯಿಂದ ಗಾಳಿಯನ್ನು ವ್ಯಾಪಿಸಿ ತನ್ಮೂಲಕ ಕಾಮುಕರ ಮನಸ್ಸನ್ನು ಮೋಹಗೊಳಿಸಿತು.

೩೬. ಬೆಂಕಿಯಂತೆ ನಸುಗೆಂಪಾದ ಮಾವಿನ ಚಿಗುರುಗಳು ಕಾಮುಕರಿಗೆ ಮನ್ಮಥನ ಪುಷ್ಪಬಾಣಗಳಂತೆ ತೋರಿದುವು.

೩೭. ಅರಳಿದ ಕಮಲಗಳುಳ್ಳ ನಿರ್ಮಲವಾದ ನೀರುಗಳು, ಆತ್ಮಜ್ಯೋತಿಯು ಪ್ರತಿಬಿಂಬಿಸಿದ ಮುನಿಗಳ ನಿರ್ಮಲಮನಸ್ಸುಗಳಂತೆ ರಾರಾಜಿಸಿದುವು.

೩೮. ಜ್ಞಾನಿಗಳ ಹೃದಯದಿಂದ "ನನ್ನದು, ತನ್ನದು" ಎಂಬ ಮಮತೆಯು ಹೋಗುವಂತೆ ಸೂರ್ಯನ ರಶ್ಮಿಗಳ ತಾಪದಿಂದ ಹಿಮದ ತುಂತುರುಗಳು ನಾಶವನ್ನೈದಿದವು.

೩೯. ರಾತ್ರಿಗಳು ಹಿಮ ಮುಂತಾದುವುಗಳಿಲ್ಲದೆ ನಿರ್ಮಲವಾಗಿದ್ದು, ಚಂದ್ರನೊಡನೆ, ಕೂಡಿ "ಪ್ರಿಯರೊಡನಿರುವ ಸುಂದರಿಯರಂತೆ" ಪ್ರಕಾಶಿಸಿದುವು.

ತಸ್ಮಿನ್ಕಾಲೇ ಮಹಾದೇವಸ್ಸಹ ಸತ್ಯಾ ಧರೋತ್ತಮೇ ।
ರೇಮೇ ಸ ಸುಚಿರಂ ಛಂದಂ ನಿಕುಂಜೇಷು ನದೀಷು ಚ ॥ ೪೦ ॥

ತಥಾ ತೇನ ಸಮಂ ರೇಜೇ ತದಾ ದಾಕ್ಷಾಯಣೀ ಮುನೇ ।
ಯಥಾ ಹರಃ ಕ್ಷಣಮಪಿ ಶಾಂತಿಮಾಪ ತಯಾ ವಿನಾ ॥ ೪೧ ॥

ಸಂಭೋಗವಿಷಯೇ ದೇವೀ ಸತೀ ತಸ್ಯ ಮನಃ ಪ್ರಿಯಾ ।
ವಿಶತೀವ ಹರಸ್ಯಾಂಗೇ ಪಾಯಯನ್ನಿವ ತದ್ರಸಂ ॥ ೪೨ ॥

ತಸ್ಯಾಃ ಕುಸುಮಮಾಲಾಭಿರ್ಭೂಷಯನ್ಸಕಲಾಂ ತನುಂ ।
ಸ್ವಹಸ್ತರಚಿತಾಭಿಸ್ತು ನವಶರ್ಮಾಕರೋಚ್ಚ ಸಃ ॥ ೪೩ ॥

ಆಲಾಪೈರ್ವೀಕ್ಷಿತೈರ್ಹಾಸ್ಯೈಸ್ತಥಾ ಸಂಭಾಷಣೈರ್ಹರಃ ।
ತಸ್ಯಾದಿದೇಶ ಗಿರಿಜಾಂ ಸಪತೀವಾತ್ಮಸಂವಿದಂ ॥ ೪೪ ॥

---

೪೦. ಇಷ್ಟು ಮನೋಹರವಾದ ಆ ವಸಂತಕಾಲದಲ್ಲಿ ಮಹಾದೇವನು ಹಿಮಾಲಯದ ನದಿಗಳು ಲತಾಗೃಹಗಳು ಮುಂತಾದುವುಗಳಲ್ಲಿ ಸತೀದೇವಿಯೊಡನೆ ಬಹಳ ಕಾಲ ವಿಹರಿಸಿದನು.

೪೧. ಎಲೈ ನಾರದ ! ಅದರಂತೆ ಆ ಸತೀದೇವಿಯೂ ಸಹ ಶಿವನೊಡನೆ ವಿಹರಿಸಿದಳು. ಅವಳಿಲ್ಲದೆ ಶಂಕರನಿಗೆ ಒಂದು ಕ್ಷಣಕಾಲವೂ ಮನಸ್ಸಮಾಧಾನವಿರತ್ತಿರಲಿಲ್ಲ.

೪೨. ಸಂಭೋಗ (ಸುರತ) ಸಮಯದಲ್ಲಿ ಶಿವಪ್ರಿಯೆಯಾದ ಆ ಸತಿಯು ಆ ಶಿವನ ಶರೀರವನ್ನೇ ಪ್ರವೇಶಿಸುವವಳಂತೆ ಮತ್ತು ಅವನಿಗೆ ಶೃಂಗಾರರಸವನ್ನು ಪಾನ ಮಾಡಿಸುವವಳಂತೆ ಅವನೊಡನೆ ಸೇರಿ ವಿಹರಿಸುತ್ತಲಿದ್ದಳು.

೪೩. ಶಿವನು ಸಹ ಸುಂದರ ಪುಷ್ಪಹಾರಗಳನ್ನು ಮಾಡಿ ಅವುಗಳಿಂದ ಸತೀದೇವಿಯ ಪ್ರತಿಯೊಂದು ಅವಯವಗಳನ್ನು ಅಲಂಕರಿಸಿದನು. ಹೀಗೆ ಅನೇಕ ಹೊಸ ಹೊಸ ಶೃಂಗಾರಚೇಷ್ಟೆಗಳನ್ನು ಮಾಡಿದನು.

೪೪. ಪರಸ್ಪರ ಸಂಭಾಷಣೆಗಳಿಂದಲೂ, ನೋಟಗಳಿಂದಲೂ, ಹಾಸ್ಯಾಲಾಪಗಳಿಂದಲೂ. ಆ ಶಂಕರನು, ಜ್ಞಾನಿಯು ಜ್ಞಾನಸ್ವರೂಪನಾದ ಆತ್ಮನಲ್ಲಿ ಸೇರಿಹೋಗುವಂತೆ ಅಥವಾ ಸಮಾಧಿಯುಲ್ಲಿರುವ ಯೋಗಿಯು ಧ್ಯೇಯವಸ್ತುವಿನೊಡನೆ ಸೇರಿಹೋಗುವಂತೆ ಆ ಸತಿಯಲ್ಲಿ ಸೇರಿಹೋದನು.

ತದ್ವಕ್ತ್ರಚಂದ್ರಪೀಯೂಷಪಾನಸ್ಥಿರತನುರ್ಹರಃ ।
ನಾನಾವೈಶೇಷಿಕೀಂ ತನ್ವೀಮವಸ್ಥಾಂ ಸ ಕದಾಚನ ॥ ೪೫ ॥

ತದ್ವಕ್ತ್ರಾಂಬುಜವಾಸೇನ ತತ್ಸೌಂದರ್ಯೈಶ್ಚ ನರ್ಮಭಿಃ ।
ಗುಣೈರಿವ ಮಹಾದಂತೀ ಬದ್ಧೋ ನಾನ್ಯವಿಚೇಷ್ಟಿತಃ ॥ ೪೬ ॥

ಇತಿ ಹಿಮಗಿರಿಕುಂಜಪ್ರಸ್ಥಭಾಗೇ ದರೀಷು
ಪ್ರತಿದಿನಮಭಿರೇಮೇ ದಕ್ಷಪುತ್ರ್ಯಾ ಮಹೇಶಃ ।
ಕ್ರತುಭುಜಪರಿಮಾಣೈಃ ಕ್ರೀಡತಸ್ತಸ್ಯ ಜಾತಾ
ದಶ ದಶ ಚ ಸುರರ್ಷೇ ವತ್ಸರಾಃ ಪಂಚ ಚಾನ್ಯೇ ॥ ೪೭ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ದ್ವಿತೀಯೇ ಸತೀಖಂಡೇ ಸತೀಶಿವಕ್ರೀಡಾವರ್ಣನಂ ನಾಮ
ಏಕವಿಂಶೋಽಧ್ಯಾಯಃ

---

೪೫. ಆ ಸತೀದೇವಿಯ ಮುಖವೆಂಬ ಚಂದ್ರನ ಅಧರಾಮೃತವನ್ನು ಪಾನ ಮಾಡಿ ಸ್ಥಿರವಾದ ಶೃಂಗಾರಶರೀರವುಳ್ಳವನಾಗಿ ಆ ಶಿವನು ತನ್ನ ಶರೀರದಲ್ಲಿ ಕೃಶತಾವಸ್ಥೆಯನ್ನು ಎಂದೆಂದಿಗೂ ಹೊಂದಲಿಲ್ಲ.

೪೬. ಆ ಸತೀದೇವಿಯ ಮುಖಕಮಲದ ಸುವಾಸನೆಯಿಂದಲೂ ಸೌಂದರ್ಯದಿಂದಲೂ ಅವಳ ಶೃಂಗಾರಚೇಷ್ಟೆಗಳಿಂದಲೂ ಸಹ ಆಕರ್ಷಿಸಲ್ಪಟ್ಟ ಆ ಶಿವನು ಸರಪಣಿಗಳಿಂದ ಬಂಧಿಸಲ್ಪಟ್ಟ ಆನೆಯಂತೆ ಮಿಕ್ಕ ಯಾವ ಕಾರ್ಯಗಳನ್ನೂ ಮಾಡಲಾರದವನಾದನು.

೪೭. ಈ ರೀತಿಯಾಗಿ ಹಿಮವತ್ಪರ್ವತದ ಲತಾಗೃಹಗಳಲ್ಲಿಯೂ, ಗುಹೆಗಳಲ್ಲಿಯೂ, ಈಶ್ವರನು ಸತಿಯೊಡನೆ ವಿಹರಿಸುತ್ತಿರಲು ಇಪ್ಪತ್ತೈದು ವರ್ಷಗಳು ಕ್ಷಣಕಾಲದಂತೆ ಕಳೆದುಹೋದವು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಇಪ್ಪತ್ತೊಂದನೆಯ
ಅಧ್ಯಾಯವು ಮುಗಿದುದು.

|| ಶ್ರೀ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ದ್ವಾವಿಂಶೋಽಧ್ಯಾಯಃ

---

|| ಬ್ರಹ್ಮೋವಾಚ ||

ಕದಾಚಿದಥ ದಕ್ಷಸ್ಯ ತನಯಾ ಜಲದಾಗಮೇ ।
ಕೈಲಾಸಕ್ಷ್ಮಾಭೃತಃ ಪ್ರಾಹ ಪ್ರಸ್ಥಸ್ಥಂ ವೃಷಭಧ್ವಜಂ || ೧ ||

|| ಸತ್ಯುವಾಚ ||

ದೇವದೇವ ಮಹಾದೇವ ಶಂಭೋ ಮತ್ಪ್ರಾಣವಲ್ಲಭ ।
ಶೃಣು ಮೇ ವಚನಂ ನಾಥ ಶ್ರುತ್ವಾ ತತ್ಕುರು ಮಾನದ || ೨ ||

---

### ಇಪ್ಪತ್ತೆರಡನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು :—ಎಲೈ ನಾರದ, ಹೀಗಿರಲು ಮಳೆಗಾಲವು ಪ್ರಾಪ್ತವಾಯಿತು. ಆಗ ಸತೀದೇವಿಯು ಕೈಲಾಸಪರ್ವತದ ತಪ್ಪಲಲ್ಲಿರುವ ಪರಮೇಶ್ವರನನ್ನು ಕುರಿತು ಹೀಗೆ ಹೇಳಿದಳು.

೨. ಸತೀದೇವಿಯು ಹೇಳಿದಳು ;—ಓ ದೇವದೇವ, ನೀನು ನನ್ನ ಪ್ರಾಣನಾಥನಾದ ಶಂಕರನು, ನಾನು ಹೇಳುವುದನ್ನು ಕೇಳಿ ದಯವಿಟ್ಟು ಅದನ್ನು ನಡೆಯಿಸಿಕೊಡು.

ಘನಾಗಮೋಽಯಂ ಸಂಪ್ರಾಪ್ತಃ ಕಾಲಃ ಪರಮದುಸ್ಸಹಃ ।
ಅನೇಕವರ್ಣಮೇಘೌಘಸ್ಸಂದೀತಾಂಬರದಿಕ್ಚಯಃ ॥ ೩ ॥

ವಿವಾಂತಿ ವಾತಾ ಹೃದಯಂ ಹಾರಯಂತೀವ ವೇಗಿನಃ ।
ಕದಂಬರಜಸಾ ಧೌತಾಃ ಪಾಥೋಬಿಂದುವಿಕರ್ಷಣಾಃ ॥ ೪ ॥

ಮೇಘಾನಾಂ ಗರ್ಜಿತೈರುಚ್ಚೈರ್ಧಾರಾಸಾರಂ ವಿಮುಂಚತಾಂ ।
ವಿದ್ಯುತ್ಪತಾಕಿನಾಂ ತೀವ್ರೈಃ ಕ್ಷುಬ್ಧಂ ಸ್ಯಾತ್ಕಸ್ಯ ನೋ ಮನಃ ॥ ೫ ॥

ನ ಸೂರ್ಯೋ ದೃಶ್ಯತೇ ನಾಪಿ ಮೇಘಚ್ಛನ್ನೋ ನಿಶಾಪತಿಃ ।
ದಿವಾಪಿ ರಾತ್ರಿವದ್ಭಾತಿ ವಿರಹಿವ್ಯಸನಾಕರಃ ॥ ೬ ॥

ಮೇಘಾ ನೈಕತ್ರ ತಿಷ್ಠಂತೋ ಧ್ವನಂತಃ ಪವನೇರಿತಾಃ ।
ಪತಂತ ಇವ ಲೋಕಾನಾಂ ದೃಶ್ಯಂತೇ ಮೂರ್ಧ್ನಿ ಶಂಕರ ॥ ೭ ॥

---

೩. ಓ ಶಂಕರನೇ, ಈಗ ಸಹಿಸಲಸಾಧ್ಯವಾದ ಮಳೆಗಾಲವು ಪ್ರಾಪ್ತವಾಗಿರುವುದು. ಮೇಘಗಳು ಆಕಾಶದಲ್ಲಿ ದಶದಿಕ್ಕುಗಳಿಗೂ ವ್ಯಾಪಿಸಿ ಭಯಂಕರವಾಗಿ ಗರ್ಜನೆಮಾಡುತ್ತಲಿರುವುವು.

೪. ನೀರಿನ ತುಂತುರುಗಳಿಂದಲೂ ಕದಂಬಪುಷ್ಪದ ಧೂಳಿಯಿಂದಲೂ ಕೂಡಿದ ಗಾಳಿಗಳು ಹೃದಯವನ್ನು ಹಾರಿಸುವಂತೆ ತುಂಬಾ ವೇಗದಿಂದ ಬೀಸುತ್ತಲಿರುವುವು.

೫. ಓ ದೇವ, ಹೆಚ್ಚಾಗಿ ಜಡಿಮಳೆಯನ್ನು ಸುರಿಸುತ್ತಲೂ ಆಗಾಗ ಮಿಂಚನ್ನು ಬೆಳಗುತ್ತಲೂ ಇರುವ ಮೇಘಗಳ ಗಂಭೀರಘರ್ಜನೆಯನ್ನು ಕೇಳಿದರೆ ಯಾರಮನಸ್ಸು ತಾನೇ ಕ್ಷೋಭೆಗೊಳ್ಳುವುದಿಲ್ಲ ?

೬. ಆಕಾಶವು ಮೇಘಗಳಿಂದ ಮುಚ್ಚಲ್ಪಟ್ಟು ಹಗಲು ಸೂರ್ಯನೂ, ರಾತ್ರಿ ಚಂದ್ರನೂ ಸಹ ಕಾಣಿಸುತ್ತಲಿಲ್ಲ. ಹಗಲು ರಾತ್ರಿಯಂತೆ ಕಾಣುತ್ತಿದ್ದ ಈ ಕಾಲವು ವಿರಹಿಗಳಿಗೆ ದುಃಖವನ್ನುಂಟುಮಾಡುವಂತಹುದಾಗಿದೆ.

೭. ಓ ಶಂಕರ, ಮಹಾಗಾಳಿಯಿಂದ ಹೊಡೆಯಲ್ಪಟ್ಟ ಮೇಘಗಳು ಘರ್ಜಿಸುತ್ತಾ ಒಂದೆಡೆಯಲ್ಲಿ ನಿಲ್ಲದೇ ಆಕಾಶದಲ್ಲೆಲ್ಲಾ ಸಂಚರಿಸುತ್ತಾ ಜನಗಳಮೇಲೆಯೇ ಬೀಳುವುವೋ ಎನ್ನುವಂತೆ ತೋರುತ್ತಿವೆ.

**ವಾತಾಹತಾ ಮಹಾವೃಕ್ಷಾ ನರ್ತಂತ ಇವ ಚಾಂಬರೇ ।**
**ದೃಶ್ಯಂತೇ ಹರ ಭೀರೂಣಾಂ ತ್ರಾಸದಾಃ ಕಾಮುಕೇಪ್ಸಿತಾಃ ॥ ೮ ॥**

**ಸ್ನಿಗ್ಧನೀಲಾಂಜನಸ್ಯಾಶು ಸದಿವೌಘಸ್ಯ ಪೃಷ್ಠತಃ ।**
**ಬಲಾಕರಾಜೀ ವಾತ್ಯುಚ್ಚೈರ್ಯಮುನಾಪೃಷ್ಠಫೇನವತ್ ॥ ೯ ॥**

**ಕ್ಷಪಾಕ್ಷಯೇಷ ವಲಯಂ ದೃಶ್ಯತೇ ಕಾಲಿಕಾಗತಾ ।**
**ಅಂಬುಧಾವಿವ ಸದೀಪಪಾವಕೋ ಬಡವಾಮುಖಃ ॥ ೧೦ ॥**

**ಪ್ರಾರೋಹಂತೀಹ ಸಸ್ಯಾನಿ ಮಂದಿರಂ ಪ್ರಾಂಗಣೇಷ್ವಪಿ ।**
**ಕಿಮನ್ಯತ್ರ ವಿರೂಪಾಕ್ಷ ಸಸ್ಯೋದ್ಭೂತಿಂ ವದಾಮ್ಯಹಂ ॥ ೧೧ ॥**

---

೮. ಬಿರುಗಾಳಿಯಿಂದ ಕೆಡಹಲ್ಪಟ್ಟ ದೊಡ್ಡದೊಡ್ಡ ಮರಗಳು ಗಾಳಿಯ ಹೊಡೆತದಿಂದ ಆಕಾಶದಲ್ಲಿ ಚಲಿಸುತ್ತಾ ನರ್ತನಮಾಡುತ್ತಲಿವೆ. ಈ ಸನ್ನಿವೇಶವು ಅಂಜುಪುರುಕರಿಗೆ ಭಯವನ್ನುಂಟುಮಾಡುವುದಾಗಿದೆ. ಪ್ರಿಯೆಯರೊಡನೆ ಕೂಡಿರುವ ಕಾಮುಕರಿಗೆ ಸುಖದಾಯಕವಾಗಿದೆ.

೯. ಆಕಾಶದಲ್ಲಿ ನಿಬಿಡವಾಗಿ ನೀಲಮೇಘಗಳು ತುಂಬಿವೆ. ಅದರ ಮೇಲ್ಭಾಗದಲ್ಲಿ ಬೆಳ್ಳಕ್ಕಿಗಳು ಪಂಕ್ತಿಯಾಗಿ ಹಾರುತ್ತಲಿವೆ. ಇದನ್ನು ನೋಡಿದರೆ ಯಮುನಾ ನದಿಯ ನೀಲವಾದ ಜಲದಲ್ಲಿ ತೇಲುತ್ತಿರುವ ಬಿಳಿಯ ನೊರೆಗಳ ಸಾಲಿನಂತೆ ಕಾಣಿಸುತ್ತಲಿದೆ.

೧೦. ನೀಲವಾದ ಮೇಘಗಳ ನಡುವೆ ಒಂದು ಕ್ಷಣಕಾಲ ಮಾತ್ರ ಹೊಳೆಯುತ್ತಿರುವ ಮಿಂಚು ಕರೀನೀರಿನ ಸಮುದ್ರದಲ್ಲಿ ವಡವಾಗ್ನಿಯು ಜ್ವಲಿಸುವಂತೆ ಕಾಣಿಸುತ್ತಲಿರುವುದು.

೧೧. ಮನೆಯ ಅಂಗಳಗಳಲ್ಲಿಯೂ ಸಹ ಸಸ್ಯಗಳು ಹುಟ್ಟುತ್ತಲಿರುವುವು. ಇನ್ನು ಮಿಕ್ಕ ಪ್ರದೇಶಗಳಲ್ಲಿ ಸಸ್ಯಗಳು ಹುಟ್ಟಿರುವುವೆಂದು ಹೇಳುವ ಅವಶ್ಯಕತೆಯೇ ಇಲ್ಲ.

ಶ್ಯಾಮಲ್ಕೈ ರಾಜತ್ಕೈ ರಕ್ತೈರ್ನಿಶದೋsಯಂ ಹಿಮಾಚಲಃ ।
ಮಂದರಾಶ್ರಯಮೇಘೌಘಃ ಪತ್ರೈರ್ದುಗ್ಧಾಂಬುಧಿರ್ಯಥಾ ॥ ೧೨ ॥

ಅಸಮುಶ್ರೀಶ್ಚ ಕುಟಿಲಂ ಭೇಜೇ ಯಸ್ಯಾಥ ಕಿಂಶುಕಾನ್ ।
ಉಚ್ಚಾವಚಾನ್ ಕಲೌ ಲಕ್ಷ್ಮೀರ್ಗಂತಾ ಸಂತ್ಯಜ್ಯ ಸಜ್ಜನಾನ್ ॥ ೧೩ ॥

ಮಂದಾರಸ್ತನಪೀಲೂನಾಂ ಶಬ್ದೇನ ಹೃಷಿತಾ ಮುಹುಃ ।
ಕೇಕಾಯಂತೇ ಪ್ರತಿವನೇ ಸತತಂ ವೃಷ್ಟಸೂಚಕಂ ॥ ೧೪ ॥

ಮೇಘೋತ್ಸುಕಾನಾಂ ಮಧುರಶ್ಚಾತಕಾನಾಂ ಮನೋಹರಃ ।
ಧಾರಾಸಾರಶರೈಸ್ತಾಪಂ ಪೇತುಃ ಪ್ರಥಿಪಥೋದ್ಗತಂ ॥ ೧೫ ॥

---

೧೨. ಸಮುದ್ರವನ್ನು ಕಡೆಯುವ ಕಾಲದಲ್ಲಿ ಮಂದರಪರ್ವತದಲ್ಲಿನ ವೃಕ್ಷಗಳ ಬಗೆಬಗೆಯ ಬಣ್ಣದ ಎಲೆಗಳು ಕ್ಷೀರಸಮುದ್ರದಲ್ಲಿ ಬಿದ್ದು ಯಾವರೀತಿ ಶೋಭಿಸಿದವೋ ಅದರಂತೆ ಕಪ್ಪಗೂ ಬೆಳ್ಳಗೂ ಇರುವ ವೃಕ್ಷಲತಾಗುಲ್ಮಗಳ ಸಮೂಹದಿಂದ ಈ ಹಿಮಾಲಯಪರ್ವತವು ಶೋಭಿಸುತ್ತಿದೆ.

೧೩. ಕಲಿಯುಗದಲ್ಲಿ ಲಕ್ಷ್ಮಿಯು (ಐಶ್ವರ್ಯವು) ಸತ್ಪುರುಷರನ್ನು ಬಿಟ್ಟು ಕುಟಿಲರನ್ನಾಶ್ರಯಿಸುವಂತೆ, ಮುತ್ತುಗವೃಕ್ಷದಲ್ಲಿನ ಪುಷ್ಪಲಕ್ಷ್ಮಿಯು ಅದನ್ನು ತ್ಯಜಿಸಿ ಕುಟಿಲವೃಕ್ಷವನ್ನಾಶ್ರಯಿಸಿತು ಎಂದರೆ ಮಳೆಗಾಲವು ಬರಲು ಮುತ್ತುಗದಗಿಡಗಳಲ್ಲಿ ಹೂಬಿಡುವ ಕಾಲವು ಹೋಗಿ ಇತರ ಕ್ಷುದ್ರಗಿಡಗಳಲ್ಲಿ ಹೂಗಳು ತಲೆದೋರಿದವು.

೧೪. ಗಂಭೀರವಾದ ಮೇಘಘರ್ಜನೆಯನ್ನು ಕೇಳಿ ಹರ್ಷಗೊಂಡು ನವಿಲುಗಳು ತಮ್ಮ ಗರಿಗಳನ್ನು ಕೆದರಿಕೊಂಡು ನರ್ತನಮಾಡುತ್ತಾ ಮಳೆಯನ್ನು ಸೂಚಿಸುವ ತಮ್ಮ ಕೇಕಾಧ್ವನಿಯನ್ನು ಮಾಡುತ್ತಲಿರುವುವು.

೧೫. ಮುಖವನ್ನೆತ್ತಿ ಮೇಘವನ್ನು ನೋಡುತ್ತಾ ಸಂತೋಷದಿಂದ ಮೇಘಗಳೆದುರಿಗೆ ಸಾಲುಸಾಲಾಗಿ ಹಾರುತ್ತಲಿರುವ ಚಾತಕಪಕ್ಷಿಗಳ ಧ್ವನಿಯು ಇಂಪಾಗಿ ಕೇಳಿಸುತ್ತಲಿರುವುದು.

ಮೇಘಾನಾಂ ಪಶ್ಯ ಮದ್ವೇಹೇ ದುರ್ನಯಂ ಕರಕೋತ್ಕರೈಃ ।
ಯೇ ಛಾದಯಂತ್ಯನುಗತೇ ಮಯೂರಾಂಶ್ಚಾತಕಾಂಸ್ತಥಾ ॥ ೧೬ ॥

ಶಿಖಿಸಾರಂಗಯೋರ್ದೃಷ್ಟ್ವಾ ಮಿತ್ರಾದಪಿ ಪರಾಭವಂ ।
ಹರ್ಷಂ ಗಚ್ಛಂತಿ ಗಿರಿಶಂ ವಿದೂರಮಪಿ ಮಾನಸಂ ॥ ೧೭ ॥

ಏತಸ್ಮಿನ್ವಿಷಮೇ ಕಾಲೇ ನೀಡಂ ಕಾಕಾಶ್ಚ ಕೋರಕಾಃ ।
ಕುರ್ವಂತಿ ತ್ವಾಂ ವಿನಾ ಗೇಹಾನ್ಕಥಂ ಶಾಂತಿಮವಾಪ್ಸ್ಯಸಿ ॥ ೧೮ ॥

ಮಹತೀವಾದ್ಯ ನೋ ಭೀತಿರ್ಮೇಘೋತ್ಥಾ ಪಿನಾಕಧೃಕ್ ।
ಯತಸ್ವ ಯಸ್ಮಾದ್ವಾಸಾಯ ಮಾ ಚಿರಂ ವಚನಾನ್ಮಮ ॥ ೧೯ ॥

ಕೈಲಾಸೇ ವಾ ಹಿಮಾದ್ರೌ ವಾ ಮಹಾಕೋಶ್ಯಾಮಥ ಕ್ಷಿತಾ ।
ತತ್ರೋಪಯೋಗ್ಯಂ ಸಂವಾಸಂ ಕುರು ತ್ವಂ ವೃಷಭಧ್ವಜ ॥ ೨೦ ॥

---

೧೬. ಓ ಶಂಕರ, ಈ ಮೇಘಗಳ ಅನ್ಯಾಯವನ್ನು ನೋಡು. ಇವುಗಳು ತಮ್ಮನ್ನೇ ಅನುಸರಿಸುವಂತಹ ಬಂಧುಗಳಾದ ನವಿಲು ಮತ್ತು ಚಾತಕಗಳನ್ನು ಆನೆಕಲ್ಲುಗಳಿಂದ ತೊಂದರೆಪಡಿಸುತ್ತಲಿರುವುವು.

೧೭. ಹೀಗೆ ಬಂಧುವಾದ ಮೇಘದಿಂದಲೇ ನವಿಲು ಮತ್ತು ಚಾತಕಗಳಿಗೆ ಆದ ಅನ್ಯಾಯವನ್ನು ನೋಡಿ ಹೆದರಿಕೆಯಿಂದ ಹಂಸಗಳು ದೂರವನ್ನು ಲೆಕ್ಕಿಸದೆ ಹಿಮಾಲಯ ತಪ್ಪಲಲ್ಲಿರುವ ಮಾನಸಸರೋವರಕ್ಕೆ ಜಾಗ್ರತೆಯಾಗಿ ತೆರಳುತ್ತಲಿರುವುವು.

೧೮. ಇಂತಹ ವಿಷಮವಾದ ಮಳೆಗಾಲದಲ್ಲಿ ಕಾಗೆ ಮತ್ತು ಚಕೋರಗಳೂ ಸಹ ಗೂಡನ್ನು ಕಟ್ಟಿಕೊಂಡು ವಾಸಮಾಡುತ್ತಲಿರುವುವು. ಹೀಗಿರಲು ಓ ಶಂಕರ, ನೀನು ವಾಸಕ್ಕೆ ಮನೆಯಿಲ್ಲದೆ ಹೇಗೆ ಸುಖವನ್ನು ಹೊಂದುವೆ ?

೧೯. ಇಂತಹ ಘೋರವಾದ ಮಳೆಗಾಲದಲ್ಲಿ ನನಗೂ ತುಂಬಾ ಭಯವಾಗುತ್ತಲಿದೆ. ಆದಕಾರಣ ನಮ್ಮ ವಾಸಕ್ಕಾಗಿ ಜಾಗ್ರತೆ ಮನೆಯೊಂದನ್ನು ನಿರ್ಮಿಸು.

೨೦. ಓ ಶಿವನೆ, ಕೈಲಾಸದಲ್ಲಿಯಾಗಲೀ ಹಿಮಾಚಲದಲ್ಲಿಯಾಗಲೀ ಮಹಾಕೋಷೀ ಎಂಬ ಜಲಪಾತದ ತಪ್ಪಲಲ್ಲಿಯಾಗಲೀ ನಮ್ಮ ವಾಸಕ್ಕೆ ಯೋಗ್ಯವಾದಂತಹ ಮನೆಯನ್ನು ಕಲ್ಪಿಸು.

॥ ಬ್ರಹ್ಮೋವಾಚ ॥

ಏವಮುಕ್ತಸ್ತ್ವಯಾ ಶಂಭುರ್ದಾಕ್ಷಾಯಣ್ಯಾ ತಥಾsಸಕೃತ್ ।
ಸಂಜಹಾಸ ಚ ಶೀರ್ಷಸ್ಥಚಂದ್ರರಶ್ಮಿಸ್ಮಿತಾಲಯಂ ॥ ೨೧ ॥

ಅಥೋವಾಸ ಸತೀಂ ದೇವೀಂ ಸ್ಮಿತಭಿನ್ನೌಷ್ಠಸಂಪುಟಃ ।
ಮಹಾತ್ಮಾ ಸರ್ವತತ್ತ್ವಜ್ಞಸ್ತೋಷಯನ್ಪರಮೇಶ್ವರಃ ॥ ೨೨ ॥

॥ ಈಶ್ವರ ಉವಾಚ ॥

ಯತ್ರ ಪ್ರೀತ್ಯೈ ಮಯಾ ಕಾರ್ಯೋ ವಾಸಸ್ತವ ಮನೋಹರೇ ।
ಮೇಘಾಸ್ತತ್ರ ನ ಗಂತಾರಃ ಕದಾಚಿದಪಿ ಮತ್ಪ್ರಿಯೇ ॥ ೨೩ ॥

ಮೇಘಾ ನಿತಂಬಪರ್ಯಂತಂ ಸಂಚರಂತಿ ಮಹೀಭೃತಃ ।
ಸದಾ ಪ್ರಾಲೇಯಸಾನೋಸ್ತು ವರ್ಷಾಸ್ವಪಿ ಮನೋಹರೇ ॥ ೨೪ ॥

ಕೈಲಾಸಸ್ಯ ತಥಾ ದೇವಿ ಪಾದಗಾಃ ಪ್ರಾಯಶೋ ಘನಾಃ ।
ಸಂಚರಂತಿ ನ ಗಚ್ಛಂತಿ ತತ ಊರ್ಧ್ವಂ ಕದಾಚನ ॥ ೨೫ ॥

---

೨೧. ಬ್ರಹ್ಮನು ಹೇಳಿದನು:—ಹೀಗೆ ಸತೀದೇವಿಯು ಬಾರಿಬಾರಿಗೂ ಹೇಳಲು ಶಿರಸ್ಸಿನಲ್ಲಿರುವ ಚಂದ್ರರೇಖೆಯು ಮುಖದಮೇಲೆ ಬೀಳುತ್ತಿರಲು ಆ ಶಿವನು ಮಂದಹಾಸವನ್ನು ಸೂಸುತ್ತಾ ನಕ್ಕನು.

೨೨. ಬಳಿಕ ಮಹಾತ್ಮನೂ ಸಕಲ ರಹಸ್ಯಗಳನ್ನು ತಿಳಿದವನೂ ಆದ ಪರಮೇಶ್ವರನು ಮಂದಹಾಸವನ್ನು ಬೀರುತ್ತಾ ಸತೀದೇವಿಯನ್ನು ಸಂತೋಷಗೊಳಿಸಲು,

೨೩. ಈಶ್ವರನು ಮತ್ತೆ ಹೇಳಿದನು:—ಮನೋಹರಳಾದ ಎಲೈ ಪ್ರಿಯೆ, ನಿನ್ನ ಸಂತೋಷಕ್ಕಾಗಿ ನಾನು ಎಲ್ಲಿ ವಾಸವನ್ನು ಕಲ್ಪಿಸುವೆನೋ ಅಲ್ಲಿ ಎಂದೂ ಮೇಘಗಳು ಹೋಗಲಾರವು. ಅಂತಹ ಸ್ಥಳದಲ್ಲಿ ವಾಸವನ್ನು ನಿನ್ನ ಪ್ರೀತಿಗಾಗಿ ಕಲ್ಪಿಸುವೆನು.

೨೪. ಮಳೆಗಾಲದಲ್ಲೂ ಸಹ ಮೇಘಗಳು ಹಿಮವತ್ಪರ್ವತದ ಮಧ್ಯಭಾಗದ ವರೆಗೇ ಸಂಚರಿಸುವುವು. ಅದಕ್ಕೂ ಮೇಲೆ ಸಂಚರಿಸಲಾರವು.

೨೫. ಎಲೌ ದೇವಿ, ಕೈಲಾಸಪರ್ವತದ ಕೆಳಗಿನಿಂದ ಕಾಲುಭಾಗದವರೆಗೇ ಮೇಘಗಳು ಸಂಚರಿಸುವುವು. ಅದಕ್ಕೆ ಮೇಲೆ ಸಂಚರಿಸುವುದಿಲ್ಲ.

ಸುಮೇರೋರ್ವಾ ಗಿರೇರೂರ್ಧ್ವಂ ನ ಗಚ್ಛಂತಿ ಬಲಾಹಕಾಃ ।
ಜಂಬೂಮೂಲಂ ಸಮಾಸಾದ್ಯ ಪುಷ್ಕರಾವರ್ತಕಾದಯಃ ॥ ೨೬ ॥

ಇತ್ಯುಕ್ತೇಷು ಗಿರೀಂದ್ರೇಷು ಯಸ್ಯೋಪರಿ ಭವೇದ್ಧಿ ತೇ ।
ಮನೋರುಚಿರ್ನಿವಾಸಾಯ ತದಾಚಕ್ಷ್ವದ್ರುತಂ ಹಿ ಮೇ ॥ ೨೭ ॥

ಸ್ವೇಚ್ಛಾವಿಹಾರೈಸ್ತವ ಕೌತುಕಾನಿ
ಸುವರ್ಣಪಕ್ಷಾನಿಲವೃಂದವೃಂದೈಃ ।
ಶಬ್ದೋತ್ತರಂಗೈರ್ಮಧುರಸ್ವನೈಸ್ತೈ
ರ್ಮದೋಪಗೇಯಾನಿ ಗಿರೌ ಹಿಮೋತ್ಥೇ ॥ ೨೮ ॥

ಸಿದ್ಧಾಂಗನಾಸ್ತೇ ರಚಿತಾಸನಾಭುವ-
ಮಿಚ್ಛಂತಿ ಚೈವೋಪಹೃತಂ ಸಕೌತುಕಂ ।
ಸ್ವೇಚ್ಛಾವಿಹಾರೇ ಮಣಿಕುಟ್ಟಿಮೇ ಗಿರೌ-
ಕುರ್ವಂತಿ ಚೇಷ್ಯಂತಿ ಫಲಾದಿದಾನಕೈಃ ॥ ೨೯ ॥

---

೨೬. ಮೇರುಪರ್ವತದಲ್ಲಿ ಪುಷ್ಕರ ಆವರ್ತಕಗಳೆಂಬ ಮಹಾಮೇಘಗಳೂ ಸಹ ಜಂಬೂಮೂಲವೆಂಬ ತಪ್ಪಲುಪ್ರದೇಶದವರೆಗೇ ಸಂಚರಿಸುವವು. ಅದರಿಂದ ಮುಂದಕ್ಕೆ ಹೋಗಲಾರವು.

೨೭. ಎಲೌ ಸತಿ, ಈಗ ನಾನು ಹೇಳಿದ ಬೆಟ್ಟಗಳಲ್ಲಿ ಯಾವ ಬೆಟ್ಟದ ಮೇಲ್ಭಾಗವು ವಾಸಕ್ಕೆ ನಿನಗೆ ಇಷ್ಟವಾಗಿ ತೋರುವುದೋ ಅದನ್ನು ಹೇಳು.

೨೮. ಹಿಮಾಲಯದಲ್ಲಿ ಮಾನಸಸರಸ್ಸಿನ ಹಂಸಗಳು ತಮ್ಮ ಸುಂದರವಾದ ಸುವರ್ಣದ ರೆಕ್ಕೆಗಳಿಂದ ನಿನಗೆ ಗಾಳಿಯನ್ನು ಹಾಕುತ್ತವೆ. ಕೋಗಿಲೆ ಮುಂತಾದ ಪಕ್ಷಿಗಳು ಇಂಪಾಗಿ ಹಾಡಿ ನಿನ್ನನ್ನಾದಂದಗೊಳಿಸುವುವು. ಯಥೇಚ್ಛವಾಗಿ ನೀನು ಅಲ್ಲಿ ವಿಹಾರವನ್ನು ಮಾಡಬಹುದಾಗಿದೆ.

೨೯. ಎಲೌ ದೇವಿ, ಸಿದ್ಧಸುಂದರಿಯರು ನಿನಗೆ ಒಳ್ಳೆ ಆಸನವನ್ನು ಒದಗಿಸಿ ಹಣ್ಣುಹಂಪಲುಗಳನ್ನು ತಂದುಕೊಟ್ಟು ಮಣಿಮಯವಾದ ಪ್ರದೇಶವುಳ್ಳ ಆ ಹಿಮಾಲಯದಲ್ಲಿ ನಿನ್ನ ಸ್ವೇಚ್ಛಾವಿಹಾರಕ್ಕೆ ಅನುಕೂಲರಾಗುವರು.

ಫಣೀಂದ್ರಕನ್ಯಾ ಗಿರಿಕನ್ಯಕಾಶ್ಚ
ಯಾ ನಾಗಕನ್ಯಾಶ್ಚ ತುರಂಗಮುಖ್ಯಾಃ ।
ಸರ್ವಾಸ್ತ್ವಾ ತಾಸ್ತೇ ಸತತಂ ಸಹಾಯತಾಂ
ಸಮಾಚರಿಷ್ಯಂತ್ಯನುಮೋದವಿಭ್ರಮ್ಯೈಃ ॥ ೩೦ ॥

ರೂಪಂ ತದೇವಮತುಲಂ ವದನಂ ಸುಚಾರು
ದೃಷ್ಟ್ವಾಂಗನಾ ನಿಜವಪುರ್ನಿಜಕಾಂತಿಸಹ್ಯಂ ।
ಹೇಲಾ ನಿಜೇ ವಪುಷಿ ರೂಪಗಣೇಷು ನಿತ್ಯಂ .
ಕರ್ತಾರ ಇತ್ಯನಿಮಿಷೇಕ್ಷಣಚಾರುರೂಪಾಃ ॥ ೩೧ ॥

ಯಾ ಮೇನಕಾ ಪರ್ವತರಾಜಜಾಯಾ
ರೂಪೈರ್ಗುಣೈ ಖ್ಯಾತವತೀ ತ್ರಿಲೋಕೇ ।
ಸಾ ಚಾಪಿ ತೇ ತತ್ರ ಮನೋಽನುಮೋದಂ
ನಿತ್ಯಂ ಕರಿಷ್ಯತ್ಯನುನಾಥನಾದ್ಯೈಃ ॥ ೩೨ ॥

ಪುರಂ ಹಿ ವರ್ಗೈರ್ಗಿರಿರಾಜವಂದ್ಯೈಃ-
ಪ್ರೀತಿಂ ವಿಚಿನ್ವದ್ಭಿರುದಾರರೂಪಾ ।
ಶಿಕ್ಷಾ ಸದಾ ತೇ ಖಲು ಶೋಚಿತಾಪಿ
ಕಾರ್ಯಾಽನ್ವಹಂ ಪ್ರೀತಿಯುತಾ ಗುಣಾದ್ಯೈಃ ॥ ೩೩ ॥

---

೩೦. ನಾಗರಾಜಕನ್ಯೆಯರು, ಗಿರಿಕನ್ಯೆಯರು, ನಾಗಕನ್ಯೆಯರು, ತುರಂಗಮುಖಿಯರು ಇವರೆಲ್ಲರೂ ನಿನ್ನ ವಿಹಾರಕ್ಕೆ ತುಂಬಾ ಸಹಾಯರಾಗುವರು.

೩೧. ದೇವಸುಂದರಿಯರು ನಿನ್ನ ಅಸದೃಶವಾದ ರೂಪವನ್ನೂ, ಸುಂದರ ಮುಖವನ್ನೂ, ಮನೋಹರಕಾಂತಿಯನ್ನೂ ನೋಡಿ ತಮ್ಮ ರೂಪ ಮತ್ತು ಸೌಂದರ್ಯಾದಿಗಳಲ್ಲಿ ತಿರಸ್ಕಾರವುಳ್ಳವರಾಗುವರು.

೩೨. ಹಿಮಾಲಯದಲ್ಲಿ ಹಿಮವಂತನ ಪತ್ನಿಯಾದ ಮೇನಕೆಯೂ ಇರುವಳು. ಅವಳು ರೂಪ ಮತ್ತು ಗುಣಗಳಿಂದ ಜಗತ್ತಿನಲ್ಲಿ ಪ್ರಸಿದ್ಧಳಾಗಿರುವಳು. ಆ ಮೇನಕೆಯೂ ಸಹ ನಿನಗೆ ಬೇಕಾದ ಅನುಕೂಲಗಳನ್ನು ಒದಗಿಸಿಕೊಡುತ್ತಾ ನಿನ್ನ ಮನಸ್ಸನ್ನು ಸಂತೋಷಪಡಿಸುವಳು.

೩೩. ಮತ್ತು ಆ ಮೇನಕೆಯು, ಪರ್ವತರಾಜನು ವಾಸಮಾಡುವಂತಹ ತನ್ನ ಶ್ರೇಷ್ಠವಾದ ನಗರಕ್ಕೆ ನಿನ್ನನ್ನು ಕರೆದುಕೊಂಡುಹೋಗಿ ಅಲ್ಲಿ ನಿನಗೆ ಯೋಗ್ಯವಾದಂತಹ ಶಿಕ್ಷೆಯನ್ನು ಎಂದರೆ ಹಿತೋಪದೇಶವನ್ನು ಪ್ರೀತಿಯಿಂದ ಮಾಡುವಳು.

ವಿಚಿತ್ರೈಃ ಕೋಕಿಲಾಲಾಪಮನೋದ್ಯೈಃ ಕುಂಜಗಣಾವೃತಂ ।
ಸದಾವಸಂತಪ್ರಭವಂ ಗಂತುಮಿಚ್ಛಸಿ ಕಿಂ ಪ್ರಿಯೇ ॥ ೩೪ ॥

ನಾನಾಬಹುಜಲಾಪೂರ್ಣಸರಶ್ಶೀತಸಮಾವೃತಂ ।
ಪದ್ಮಿನೀಶತಶೋಯುಕ್ತಮಚಲೇಂದ್ರಂ ಹಿಮಾಲಯಂ ॥ ೩೫ ॥

ಸರ್ವಕಾಮಪ್ರದೈರ್ವೃಕ್ಷೈಶ್ಚಾದ್ವಲೈಃ ಕಲ್ಪಸಂಜ್ಞಕೈಃ ।
ಸಕ್ಷಣಂ ಪಶ್ಯ ಕುಸುಮಾನ್ಯಥಾಶ್ವಕರಿಗೋವ್ರಜೇ ॥ ೩೬ ॥

ಪ್ರಶಾಂತಶ್ವಾಪದಗಣಂ ಮುನಿಭಿರ್ಯತಿಭಿರ್ವೃತಂ ।
ದೇವಾಲಯೇ ಮಹಾಮಾಯೇ ನಾನಾಮೃಗಗಣೈರ್ಯುತಂ ॥ ೩೭ ॥

ಸ್ಫಟಿಕಸ್ವರ್ಣವಪ್ರಾದ್ಯೈ ರಾಜತೈಶ್ಚ ವಿರಾಜಿತಂ ।
ಮಾನಸಾದಿಸರೋರಂಗೈರಭಿತಃ ಪರಿಶೋಭಿತಂ ॥ ೩೮ ॥

---

೩೪. ಎಲೌ ಪ್ರಿಯಳೆ, ಆಶ್ಚರ್ಯಕರವಾದುದೂ ಕೋಗಿಲೆಗಳ ಇಂಪಾದ ಧ್ವನಿಯುಳ್ಳದುದೂ ಮನೋಹರವಾದ ಲತಾಗೃಹಗಳುಳ್ಳದೂ ಆದಂತಹ ಮತ್ತು ವಸಂತಋತುವಿಗೆ ಜನ್ಮಸ್ಥಾನವೂ ಆದ ಹಿಮಾಲಯಕ್ಕೆ ಹೋಗಿ ವಾಸಮಾಡಲ ಪೇಕ್ಷಿಸುವೆಯಾ ?

೩೫. ಆ ಹಿಮಾಲಯದಲ್ಲಿ ನಿರ್ಮಲವಾದ ಜಲಗಳಿಂದ ತುಂಬಿದ ಶೀತಲ ವಾದ ಸರಸ್ಸುಗಳಿವೆ. ಆ ಸರಸ್ಸು ಮತ್ತು ಸ್ಥಳಗಳಲ್ಲಿ ಪದ್ಮಗಳು ಬಹುವಾಗಿವೆ. ಇಂತಹ ಪರ್ವತರಾಜವಾದ ಹಿಮಾಲಯವನ್ನು ವಾಸಕ್ಕಾಗಿ ಅಪೇಕ್ಷಿಸುವಿಯಾ ?

೩೬-೩೮. ಎಲೌ ದೇವಿ, ಹಿಮಾಲಯವು ನಿನಗಿಷ್ಟವಿಲ್ಲದಿದ್ದರೆ ಸುಂದರ ವಾದ ಮೇರುಪರ್ವತವಿರುವುದು. ಅಲ್ಲಿ ಸಕಲ ಇಷ್ಟಾರ್ಥಗಳನ್ನೂ ಕೊಡುವ ಕಲ್ಪ ವೃಕ್ಷಗಳಿರುವುವು. ಶೀತಲವಾದ ಹಸರುಹಚ್ಚನೆಯದಾದ ಪ್ರದೇಶಗಳಿರುವುವು ಮನೋಹರವಾದ ಪುಷ್ಪಗಳು ಸದಾ ಅರಳಿರುವುವು. ದೇವಾಲಯ ಮತ್ತು ಆಶ್ರಮ ಗಳಲ್ಲಿ ಮುನಿಗಳು ವಾಸಮಾಡುತ್ತಲಿರುವರು. ಅಲ್ಲೆಲ್ಲಾ ಹುಲಿ ಸಿಂಹ ಆನೆ ಮುಂತಾದ ಕ್ರೂರಜಂತುಗಳು ತಮ್ಮ ವೈರವನ್ನು ಬಿಟ್ಟು ಶಾಂತವಾಗಿರುವುವು. ಸಾಧುವಾದ ಹರಿಣ ಮುಂತಾದ ಮೃಗಗಳಿರುವುವು. ಸ್ಫಟಿಕಮಯವಾದ ಮತ್ತು ಸುವರ್ಣರಜತಮಯಗಳಾದ ತಪ್ಪಲುಪ್ರದೇಶಗಳಿರುವುವು. ಮಾನಸಸರಸ್ಸಿನಂತೆ ಪವಿತ್ರವೂ ನಿರ್ಮಲವೂ ಆದ ಸರಸ್ಸುಗಳು ಅಲ್ಲಿ ಬಹುವಾಗಿ ಇರುವುವು.

ಹಿರಣ್ಮಯೈ ರತ್ನಮಾಲೈಃ ಪಂಕಜೈರ್ಮುಕುಲೈರ್ವೃತಂ ।
ಶಿಶುಮಾರೈಸ್ತಥಾಸಂಖ್ಯೈಃ ಕಚ್ಛಪೈರ್ಮಕರೈಃ ಕರೈಃ ॥ ೩೯ ॥

ನಿಷೇವಿತಂ ಮಂಜುಲೈಶ್ಚ ತಥಾ ನೀಲೋತ್ಪಲಾದಿಭಿಃ ।
ದೇವೇಶಿ ತಸ್ಮಾನ್ನುಕ್ತೈಶ್ಚ ಸರ್ವಗಂಧೈಶ್ಚ ಕುಂಕುಮೈಃ ॥ ೪೦ ॥

ಲಸದ್ಗಂಧಜಲೈಃ ಶುಭ್ರೈರಾಪೂರ್ಣೈಃ ಸ್ವಚ್ಛಕಾಂತಿಭಿಃ ।
ಶಾದ್ವಲೈಸ್ತರುಣೈಸ್ತುಂಗೈಸ್ತೀರಸ್ಥೈರುಪಶೋಭಿತಂ ॥ ೪೧ ॥

ನೃತ್ಯದ್ಭಿರಿವ ಶಾಖೋಟ್ಯೈರ್ವರ್ಜಯಂತಂ ಸ್ವಸಂಭವಂ ।
ಕಾಮದೇವ್ಯೈಸ್ಸಾರಸೈಶ್ಚ ಮತ್ತಚಕ್ರಾಂಗಶೋಭಿತೈಃ ॥ ೪೨ ॥

ಮಧುರಾರಾವಿಭಿರ್ನೋದಕಾವಿಭಿರ್ಭ್ರಮರಾದಿಭಿಃ ।
ಶಬ್ದಾಯಮಾನಂ ಚ ಮುದಾ ಕಾಮೋದ್ದೀಪನಕಾರಕಂ ॥ ೪೩ ॥

ವಾಸವಸ್ಯ ಕುಬೇರಸ್ಯ ಯಮಸ್ಯ ವರುಣಸ್ಯ ಚ ।
ಅಗ್ನೇಃ ಕೋಣಪರಾಜಸ್ಯ ಮಾರುತಸ್ಯ ಪರಸ್ಯ ಚ ॥ ೪೪ ॥

---

೩೯-೪೧. ಆ ಸರಸ್ಸುಗಳಲ್ಲಿ ರತ್ನಮಯವಾದ ಅನೇಕ ಸುವರ್ಣಕಮಲಗಳೂ ಮೊಗ್ಗುಗಳೂ ಇರುವುವು. ಕೆಂಪುಮೀನು, ಆಮೆ, ಮೊಸಳೆ, ಚಿಪ್ಪು ಮುಂತಾದುವುಗಳಿರುವುವು. ಸುಂದರವಾದ ಕನ್ನೈದಿಲೆಗಳಿರುವುವು. ಅದರ ತೀರಪ್ರದೇಶಗಳಲ್ಲಿ ಕುಂಕುಮ ಮುಂತಾದ ಸಕಲ ಗೈರಿಕಧಾತುಗಳೂ ಚಂದನ ಮುಂತಾದ ಸುಗಂಧ ದ್ರವ್ಯಗಳೂ ಇರುವುವು. ನಿರ್ಮಲವೂ ಸುವಾಸನೆಯುಳ್ಳದುದೂ ಆದ ಗಿರಿನದಿಗಳು ಹರಿಯುತ್ತಲಿರುವುವು. ಹಸುರಾದ ಹಚ್ಚನೆಯ ಹುಲ್ಲುಪ್ರದೇಶಗಳಿರುವುವು.

೪೨-೪೩. ಎತ್ತರವಾದ ಆಲದಮರಗಳು ಗಾಳಿಯ ಹೊಡೆತದಿಂದ ನರ್ತನ ಮಾಡುವಂತೆ ಕಂಪಿಸುತ್ತಿರುವುವು. ಶೃಂಗಾರಮಯವಾದಂತಹ ಚಕ್ರವಾಕ ದಂಪತಿಗಳೂ ಸಾರಸಪಕ್ಷಿಗಳೂ ಅಲ್ಲಿ ಇಂಪಾಗಿ ಧ್ವನಿಮಾಡುತ್ತಾ ಮನಸ್ಸಿಗೆ ಸಂತೋಷವನ್ನುಂಟುಮಾಡುವುವು. ಹೀಗೆ ಆ ಶೈಲವು ಕಾಮವಿಕಾರವನ್ನು ಹೆಚ್ಚಿಸುವಂತಹುದಾಗಿದ್ದು ಶೃಂಗಾರಚೇಷ್ಟೆಗಳಿಗೆ ಅನುಕೂಲವಾಗಿರುವುದು.

೪೪-೪೫. ಮತ್ತು ಆ ಮೇರುಪರ್ವತಶಿಖರದಲ್ಲಿ ಇಂದ್ರ, ಅಗ್ನಿ, ಯಮ, ವರುಣ, ವಾಯು, ಕುಬೇರ, ನಿಋುತಿ ಈಶಾನ, ಎಂಬ ಅಷ್ಟದಿಕ್ಪಾಲಕರ ಭವನಗಳಿರುವುವು.

ಪುರೀಭಿಶ್ಶೋಭಿಶಿಖರಂ ಮೇರೋರುಚ್ಚೈಸ್ಸುರಾಲಯಂ ।
ರಂಭಾಶಚೀಮೇನಕಾದಿರಂಭೋರುಗಣಸೇವಿತಂ ॥ ೪೫ ॥

ಕಿಂ ತ್ವಮಿಚ್ಛಸಿ ಸರ್ವೇಷಾಂ ಪರ್ವತಾನಾಂ ಹಿ ಭೂಭೃತಾಂ ।
ಸಾರಭೂತೇ ಮಹಾರಮ್ಯೇ ಸಂವಿಹರ್ತುಂ ಮಹಾಗಿರೌ ॥ ೪೬ ॥

ತತ್ರ ದೇವೀ ಸಖೀಯುತಾ ಸಾಪ್ಸರೋಗಣಮಂಡಿತಾ ।
ನಿತ್ಯಂ ಕರಿಷ್ಯತಿ ಶಚೀ ತವ ಯೋಗ್ಯಾಂ ಸಹಾಯತಾಂ ॥ ೪೭ ॥

ಅಥವಾ ಮಮ ಕೈಲಾಸೇ ಪರ್ವತೇಂದ್ರೇ ಸದಾಶ್ರಯೇ ।
ಸ್ಥಾನಮಿಚ್ಛಸಿ ವಿತ್ತೇಶಪುರೀಪರಿವಿರಾಜಿತೇ ॥ ೪೮ ॥

ಗಂಗಾಜಲೌಘಪ್ರಯುತೇ ಪೂರ್ಣಚಂದ್ರಸಮಪ್ರಭೇ ।
ದರೀಷು ಸಾನುಷು ಸದಾ ಬ್ರಹ್ಮಕನ್ಯಾಭ್ಯುದೀರಿತೇ ॥ ೪೯ ॥

ನಾನಾಮೃಗಗಣೈರ್ಯುಕ್ತೇ ಪದ್ಮಾಕರಶತಾವೃತೇ ।
ಸರ್ವೈರ್ಗುಣೈಶ್ಚ ಸದ್ವತ್ಸುಮೇರೋರಪಿ ಸುಂದರಿ ॥ ೫೦ ॥

---

ಮೇಲಿನ ಶಿಖರದಲ್ಲಿ ಸ್ವರ್ಗವು ಇರುವುದು. ಅಲ್ಲಿ ರಂಭೆ, ಶಚೀದೇವಿ ಮೊದಲಾದ ಸುರಸುಂದರಿಯರು ಇರುವರು.

೪೬. ಎಲೌ ದೇವಿ, ಹೀಗೆ ಸಕಲಪರ್ವತಗಳಲ್ಲಿ ಶ್ರೇಷ್ಠವಾದ ಮತ್ತು ಮನೋಹರವಾದ ಮಹಾಮೇರುಪರ್ವತದಲ್ಲಿ ವಿಹರಿಸಲು ನಿನಗೆ ಅಪೇಕ್ಷೆಯುಂಟೇ ?

೪೭. ಆ ಮೇರುಪರ್ವತದಲ್ಲಿ ಶಚೀದೇವಿಯು ಅಪ್ಸರೆಯರೊಡನೆ ಕೂಡಿ ನಿತ್ಯವೂ ನಿನ್ನ ವಿಹಾರಕ್ಕೆ ಸಹಾಯವನ್ನು ಮಾಡುವಳು.

೪೮. ಅಥವಾ ಸತ್ಪುರುಷರಿಗೆ ಆವಾಸವೂ ಪರ್ವತೋತ್ತಮವೂ ಆದ ನನ್ನ ವಾಸಸ್ಥಾನವಾದ ಕೈಲಾಸದಲ್ಲಿ ವಾಸಲಪೇಕ್ಷಿಸುವೆಯಾ ? ಆ ಪರ್ವತದಲ್ಲಿ ಕುಬೇರನ ರಾಜಧಾನಿಯಾದ ಅಲಕಾನಗರವು ಇರುವುದು.

೪೯-೫೦. ಆ ಕೈಲಾಸಪರ್ವತದಲ್ಲಿ ಪವಿತ್ರವಾದ ಗಂಗಾನದಿಯು ಹರಿಯುತ್ತಲಿರುವುದು. ಪೂರ್ಣಚಂದ್ರನಂತೆ ಬೆಳ್ಳಗಿರುವ ಆ ರಜತಗಿರಿಯ ಗುಹೆ ಮತ್ತು ತಪ್ಪಲುಗಳಲ್ಲಿ ಅನೇಕ ಬ್ರಹ್ಮಕನ್ಯೆಯರು ಇರುವರು ಮತ್ತು ಅಲ್ಲಿ ಅನೇಕ ಸಾಧುಮೃಗಗಳಿರುವುವು. ಮನೋಹರವಾದ ಸರೋವರಗಳಿರುವುವು. ಹೀಗೆ ಎಲ್ಲಾ ಗುಣಗಳಿಂದಲೂ ಕೂಡಿರುವ ಆ ಕೈಲಾಸವು ಮೇರುಪರ್ವತವನ್ನೂ ಮೀರಿಸಿರುವುದು.

ಸ್ಥಾನೇಷ್ವೇತೇಷು ಯತ್ರಾಪಿ ತವಾಂತಃಕರಣೇ ಸ್ಪೃಹಾ ।
ತಂ ದ್ರುತಂ ಮೇ ಸಮಾಚಕ್ಷ್ವ ವಾಸಕರ್ತಾಸ್ಮಿ ತತ್ರ ತೇ ॥ ೫೧ ॥

॥ ಬ್ರಹ್ಮೋವಾಚ ॥

ಇತೀರಿತೇ ಶಂಕರೇಣ ತದಾ ದಾಕ್ಷಾಯಣೀ ಶನೈಃ ।
ಇದಮಾಹ ಮಹಾದೇವಂ ಲಕ್ಷಣಂ ಸ್ವಪ್ರಕಾಶನಂ ॥ ೫೨ ॥

॥ ಸತ್ಯುವಾಚ ॥

ಹಿಮಾದ್ರಾವೇವ ವಸತುಮಹಮಿಚ್ಛೇ ತ್ವಯಾ ಸಹ ।
ನ ಚಿರಾತ್ಕುರು ಸಂವಾಸಂ ತಸ್ಮಿನ್ನೇವ ಮಹಾಗಿರೌ ॥ ೫೩ ॥

॥ ಬ್ರಹ್ಮೋವಾಚ ॥

ಅಥ ತದ್ವಾಕ್ಯಮಾಕರ್ಣ್ಯ ಹರಃ ಪರಮಮೋಹಿತಃ ।
ಹಿಮಾದ್ರಿಶಿಖರಂ ತುಂಗಂ ದಾಕ್ಷಾಯಣ್ಯಾ ಸಮಂ ಯಯೌ ॥ ೫೪ ॥

ಸಿದ್ಧಾಂಗನಾಗಣಯುತಮಗಮ್ಯಂ ಚೈವ ಪಕ್ಷಿಭಿಃ ।
ಅಗಮಚ್ಛಿಖರಂ ರಮ್ಯಂ ಸರಸೀವನರಾಜಿತಂ ॥ ೫೫ ॥

---

೫೧. ಈ ಮೇಲೆ ಹೇಳಿದ ಸ್ಥಾನಗಳಲ್ಲಿ ನಿನಗೆ ಯಾವುದು ಇಷ್ಟವಾಗಿ ತೋರುವುದೋ ಅದನ್ನು ಹೇಳು. ಅಲ್ಲಿ ನಿನ್ನ ವಾಸಕ್ಕಾಗಿ ಗೃಹವನ್ನು ನಿರ್ಮಿಸುವೆನು,ಎಂದನು.

೫೨-೫೩. ಬ್ರಹ್ಮನು ಹೇಳಿದನು :—ಎಲೈ ನಾರದ, ಹೀಗೆ ಶಂಕರನು ಹೇಳಲು ಸತೀದೇವಿಯು ಆಗ ಮಹಾದೇವನನ್ನು ಕುರಿತು ಮೃದುಮಧುರವಾದ ಸ್ವರದಿಂದ ಓ ಶಂಕರ, ಹಿಮಾಲಯದಲ್ಲಿಯೇ ನಿನ್ನೊಡನೆ ವಾಸಮಾಡುವೆನು. ಆ ಮಹಾಗಿರಿಯಲ್ಲಿಯೇ ಜಾಗ್ರತೆ ವಾಸಸ್ಥಾನವನ್ನು ಕಲ್ಪಿಸು ಎಂದಳು.

೫೪. ಬ್ರಹ್ಮನು ಹೇಳಿದನು :—ಹೀಗೆ ಸತೀದೇವಿಯು ಹೇಳಲು ಶಂಕರನು ತುಂಬಾ ಸಂತೋಷಗೊಂಡು ಆವಳೊಡನೆ ಎತ್ತರವಾದ ಹಿಮಾಲಯಪರ್ವತದ ಶಿಖರಕ್ಕೆ ತೆರಳಿದನು

೫೫-೫೬. ಆ ಶಿಖರದಲ್ಲಿ ಸಿದ್ಧ ಸುಂದರಿಯರು ವಿಹರಿಸುವರು ಸುಂದರವಾದ ಪಕ್ಷಿಗಳಿರುವುವು. ಪದ್ಮವನಗಳಿರುವುವು. ಪದ್ಮ ಮತ್ತು ಕನ್ನೈದಿಲೆಗಳಿಂದ ಕೂಡಿದ ಸರೋವರಗಳಿರುವುವು. ರತ್ನಮಯವಾಗಿರುವ ಆದರ ಶಿಖರಗಳು ವಿಚಿತ್ರ

ವಿಚಿತ್ರರೂಪೈಃ ಕಮಲೈಃ ಶಿಖರಂ ರತ್ನಕರ್ಬುರಂ ।
ಬಾಲಾರ್ಕಸದೃಶಂ ಶಂಭುರಾಸಸಾದ ಸತೀಸಖಃ ॥ ೫೬ ॥

ಸ್ಫಟಿಕಾಭ್ರಮಯೇ ತಸ್ಮಿನ್ ಶಾದ್ವಲದ್ರುಮರಾಜಿತೇ ।
ವಿಚಿತ್ರಪುಷ್ಪಾವಲಿಭಿಸ್ಸರಸೀಭಿಶ್ಚ ಸಂಯುತೇ ॥ ೫೭ ॥

ಪ್ರಫುಲ್ಲತರುಶಾಖಾಗ್ರಂ ಗುಂಜದ್ಭ್ರಮರಸೇವಿತಂ ।
ಪಂಕೇರುಹೈಃ ಪ್ರಫುಲ್ಲೈಶ್ಚ ನೀಲೋತ್ಪಲಚಯೈಸ್ತಥಾ ॥ ೫೮ ॥

ಶೋಭಿತಂ ಚಕ್ರವಾಕಾದ್ಯೈ ಕಾದಂಬೈರ್ಹಂಸಶಂಕುಭಿಃ ।
ಪ್ರಮತ್ತಸಾರಸೈಃ ಕ್ರೌಂಚೈರ್ನೀಲಸ್ಕಂಧೈಶ್ಚ ಶಬ್ದಿತೈಃ ॥ ೫೯ ॥

ಪುಂಸ್ಕೋಕಿಲಾನಾಂ ನಿನದೈರ್ಮಧುರೈರ್ಗಣಸೇವಿತೈಃ ।
ತುರಂಗವದನೈಸ್ಸಿದ್ಧೈರಪ್ಸರೋಭಿಶ್ಚ ಗುಹ್ಯಕೈಃ ॥ ೬೦ ॥

---

ವಾಗಿಯೂ ಕೆಲವೆಡೆ ಬಾಲಸೂರ್ಯನಂತೆ ರಕ್ತವರ್ಣವುಳ್ಳವುಗಳಾಗಿಯೂ ಶೋಭಿಸುತ್ತಿರುವುವು. ಇಂತಹ ಹಿಮಾಲಯಪರ್ವತಕ್ಕೆ ಶಿವನು ಸತೀದೇವಿಯೊಡನೆ ಹೋದನು.

೫೭-೫೯. ಆ ಶೈಲದಲ್ಲಿ ಸ್ಫಟಿಕದಂತೆ ಶುಭ್ರವಾದ ಮೇಘಗಳು ರಾರಾಜಿಸುವುವು. ಹಸುರಾದ ಹಚ್ಚನೆಯ ಹುಲ್ಲುಪ್ರದೇಶವೂ ನಿಬಿಡವಾದ ನೆರಳುಳ್ಳ ಮರಗಳೂ ಇರುವುವು. ಕಮಲ ಮುಂತಾದ ಅನೇಕ ಪುಷ್ಪಗಳುಳ್ಳ ಸರೋವರಗಳಿರುವುವು. ಅಲ್ಲಿನ ಮರಗಳಲ್ಲೆಲ್ಲಾ ಹೂವುಗಳು ಅರಳಿ ಅವುಗಳಲ್ಲಿ ಮಧುಪಾನಕ್ಕಾಗಿ ದುಂಬಿಗಳು ಮುತ್ತಿ ಝೇಂಕರಿಸುತ್ತಲಿದ್ದುವು, ಆಗತಾನೇ ಅರಳಿದ ಸುಂದರವಾದ ಕಮಲ ಕನ್ನೈದಿಲೆಗಳು ಅಲ್ಲಿರುವುವು. ಚಕ್ರವಾಕ, ಹಂಸ, ಸಾರಸ, ಬಕ, ನವಿಲು, ಮುಂತಾದ ಸುಂದರಪಕ್ಷಿಗಳು ಮನೋಹರವಾಗಿ ಧ್ವನಿಗೈಯ್ಯುತ್ತಿರುವುವು.

೬೦-೬೩. ಮತ್ತು ಗಂಡುಕೋಗಿಲೆಗಳು ಇಂಪಾಗಿ ಧ್ವನಿಗೈಯ್ಯುವುವು. ಪರ್ವತಗಣಗಳು, ತುರಂಗಮುಖರು, ಸಿದ್ಧರು, ವಿದ್ಯಾಧರಿಯರು, ಗುಹ್ಯಕರು, ಅಪ್ಸ

ವಿದ್ಯಾಧರೀಭಿರ್ದೇವೀಭಿಃ ಕಿನ್ನರೀಭಿರ್ವಿಹಾರಿತಂ ।
ಪುರಂಧ್ರೀಭಿಃ ಪಾರ್ವತೀಭಿಃ ಕನ್ಯಾಭಿರಭಿಸಂಗತಂ ॥ ೬೧ ॥

ವಿಪಂಚೀತಾಂತ್ರಿಕಾಮತ್ತಮೃದಂಗಪಟಹಸ್ವನೈಃ ।
ನೃತ್ಯದ್ಭಿರಪ್ಸರೋಭಿಶ್ಚ ಕೌತುಕೋತ್ಥೈಶ್ಚ ಶೋಭಿತಂ ॥ ೬೨ ॥

ದೇವಿಕಾಭಿರ್ದೀರ್ಘಿಕಾಭಿರ್ಗಂಧಿಭಿಸ್ಸುಸಮಾವೃತಂ ।
ಪ್ರಫುಲ್ಲಕುಸುಮೈರ್ನಿತ್ಯಂ ಸುಕುಂಜೈರುಪಶೋಭಿತಂ ॥ ೬೩ ॥

ಶೈಲರಾಜಪುರಾಭ್ಯರ್ಣೇ ಶಿಖರೇ ವೃಷಭಧ್ವಜಃ ।
ಸಹ ಸತ್ಯಾ ಚಿರಂ ರೇಮೇ ಏವಂ ಭೂತೇಷು ಶೋಭನಂ ॥ ೬೪ ॥

ತಸ್ಮಿನ್ಸ್ವರ್ಗಸಮೇ ಸ್ಥಾನೇ ದಿವ್ಯಮಾನೇನ ಶಂಕರಃ ।
ದಶವರ್ಷಸಹಸ್ರಾಣಿ ರೇಮೇ ಸತ್ಯಾ ಸಮಂ ಮುದಾ ॥ ೬೫ ॥

ಸ ಕದಾಚಿತ್ತತಸ್ಸ್ಥಾನಾದನ್ಯದ್ಯಾತಿ ಸ್ಥಲಂ ಹರಃ ।
ಕದಾಚಿನ್ಮೇರುಶಿಖರಂ ದೇವೀದೇವವೃತಂ ಸದಾ ॥ ೬೬ ॥

---

ರೆಯರು, ದೇವಸ್ತ್ರೀಯರು, ಕಿನ್ನರಿಯರು ಮತ್ತು ಆ ಪರ್ವತದ ಸುಮಂಗಲೆಯರು, ಕನ್ಯೆಯರು ಅಲ್ಲಿ ಸ್ವೇಚ್ಛೆಯಾಗಿ ವಿಹರಿಸುವರು. ಅಲ್ಲಿ ವೀಣೆ, ವಾದ್ಯ, ಮೃದಂಗ, ಪಟಹ ಮುಂತಾದ ವಾದ್ಯಗಳೊಡನೆ ಅಪ್ಸರೆಯರು ನಿತ್ಯವೂ ನರ್ತನಮಾಡುವರು. ಅರಳಿದ ಹೂವುಗಳಿಂದ ಸುಂದರವಾದ ಅನೇಕ ಲತಾಗೃಹಗಳಿರುವುವು. ನಿರ್ಮಲವಾದ ಸಣ್ಣ ಕೊಳಗಳೂ ದೊಡ್ಡ ಸರೋವರಗಳೂ ಅಲ್ಲಿ ಹೆಚ್ಚಾಗಿರುವುವು.

೬೪. ಇಂತಹ ಹಿಮಾಲಯದಲ್ಲಿ ಶಂಕರನು ಹಿಮವಂತನ ರಾಜಧಾನಿಗೆ ಸಮೀಪವಾಗಿ ಇರುವ ಒಂದು ಶಿಖರದಲ್ಲಿ ವಾಸಿಸುತ್ತಾ ಸತೀದೇವಿಯೊಡನೆ ಬಹು ಕಾಲ ವಿಹರಿಸಿದನು.

೬೫. ಸ್ವರ್ಗದಂತೆ ಮನೋಹರವಾದ ಆ ಸ್ಥಾನದಲ್ಲಿ ಶಂಕರನು ಹತ್ತುಸಾವಿರ ವರ್ಷಗಳ ಪರ್ಯಂತ ಸತೀದೇವಿಯೊಡನೆ ಸುಖವಾಗಿ ವಿಹರಿಸಿದನು.

೬೬. ಅವನು ಒಮ್ಮೆ ಅಲ್ಲಿಂದ ಬೇರೆ ಶಿಖರಕ್ಕೆ ಹೋಗುವನು. ಒಮ್ಮೆ ದೇವತೆಗಳು, ದೇವಸ್ತ್ರೀಯರು ವಾಸಮಾಡುವ ಮೇರುಪರ್ವತದ ಶಿಖರಕ್ಕೆ ಹೋಗಿ ಬರುವನು.

ದ್ವೀಪಾನ್ನಾನಾ ತಥೋದ್ಯಾನವನಾನಿ ವಸುಧಾತಲಂ ।
ಗತ್ವಾ ಗತ್ವಾಪುನಸ್ತತ್ರಾಭ್ಯೇತ್ಯ ರೇಮೇ ಸತೀಸುಖಂ　　॥ ೬೭ ॥

ನ ಯಜ್ಞೇ ಸ ದಿವಾರಾತ್ರೌ ನ ಬ್ರಹ್ಮಣಿ ತಪಸ್ಸನುಂ ।
ಸತ್ಯಾಂ ಹಿ ಮನಸಾ ಶಂಭುಃ ಪ್ರೀತಿಮೇವ ಚಕಾರ ಹ　　॥ ೬೮ ॥

ಏವಂ ಮಹಾದೇವಮುಖಂ ಸತ್ಯಪಶ್ಯತ್ಸ್ಸ ಸರ್ವದಾ ।
ಮಹಾದೇವೋಽಪಿ ಸರ್ವತ್ರ ಸದಾದ್ರಾಕ್ಷೀತ್ಸತೀಮುಖಂ　　॥ ೬೯ ॥

ಏವಮನ್ಯೋನ್ಯ ಸಂಸರ್ಗಾದನುರಾಗಮಹೀರುಹಂ ।
ವರ್ಧಯಾಮಾಸತುಃ ಕಾಲೀಶಿವೌ ಭಾವಾಂಬುಸೇಚನೈಃ　　॥ ೭೦ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ದ್ವಿತೀಯೇ ಸತೀಖಂಡೇ ಶಿವಾಶಿವವಿವಾಹವರ್ಣನಂ ನಾಮ
ದ್ವಾವಿಂಶೋಽಧ್ಯಾಯಃ

---

೬೭. ದ್ವೀಪಗಳು, ಅನೇಕ ಉದ್ಯಾನವನಗಳು ಮತ್ತು ಉಪವನಗಳು ಮನೋಹರವಾದ ಭೂಪ್ರದೇಶ ಇವುಗಳಿಗೆ ಹೋಗಿ ಆಗಾಗ ಸಂಚರಿಸುತ್ತಾ ಅಲ್ಲಲ್ಲಿ ಸತಿಯೊಡನೆ ವಿಹರಿಸಿ ಉತ್ತಮಸುಖವನ್ನು ಪಡೆಯುತ್ತಿದ್ದನು.

೬೮. ಕರ್ಮಾನುಷ್ಠಾನ, ತಪಸ್ಸು, ಆತ್ಮಸ್ವರೂಪ ಇವುಗಳಲ್ಲಿಯೂ ಆಸಕ್ತಿಯನ್ನು ಬಿಟ್ಟು ರಾತ್ರಿ ಮತ್ತು ಹಗಲೂ ಸಹ ಸತೀದೇವಿಯಲ್ಲಿ ತುಂಬಾ ಅನುರಾಗವುಳ್ಳವನಾಗಿ ಅವಳೊಡನೆ ರಮಿಸಿದನು.

೬೯. ಅದರಂತೆ ಸತೀದೇವಿಯು ಸರ್ವದಾ ಮಹಾದೇವನ ಮುಖವನ್ನೇ ನೋಡುತ್ತಾ ಅವನೊಡನೆ ರಮಿಸಿ ಸುಖವನ್ನು ಹೊಂದಿದಳು. ಮಹಾದೇವನೂ ಸಹ ಎಲ್ಲೆಲ್ಲೂ ಆ ಸತೀದೇವಿಯ ಮುಖವನ್ನೇ ನೋಡಿದನು. ಎಂದರೆ ಸತೀದೇವಿಯಲ್ಲಿನ ಆಸಕ್ತಿಯಿಂದ ಅವನಿಗೆ ಎಲ್ಲೆಲ್ಲೂ ಸತಿಯ ಮುಖವೇ ಕಾಣುವಂತಿದ್ದಿತು.

೭೦. ಹೀಗೆ ಸತೀದೇವಿಯೂ ಮತ್ತು ಪರಮೇಶ್ವರನೂ ಪರಸ್ಪರಸಂಬಂಧದಿಂದ ನಿತ್ಯವೂ ತಮ್ಮ ಅನುರಾಗವೆಂಬ ವೃಕ್ಷವನ್ನು ಶೃಂಗಾರಭಾವಗಳೆಂಬ ಜಲವನ್ನೆರೆದು ಬೆಳೆಸಿದರು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಇಪ್ಪತ್ತೆರಡನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ತ್ರಯೋವಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

**ಏವಂ ಕೃತ್ವಾ ವಿಹಾರಂ ವೈ ಶಂಕರೇಣ ಚ ಸಾ ಸತೀ ।**
**ಸಂತುಷ್ಟಾ ಸಾ ಭವಚ್ಚಾತಿ ವಿರಾಗಾ ಸಮಜಾಯತ ॥ ೧ ॥**

**ಏಕಸ್ಮಿನ್ದಿವಸೇ ದೇವೀ ಸತೀ ರಹಸಿ ಸಂಗತಾ ।**
**ಶಿವಂ ಪ್ರಣಮ್ಯ ಸದ್ಭಕ್ತ್ಯಾ ನ್ಯಸ್ಯೋಚ್ಚೈಃ ಸುಕೃತಾಂಜಲಿಃ ॥ ೨ ॥**

---

## ಇಪ್ಪತ್ತಮೂರನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು :—ಎಲೈ ನಾರದ, ಹೀಗೆ ಶಂಕರನೊಡನೆ ತುಂಬಾ ರಮಿಸಿ ಸತೀದೇವಿಯು ತೃಪ್ತಳಾದಳು ಮತ್ತು ಸಂಸಾರಸುಖದಲ್ಲಿ ಅನುರಾಗವು ಬರಬರುತ್ತ ಕಮ್ಮಿಯಾಯಿತು.

೨. ಹೀಗಿರಲು ಒಂದುದಿನ ಸತೀದೇವಿಯು ಏಕಾಂತದಲ್ಲಿ ಪ್ರಸನ್ನಮುಖದಿಂದಿರುವ ಶಂಕರನನ್ನು ನಮಸ್ಕರಿಸಿ, ಭಕ್ತಿಯಿಂದ ಕೈಮುಗಿದುಕೊಂಡು ವಿನೀತಳಾಗಿ ನಿಂತು,

ಸುಪ್ರಸನ್ನಂ ಪ್ರಭುಂ ನತ್ವಾ ಸಾ ದಕ್ಷತನಯಾ ಸತೀ ।
ಉವಾಚ ಸಾಂಜಲಿರ್ಭಕ್ತ್ಯಾ ವಿನಯಾವನತಾ ತತಃ ॥ ೩ ॥

॥ ಸತ್ಯುವಾಚ ॥

ದೇವದೇವ ಮಹಾದೇವ ಕರುಣಾಸಾಗರ ಪ್ರಭೋ ।
ದೀನೋದ್ಧರ ಮಹಾಯೋಗಿನ್ಕೃಪಾಂ ಕುರು ಮಮೋಪರಿ ॥ ೪ ॥

ತ್ವಂ ಪುರಃ ಪುರುಷಸ್ಸ್ವಾಮೀ ರಜಸ್ಸತ್ತ್ವತಮಃ ಪರಃ ।
ನಿರ್ಗುಣಸ್ಸಗುಣಸ್ಸಾಕ್ಷೀ ನಿರ್ವಿಕಾರೀ ಮಹಾಪ್ರಭುಃ ॥ ೫ ॥

ಧನ್ಯಾಹಂ ತೇ ಪ್ರಿಯಾ ಜಾತಾ ಕಾಮಿನೀ ಸುವಿಹಾರಿಣೀ ।
ಜಾತಸ್ತ್ವಂ ಮೇ ಪತಿಸ್ಸ್ವಾಮಿನ್ಭಕ್ತಿವಾತ್ಸಲ್ಯತೋ ಹರ ॥ ೬ ॥

ಕೃತ್ವಾ ಬಹುಸಮಾ ನಾಥ ವಿಹಾರಃ ಪರಮಸ್ತ್ವಯಾ ।
ಸಂತುಷ್ಟಾಹಂ ಮಹೇಶಾನ ನಿವೃತ್ತಂ ತೇ ಮನಸ್ತತಃ ॥ ೭ ॥

---

೩. ಸತೀದೇವಿಯು ಹೇಳಿದಳು:—ಓ ಮಹಾದೇವ, ನೀನು ದೇವದೇವನು, ಜಗದೊಡೆಯನು, ದೀನರನ್ನು ಉದ್ಧರಿಸುವವನು, ಮಹಾಯೋಗಿಯು, ಕರುಣಾಮಯನು, ಇಂತಹ ನೀನು ನನ್ನನ್ನು ಅನುಗ್ರಹಿಸುವವನಾಗು.

೪-೫. ಓ ಸ್ವಾಮಿ, ನೀನು ಪರಮಪುರುಷನು, ಸತ್ತ್ವರಜಸ್ತಮೋರೂಪವಾದ ಪ್ರಕೃತಿಗಿಂತ ಭಿನ್ನನು, ನಿರ್ಗುಣನು. ಆದರೂ ಮಾಯೆಯ ನಿಮಿತ್ತದಿಂದ ಸಗುಣಭಾವವನ್ನು ಹೊಂದಿ ಸೃಷ್ಟಿ-ಸ್ಥಿತಿ-ಲಯಗಳನ್ನು ಮಾಡುವ ಈಶ್ವರನು. ಜಗತ್ತಿನ ಆಗುಹೋಗುಗಳಿಗೆ ಸಾಕ್ಷಿಯು, ವಾಸ್ತವವಾಗಿ ಯಾವ ವಿಕಾರವೂ ಇಲ್ಲದವನು, ಮಹಾಪ್ರಭುವು.

೬. ಇಂತಹ ನಿನ್ನನ್ನು ಪತಿಯಾಗಿ ಪಡೆದು ನಿನ್ನೊಡನೆ ವಿಹರಿಸುವ ನಾನು ತುಂಬಾ ಧನ್ಯಳು. ನನ್ನ ಭಕ್ತಿಗೆ ಅಧೀನನಾಗಿ ನೀನು ಪ್ರೇಮದಿಂದ ನನ್ನ ಪತಿಯಾಗಿರುವೆ.

೭. ಓ ಪ್ರಾಣನಾಥ, ನಿನ್ನೊಡನೆ ಅನೇಕ ವರ್ಷಗಳ ಕಾಲ ಯಥೇಚ್ಛೆಯಾಗಿ ವಿಹರಿಸಿ ಸಂತುಷ್ಟಳಾಗಿರುವೆನು. ನನ್ನ ಮನಸ್ಸು ಕಾಮಾಭಿಲಾಷೆಯಿಂದ ತೃಪ್ತವಾಗಿ ಹಿಂತಿರುಗಿರುವುದು.

ಜ್ಞಾತುಮಿಚ್ಛಾಮಿ ದೇವೇಶ ಪರಂ ತತ್ತ್ವಂ ಸುಖಾವಹಂ ।
ಯಂ ನ ಸಂಸಾರದುಃಖಾದ್ವೈ ತರೇಜ್ಜೀವೋಽಂಜಸಾ ಹರ ॥ ೮ ॥

ಯತ್ಕೃತ್ವಾ ವಿಷಯೀ ಜೀವಸ್ಸ ಲಭೇತ್ಪರಮಂ ಪದಂ ।
ಸಂಸಾರೀ ನ ಭವೇನ್ನಾಥ ತತ್ತ್ವಂ ವದ ಕೃಪಾಂ ಕುರು ॥ ೯ ॥

॥ ಬ್ರಹ್ಮೋವಾಚ ॥

ಇತ್ಯಪೃಚ್ಛತ್ಸ್ಮ ಸದ್ಭಕ್ತ್ಯಾ ಶಂಕರಂ ಸಾ ಸತೀ ಮುನೇ ।
ಆದಿಶಕ್ತಿರ್ಮಹೇಶಾನೀ ಜೀವೋದ್ಧಾರಾಯ ಕೇವಲಂ ॥ ೧೦ ॥

ಆಕರ್ಣ್ಯ ತಚ್ಛಿವಃ ಸ್ವಾಮೀ ಸ್ವೇಚ್ಛಯೋಪಾತ್ತವಿಗ್ರಹಃ ।
ಅವೋಚತ್ಪರಮಪ್ರೀತಸ್ಸತೀಂ ಯೋಗವಿರಕ್ತಧೀಃ ॥ ೧೧ ॥

---

೮. ಓ ದೇವದೇವ, ಯಾವ ವಸ್ತುವನ್ನು ತಿಳಿದರೆ ಜೀವನು ಸಂಸಾರಸಾಗರವನ್ನು ದಾಟಬಹುದೋ ಆ ಸುಖಸ್ವರೂಪವಾದ ಪರತತ್ತ್ವವನ್ನು ಕೇಳಿ ತಿಳಿದುಕೊಳ್ಳಲಿಚ್ಛಿಸುವೆನು.

೯. ಯಾವುದನ್ನು ಅನುಷ್ಠಾನಮಾಡಿದರೆ ಜೀವನು ಆ ಪರವಸ್ತುವನ್ನು ಪಡೆದು ತಿರುಗಿ ಸಂಸಾರಿಯಾಗುವುದಿಲ್ಲವೋ ಅಂತಹ ಪರತತ್ತ್ವವನ್ನು ನನಗೆ ವಿವರಿಸಿ ಹೇಳಿ ಅನುಗ್ರಹಮಾಡು ಎಂದಳು.

೧೦. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ಆದಿಶಕ್ತಿಯಾದ ಸತೀದೇವಿಯು ತಾನು ತಿಳಿದವಳಾಗಿದ್ದರೂ ಜೀವರನ್ನುದ್ಧರಿಸುವುದಕ್ಕಾಗಿ ಪರಮೇಶ್ವರನನ್ನು ಪ್ರಶ್ನೆಮಾಡಿದಳು.

೧೧. ಲೀಲಾವಿಗ್ರಹಧಾರಿಯಾದ ಶಿವನು ಸತೀದೇವಿಯ ಆ ಮಾತನ್ನು ಕೇಳಿ ಸಂತೋಷಗೊಂಡು ಮಹಾಯೋಗಿಯೂ ವಿರಾಗಿಯೂ ಆದ ಅವನು ಅವಳನ್ನು ಕುರಿತು,

॥ ಶಿವ ಉವಾಚ ॥

ಶೃಣು ದೇವಿ ಪ್ರವಕ್ಷ್ಯಾಮಿ ದಾಕ್ಷಾಯಣಿ ಮಹೇಶ್ವರಿ ।
ಪರಂ ತತ್ತ್ವಂ ತದೇವಾನುಶಯಿಾ ಮುಕ್ತೋ ಭವೇದ್ಯತಃ ॥ ೧೨ ॥

ಪರತತ್ತ್ವಂ ವಿಜಾನೀಹಿ ವಿಜ್ಞಾನಂ ಪರಮೇಶ್ವರಿ ।
ದ್ವಿತೀಯಂ ಸ್ಮರಣಂ ಯತ್ರ ನಾಹಂ ಬ್ರಹ್ಮೇತಿ ಶುದ್ಧಧೀಃ ॥ ೧೩ ॥

ತದ್ದುರ್ಲಭಂ ತ್ರಿಲೋಕೇಸ್ಮಿಂಸ್ತಜ್ಞಾತಾ ವಿರಲಃ ಪ್ರಿಯೇ ।
ಯಾದೃಶೋ ಯಸ್ಸ ದಾಸೋಽಹಂ ಬ್ರಹ್ಮ ಸ್ಸಾಕ್ಷಾತ್ಪರಾತ್ಪರಃ ॥ ೧೪ ॥

---

೧೨. ಶಿವನು ಹೇಳಿದನು :—ಎಲೌ ದೇವಿ, ನೀನಂದಂತೆ ಪರತತ್ತ್ವವನ್ನು ತಿಳಿದರೆ ಜೀವನು ಮುಕ್ತನಾಗುವನು, ಆ ಪರತತ್ತ್ವವನ್ನು ನಿನಗೆ ಹೇಳುವೆನು ಕೇಳು.

೧೩. ಎಲೌ ಪರಮೇಶ್ವರಿ, ಮೊದಲು ಪರಮಾತ್ಮನನ್ನು ಗುರುಮುಖವಾಗಿ ವೇದಶಾಸ್ತ್ರಗಳಿಂದ ಶ್ರವಣಮಾಡಿ ತಿಳಿದುಕೊಳ್ಳಬೇಕು. ಬಳಿಕ ನಾನೇ ಆ ಪರಮಾತ್ಮ ವಸ್ತುವೆಂದು ಶುದ್ಧ ಮನಸ್ಸಿನಿಂದ ಚಿಂತಿಸಬೇಕು.

೧೪. ಆ ಪರತತ್ತ್ವವನ್ನು ತಿಳಿಯುವುದು ಬಹಳ ಕಷ್ಟವು, ನಾನೇ ಆ ಸರ್ವೋತ್ಕೃಷ್ಟವಾದ ಪರಬ್ರಹ್ಮನು ಎಂದು ತಿಳಿಯುವ ಜ್ಞಾನಿಯು ವಿರಳನು.

ವೇದಶಾಸ್ತ್ರಾದಿಗಳಲ್ಲಿ ನಿರೂಪಿಸಿರುವ ಪರತತ್ತ್ವವನ್ನು ಓದಿ, ತಿಳಿದುಕೊಳ್ಳುವುದಕ್ಕೆ ಅಷ್ಟೇಕೆ ಕಷ್ಟವೆಂದು ಕೇಳಬಹುದು. ಶಾಸ್ತ್ರಾದಿಗಳಲ್ಲಿ ಹೇಳಿರುವ ಬ್ರಹ್ಮ ಸ್ವರೂಪವನ್ನು ಸುಮ್ಮನೆ ಓದಿ ಅರ್ಥಮಾಡಿಕೊಳ್ಳುವುದರಿಂದ ಅದನ್ನು ತಿಳಿದಂತಾಗಲಿಲ್ಲ. ಮೊದಲು ಶಾಸ್ತ್ರಾಧ್ಯಯನವನ್ನು ಗುರುಮುಖದಿಂದ ಮಾಡಿ ಅದರ ರಹಸ್ಯಾರ್ಥಗಳನ್ನು ಮನಸ್ಸಿನಲ್ಲಿ ಚೆನ್ನಾಗಿ ವಿಮರ್ಶೆಮಾಡಿ ಮನನಮಾಡಬೇಕು. ಪ್ರತಿಯೊಂದು ವಿಷಯವನ್ನೂ ಕಾರಣಸಹಿತವಾಗಿ ವಿಮರ್ಶೆಮಾಡಬೇಕು. ವಿಮರ್ಶೆ ಮಾಡುವ ವಿಷಯವು ಕಾರಣಸಹಿತವಾಗಿಯೂ, ಲೋಕಾನುಭವಕ್ಕೆ ವಿರುದ್ಧವಲ್ಲದೆಯೂ ಇದ್ದರೆ ಮಾತ್ರ ಅದನ್ನು ಅಂಗೀಕರಿಸಬೇಕು. ಸುಮ್ಮನೆ ಮೂಢನಂಬಿಕೆಯಿಂದ ಯಾವುದನ್ನೂ ನಂಬಬೇಕಾಗಿಲ್ಲ.

ತನ್ಮಾತಾ ಮಮ ಭಕ್ತಿಶ್ಚ ಭುಕ್ತಿಮುಕ್ತಿಫಲಪ್ರದಾ ।
ಸುಲಭಾ ಮತ್ಪ್ರಸಾದಾದ್ಧಿ ನವಧಾ ಸಾ ಪ್ರಕೀರ್ತಿತಾ ॥ ೧೫ ॥

ಭಕ್ತೌ ಜ್ಞಾನೇ ನ ಭೇದೋ ಹಿ ತತ್ಕರ್ತುಸ್ಸರ್ವದಾ ಸುಖಂ ।
ವಿಜ್ಞಾನಂ ನ ಭವತ್ಯೇವ ಸತಿ ಭಕ್ತಿವಿರೋಧಿನಃ ॥ ೧೬ ॥

ಭಕ್ತ್ಯಾ ಹೀನಸ್ಸದಾಹಂ ವೈ ತತ್ಪ್ರಭಾವಾದ್ಗೃಹೇಷ್ವಪಿ ।
ನೀಚಾನಾಂ ಜಾತಿಹೀನಾನಾಂ ಯಾಮಿ ದೇಹಿ ನ ಸಂಶಯಃ ॥ ೧೭ ॥

ಸಾ ಭಕ್ತಿರ್ದ್ವಿವಿಧಾ ದೇವಿ ಸಗುಣಾ ನಿರ್ಗುಣಾ ಮತಾ ।
ವೈಧೀ ಸ್ವಾಭಾವಿಕೀ ಯಾ ಯಾ ವರಾ ಸಾ ತ್ವವರಾ ಸ್ಮೃತಾ ॥ ೧೮ ॥

---

೧೫. ಎಲೌ ಕಾಳಿ, ಆ ಪರಬ್ರಹ್ಮನಲ್ಲಿ ಭಕ್ತಿಯನ್ನಿರಿಸಿದರೆ ಭೋಗಮುಕ್ತಿಗಳು ಲಭಿಸುವವು. ಆ ಭಕ್ತಿಯು ಒಂಭತ್ತು ವಿಧವಾಗಿರುವದು. ನನ್ನ ಪ್ರಸಾದದಿಂದ ಆ ಭಕ್ತಿಯುಂಟಾಗುವದು.

೧೬. ಭಕ್ತಿಯೂ, ಜ್ಞಾನವೂ ಎರಡು ಒಂದೇ, ಭಿನ್ನವಲ್ಲ. ಒಂದೇ ರೀತಿಯಾಗಿ ಫಲವನ್ನುಂಟುಮಾಡುವವು. ಭಕ್ತಿಯುಳ್ಳವನು ಸದಾ ಸುಖವನ್ನು ಹೊಂದುವನು. ಭಕ್ತಿಯುಂಟಾಗದಿದ್ದರೆ ಜ್ಞಾನವು ಉಂಟಾಗುವುದೇ ಇಲ್ಲ. ಎಂದರೆ ಜ್ಞಾನಕ್ಕೆ ಭಕ್ತಿಯು ದ್ವಾರವು. ಭಕ್ತಿಯಿಂದ ಜ್ಞಾನವನ್ನು ಪಡೆದು ತನ್ಮೂಲಕ ಮುಕ್ತಿಯನ್ನು ಪಡೆಯಬೇಕು.

೧೭. ಎಲೌ ದೇವಿ, ನಾನು ಭಕ್ತಿಗೆ ಅಧೀನನು. ಆದಕಾರಣ ನನ್ನಲ್ಲಿ ಭಕ್ತಿಯುಳ್ಳವರು ನೀಚರಾಗಿದ್ದರೂ ಅವರ ಮನೆಗೆ ಹೋಗುವೆನು.

೧೮. ಮತ್ತು ಆ ಭಕ್ತಿಯು ಸಗುಣಾ ನಿರ್ಗುಣಾ ಎಂದು ಎರಡು ವಿಧವಾಗಿರುವುದು. ಸ್ವಭಾವಜನ್ಯವಾಗಿಯೇ ಉಂಟಾಗುವ ನಿಜವಾದ ಭಕ್ತಿಯು ಶ್ರೇಷ್ಠವಾದುದು. ವಿಧಿಯಿಂದ ಪ್ರಯತ್ನಪೂರ್ವಕವಾಗಿ ಉಂಟಾಗುವ ಭಕ್ತಿಯು ಅಷ್ಟು ಶ್ರೇಷ್ಠವಲ್ಲ.

ನೈಷ್ಠಿಕ್ಯನೈಷ್ಠಿಕೀಭೇದಾದ್ದ್ವಿವಿಧೇ ದ್ವಿವಿಧೇ ಹಿ ತೇ ।
ಷಡ್ವಿಧಾ ನೈಷ್ಠಿಕೀ ಜ್ಞೇಯಾ ದ್ವಿತೀಯೈಕವಿಧಾ ಸ್ಮೃತಾ ॥ ೧೯ ॥

ವಿಹಿತಾವಿಹಿತಾಭೇದಾತ್ತಾಮನೇಕಾಂ ವಿದುರ್ಬುಧಾಃ ।
ತಯೋರ್ಬಹುವಿಧತ್ವಾಚ್ಚ ತತ್ತ್ವಂ ತ್ವನ್ಯತ್ರ ವರ್ಣಿತಂ ॥ ೨೦ ॥

ತೇ ನವಾಂಗೇ ಉಭೇ ಜ್ಞೇಯೇ ವರ್ಣಿತೇ ಮುನಿಭಿಃ ಪ್ರಿಯೇ ।
ವರ್ಣಯಾಮಿ ನವಾಂಗಾನಿ ಪ್ರೇಮತಃ ಶೃಣು ದಕ್ಷಜೇ ॥ ೨೧ ॥

ಶ್ರವಣಂ ಕೀರ್ತನಂ ಚೈವ ಸ್ಮರಣಂ ಸೇವನಂ ತಥಾ ।
ದಾಸ್ಯಂ ತಥಾರ್ಚನಂ ದೇವಿ ವಂದನಂ ಮಮ ಸರ್ವದಾ ॥ ೨೨ ॥

ಸಖ್ಯಮಾತ್ಮಾರ್ಪಣಂ ಚೇತಿ ನವಾಂಗಾನಿ ವಿದುರ್ಬುಧಾಃ ।
ಉಪಾಂಗಾನಿ ಶಿವೇ ತಸ್ಯಾ ಬಹೂನಿ ಕಥಿತಾನಿ ವೈ ॥ ೨೩ ॥

---

೧೯. ಮೇಲೆ ಹೇಳಿದ ಭಕ್ತಿಗಳೆರಡೂ ನೈಷ್ಠಿಕೀ ಅನೈಷ್ಠಿಕೀ ಎಂದು ಎರಡೆರಡು ವಿಧವಾಗಿರುವವು. ಅದರಲ್ಲಿ ನೈಷ್ಠಿಕ ಭಕ್ತಿಯು ಆರು ವಿಧವಾಗಿರುವದು. ಅನೈಷ್ಠಿಕ ಭಕ್ತಿಯು ಒಂದೇ ವಿಧವಾಗಿರುವದು.

೨೦. ಈ ಎಲ್ಲ ಭಕ್ತಿಗಳನ್ನು ವಿಹಿತಭಕ್ತಿ ಅವಿಹಿತಭಕ್ತಿ ಎಂದು ಅನೇಕ ವಿಧವಾಗಿ ಹೇಳುವರು. ಅವುಗಳ ಸ್ವರೂಪವು ವಿಸ್ತಾರವಾಗಿ ಬೇರೆ ಬೇರೆ ಗ್ರಂಥಗಳಲ್ಲಿ ವರ್ಣಿಸಲ್ಪಟ್ಟಿರುವದು.

೨೧. ಎಲೌ ಪ್ರಿಯೆ, ವಿಹಿತಭಕ್ತಿ ಮತ್ತು ಅವಿಹಿತಭಕ್ತಿಗಳಿಗೆ ಮುನಿಗಳು ಒಂಭತ್ತು ಅಂಗಗಳನ್ನು ಹೇಳಿರುವರು. ಅದನ್ನು ನಿನಗೆ ಹೇಳುವೆನು. ಆದರದಿಂದ ಕೇಳು.

೨೨. ಶ್ರವಣ, ಕೀರ್ತನ, ಸ್ಮರಣ, ಸೇವನ, ದಾಸ್ಯ, ಅರ್ಚನ, ವಂದನ, ಸಖ್ಯ, ಆತ್ಮಾರ್ಪಣೆ ಇವು ಒಂಭತ್ತೂ ಆ ಭಕ್ತಿಯ ಅಂಗಗಳು.

೨೩-೨೪. ಎಲೌ ಸತಿ, ಭಕ್ತಿಗೆ ಇನ್ನು ಅನೇಕ ಉಪಾಂಗಗಳು ಹೇಳಲ್ಪಟ್ಟಿರುವವು. ಈಗ ಆ ಒಂಭತ್ತು ಅಂಗಗಳ ಲಕ್ಷಣಗಳನ್ನು ಬೇರೆ ಬೇರೆಯಾಗಿ ಹೇಳು

ಶೃಣು ದೇವಿ ನವಾಂಗಾನಾಂ ಲಕ್ಷಣಾನಿ ಪೃಥಕ್ಪೃಥಕ್ ।
ಮಮ ಭಕ್ತೇರ್ಮನೋ ದತ್ವಾ ಭುಕ್ತಿಮುಕ್ತಿಪ್ರದಾನಿ ಚ ॥ ೨೪ ॥

ಕಥಾದೇರ್ನಿತ್ಯಸಂಮಾನಂ ಕುರ್ವನ್ದೇಹಾದಿಭಿರ್ಮುದಾ ।
ಸ್ಥಿರಾಸನೇನ ತತ್ಪಾನಂ ಯತ್ತಚ್ಛ್ರವಣಮುಚ್ಯತೇ ॥ ೨೫ ॥

ಹೃದಾಕಾಶೇನ ಸಂಪಶ್ಯನ್ ಜನ್ಮಕರ್ಮಾಣಿ ವೈ ಮಮ ।
ಪ್ರೀತ್ಯೋಚ್ಚೋಚ್ಚಾರಣಂ ತೇಷಾಮೇತತ್ಕೀರ್ತನಮುಚ್ಯತೇ ॥ ೨೬ ॥

ವ್ಯಾಪಕಂ ದೇವಿ ಮಾಂ ದೃಷ್ಟ್ವಾ ನಿತ್ಯಂ ಸರ್ವತ್ರ ಸರ್ವದಾ ।
ನಿರ್ಭಯತ್ವಂ ಸದಾ ಲೋಕೇ ಸ್ಮರಣಂ ತದುದಾಹೃತು ॥ ೨೭ ॥

ಅರುಣೋದಯಮಾರಭ್ಯ ಸೇವಾಕಾಲೇಂಚಿತಾ ಹೃದಾ ।
ನಿರ್ಭಯತ್ವಂ ಸದಾ ಲೋಕೇ ಸ್ಮರಣಂ ತದುದಾಹೃತಂ ॥ ೨೮ ॥

---

ವೆನು. ಭೋಗ ಮತ್ತು ಮುಕ್ತಿಸಾಧಕಗಳಾದ ಆ ಲಕ್ಷಣಗಳನ್ನು ಸ್ಥಿರವಾದ ಮನಸ್ಸಿನಿಂದ ಕೇಳು.

೨೫. ನಿತ್ಯವೂ ಸ್ಥಿರವಾದ ಮನಸ್ಸಿನಿಂದ ನನ್ನ ಕಥೆಯನ್ನು ಆದರವಿಟ್ಟು ಕೇಳುವದು ಶ್ರವಣವು.

೨೬. ನನ್ನನ್ನು ಧ್ಯಾನಿಸುತ್ತಾ ನನ್ನ ಅವತಾರಾದಿ ಲೀಲಾಭೂತಿಗಳನ್ನು ನಿತ್ಯವೂ ಪ್ರೀತಿಯಿಂದ ಗಟ್ಟಿಯಾಗಿ ಉಚ್ಚರಿಸುವದು ಕೀರ್ತನವು.

೨೭. ಎಲೌ ದೇವಿ, ನಾನು ಸದಾ ಎಲ್ಲೆಡೆಯಲ್ಲಿಯೂ ಇರುನೆನೆಂದು ತಿಳಿದು ಯಾವ ಭಯವೂ ಇಲ್ಲದೇ ಸ್ಮರಿಸುವದು ಸ್ಮರಣವು.

೨೮. ಮತ್ತು ಅರುಣೋದಯ ಮೊದಲುಗೊಂಡು ಆ ದಿನವೆಲ್ಲಾ ನಿರ್ಭಯ ನಾಗಿದ್ದು ನನ್ನನ್ನು ಸ್ಮರಿಸುವದು ಸ್ಮರಣವು.

ಸದಾ ಸೇವ್ಯಾನುಕೂಲ್ಯೇನ ಸೇವನಂ ತದ್ಧಿಗೋಗಣೈಃ ।
ಹೃದಯಾಮೃತಭೋಗೇನ ಪ್ರಿಯಂ ದಾಸ್ಯಮುದಾಹೃತಂ ॥ ೨೯ ॥

ಸದಾ ಭೃತ್ಯನುಕೂಲ್ಯೇನ ವಿಧಿನಾ ಮೇ ಪರಾತ್ಮನೇ ।
ಅರ್ಪಣಂ ಷೋಡಶಾನಾಂ ವೈ ಪಾದ್ಯಾದೀನಾಂ ತದರ್ಚನಂ ॥ ೩೦ ॥

ಮಂತ್ರೋಚ್ಚಾರಣಧ್ಯಾನಾಭ್ಯಾಂ ಮನಸಾ ವಚಸಾ ಕ್ರಮಾತ್ ।
ಯದಷ್ಟಾಂಗೇನ ಭೂಸ್ಪರ್ಶಂ ತದ್ವೈ ವಂದನಮುಚ್ಯತೇ ॥ ೩೧ ॥

ಮಂಗಲಾಮಂಗಲಂ ಯದ್ಯತ್ಕರೋತೀತೀಶ್ವರೋ ಹಿ ಮೇ ।
ಸರ್ವಂ ತನ್ಮಂಗಲಾಯೇತಿ ವಿಶ್ವಾಸಃ ಸಖ್ಯಲಕ್ಷಣಂ ॥ ೩೨ ॥

ಕೃತ್ವಾ ದೇಹಾದಿಕಂ ತಸ್ಯ ಪ್ರೀತ್ಯೈ ಸರ್ವಂ ತದರ್ಪಣಂ ।
ನಿರ್ವಾಹಾಯ ಚ ಶೂನ್ಯತ್ವಂ ಯತ್ತದಾತ್ಮಸಮರ್ಪಣಂ ॥ ೩೩ ॥

---

೨೯. ಪಂಚಕರ್ಮೇಂದ್ರಿಯಗಳು, ಪಂಚ ಜ್ಞಾನೇಂದ್ರಿಯಗಳು, ಮನಸ್ಸು ಇವುಗಳಿಂದ ಸದಾ ನನ್ನನ್ನು ಸೇವಿಸುತ್ತಾ ಅದರಿಂದುಂಟಾಗುವ ಆನಂದಾಮೃತದಿಂದ ಸಂತೋಷಪಡುವದೇ ದಾಸ್ಯವೆನಿಸುವದು. ಈ ದಾಸ್ಯವು ನನಗೆ ಬಹು ಪ್ರಿಯವಾದುದು.

೩೦. ಸದಾ ಪರಮಾತ್ಮನಾದ ನನಗೆ ತನ್ನ ಶಕ್ತಿಗನುಸಾರವಾಗಿ ಪಾದ್ಯ ಮೊದಲಾದ ಷೋಡಶೋಪಚಾರಗಳನ್ನು ಮಾಡುವದು ಅರ್ಚನವು.

೩೧. ವಾಕ್ಕಿನಿಂದ ಮಂತ್ರವನ್ನುಚ್ಚರಿಸುತ್ತಾ ಮನಸ್ಸಿನಲ್ಲಿ ಧ್ಯಾನಿಸುತ್ತಾ. "ಉರಸಾ ಶಿರಸಾ ಭಕ್ತ್ಯಾ ಮನಸಾ ವಚಸಾ ತಥಾ । ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಈರಿತಃ ॥ ಎಂದು ಮೊದಲಾಗಿ ಹೇಳಿರುವಂತೆ ಅಷ್ಟಾಂಗಪ್ರಣಾಮಗಳನ್ನು ಮಾಡುವದು ವಂದನವು.

೩೨. ಒಳ್ಳೆಯದಾಗಲೀ, ' ಕೆಡುಕಾಗಲೀ ಯಾವದನ್ನು ಈಶ್ವರನು ನನಗೆ ಮಾಡಿಸುವನೋ ಅದೆಲ್ಲವೂ ನಮಗೆ ಒಳ್ಳೆಯದಕ್ಕಾಗಿಯೇ, ಮಂಗಲಕ್ಕಾಗಿಯೇ ಎಂದು ವಿಶ್ವಾಸವಿಡುವದು ಸಖ್ಯವು.

೩೩. ತನ್ನ ಶರೀರ ಮೊದಲುಗೊಂಡು ಎಲ್ಲವನ್ನೂ ಈಶ್ವರನಿಗೆ ಭಕ್ತಿಯಿಂದ ಅರ್ಪಿಸುವದೇ ಆತ್ಮಸಮರ್ಪಣವು.

ನವಾಂಗಾನೀತಿ ಮದ್ಭಕ್ತೇರ್ಭುಕ್ತಿಮುಕ್ತಿಪ್ರದಾನಿ ಚ ।
ಮಮ ಪ್ರಿಯಾಣಿ ಚಾತೀವ ಜ್ಞಾನೋತ್ಪತ್ತಿಕರಾಣಿ ಚ ॥ ೩೪ ॥

ಉಪಾಂಗಾನಿ ಚ ಮದ್ಭಕ್ತೇರ್ಬಹೂನಿ ಕಥಿತಾನಿ ವೈ ।
ಬಿಲ್ವಾದಿಸೇವನಾದೀನಿ ಸಮೂಹ್ಯಾನಿ ವಿಚಾರತಃ ॥ ೩೫ ॥

ಇತ್ಥಂ ಸಾಂಗೋಪಾಂಗಭಕ್ತಿರ್ಮಮ ಸರ್ವೋತ್ತಮಾ ಪ್ರಿಯೇ ।
ಜ್ಞಾನವೈರಾಗ್ಯಜನನೀ ಮುಕ್ತಿದಾಸೀ ವಿರಾಜತೇ ॥ ೩೬ ॥

ಸರ್ವಕರ್ಮಫಲೋತ್ಪತ್ತಿಸ್ಸರ್ವದಾ ತ್ವತ್ಸಮಪ್ರಿಯಾ ।
ಯಚ್ಚಿತ್ತೇ ಸಾ ಸ್ಥಿತಾ ನಿತ್ಯಂ ಸರ್ವದಾ ಸೋಽತಿ ಮತ್ಪ್ರಿಯಃ ॥ ೩೭ ॥

ತ್ರೈಲೋಕ್ಯೇ ಭಕ್ತಿಸದೃಶಃ ಪಂಥಾ ನಾಸ್ತಿ ಸುಖಾವಹಃ ।
ಚತುರ್ಯುಗೇಷು ದೇವೇಶಿ ಕಲೌ ತು ಸುವಿಶೇಷತಃ ॥ ೩೮ ॥

---

೩೪. ಇವು ನನ್ನ ಭಕ್ತಿಯ ಒಂಭತ್ತು ಅಂಗಗಳ ಲಕ್ಷಣಗಳು. ಇವು ನನಗೆ ಅತಿಪ್ರಿಯವಾದುವು. ಜ್ಞಾನವನ್ನುಂಟುಮಾಡುವವು.

೩೫. ಇನ್ನೂ ಬಿಲ್ವಸೇವೆ ಮುಂತಾದ ಅನೇಕ ಉಪಾಂಗಗಳು ಇರುವವು. ಅವುಗಳನ್ನು ಬೇರೆ ಗ್ರಂಥಗಳಿಂದ ತಿಳಿದು ಅನುಷ್ಠಾನಮಾಡಬೇಕು.

೩೬. ಎಲೌ ಪ್ರಿಯೆ, ಹೀಗೆ ಅಂಗ ಮತ್ತು ಉಪಾಂಗಗಳಿಂದ ಕೂಡಿದ ನನ್ನ ಭಕ್ತಿಯು ಜ್ಞಾನವೈರಾಗ್ಯಗಳನ್ನು ಉಂಟುಮಾಡಿ ಆ ಮೂಲಕ ಮುಕ್ತಿಯನ್ನು ಕೊಡುವದು.

೩೭. ಆ ಭಕ್ತಿಯಿಂದ ಸಕಲ ಕರ್ಮಗಳ ಫಲವು ಲಭಿಸುವದು. ನಿನ್ನಂತೆ ನನಗೆ ಆ ಭಕ್ತಿಯು ತುಂಬಾ ಪ್ರಿಯವಾದುದು. ಆ ಭಕ್ತಿಯುಳ್ಳವನೂ ನನಗೆ ತುಂಬಾ ಪ್ರಿಯನು.

೩೮. ಮೂರು ಲೋಕಗಳಲ್ಲಿ ನಾಲ್ಕು ಯುಗಗಳಲ್ಲೂ ಸಹ ಭಕ್ತಿಯಂತಹ ಸುಖಸಾಧನವಾದ ಮಾರ್ಗವು ಇನ್ನೊಂದಿಲ್ಲ. ಅದರಲ್ಲೂ ಕಲಿಯುಗದಲ್ಲಿ ಆ ಭಕ್ತಿಯೇ ಪ್ರಧಾನವಾದುದು.

ಕಲೌ ತು ಜ್ಞಾನವೈರಾಗ್ಯೌ ವೃದ್ಧರೂಪೌ ನಿರುತ್ಸವೌ ।
ಗ್ರಾಹಕಾಭಾವತೋ ದೇವಿ ಜಾತೌ ಜರ್ಜರತಾಮಿತಿ ॥ ೩೯ ॥

ಕಲೌ ಪ್ರತ್ಯಕ್ಷಫಲದಾ ಭಕ್ತಿಸ್ಸರ್ವಯುಗೇಷ್ವಪಿ ।
ತತ್ಪ್ರಭಾವಾದಹಂ ನಿತ್ಯಂ ತದ್ವಶೋ ನಾತ್ರಸಂಶಯಃ ॥ ೪೦ ॥

ಯೋ ಭಕ್ತಿಮಾನ್ಪುಮಾಂಲ್ಲೋಕೇ ಸದಾಹಂ ತತ್ಸಹಾಯಕೃತ್ ।
ವಿಘ್ನಹರ್ತಾ ರಿಪುಸ್ತಸ್ಯ ದಂಡ್ಯೋ ನಾತ್ರ ಚ ಸಂಶಯಃ ॥ ೪೧ ॥

ಭಕ್ತಹೇತೋರಹಂ ದೇವಿ ಕಾಲಂ ಕ್ರೋಧಪರಿಪ್ಲುತಃ ।
ಅದಹಂ ವಹ್ನಿನಾ ನೇತ್ರಭವೇನ ನಿಜರಕ್ಷಕಃ ॥ ೪೨

ಭಕ್ತಹೇತೋರಹಂ ದೇವಿ ಖ್ಯುಪರ್ಯುಭವಂ ಕಿಲ ।
ಅತಿಕ್ರೋಧಾನ್ವಿತಃ ಶೂಲಂ ಗೃಹೀತ್ವಾಽನ್ವಜಯಂ ಪುರಾ ॥ ೪೩ ॥

---

೩೯. ಕಲಿಯುಗದಲ್ಲಿ ಜ್ಞಾನವೈರಾಗ್ಯಗಳು ವೃದ್ಧರು. ಸುಖವಿಲ್ಲದವರು. ಅವರನ್ನು ಯಾರೂ ಸೇರಿಸುವದಿಲ್ಲ. ಆದಕಾರಣ ಅವರು ಆಶ್ರಯವಿಲ್ಲದೆ ತುಂಬಾ ಕಷ್ಟಾವಸ್ಥೆಯಲ್ಲಿರುವರು. ಎಂದರೆ ಜ್ಞಾನವೈರಾಗ್ಯಗಳನ್ನು ಸಂಪಾದಿಸುವದು ತುಂಬಾ ಕಷ್ಟವಾದುದರಿಂದ ಕಲಿಯುಗದಲ್ಲಿ ಜನರು ಅವುಗಳನ್ನು ಪಡೆಯಲು ಹೆಚ್ಚಾಗಿ ಪ್ರಯತ್ನಿಸುವದಿಲ್ಲ.

೪೦. ಕಲಿಯುಗದಲ್ಲಿ ಭಕ್ತಿಯು ಭಗವಂತನ ಸಾಕ್ಷಾತ್ಕಾರವನ್ನುಂಟುಮಾಡುವದು, ಅದರಂತೆ ಮಿಕ್ಕ ಯುಗಗಳಲ್ಲೂ ಭಕ್ತಿಯು ಫಲವನ್ನು ಕೊಡುವದು. ಆ ಭಕ್ತಿಗೆ ನಾನು ಯಾವಾಗಲೂ ಅಧೀನನಾಗಿರುವೆನು.

೪೧. ನನ್ನಲ್ಲಿ ಭಕ್ತಿಯುಳ್ಳವನಿಗೆ ನಾನಾವಾಗಲೂ ಸಹಾಯಮಾಡುವೆನು. ವಿಘ್ನಗಳನ್ನು ನಾಶಮಾಡುವೆನು. ಅವನಿಗೆ ತೊಂದರೆಮಾಡುವವನ್ನು ಶಿಕ್ಷಿಸುವೆನು. ಇದು ನಿಶ್ಚಯವಾದ ಮಾತು.

೪೨. ಎಲೌ ದೇವಿ, ನನ್ನ ಭಕ್ತನನ್ನು ಸಲಹುವುದಕ್ಕಾಗಿ ನಾನು ಕೋಪಗೊಂಡು ಮೂರನೆಯ ನೇತ್ರದ ಅಗ್ನಿಯಿಂದ ಯಮನನ್ನೇ ಸುಟ್ಟು ಭಸ್ಮಮಾಡಿರುವೆನು.

೪೩. ಭಕ್ತನ ರಕ್ಷಣೆಗಾಗಿಯೇ ನಾನು ಸೂರ್ಯನ ಮೇಲೇರಿ ಹೋಗಿ ಕೋಪದಿಂದ ಸೂರ್ಯನಿಗೆ ತ್ರಿಶೂಲವನ್ನಿರಿದು ಅವನನ್ನು ಜಯಿಸಿದೆನು.

ಭಕ್ತಹೇತೋರಹಂ ದೇವಿ ರಾವಣಂ ಸಗಣಂ ಕ್ರುಧಾ ।
ತ್ಯಜತಿ ಸ್ಮ ಕೃತೋ ನೈವ ಪಕ್ಷಪಾತೋ ಹಿ ತಸ್ಯ ವೈ ॥ ೪೪ ॥

ಭಕ್ತಹೇತೋರಹಂ ದೇವಿ ವ್ಯಾಸಂ ಹಿ ಕುಮತಿಗ್ರಹಂ ।
ಕಾಶ್ಯಾ ನ್ಯಸಾರಯತ್ಕ್ರೋಧಾದ್ದಂಡಯಿತ್ವಾ ಚ ನಂದಿನಾ ॥ ೪೫ ॥

ಕಿಂ ಬಹೂಕ್ತೇನ ದೇವೇಶಿ ಭಕ್ತಾಧೀನಸ್ಸದಾ ಹ್ಯಹಂ ।
ತತ್ಕರ್ತುಃ ಪುರುಷಸ್ಯಾತಿವಶಗೋ ನಾತ್ರ ಸಂಶಯಃ ॥ ೪೬ ॥

॥ ಬ್ರಹ್ಮೋವಾಚ ॥

ಇತ್ಥಮಾಕರ್ಣ್ಯ ಭಕ್ತೇಸ್ತು ಮಹತ್ತ್ವಂ ದಕ್ಷಜಾ ಸತೀ ।
ಜಹರ್ಷಾತೀವ ಮನಸಿ ಪ್ರಣನಾಮ ಶಿವಂ ಮುದಾ ॥ ೪೭ ॥

ಪುನಃ ಪಪ್ರಚ್ಛ ಸದ್ಭಕ್ತ್ಯಾ ತತ್ಕಾಂಡವಿಷಯಂ ಮುನೇ ।
ಶಾಸ್ತ್ರಂ ಸುಖಕರಂ ಲೋಕೇ ಜೀವೋದ್ಧಾರಪರಾಯಣಂ ॥ ೪೮ ॥

---

೪೪. ಭಕ್ತಿಗಾಗಿಯೇ ನಾನು ಪರಿವಾರಸಹಿತನಾದ ರಾವಣನನ್ನೂ ಬಿಡಲಿಲ್ಲ. ರಾವಣನಲ್ಲಿ ನನಗೆ ಪಕ್ಷಪಾತವಿದ್ದರೂ ನನ್ನ ಭಕ್ತನಾದ ರಾಮನಿಗಾಗಿಯೇ ಆ ರಾವಣನನ್ನು ಸಲಹದೆ ಬಿಟ್ಟುಬಿಟ್ಟೆನು.

೪೫. ಎಲೌ ದೇವಿ, ಭಕ್ತನಿಗಾಗಿಯೇ ನಾನು ದುಷ್ಟ ಬುದ್ಧಿಯುವನಾದ ವ್ಯಾಸಮುನಿಯನ್ನು ನಂದಿಯ ಮೂಲಕ ಶಿಕ್ಷಿಸಿ ಕಾಶಿಯಿಂದ ಓಡಿಸಿದೆನು.

೪೬. ಎಲೌ ಸತೀದೇವಿ, ಹೆಚ್ಚು ಹೇಳಿಯೇನು? ಸದಾ ನಾನು ಭಕ್ತಿಗೆ ಅಧೀನನು. ಆ ಭಕ್ತಿಯನ್ನು ಮಾಡುವ ಭಕ್ತನಿಗೂ ನಾನು ಅಧೀನನು. ಇದರಲ್ಲಿ ಸಂಶಯವಿಲ್ಲ ಎಂದನು.

೪೭. ಬ್ರಹ್ಮನು ಹೇಳಿದನು:—ಎಲೈ ನಾರದ! ಹೀಗೆ ಶಂಕರನಿಂದ ಭಕ್ತಿಯ ಮಾಹಾತ್ಮ್ಯವನ್ನು ತಿಳಿದು ಸತೀದೇವಿಯು ತುಂಬಾ ಹರ್ಷಗೊಂಡಳು. ಮತ್ತು ಭಕ್ತಿಯಿಂದ ಶಂಕರನನ್ನು ನಮಸ್ಕರಿಸಿದಳು.

೪೮-೪೯. ತಿರುಗಿ ಸತೀದೇವಿಯು ಶಂಕರನನ್ನು ಭಕ್ತಿಯಿಂದ ನಮಸ್ಕರಿಸಿ ಜೀವರನ್ನು ಉದ್ಧರಿಸಿ ಸುಖವನ್ನುಂಟುಮಾಡುವಂತಹ ಭಕ್ತಿಕಾಂಡದ ಶಾಸ್ತ್ರವನ್ನೂ,

ಸಯಂತ್ರಮಂತ್ರಶಾಸ್ತ್ರಂ ಚ ತನ್ಮಾಹಾತ್ಮ್ಯಂ ವಿಶೇಷತಃ ।
ಅನ್ಯಾನಿ ಧರ್ಮವಸ್ತೂನಿ ಜೀವೋದ್ಧಾರಕರಾಣಿ ಹಿ ॥ ೪೯ ॥

ಶಂಕರೋಽಪಿ ತದಾಕರ್ಣ್ಯ ಸತೀಪ್ರಶ್ನಂ ಪ್ರಹೃಷ್ಟಧೀಃ ।
ವರ್ಣಯಾಮಾಸ ಸುಪ್ರೀತ್ಯಾ ಜೀವೋದ್ಧಾರಾಯ ಕೃತ್ಸ್ನಶಃ ॥ ೫೦ ॥

ತತ್ರ ಶಾಸ್ತ್ರಂ ಸಯಂತ್ರಂ ಹಿ ಸಪಂಚಾಂಗಂ ಮಹೇಶ್ವರಃ ।
ಬಭಾಷೇ ಮಹಿಮಾನಂ ಚ ತತ್ತದ್ದೇವವರಸ್ಯ ವೈ ॥ ೫೧ ॥

ಸೇತಿಹಾಸಕಥಂ ತೇಷಾಂ ಭಕ್ತಮಾಹಾತ್ಮ್ಯಮೇವ ಚ ।
ಸವರ್ಣಾಶ್ರಮಧರ್ಮಾಂಶ್ಚ ನೃಪಧರ್ಮಾನ್ಮುನೀಶ್ವರ ॥ ೫೨ ॥

ಸುತಸ್ತ್ರೀಧರ್ಮಮಾಹಾತ್ಮ್ಯಂ ವರ್ಣಾಶ್ರಮಮನಶ್ವರಂ ।
ವೈದ್ಯಶಾಸ್ತ್ರಂ ತಥಾ ಜ್ಯೋತಿಶ್ಶಾಸ್ತ್ರಂ ಜೀವಸುಖಾವಹಂ ॥ ೫೩ ॥

ಸಾಮುದ್ರಿಕಂ ಪರಂ ಶಾಸ್ತ್ರಮನ್ಯಚ್ಛಾಸ್ತ್ರಾಣಿ ಭೂರಿಶಃ ।
ಕೃಪಾಂ ಕೃತ್ವಾ ಮಹೇಶಾನೋ ವರ್ಣಯಾಮಾಸ ತತ್ತ್ವತಃ ॥ ೫೪ ॥

---

ಯಂತ್ರಶಾಸ್ತ್ರ, ಮಂತ್ರಶಾಸ್ತ್ರ, ಅವುಗಳ ಮಹಾತ್ಮ್ಯ ಇನ್ನೂ ಇತರ ಧರ್ಮಶಾಸ್ತ್ರ, ಇವೆಲ್ಲವನ್ನೂ ಹೇಳಬೇಕೆಂದು ಕೇಳಿದಳು.

೫೦. ಶಂಕರನೂ ಸಹ ಸತೀದೇವಿಯು ಕೇಳಿದುದೆಲ್ಲವನ್ನೂ ಪ್ರೀತಿಯಿಂದ ಜೀವರ ಉದ್ಧಾರಕ್ಕಾಗಿ ವಿಸ್ತಾರವಾಗಿ ವರ್ಣಿಸಿ ಹೇಳಿದನು.

೫೧. ಆಯಾಯ ದೇವತೆಗಳ ಯಂತ್ರಶಾಸ್ತ್ರವನ್ನೂ, ಮಂತ್ರಶಾಸ್ತ್ರವನ್ನೂ, ಪಂಚಾಯತನವನ್ನೂ, ಮಾಹಾತ್ಮ್ಯವನ್ನೂ ಮಹೇಶ್ವರನು ಹೇಳಿದನು.

೫೨-೫೪. ಇತಿಹಾಸ, ಭಕ್ತರಮಾಹಾತ್ಮ್ಯ, ವರ್ಣಾಶ್ರಮಧರ್ಮಗಳು, ರಾಜ ಧರ್ಮ, ಸುತಧರ್ಮ, ಸ್ತ್ರೀಧರ್ಮ, ಅವುಗಳ ಮಾಹಾತ್ಮ್ಯ, ವರ್ಣಾಶ್ರಮಗಳ ಸ್ವರೂಪ, ವೈದ್ಯಶಾಸ್ತ್ರ, ಜ್ಯೋತಿಶ್ಶಾಸ್ತ್ರ, ಸಾಮುದ್ರಿಕಶಾಸ್ತ್ರ ಮುಂತಾದ ಜನಗಳಿಗೆ ಅನುಕೂಲವಾಗುವಂತಹ ಅನೇಕ ಶಾಸ್ತ್ರಗಳನ್ನು ಮಹೇಶ್ವರನು ಸತೀದೇವಿಗೆ ವಿಸ್ತಾರ ವಾಗಿ ವರ್ಣಿಸಿ ಹೇಳಿದನು.

ಇತ್ಥಂ ತ್ರಿಲೋಕಸುಖದೌ ಸರ್ವಜ್ಞೌ ಚ ಸತೀಶಿವೌ ।
ಲೋಕೋಪಕಾರಕರಣಧೃತಸದ್ಗುಣವಿಗ್ರಹೌ ॥ ೫೫ ॥

ಚಿಕ್ರೀಡಾತೇ ಬಹುವಿಧಂ ಕೈಲಾಸೇ ಹಿಮವದ್ಗಿರೌ ।
ಅನ್ಯಸ್ಥಲೇಷು ಚ ತದಾ ಪರಬ್ರಹ್ಮಸ್ವರೂಪಿಣೌ ॥ ೫೬ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ದ್ವಿತೀಯೇ ಸತೀಖಂಡೇ ಭಕ್ತಿಪ್ರಭಾವವರ್ಣನಂನಾಮ
ತ್ರಯೋವಿಂಶೋಽಧ್ಯಾಯಃ



---

೫೫-೫೬. ಎಲೈ ನಾರದ, ಹೀಗೆ ಮೂರು ಲೋಕಗಳಿಗೂ ಸುಖವನ್ನು ಮಾಡುವವರೂ, ಸರ್ವಜ್ಞರೂ, ಲೋಕೋಪಕಾರಕ್ಕಾಗಿ ಸಗುಣರೂಪವನ್ನು ಧರಿಸಿ ಹವರೂ ಮತ್ತು ಪರಬ್ರಹ್ಮ ಸ್ವರೂಪಿಗಳೂ ಆದ ಸತೀಪರಮೇಶ್ವರರು ಕೈಲಾಸ ದಲ್ಲಿಯೂ ಹಿಮವತ್ಪರ್ವತದಲ್ಲಿಯೂ ಮಿಕ್ಕ ವಿಹಾರಸ್ಥಾನಗಳಲ್ಲಿಯೂ ಸಹ ಅನೇಕ ವಿಧವಾಗಿ ಸಂತೋಷದಿಂದ ವಿಹರಿಸಿದರು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ
ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿ ವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಚತುರ್ವಿಂಶೋಽಧ್ಯಾಯಃ

|| ನಾರದ ಉವಾಚ ||

ಬ್ರಹ್ಮನ್ವಿಧೇ ಪ್ರಜಾನಾಥ ಮಹಾಪ್ರಾಜ್ಞ ಕೃಪಾಕರ ।
ಶ್ರಾವಿತಂ ಶಂಕರಯಶಸ್ಸತೀಶಂಕರಯೋಃ ಶುಭಂ || ೧ ||

ಇದಾನೀಂ ಬ್ರೂಹಿ ಸತ್ಪ್ರೀತ್ಯಾ ಪರಂ ತದ್ಯಶ ಉತ್ತಮಂ ।
ಕಿಮಕಾರ್ಷ್ಟಾಂ ಹಿ ತತ್ಸ್ಥೌ ನ್ವೈ ಚರಿತಂ ದಂಪತೀ ಶಿವೌ || ೨ ||

---

### ಇಪ್ಪತ್ತನಾಲ್ಕನೆಯ ಅಧ್ಯಾಯವು.

೧-೨ ನಾರದನು ಬ್ರಹ್ಮನನ್ನು ಕುರಿತು ಓ ಬ್ರಹ್ಮನೇ, ನೀನು ಮಹಾಪ್ರಾಜ್ಞನು, ಕರುಣಾನಿಧಿಯು, ಪ್ರಜೆಗಳಿಗೆ ಒಡೆಯನು. ಇಂತಹ ನೀನು ಸತೀದೇವಿ ಮತ್ತು ಶಂಕರರ ಪವಿತ್ರವಾದ ಯಶಸ್ಸನ್ನು ವರ್ಣಿಸಿ ನನಗೆ ಹೇಳಿರುವೆ. ಆದಿ ದಂಪತಿಗಳಾದ ಶಿವಸತೀದೇವಿಯರು ಮುಂದೇನು ಮಾಡಿದರೆಂಬುದನ್ನು ವಿಸ್ತಾರವಾಗಿ ವರ್ಣಿಸಿ ಹೇಳು ಎಂದು ಕೇಳಿದನು.

॥ ಬ್ರಹ್ಮೋವಾಚ ॥

ಸತೀಶಿವಚರಿತ್ರಂ ಚ ಶೃಣು ಮೇ ಪ್ರೇಮತೋ ಮುನೇ ।
ಲೌಕಿಕೀಂ ಗತಿಮಾಶ್ರಿತ್ಯ ಚಿಕ್ರೀಡಾತೇ ಸದಾನ್ವಹಂ ॥ ೩ ॥

ತತಸ್ಸತೀ ಮಹಾದೇವೀ ವಿಯೋಗಮುಲಭನ್ಮುನೇ ।
ಸ್ವಪತಶ್ಶಂಕರಸ್ಯೇತಿ ವದಂತ್ಯೇಕೇ ಸುಬುದ್ಧಯಃ ॥ ೪ ॥

ವಾಗರ್ಥಾವಿವ ಸಂಪೃಕ್ತೌ ಶಕ್ತೀಶೌ ಸರ್ವದಾ ಚಿತೌ ।
ಕಥಂ ಘಟೇತ ಚ ತಯೋರ್ವಿಯೋಗಸ್ತತ್ತ್ವತೋ ಮುನೇ ॥ ೫ ॥

ಲೀಲಾರುಚಿತ್ವಾದಥ ವಾ ಸಂಘಟೇತಾಖಿಲಂ ಚ ತತ್ ।
ಕುರುತೇ ಯದ್ಯದೀಶೌ ಚ ಸತೀಶೌ ಭವರೀತಿಗೌ ॥ ೬ ॥

ಸಾ ತ್ಯಕ್ತಾ ದಕ್ಷಜಾ ದೃಷ್ಟ್ವಾ ಪತಿನಾ ಜನಕಾಧ್ವರೇ ।
ಶಂಭೋರನಾದರಾತ್ತತ್ರ ದೇಹಂ ತತ್ಯಾಜ ಸಂಗತಾ ॥ ೭ ॥

---

೩. ಬ್ರಹ್ಮನು ಹೇಳಿದನು :—ಎಲೈ ನಾರದ, ಸತೀ ಮತ್ತು ಶಿವರ ಚರಿತ್ರೆಯನ್ನು ಹೇಳುವೆನು ಆದರದಿಂದ ಕೇಳು. ಹಿಂದೆ ಹೇಳಿದಂತೆ ಆ ಸತೀ ಶಿವರು ಲೋಕಾಚಾರದಂತೆ ಬಹುಕಾಲ ವಿಹರಿಸಿದರು.

೪. ಬಳಿಕ ಕೆಲವು ದಿನಗಳ ಮೇಲೆ ಸತೀದೇವಿಗೆ ಶಂಕರನ ವಿಯೋಗವು ಬಂದಿತೆಂದು ಕೆಲವರು ತಿಳಿದವರು ಹೇಳುವರು.

೫. ಶಬ್ದವು ಮತ್ತು ಅದರ ಅರ್ಥವು ಒಂದನ್ನೊಂದು ಎಡಬಿಡದೆ ಸೇರಿರುವಂತೆ ಸದಾ ಸಂಯುಕ್ತರಾಗಿರುವ ಆದಿದಂಪತಿಗಳಾದ ಆ ಶಿವ ಸತೀದೇವಿಯರಿಗೆ ವಿಯೋಗವು ನಿಜವಾಗಿ ಬರುವುದೆಂತು ?

೬. ಅಥವಾ ಲೀಲಾಮಾನುಷರೂಪರಾದ ಆ ಸತೀಶಿವರು ಕೇವಲ ಲೀಲೆಗಾಗಿಯೇ ತಮ್ಮಲ್ಲಿ ವಿಯೋಗವನ್ನುಂಟುಮಾಡಿಕೊಂಡರೆಂದು ಮಾತ್ರ ಹೇಳಬಹುದಾಗಿದೆ.

೭. ಅಲ್ಲದೆ ಆ ಸತೀದೇವಿಯು ದಕ್ಷಬ್ರಹ್ಮನ ಯಾಗದಲ್ಲಿ ತನ್ನ ಪತಿಯಾದ ಶಂಕರನ ನಿಂದೆಯನ್ನು ಕೇಳಲಾರದೆ ದುಃಖದಿಂದ ಅಗ್ನಿಯಲ್ಲಿ ತನ್ನ ಶರೀರವನ್ನು ಬಿಟ್ಟಿರುವಳು.

ಪುನರ್ಹಿಮಾಲಯೇ ಸೈವಾವಿರ್ಭೂತಾ ನಾಮತಸ್ಸತೀ ।
ಪಾರ್ವತೀತಿ ಶಿವಂ ಪ್ರಾಪ ತಪ್ತ್ವಾ ಭೂರಿ ವಿವಾಹತಃ ॥ ೮ ॥

॥ ಸೂತ ಉವಾಚ ॥
ಇತ್ಯಾಕರ್ಣ್ಯ ವಚಸ್ತಸ್ಯ ಬ್ರಹ್ಮಣಸ್ಸ ತು ನಾರದಃ ।
ಪಪ್ರಚ್ಛ ಚ ವಿಧಾತಾರಂ ಶಿವಾಶಿವಮಹದ್ಯಶಃ ॥ ೯ ॥

॥ ನಾರದ ಉವಾಚ ॥
ವಿಷ್ಣುಶಿಷ್ಯ ಮಹಾಭಾಗ ವಿಧೇ ಮೇ ವದ ವಿಸ್ತರಾತ್ ।
ಶಿವಾಶಿವಚರಿತ್ರಂ ತದ್ಭವಾಚಾರಪರಾನುಗಂ ॥ ೧೦ ॥

ಕಿಮರ್ಥಂ ಶಂಕರೋ ಜಾಯಾಂ ತತ್ಯಾಜ ಪ್ರಾಣತಃ ಪ್ರಿಯಾಂ ।
ತಸ್ಮಾದಾಚಕ್ಷ್ವ ಮೇ ತಾತ ವಿಚಿತ್ರಮಿತಿ ಮನ್ಮಹೇ ॥ ೧೧ ॥

---

೮. ಆ ಮೇಲೆ ಆ ಸತಿಯೇ ಹಿಮವಂತನ ಪತ್ನಿಯಲ್ಲಿ ಪಾರ್ವತೀರೂಪದಿಂದ ಜನಿಸಿ ಮುಂದೆ ಬಹುವಾಗಿ ತಪಸ್ಸನ್ನು ಮಾಡಿ ತಿರುಗಿ ಶಿವನನ್ನು ವರಿಸಿ ಮದುವೆಯಾದಳು.

೯. ಸೂತಮುನಿಯು ಹೇಳಿದನು :—ಎಲೈ ಶೌನಕಾದಿಮುನಿಗಳೇ, ಆರೀತಿಯಾದ ಬ್ರಹ್ಮನ ಮಾತುಗಳನ್ನು ಕೇಳಿ ನಾರದಮುನಿಯು ತಿರುಗಿ ಶಿವ ಮತ್ತು ದೇವಿಯರ ಚರಿತ್ರೆಯರ ವಿಷಯವಾಗಿ ಪ್ರಶ್ನೆ ಮಾಡಿದನು.

೧೦. ನಾರದನು ಕೇಳಿದಳು :—ವಿಷ್ಣುಶಿಷ್ಯನೂ ಮಹಾಮಹಿಮನೂ ಆದ ಓ ಬ್ರಹ್ಮದೇವನೇ, ಲೋಕಾಚಾರವನ್ನನುಸರಿಸಿ ಶಿವ ಮತ್ತು ದೇವಿಯರು ಆಚರಿಸಿರುವ ಚರಿತ್ರೆಯನ್ನು ಇನ್ನೂ ವಿಸ್ತಾರವಾಗಿ ಹೇಳು.

೧೧. ಓ ತಂದೆಯೇ, ಪ್ರಾಣಪ್ರಿಯಳಾದ ಸತೀದೇವಿಯನ್ನು ಶಂಕರನು ಏಕೆ ತ್ಯಜಿಸಿದನು ? ಇದು ನನಗೆ ತುಂಬಾ ಆಶ್ಚರ್ಯವಾಗಿ ತೋರುತ್ತಿದೆ. ಆದಕಾರಣ ಇದನ್ನು ವಿಸ್ತರಿಸಿ ಹೇಳು.

ಕುತೋಽಧ್ವರಜಃ ಪುತ್ರಸ್ಯಾನಾದರೋಽಭೂಚ್ಛಿವಸ್ಯ ತೇ ।
ಕಥಂ ತತ್ಯಾಜ ಸಾ ದೇಹಂ ಗತ್ವಾ ತತ್ರ ಪಿತೃಕ್ರತೌ ॥ ೧೨ ॥

ತತಃ ಕಿಮಭವತ್ತತ್ರ ಕಿಮಕಾರ್ಷೀನ್ಮಹೇಶ್ವರಃ ।
ತತ್ಸರ್ವಂ ಮೇ ಸಮಾಚಕ್ಷ್ವ ಶ್ರದ್ಧಾಯುಕ್ತಚ್ಛ್ರೃತಾವಹಂ ॥ ೧೩ ॥

॥ ಬ್ರಹ್ಮೋವಾಚ ॥

ಶೃಣು ತಾತ ಪರಪ್ರೀತ್ಯಾ ಮುನಿಭಿಸ್ಸಹ ನಾರದ ।
ಸುತವರ್ಯ ಮಹಾಪ್ರಾಜ್ಞ ಚರಿತಂ ಶಶಿಮೌಲಿನಃ ॥ ೧೪ ॥

ನಮಸ್ಕೃತ್ಯ ಮಹೇಶಾನಂ ಹರ್ಯಾದಿಸುರಸೇವಿತಂ ।
ಪರಬ್ರಹ್ಮ ಪ್ರವಕ್ಷ್ಯಾಮಿ ತಚ್ಚರಿತ್ರಂ ಮಹಾದ್ಭುತಂ ॥ ೧೫ ॥

ಸರ್ವೇಯಂ ಶಿವಲೀಲಾ ಹಿ ಬಹುಲೀಲಾಕರಃ ಪ್ರಭುಃ ।
ಸ್ವತಂತ್ರೋ ನಿರ್ವಿಕಾರೀ ಚ ಸತೀ ಸಾಪಿ ಹಿ ತದ್ವಿಧಾ ॥ ೧೬ ॥

---

೧೨. ನಿನ್ನ ಪುತ್ರನಾದ ದಕ್ಷನು ಯಜ್ಞದಲ್ಲಿ ಶಂಕರನನ್ನು ನಿಂದಿಸಲು ಕಾರಣ ವೇನು ? ಸತೀದೇವಿಯಾದರೂ ಆ ಯಾಗಕ್ಕೆ ಹೋಗಿ ತನ್ನ ಶರೀರವನ್ನು ಹೇಗೆ ಬಿಟ್ಟಳು ?

೧೩. ಮುಂದೆ ಏನಾಯಿತು ? ಶಿವನು ಏನು ಮಾಡಿದನು ? ಇದೆಲ್ಲವನ್ನು ಹೇಳು. ಶ್ರದ್ಧೆಯಿಂದ ಕೇಳುವೆನು ಎನ್ನಲು,

೧೪. ಬ್ರಹ್ಮನು ಹೇಳಿದನು :—ಎಲೈ ನಾರದ, ನೀನು ನನ್ನ ಪುತ್ರರಲ್ಲಿ ಶ್ರೇಷ್ಠನು, ಮಹಾತಿಳಿವಳಿಕೆಯುಳ್ಳವನು. ಈಗ ಚಂದ್ರಶೇಖರನ ದಿವ್ಯಚರಿತ್ರೆಯನ್ನು ಹೇಳುವೆನು ಪ್ರೀತಿಯಿಂದ ಕೇಳು.

೧೫. ವಿಷ್ಣುವೇ ಮೊದಲಾದ ದೇವತೆಗಳಿಂದ ಸೇವಿಸಲ್ಪಡುವವನೂ ಪರಬ್ರಹ್ಮಸ್ವರೂಪನೂ ಆದ ಶಿವನನ್ನು ನಮಸ್ಕರಿಸಿ ಅವನ ದಿವ್ಯಚರಿತ್ರೆಯನ್ನು ಹೇಳುವೆನು.

೧೬. ಈ ಜಗತ್ತೆಲ್ಲವೂ ಶಿವನ ಲೀಲೆಯು. ಆ ಪರಮೇಶ್ವರನು ಬಹು ಲೀಲೆಗಳನ್ನು ಪ್ರದರ್ಶಿಸುವನು ಮತ್ತು ಸ್ವತಂತ್ರನು. ಉತ್ಪತ್ತಿ ಮೊದಲಾದ ವಿಕಾರಗಳಿಲ್ಲದವನು, ಸತೀದೇವಿಯೂ ಸಹ ಅವನ ಸ್ವರೂಪಳು.

ಅನ್ಯಥಾ ಕಸ್ಸಮರ್ಥೋ ಹಿ ತತ್ಕರ್ಮಕರಣೇ ಮುನೇ ।
ಪರಮಾತ್ಮಾ ಪರಬ್ರಹ್ಮ ಸ ಏವ ಪರಮೇಶ್ವರಃ ॥ ೧೭ ॥

ಯಂ ಸದಾ ಭಜತೇ ಶ್ರೀಶೋಽಹಂ ಚಾಪಿ ಸಕಲಾಃ ಸುರಾಃ ।
ಮುನಯಶ್ಚ ಮಹಾತ್ಮಾನಃ ಸಿದ್ಧಾಶ್ಚ ಸನಕಾದಯಃ ॥ ೧೮ ॥

ಶೇಷಸ್ಸದಾ ಯಶೋ ಯಸ್ಯ ಮುದಾ ಗಾಯತಿ ನಿತ್ಯಶಃ ।
ಪಾರಂ ನ ಲಭತೇ ತಾತ ಸ ಪ್ರಭುಶ್ಶಂಕರಃ ಶಿವಃ ॥ ೧೯ ॥

ತಸ್ಯೈವ ಲೀಲಯಾ ಸರ್ವೋಽಯಮಿತಿ ತತ್ತ್ವವಿಭ್ರಮಃ ।
ತತ್ರ ದೋಷೋ ನ ಕಸ್ಯಾಪಿ ಸರ್ವವ್ಯಾಪೀ ಸ ಪ್ರೇರಕಃ ॥ ೨೦ ॥

ಏಕಸ್ಮಿನ್ಸಮಯೇ ರುದ್ರಸ್ಸತ್ಯಾ ತ್ರಿಭವಗೋ ಭವಃ ।
ವೃಷಮಾರುಹ್ಯ ಪರ್ಯಾಟದ್ರಸಾಂ ಲೀಲಾವಿಶಾರದಃ ॥ ೨೧ ॥

---

೧೭. ಶಿವಲೀಲೆಯನ್ನು ಶಿವನು ಹೊರತು ಇನ್ನಾರೂ ಪ್ರದರ್ಶಿಸಲಾರರು. ಆ ಶಿವನು ಪರಮಾತ್ಮನು: ಪರಬ್ರಹ್ಮಸ್ವರೂಪನು.

೧೮. ಆ ಪರಮೇಶ್ವರನನ್ನು ಹರಿಯೂ, ನಾನೂ, ಮಿಕ್ಕ ದೇವತೆಗಳೂ, ಮುನಿಗಳು, ಸಿದ್ಧರು, ಮಹಾತ್ಮರಾದ ಸನಕಾದಿಮುನಿಗಳೂ ಎಲ್ಲರೂ ಭಜಿಸುವರು.

೧೯. ಆದಿಶೇಷನು ಸದಾ ತನ್ನ ಸಾವಿರ ನಾಲಿಗೆಗಳಿಂದ ಶಿವನ ಯಶಸ್ಸನ್ನು ಗಾನಮಾಡುವನು. ಆದರೂ ಆ ಯಶಸ್ಸಿಗೆ ಕೊನೆಯೇ ಇಲ್ಲ. ಶಂಕರನು ಇಂತಹ ಅಪಾರ ಮಹಿಮೆಯುಳ್ಳವನು.

೨೦. ಆ ಶಿವನ ಲೀಲೆಯಿಂದಲೇ ಈ ಜಗತ್ತೆಲ್ಲವೂ ತೋರುತ್ತಲಿರುವುದು. ಇದರಲ್ಲಿ ಯಾವ ದೋಷವೂ ಇಲ್ಲ. ಸರ್ವವ್ಯಾಪಿಯಾದ ಆ ಶಿವನೇ ಎಲ್ಲರನ್ನೂ ಪ್ರೇರಿಸುವನು.

೨೧. ಒಂದಾನೊಂದು ಸಮಯದಲ್ಲಿ ಆ ಶಿವನು ನಂದಿಯನ್ನೇರಿ ಸತೀದೇವಿಯೊಡನೆ ಭೂಮಿಯನ್ನು ಸಂಚರಿಸಿದನು.

ಆಗತ್ಯ ದಂಡಕಾರಣ್ಯಂ ಪರ್ಯಟನ್ಸಾಗರಾಂಬರಾಂ ।
ದರ್ಶಯಂಸ್ತತ್ರಗಾಂ ಶೋಭಾಂ ಸತ್ಯೈ ಸತ್ಯಪಣಃ ಪ್ರಭುಃ ॥ ೨೨ ॥

ತತ್ರ ರಾಮಂ ದದರ್ಶಾಸೌ ಲಕ್ಷ್ಮಣೇನಾನ್ವಿತಂ ಹರಃ ।
ಅನ್ವಿಷ್ಯಂತಂ ಪ್ರಿಯಾಂ ಸೀತಾಂ ರಾವಣೇನ ಹೃತಾಂ ಛಲಾತ್ ॥ ೨೩ ॥

ಹಾ ಸೀತೇತಿ ಪ್ರೋಚ್ಚರಂತಂ ವಿರಹಾವಿಷ್ಟಮಾನಸಂ ।
ಯತಸ್ತತಶ್ಚ ಪಶ್ಯಂತಂ ರುದಂತಂ ಹಿ ಮುಹುರ್ಮುಹುಃ ॥ ೨೪ ॥

ಸಮಿಚ್ಛಂತಂ ಚ ತತ್ಪ್ರಾಪ್ತಿಂ ಪೃಚ್ಛಂತಂ ತದ್ಗತಿಂ ಹೃದಾ।
ಕುಜಾದಿಭ್ಯೋ ನಷ್ಟಧಿಯಮತ್ರಪಂ ಶೋಕವಿಹ್ವಲಂ ॥ ೨೫ ॥

ಸೂರ್ಯವಂಶೋದ್ಭವಂ ವೀರಂ ಭೂಪಂ ದಶರಥಾತ್ಮಜಂ ।
ಭರತಾಗ್ರಜಮಾನಂದರಹಿತಂ ವಿಗತಪ್ರಭಂ ॥ ೨೬ ॥

---

೨೨. ಹಾಗೆ ಸಂಚರಿಸುತ್ತಾ ಆ ಶಿವನು ದಂಡಕಾರಣ್ಯಕ್ಕೆ ಬಂದು ಅಲ್ಲಿನ ಪ್ರಕೃತಿ ಸೌಂದರ್ಯವನ್ನು ಸತೀದೇವಿಗೆ ತೋರಿಸಿದನು.

೨೩. ಆಗ ಅಲ್ಲಿ ರಾಮನು ಇದ್ದನು. ಆ ರಾಮನು ರಾವಣನು ಮೋಸದಿಂದ ಅಪಹರಿಸಿದ ಸೀತಾದೇವಿಯನ್ನು ಹುಡುಕುತ್ತಾ ಲಕ್ಷ್ಮಣನೊಡನೆ ಸಂಚರಿಸುತ್ತ ಲಿದ್ದನು. ಇಂತಹ ರಾಮನನ್ನು ಶಿವನು ನೋಡಿದನು.

೨೪-೨೫ ಆ ರಾಮನು, ಸೀತೆಯ ವಿರಹದಿಂದ ದುಃಖಿತನಾಗಿ ಹಾ ಸೀತೆ! ಎಂದು ಪ್ರಲಾಪಿಸುತ್ತಿದ್ದನು. ಅಲ್ಲಲ್ಲಿ ಹುಡುಕಿ ನೋಡುತ್ತಲಿದ್ದನು. ಪುನಃ ಪುನಃ ದುಃಖಿಸುತ್ತಲಿದ್ದನು. ಸೀತೆಯನ್ನು ಪಡೆಯಲು ತುಂಬಾ ಉತ್ಸುಕನಾಗಿದ್ದನು. ವೃಕ್ಷ, ಲತಾಗೃಹ ಮುಂತಾದುವುಗಳನ್ನು ಸಹ ಸಂಬೋಧಿಸಿ, ಸೀತೆಯನ್ನು ನೀವು ಕಂಡಿರಾ? ಅವಳೆಲ್ಲಿ? ಎಂದು ಕೇಳುತ್ತಲಿದ್ದನು.

೨೬. ಆ ರಾಮನು ಸೂರ್ಯವಂಶದಲ್ಲಿ ಜನಿಸಿದವನು. ದಶರಥನೆಂಬ ರಾಜನ ಮಗನು. ಮಹಾವೀರನು, ಭರತನ ಅಣ್ಣನು. ಇಂತಹ ರಾಮನು ಸೀತೆಯನ್ನು ಕಳೆದುಕೊಂಡು ವಿರಹದಿಂದ ದುಃಖಿತನಾಗಿ ಸಂಚರಿಸುತ್ತಲಿದ್ದನು.

ಪೂರ್ಣಕಾಮೋ ವರಾಧೀನಂ ಪ್ರಾಣಮುತ್ಸೃಜ್ಯ ಮುದಾ ಹರಃ ।
ರಾಮಂ ಭ್ರಮಂತಂ ವಿಪಿನೇ ಸಲಕ್ಷ್ಮಣಮುದಾರಧೀಃ ॥ ೨೭ ॥

ಜಯೇತ್ಯುಕ್ತ್ವಾಽನ್ಯತೋ ಗಚ್ಛನ್ನದಾತ್ತಸ್ಮೈ ಸ್ವದರ್ಶನಂ ।
ರಾಮಾಯ ವಿಪಿನೇ ತಸ್ಮಿಂಛಂಕರೋ ಭಕ್ತವತ್ಸಲಃ ॥ ೨೮ ॥

ಇತೀದೃಶೀಂ ಸತೀಂ ದೃಷ್ಟ್ವಾ ಶಿವಲೀಲಾಂ ವಿಮೋಹನೀಂ ।
ಸುವಿಸ್ಮಿತಾ ಶಿವಂ ಪ್ರಾಹ ಶಿವಮಾಯಾವಿಮೋಹಿತಾ ॥ ೨೯ ॥

॥ ಸತ್ಯುವಾಚ ॥

ದೇವದೇವ ಪರಬ್ರಹ್ಮ ಸರ್ವೇಶ ಪರಮೇಶ್ವರ ।
ಸೇವಂತೇ ತ್ವಾಂ ಸದಾ ಸರ್ವೇ ಹರಿಬ್ರಹ್ಮಾದಯಸ್ಸುರಾಃ ॥ ೩೦ ॥

ತ್ವಂ ಪ್ರಣಮ್ಯೋ ಹಿ ಸರ್ವೇಷಾಂ ಸೇವ್ಯೋ ಧ್ಯೇಯಶ್ಚ ಸರ್ವದಾ ।
ವೇದಾಂತವೇದ್ಯೋ ಯತ್ನೇನ ನಿರ್ವಿಕಾರೀ ಪರಪ್ರಭುಃ ॥ ೩೧ ॥

---

೨೭. ಆಗ ಆಪ್ತಕಾಮನಾದ ಶಿವನು, ಸೀತೆಯನ್ನು ಹುಡುಕುತ್ತಾ ಅರಣ್ಯದಲ್ಲಿ ಲಕ್ಷ್ಮಣನೊಡನೆ ಸಂಚರಿಸುತ್ತಲಿರುವ ಆ ರಾಮನಿಗೆ ನಮಸ್ಕಾರಮಾಡಿದನು.

೨೮. ಮತ್ತು ಆ ರಾಮನಿಗೆ ಜಯಶೀಲನಾಗೆಂದು ಹೇಳಿ ಅವನಿಗೆ ಕಾಣಿಸಿ ಕೊಳ್ಳದೆ ಶಂಕರನು ಬೇರೆಡೆಗೆ ಹೋದನು.

೨೯. ಈ ರೀತಿಯಾದ ಶಿವಲೀಲೆಯನ್ನು ನೋಡಿ ಸತೀದೇವಿಯು ತುಂಬಾ ಆಶ್ಚರ್ಯಗೊಂಡಳು. ಮತ್ತು ಶಿವನನ್ನು ಕುರಿತು ಹೀಗೆ ಪ್ರಶ್ನಿಸಿದಳು.

೩೦. ಸತೀದೇವಿಯು ಕೇಳಿದಳು:—ಓ ಪರಮೇಶ್ವರ, ನೀನು ದೇವದೇವನು, ಪರಬ್ರಹ್ಮಸ್ವರೂಪನು, ಸರ್ವೇಶ್ವರನು, ಇಂತಹ ನಿನ್ನನ್ನು ವಿಷ್ಣು ಬ್ರಹ್ಮನೇ ಮೊದಲಾದ ದೇವತೆಗಳು ಸದಾ ಸೇವಿಸುವರು.

೩೧. ನಿನ್ನನ್ನೇ ಎಲ್ಲರೂ ನಮಸ್ಕರಿಸಬೇಕು, ಸೇವಿಸಬೇಕು, ಧ್ಯಾನಿಸಬೇಕು, ನಿನ್ನನ್ನು ವೇದಾಂತಗಳಲ್ಲಿ ಪ್ರಯತ್ನದಿಂದ ತಿಳಿಯಬೇಕು, ಜನ್ಮನೇ ಮೊದಲಾದ ವಸ್ತುವಿಕಾರವಿಲ್ಲದ ಪರಮಾತ್ಮನು ನೀನು.

ಕಾವಿಮೌ ಪುರುಷೌ ನಾಥ ವಿರಹವ್ಯಾಕುಲಾಕೃತೀ ।
ವಿಚರಂತೌ ವನೇ ಕ್ಲಿಷ್ಟೌ ದೀನೌ ವೀರೌ ಧನುರ್ಧರೌ ॥ ೩೨ ॥

ತಯೋರ್ಜ್ಯೇಷ್ಠಂ ಕಂಜಶ್ಯಾಮಂ ದೃಷ್ಟ್ವಾ ವೈ ಕೇನ ಹೇತುನಾ ।
ಮುದಿತಸ್ಸುಪ್ರಸನ್ನಾತ್ಮಾಽಭವೋ ಭಕ್ತ ಇವಾಧುನಾ ॥ ೩೩ ॥

ಇತಿ ಮೇ ಸಂಶಯಂ ಸ್ವಾಮಿನ್ ಶಂಕರಃ ಶ್ರೋತುಮರ್ಹಸಿ ।
ಸೇವ್ಯಸ್ಯ ಸೇವಕೇನೈವ ಘಟತೇ ಪ್ರಣತಿಃ ಪ್ರಭೋ ॥ ೩೪ ॥

॥ ಬ್ರಹ್ಮೋವಾಚ ॥

ಆದಿಶಕ್ತಿಸ್ಸತೀ ದೇವೀ ಶಿವಾ ಸಾ ಪರಮೇಶ್ವರೀ ।
ಶಿವಮಾಯಾವಶೀ ಭೂತ್ವಾ ಪಪ್ರಚ್ಛೇತ್ಥಂ ಶಿವಂ ಪ್ರಭುಂ ॥ ೩೫ ॥

ತದಾಕರ್ಣ್ಯ ವಚಸ್ಸತ್ಯಾಶ್ಶಂಕರಃ ಪರಮೇಶ್ವರಃ ।
ತದಾ ವಿಹಸ್ಯ ಸ ಪ್ರಾಹ ಸತೀಂ ಲೀಲಾವಿಶಾರದಃ ॥ ೩೬ ॥

---

೩೨. ಓ ಸ್ವಾಮಿ, ಈ ಪುರುಷರೀರ್ವರು ಯಾರು ? ವಿರಹದಿಂದ ದುಃಖಿತರಂತೆ ತೋರುವವರು, ಮಹಾವೀರರಾಗಿರುವವರು, ಅದಕ್ಕೆ ತಕ್ಕಂತೆ ಧನುಸ್ಸನ್ನು ಧರಿಸಿರುವರು. ದುಃಖದಿಂದ ಈ ವನದಲ್ಲಿ ಸಂಚರಿಸುತ್ತಲಿರುವರು.

೩೩. ಇವರೀರ್ವರಲ್ಲಿ ಕನ್ನೈದಿಲೆಯಂತೆ ನೀಲವರ್ಣದವನಾದ ಹಿರಿಯುವನನ್ನು ನೋಡಿ ನೀನು ಪ್ರಸನ್ನನಾಗಿ ಸಂತೋಷಗೊಳ್ಳಲು ಕಾರಣವೇನು ? ಭಕ್ತನಂತೆ ನಮಸ್ಕರಿಸಲು ಕಾರಣವೇನು ?

೩೪. ಓ ಶಂಕರ, ಹೀಗೆ ನನಗೆ ಸಂಶಯವುಂಟಾಗಿರುವುದು. ಸ್ವಾಮಿಯಾದವನು ಸೇವಕನಿಗೆ ನಮಸ್ಕರಿಸುವುದುಂಟೆ ಎಂದು ಕೇಳಿದಳು.

೩೫. ಬ್ರಹ್ಮನು ಹೇಳಿದನು :— ಸತೀದೇವಿಯು ಆದಿಶಕ್ತಿಯು, ಪರಮೇಶ್ವರಿಯು. ಹೀಗಿದ್ದರೂ ಶಿವನ ಮಾಯೆಗೊಳಪಟ್ಟವಳಾಗಿ ಶಿವನನ್ನು ಕುರಿತು ಹಾಗೆ ಪ್ರಶ್ನಿಸಿದಳು.

೩೬. ಸತೀದೇವಿಯ ಮಾತುಗಳನ್ನು ಕೇಳಿ ಲೀಲಾಮಯನಾದ ಶಿವನು ಆಗ ಮಂದಹಾಸವನ್ನು ಸೂಸುತ್ತಾ ಸತೀದೇವಿಯನ್ನು ಕುರಿತು,

॥ ಪರಮೇಶ್ವರ ಉವಾಚ ।

ಶೃಣು ದೇವಿ ಸತಿ ಪ್ರೀತ್ಯಾ ಯಥಾರ್ಥಂ ವಚ್ಮಿ ನ ಚ್ಛಲಂ ।
ವರದಾನಪ್ರಭಾವಾತ್ತು ಪ್ರಣಾಮಂ ಚೈವಮಾದರಾತ್ ॥ ೩೭ ॥

ರಾಮಲಕ್ಷ್ಮಣನಾಮಾನೌ ಭ್ರಾತರೌ ವೀರಸಂಮತೌ ।
ಸೂರ್ಯವಂಶೋದ್ಭವೌ ದೇವಿ ಪ್ರಾಜ್ಞೌ ದಶರಥಾತ್ಮಜೌ ॥ ೩೮ ॥

ಗೌರವರ್ಣೋ ಲಘುರ್ಬಂಧುಶ್ಶೇಷಾಂಶೋ ಲಕ್ಷ್ಮಣಾಭಿಧಃ ।
ಜ್ಯೇಷ್ಠೋ ರಾಮಾಭಿದೋ ವಿಷ್ಣೋಃ ಪೂರ್ಣಾಂಶೋ ನಿರುಪದ್ರವಃ ॥ ೩೯ ॥

ಅವತೀರ್ಣಃ ಕ್ಷಿತೌ ಸಾಧುರಕ್ಷಣಾಯ ಭವಾಯ ನಃ ।
ಇತ್ಯುಕ್ತ್ವಾ ವಿರರಾಮಾಸೌ ಶಂಭುಸ್ಸೃತಿಕರಃ ಪ್ರಭುಃ ॥ ೪೦ ॥

ಶ್ರುತ್ವಾಪೀತ್ಥಂ ವಚಶ್ಶಂಭೋರ್ನ ವಿಶಶ್ವಾಸ ತನ್ಮನಃ ।
ಶಿವಮಾಯಾ ಬಲವತೀ ಸರ್ವತ್ರೈಲೋಕ್ಯಮೋಹಿನೀ ॥ ೪೧ ॥

---

೩೭. ಪರಮೇಶ್ವರನು ಹೀಗೆ ಹೇಳಿದನು :—ಎಲೌ ದೇವಿ, ನಿಜವಾದುದನ್ನು ಹೇಳುವೆನು ಗಮನವಿಟ್ಟು ಕೇಳು. ನಾನು ಕೊಟ್ಟಿರುವ ವರದಂತೆ ಈ ಪುರುಷನಿಗೆ ನಮಸ್ಕಾರಮಾಡಿರುವೆನು.

೩೮. ಈ ಪುರುಷರು ಸೂರ್ಯವಂಶದ ರಾಜಕುಮಾರರು. ದಶರಥರಾಜನ ಪುತ್ರರು, ಮಹಾವೀರರು, ವಿವೇಕಿಗಳು. ಇವರೀರ್ವರೂ ಸಹೋದರರು, ರಾಮ ಮತ್ತು ಲಕ್ಷ್ಮಣ ಎಂದು ಇವರ ಹೆಸರು.

೩೯. ಇವರಲ್ಲಿ ಗೌರವರ್ಣದವನಾದ ಕಿರಿಯುವನು ಲಕ್ಷ್ಮಣನು. ಅವನು ಆದಿಶೇಷನ ಅವತಾರವು, ರಾಮನು ಹಿರಿಯುವನು, ಅವನು ವಿಷ್ಣುವಿನ ಪೂರ್ಣ ಅವತಾರವು.

೪೦. ಈ ರಾಮನು ಸತ್ಪುರುಷರನ್ನು ರಕ್ಷಿಸುವುದಕ್ಕಾಗಿಯೂ ದುಷ್ಟರನ್ನು ಶಿಕ್ಷಿಸುವುದಕ್ಕಾಗಿಯೂ ಅವತರಿಸಿರುವನು. ಹೀಗೆಂದು ಹೇಳಿ ಶಿವನು ಸುಮ್ಮನಾದನು.

೪೧. ಈ ರೀತಿಯಾದ ಶಂಕರನ ಮಾತುಗಳನ್ನು ಕೇಳಿದರೂ ಸತೀದೇವಿಗೆ ವಿಶ್ವಾಸವುಂಟಾಗಲಿಲ್ಲ. ಶಿವನ ಮಾಯೆಯು ಪ್ರಬಲವಾದುದು. ಅದು ಎಲ್ಲರನ್ನೂ ಮೋಹಗೊಳಿಸುವುದು.

ಅವಿಶ್ವಸ್ತಂ ಮನೋ ಜ್ಞಾತ್ವಾ ತಸ್ಯಾಶ್ಶಂಭುಸ್ಸನಾತನಃ ।
ಅವೋಚದ್ವಚನಂ ಚೇತಿ ಪ್ರಭುರ್ಲೀಲಾವಿಶಾರದಃ ॥ ೪೨ ॥

॥ ಶಿವ ಉವಾಚ ॥

ಶೃಣು ಮದ್ವಚನಂ ದೇವಿ ನ ವಿಶ್ವಸಿತಿ ಚೇನ್ಮನಃ ।
ತವ ರಾಮಪರೀಕ್ಷಾಂ ಹಿ ಕುರು ತತ್ರ ಸ್ವಯಾ ಧಿಯಾ ॥ ೪೩ ॥

ವಿನಶ್ಯತಿ ಯಥಾ ಮೋಹಸ್ತತ್ಕುರು ತ್ವಂ ಸತಿ ಪ್ರಿಯೇ ।
ಗತ್ವಾ ತತ್ರ ಸ್ಥಿತಸ್ತಾವದ್ವಟೇ ಭವ ಪರೀಕ್ಷಿಕಾ ॥ ೪೪ ॥

॥ ಬ್ರಹ್ಮೋವಾಚ ॥

ಶಿವಾಜ್ಞಯಾ ಸತೀ ತತ್ರ ಗತ್ವಾಚಿಂತಯದೀಶ್ವರೀ ।
ಕುರ್ಯಾಂ ತತ್ಪರೀಕ್ಷಾಂ ಚ ಕಥಂ ರಾಮಸ್ಯ ವನಚಾರಿಣಃ ॥ ೪೫ ॥

ಸೀತಾರೂಪಮಹಂ ಧೃತ್ವಾ ಗಚ್ಛೇಯಂ ರಾಮಸನ್ನಿಧೌ ।
ಯದಿ ರಾಮೋ ಹರಿಸ್ಸರ್ವಂ ವಿಜ್ಞಾಸ್ಯತಿ ನ ಚಾನ್ಯಥಾ ॥ ೪೬ ॥

---

೪೨. ಹೀಗೆ ಸತಿಯು ಇನ್ನೂ ಅವಿಶ್ವಾಸಗೊಂಡಿರುವುದನ್ನು ತಿಳಿದು ಪ್ರಭುವಾದ ಶಂಕರನು ತಿರುಗಿ ಅವಳನ್ನು ಕುರಿತು ಹೀಗೆ ಹೇಳಿದನು.

೪೩. ಶಿವನು ಹೇಳಿದನು :—ಎಲೌ ದೇವಿ, ನಿನಗೆ ಇನ್ನೂ ನಂಬಿಕೆಯಿಲ್ಲದಿದ್ದರೆ ನನ್ನ ಮಾತನ್ನು ಕೇಳು, ಈಗಲೇ ರಾಮನ ಬಳಿಗೆ ಹೋಗಿ ಈ ವಿಷಯವನ್ನು ಪರೀಕ್ಷೆಮಾಡು.

೪೪. ಆದರಿಂದ ನಿನ್ನ ಅಜ್ಞಾನವು ಹೋಗುವುದು. ವಟವೃಕ್ಷದ ಬಳಿಯಲ್ಲಿ ರಾಮನಿರುವನು. ಅಲ್ಲಿಗೆ ಹೋಗಿ ಅವನನ್ನು ಪರೀಕ್ಷಿಸು ಎಂದನು.

೪೫-೪೬. ಬ್ರಹ್ಮನು ಹೇಳಿದನು :—ಎಲೈ ನಾರದ, ಶಿವನ ಆಜ್ಞೆಯಂತೆ ಸತೀದೇವಿಯು ರಾಮನಿರುವಲ್ಲಿಗೆ ಹೋಗಿ ಅವನನ್ನು ಪರೀಕ್ಷಿಸಲೋಸುಗ ಹೀಗೆ ಆಲೋಚಿಸಿದಳು. ಈಗ ನಾನು ಸೀತೆಯ ರೂಪವನ್ನು ಧರಿಸಿ ರಾಮನ ಬಳಿಗೆ ಹೋಗುವೆನು. ಅವನು ನಿಜವಾಗಿಯೂ ಹರಿಯ ಅವತಾರವಾಗಿದ್ದರೆ ನಿಜಾಂಶವನ್ನು ತಿಳಿಯುವನು. ನನ್ನನ್ನು ಸತಿಯೆಂದೇ ತಿಳಿಯುವನು.

ಇತ್ಥಂ ವಿಚಾರ್ಯ ಸೀತಾ ಸಾ ಭೂತ್ವಾ ರಾಮಸಮೀಪತಃ ।
ಅಗಮತ್ತತ್ಪರೀಕ್ಷಾರ್ಥಂ ಸತೀ ಮೋಹಪರಾಯಣಾ ॥ ೪೭ ॥

ಸೀತಾರೂಪಂ ಸತೀಂ ದೃಷ್ಟ್ವಾ ಜಪನ್ನಾಮ ಶಿವೇತಿ ಚ ।
ವಿಹಸ್ಯ ತತ್ಪ್ರವಿಜ್ಞಾಯ ನತ್ವಾವೋಚದ್ರಘೂದ್ವಹಃ ॥ ೪೮ ॥

॥ ರಾಮ ಉವಾಚ ॥

ಪ್ರೇಮತಸ್ತ್ವಂ ಸತಿ ಬ್ರೂಹಿ ಕ್ವ ಶಂಭುಸ್ತೇ ನಮೋ ಗತಃ ।
ಏಕಾ ಹಿ ವಿಪಿನೇ ಕಸ್ಮಾದಾಗತಾ ಪತಿನಾ ವಿನಾ ॥ ೪೯ ॥

ತ್ಯಕ್ತ್ವಾ ಸ್ವರೂಪಂ ಕಸ್ಮಾತ್ತೇ ಧೃತಂ ರೂಪಮಿದಂ ಸತೀ ।
ಬ್ರೂಹಿ ತತ್ಕಾರಣಂ ದೇವಿ ಕೃಪಾಂ ಕೃತ್ವಾ ಮಮೋಪರಿ ॥ ೫೦ ॥

॥ ಬ್ರಹ್ಮೋವಾಚ ॥

ಇತಿ ರಾಮವಚಃ ಶ್ರುತ್ವಾ ಚಕಿತಾಸೀತ್ಸತೀ ತದಾ ।
ಸ್ಮೃತ್ವಾ ಶಿವೋಕ್ತಂ ಮತ್ವಾ ಚಾವಿತಥಂ ಲಜ್ಜಿತಾ ಭೃಶಂ ॥ ೫೧ ॥

---

೪೭. ಹೀಗೆ ಆಲೋಚಿಸಿ ಸತೀದೇವಿಯು ರಾಮನ ಪರೀಕ್ಷೆಗಾಗಿ ಸೀತೆಯ ರೂಪವನ್ನು ಧರಿಸಿ ಅವನ ಬಳಿಗೆ ತೆರಳಿದಳು.

೪೮. ಆಗ ರಾಮನು ಸೀತೆಯ ರೂಪವನ್ನು ಧರಿಸಿ ಬಂದ ಸತೀದೇವಿಯನ್ನು ನೋಡಿ ಇದರ ರಹಸ್ಯವನ್ನು ತಿಳಿಯಲೋಸುಗ ಶಿವನಾಮವನ್ನು ಜಪಿಸಿದನು. ಆಗ ಅವಳು ಸತೀದೇವಿಯೆಂದು ತಿಳಿಯಿತು. ಆಗ ಆ ರಾಮನು ನಕ್ಕು ಸೀತಾರೂಪಳಾದ ಸತೀದೇವಿಯನ್ನು ನಮಸ್ಕರಿಸಿ,

೪೯. ರಾಮನು ಹೇಳಿದನು:— ಓ ಸತೀದೇವಿ ನಿನಗೆ ನಮಸ್ಕಾರವು, ಶಂಕರನೆಲ್ಲಿ? ನಿನ್ನ ಪತಿಯಾದ ಶಂಕರನನ್ನು ಬಿಟ್ಟು ಓರ್ವಳೇ ನೀನು ಈ ಅರಣ್ಯಕ್ಕೆ ಏಕೆ ಬಂದಿರುವೆ?

೫೦. ಓ ದೇವಿ, ನಿನ್ನ ನಿಜವಾದ ರೂಪವನ್ನು ಬಿಟ್ಟು ಈ ಸೀತಾರೂಪವನ್ನೇಕೆ ಧರಿಸಿರುವೆ? ಇದಕ್ಕೆ ಕಾರಣವೇನೆಂಬುದನ್ನು ದಯವಿಟ್ಟು ಹೇಳು ಎಂದು ಕೇಳಿದನು.

೫೧. ಬ್ರಹ್ಮನು ಹೇಳಿದನು:—ಹೀಗೆ ಹೇಳುತ್ತಿರುವ ರಾಮನ ಮಾತುಗಳನ್ನು ಕೇಳಿ ಸತೀದೇವಿಯು ಆಗ ವಿಸ್ಮಯಗೊಂಡಳು. ಮತ್ತು ರಾಮನು ಹರಿಯ

ರಾಮಂ ವಿಜ್ಞಾಯ ವಿಷ್ಣುಂ ತಂ ಸ್ವರೂಪಂ ಸಂವಿಧಾಯ ಚ ।
ಸ್ಮೃತ್ವಾ ಶಿವಪದಂ ಚಿತ್ತೇ ಸತ್ಯುವಾಚ ಪ್ರಸನ್ನಧೀಃ ॥ ೫೨ ॥

ಶಿವೋ ಮಯಾ ಗಣೈಶ್ಚೈವ ಪರ್ಯಟನ್ವಸುಧಾಂ ಪ್ರಭುಃ ।
ಇಹಾಗಚ್ಛಚ್ಚ ವಿಪಿನೇ ಸ್ವತಂತ್ರಃ ಪರಮೇಶ್ವರಃ ॥ ೫೩ ॥

ಅಪಶ್ಯದತ್ರ ಸ ತ್ವಾಂ ಹಿ ಸೀತಾನ್ವೇಷಣತತ್ಪರಂ ।
ಸಲಕ್ಷ್ಮಣಂ ವಿರಹಿಣಂ ಸೀತಯಾ ಕ್ಲಿಷ್ಟಮಾನಸಂ ॥ ೫೫ ॥

ನತ್ವಾ ತ್ವಾಂ ಸ ಗತೋ ಮೂಲೇ ವಟಸ್ಯ ಸ್ಥಿತ ಏವ ಹಿ ।
ಪ್ರಶಂಸನ್ಮಹಿಮಾನಂ ತೇ ವೈಷ್ಣವಂ ಪರಮಂ ಮುದಾ ॥ ೫೫ ॥

---

ಅವತಾರವು ಎಂದು ಶಿವನು ಹೇಳಿದುದನ್ನು ಸ್ಮರಿಸಿಕೊಂಡು ಅದು ಸತ್ಯವಾದುದೆಂದು ತಿಳಿದುಕೊಂಡಳು.

೫೨. ರಾಮನು ವಿಷ್ಣುಸ್ವರೂಪನೆಂದು ತಿಳಿದು ಸತೀದೇವಿಯು ಮನಸ್ಸಿನಲ್ಲಿ ಭಕ್ತಿಯಿಂದ ಶಿವನಾಮವನ್ನು ಸ್ಮರಿಸಿ, ತನ್ನ ನಿಜವಾದ ರೂಪವನ್ನು ಪ್ರಕಟಿಸಿ ರಾಮನನ್ನು ಕುರಿತು,

೫೩. ಸತೀದೇವಿಯು ಹೇಳಿದಳು :—ಎಲೈ ರಾಮನೇ, ಸರ್ವತಂತ್ರಸ್ವತಂತ್ರನಾದ ಪರಮೇಶ್ವರನು ನನ್ನೊಡನೆಯೂ ಗಣಗಳೊಡನೆಯೂ ಭೂಮಿಯನ್ನು ಸಂಚರಿಸುತ್ತಾ ಈ ದಂಡಕಾರಣ್ಯಕ್ಕೆ ಬಂದನು.

೫೪. ಆಗ ನೀನು ಈ ಅರಣ್ಯದಲ್ಲಿ ಸೀತೆಯನ್ನು ಕಳೆದುಕೊಂಡು ವಿರಹಿಯಾಗಿ ಲಕ್ಷ್ಮಣನೊಡನೆ ಅವಳನ್ನು ಹುಡುಕುತ್ತಲಿದ್ದೆ. ಇಂತಹ ನಿನ್ನನ್ನು ಆ ಪರಮೇಶ್ವರನು ನೋಡಿದನು.

೫೫. ಆಗ ಶಿವನು ನೀನು ವಿಷ್ಣುವಿನ ಅವತಾರವೆಂದು ನಿನ್ನನ್ನು ಹೊಗಳಿ ನಮಸ್ಕರಿಸಿ ವಟವೃಕ್ಷದ ಮೂಲಕ್ಕೆ ತೆರಳಿದನು.

**ಚತುರ್ಭುಜಂ ಹರಿಂ ತ್ವಾಂ ನೋ ದೃಷ್ಟ್ವೈವ ಮುದಿತೋಽಭವತ್ ।**
**ಯಥೇದಂ ರೂಪಮಮಲಂ ಪಶ್ಯನ್ನಾನಂದಮಾಪ್ತವಾನ್ ॥ ೫೬ ॥**

**ತಚ್ಛ್ರುತ್ವಾ ವಚನಂ ಶಂಭೋರ್ಭ್ರಮಮಾನೀಯ ಚೇತಸಿ ।**
**ತದಾಜ್ಞಯಾ ಪರೀಕ್ಷಾ ತೇ ಕೃತವತ್ಯಸ್ಮಿ ರಾಘವ ॥ ೫೭ ॥**

**ಜ್ಞಾತಂ ಮೇ ರಾಮ ವಿಷ್ಣುಸ್ತ್ವಂ ದೃಷ್ಟಾ ತೇ ಪ್ರಭುತಾಽಖಿಲಾ ।**
**ನಿಃಸಂಶಯಾ ತದಾಪಿ ತಚ್ಛೃಣು ತ್ವಂ ಚ ಮಹಾಮತೇ ॥ ೫೮ ॥**

**ಕಥಂ ಪ್ರಣಮ್ಯಸ್ತ್ವಂ ತಸ್ಯ ಸತ್ಯಂ ಬ್ರೂಹಿ ಮಮಾಗ್ರತಃ ।**
**ಕುರು ನಿಃಸಂಶಯಾಂ ತ್ವಂ ಮಾಂ ಶಮಲಂ ಪ್ರಾಪ್ನುಹಿ ದ್ರುತಂ ॥ ೫೯ ॥**

**॥ ಬ್ರಹ್ಮೋವಾಚ ॥**

**ಇತ್ಯಾಕರ್ಣ್ಯ ವಚಸ್ತಸ್ಯಾ ರಾಮಶ್ಚೋತ್ಫುಲ್ಲಲೋಚನಃ ।**
**ಅಸ್ಮರತ್ಸ್ವಂ ಪ್ರಭುಂ ಶಂಭುಂ ಪ್ರೇಮಾಭೂದ್ಧೃದಿ ಚಾಧಿಕಂ ॥ ೬೦ ॥**

---

೫೬. ನಿನ್ನನ್ನು ನೋಡಿ ಆ ಶಿವನು ತುಂಬಾ ಆನಂದಪಟ್ಟನು. ಸಾಕ್ಷಾತ್ ಹರಿಯನ್ನು ನೋಡಿದರೂ ಅವನು ಅಷ್ಟು ಆನಂದಪಡುತ್ತಿರಲಿಲ್ಲ.

೫೭. ಎಲೈ ರಾಮನೇ, ನೀನು ಹರಿಯ ಅವತಾರವೆಂದು ಹೇಳಿದ ಶಿವನ ಮಾತಿನಲ್ಲಿ ನನಗೆ ನಂಬಿಕೆ ಹುಟ್ಟಲಿಲ್ಲ. ಅದಕ್ಕಾಗಿ ಶಿವನಾಜ್ಞೆಯಂತೆ ನಾನು ನಿನ್ನನ್ನು ಪರೀಕ್ಷಿಸಿದೆನು.

೫೮. ಈಗ ನೀನು ವಿಷ್ಣುವಿನ ಅವತಾರವೆಂದು ತಿಳಿಯಿತು. ನಿನ್ನ ಪ್ರಭಾವ ವನ್ನೂ ನೋಡಿದೆನು. ನೀನು ವಿಷ್ಣುವಿನ ಅವತಾರವು ಎಂಬ ವಿಷಯದಲ್ಲಿ ನನಗೆ ಸಂಶಯವೇನೂ ಇಲ್ಲ. ಆದರೂ ನಾನು ಹೇಳುವುದನ್ನು ಕೇಳು.

೫೯. ಎಲೈ ರಾಮನೆ, ಆ ಶಿವನು ನಿನ್ನನ್ನು ನಮಸ್ಕರಿಸಲು ಕಾರಣವೇನು ? ನಿಜವಾದ ವಿಷಯವನ್ನು ಹೇಳಿ ನನ್ನ ಸಂಶಯವನ್ನು ಹೋಗಲಾಡಿಸು ಎಂದಳು.

೬೦. ಬ್ರಹ್ಮನು ಹೇಳಿದನು :—ಈರೀತಿಯಾಗಿ ಸತೀದೇವಿಯು ಹೇಳಿದ ಮಾತುಗಳನ್ನು ಕೇಳಿ ರಾಮನು ಸಂತೋಷದಿಂದ ಅರಳಿದ ಕಣ್ಣುಳ್ಳವನಾಗಿ ತನ್ನ ಪ್ರಭುವಾದ ಶಂಕರನನ್ನು ಧ್ಯಾನಿಸಿದನು. ಆಗ ಅವನಿಗೆ ಶಿವನಲ್ಲಿ ಹೆಚ್ಚಾದ ಭಕ್ತಿಯು ಉಂಟಾಯಿತು.

**ಸತ್ಯಾ ವಿನಾಜ್ಞಯಾ ಶಂಭುಸಮೀಪಂ ನಾಗಮನ್ಮನೇ ।**
**ಸಂವರ್ಣ್ಯ ಮಹಿಮಾನಂ ಚ ಪ್ರಾವೋಚದ್ರಾಘವಸ್ಸತೀಂ ॥ ೬೧ ॥**

**ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ**
**ದ್ವಿತೀಯೇ ಸತೀಖಂಡೇ ರಾಮಪರೀಕ್ಷಾವರ್ಣನಂ**
**ನಾಮ ಚತುರ್ವಿಂಶೋಽಧ್ಯಾಯಃ.**



---

೬೧. ಆದರೂ ಆ ರಾಮನು ಸತೀದೇವಿಯ ಆಜ್ಞೆಯಿಲ್ಲದೇ ಶಂಕರನ ಬಳಿಗೆ ಹೋಗದೆ ಆಶಿವನ ಮಹಿಮೆಯನ್ನು ಹೊಗಳಿ ಸತಿಯನ್ನು ಕುರಿತು ಹೀಗೆ ಹೇಳಿದನು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಪಂಚವಿಂಶೋಽಧ್ಯಾಯಃ

॥ ರಾಮ ಉವಾಚ ॥

ಏಕದಾ ಹಿ ಪುರೋ ದೇವೀ ಶಂಭುಃ ಪರಮಸೂತಿಕೃತ್ ।
ವಿಶ್ವಕರ್ಮಾಣಮಾಹೂಯ ಸ್ವಲೋಕೇ ಪರತಃ ಪರೇ ॥ ೧ ॥

ಸ್ವಧೇನುಶಾಲಾಯಾಂ ರಮ್ಯಂ ಕಾರಯಾಮಾಸ ತೇನ ಚ ।
ಭವನೇ ವಿಸ್ತೃತಂ ಸಮ್ಯಕ್ತತ್ರ ಸಿಂಹಾಸನಂ ವರಂ ॥ ೨ ॥

ತತ್ರ ಚ್ಛತ್ರಂ ಮಹಾದಿವ್ಯಂ ಸರ್ವದಾದ್ಭುತಮುತ್ತಮಂ ।
ಕಾರಯಾಮಾಸ ವಿಘ್ನಾರ್ಥಂ ಶಂಕರೋ ವಿಶ್ವಕರ್ಮಣಾ ॥ ೩ ॥

---

### ಇಪ್ಪತ್ತೈದನೆಯ ಅಧ್ಯಾಯವು.

೧-೩. ರಾಮನು ಹೇಳಿದನು:—ಓ ಸತೀದೇವಿ, ಹಿಂದೆ ಜಗತ್ಕರ್ತನಾದ ಶಿವನು ದೇವಶಿಲ್ಪಿಯಾದ ವಿಶ್ವಕರ್ಮನನ್ನು ತನ್ನ ಲೋಕಕ್ಕೆ ಕರೆಯಿಸಿ ತನ್ನ ಗೋಶಾಲೆಯ ಸಮೀಪದಲ್ಲಿ ರಮ್ಯವಾದ ಭವನವೊಂದನ್ನು ನಿರ್ಮಿಸಿದನು. ಆ ಭವನದಲ್ಲಿ ಉತ್ತಮವಾದೊಂದು ಸಿಂಹಾಸನವನ್ನು ಮಾಡಿಸಿದನು. ಅದರ ಮೇಲ್ಭಾಗದಲ್ಲಿ ಮಹಾದ್ಭುತವಾದ ಮತ್ತು ದಿವ್ಯವಾದ ಒಂದು ಶ್ವೇತಚ್ಛತ್ರಿಯನ್ನು ನಿರ್ಮಿಸಿ ವಿಘ್ನನಿವಾರಣೆಗಾಗಿ ಇರಿಸಿದನು.

ಶಕ್ರಾದೀನಾಂ ಜುಹಾವಾಶು ಸಮುಸ್ತಾನ್ದೇವತಾಗಣಾನ್ ।
ಸಿದ್ಧಗಂಧರ್ವನಾಗಾದೀನುಪದೇಶಾಂಶ್ಚ ಕೃತ್ಸ್ನಶಃ ॥ ೪ ॥

ದೇವಾನ್ಸರ್ವಾನಾಗಮಾಂಶ್ಚ ವಿಧಿಂ ಪುತ್ರೈರ್ಮುನೀನಪಿ ।
ದೇವೀಃ ಸರ್ವಾ ಅಪ್ಸರೋಭಿರ್ನಾನಾವಸ್ತುಸಮನ್ವಿತಾಃ ॥ ೫ ॥

ದೇವಾನಾಂ ಚ ತಥರ್ಷೀಣಾಂ ಸಿದ್ಧಾನಾಂ ಫಣಿನಾಮಪಿ ।
ಆನಯನ್ಮಂಗಲಕರಾಃ ಕನ್ಯಾಃ ಷೋಡಶ ಷೋಡಶ ॥ ೬ ॥

ವೀಣಾಮೃದಂಗಪ್ರಮುಖವಾದ್ಯಾನ್ನಾನಾವಿಧಾನ್ಮುನೇ ।
ಉತ್ಸವಂ ಕಾರಯಾಮಾಸ ವಾದಯಿತ್ವಾ ಸುಗಾಯನೈಃ ॥ ೭ ॥

ರಾಜಾಭಿಷೇಕಯೋಗ್ಯಾನಿ ದ್ರವ್ಯಾಣಿ ಸಕಲೌಷಧ್ಯೈಃ ।
ಪ್ರತ್ಯಕ್ಷತೀರ್ಥಪಾಥೋಭಿಃ ಪಂಚಕುಂಭಾಂಶ್ಚ ಪೂರಿತಾನ್ ॥ ೮ ॥

---

೪. ಆ ಭವನಕ್ಕೆ ಇಂದ್ರನೇ ಮೊದಲಾದ ದೇವತೆಗಳನ್ನೂ ಸಿದ್ಧ, ಗಂಧರ್ವ, ನಾಗರೇ ಮುಂತಾದವರೆಲ್ಲರನ್ನೂ ಕರೆಯಿಸಿದನು.

೫. ಮತ್ತು ಮಿಕ್ಕ ಎಲ್ಲಾ ದೇವತೆಗಳು, ವೇದಪುರುಷರು, ಬ್ರಹ್ಮ, ಮಾನಸ ಪುತ್ರರು, ಮರೀಚಿ ಮೊದಲಾದ ಮುನಿಗಳು, ದೇವತಾಸ್ತ್ರೀಯರು, ಅಪ್ಸರೆಯರು ಇವರೆಲ್ಲರನ್ನೂ ಶಂಕರನು ಕರೆಯಿಸಿದನು. ಅವರೆಲ್ಲರೂ ಅನೇಕ ಅಮೂಲ್ಯವಸ್ತುಗಳನ್ನು ತೆಗೆದುಕೊಂಡು ಆ ಭವನಕ್ಕೆ ಬಂದರು.

೬. ಅಲ್ಲದೆ ಸುಂದರಿಯರಾದ ದೇವಕನ್ಯೆಯರು, ಋಷಿಕನ್ಯೆಯರು, ಸಿದ್ಧ ಕನ್ಯೆಯರು, ನಾಗಕನ್ಯೆಯರು ಇವರುಗಳಲ್ಲಿ ಹದಿನಾರು ಹದಿನಾರು ಮಂದಿಯನ್ನು ಅಲ್ಲಿಗೆ ಕರೆಯಿಸಿದನು.

೭. ವೀಣೇ, ಮೃದಂಗ ಮುಂತಾದ ಅನೇಕ ಮಂಗಳವಾದ್ಯಗಳನ್ನು ತರಿಸಿ ಗಾಯಕರಿಂದ ಅವುಗಳನ್ನು ಬಾರಿಸಿ ಉತ್ಸವವನ್ನು ಮಾಡಿಸಿದನು.

೮-೯. ಮತ್ತು ರಾಜಾಭಿಷೇಕಕ್ಕೆ ಯೋಗ್ಯವಾದಂತಹ ವಸ್ತುಗಳು ಔಷಧಗಳು, ಇವುಗಳನ್ನೂ, ಐದು ಕಲಶಗಳಲ್ಲಿ ತೀರ್ಥಜಲಗಳನ್ನೂ, ಮಿಕ್ಕ ಎಲ್ಲಾ

ತಥಾನ್ಯಾಸ್ಸಂವಿಧಾ ದಿವ್ಯಾ ಆನಯತ್ಸ್ವಗಣೈಸ್ತದಾ ।
ಬ್ರಹ್ಮಘೋಷಂ ಮಹಾರಾವಂ ಕಾರಯಾಮಾಸ ಶಂಕರಃ ॥ ೯ ॥

ಅಥೋ ಹರಿಂ ಸಮಾಹೂಯ ವೈಕುಂಠಾತ್ಪ್ರೀತಮಾನಸಃ ।
ತದ್ಭಕ್ತ್ಯಾ ಪೂರ್ಣಯಾ ದೇವಿ ಮೋದತಿ ಸ್ಮ ಮಹೇಶ್ವರಃ ॥ ೧೦ ॥

ಸುಮುಹೂರ್ತೇ ಮಹಾದೇವಸ್ತತ್ರ ಸಿಂಹಾಸನೇ ವರೇ ।
ಉಪವೇಶ್ಯ ಹರಿಂ ಪ್ರೀತ್ಯಾ ಭೂಷಯಾಮಾಸ ಸರ್ವಶಃ ॥ ೧೧ ॥

ಆಬದ್ಧರಮ್ಯಮುಕುಟಂ ಕೃತಕೌತುಕಮಂಗಲಂ ।
ಅಭಿಷಿಂಚನ್ಮಹೇಶಸ್ತು ಸ್ವಯಂ ಬ್ರಹ್ಮಾಂಡಮಂಡಪೇ ॥ ೧೨ ॥

ದತ್ತವಾನ್ನಿಖಿಲೈಶ್ವರ್ಯಂ ಯನ್ನೈಜಂ ನಾನ್ಯಗಾಮಿ ಯತ್ ।
ತತಸ್ತುಷ್ಟಾವ ಸ ಶಂಭುಸ್ಸ್ವತಂತ್ರೋ ಭಕ್ತವತ್ಸಲಃ ॥ ೧೩ ॥

ಬ್ರಹ್ಮಾಣಂ ಲೋಕಕರ್ತಾರಮುವೋಚದ್ವಚನಂ ತ್ವಿದಂ ।
ವ್ಯಾಪಯನ್ಸ್ವಂ ವರಾಧೀನಂ ಸ್ವತಂತ್ರಂ ಭಕ್ತವತ್ಸಲಃ ॥ ೧೪ ॥

---

ಸಾಮುಗ್ರಿಗಳನ್ನೂ ತನ್ನ ಗಣಗಳಿಂದ ಶಂಕರನು ತರಿಸಿದನು. ಬ್ರಾಹ್ಮಣರಿಂದ ಸುಶ್ರಾವ್ಯವಾಗಿ ವೇದಘೋಷವನ್ನು ಮಾಡಿಸಿದನು.

೧೦-೧೧. ಬಳಿಕ ಆ ಮಹೇಶ್ವರನು ವೈಕುಂಠದಿಂದ ಹರಿಯನ್ನು ಆದರದಿಂದ ಆ ಭವನಕ್ಕೆ ಬರಮಾಡಿಕೊಂಡು ಶುಭಮುಹೂರ್ತದಲ್ಲಿ ಅವನನ್ನು ಅಲ್ಲಿರಿಸಿರುವ ಸಿಂಹಾಸನದಲ್ಲಿ ಪ್ರೀತಿಯಿಂದ ಕುಳ್ಳಿರಿಸಿ ಅಲಂಕರಿಸಿದನು.

೧೨. ತಾನೇ ಆ ಹರಿಗೆ ಮಂಗಳಸ್ನಾನವನ್ನು ಮಾಡಿಸಿ ಶಿರಸ್ಸಿನಲ್ಲಿ ಕಿರೀಟವನ್ನಿರಿಸಿ ತೀರ್ಥಜಲಗಳಿಂದ ಅಭಿಷೇಕವನ್ನು ಆ ಬ್ರಹ್ಮಾಂಡವೆಂಬ ಮಂಡಪದಲ್ಲಿ ಮಾಡಿಸಿದನು.

೧೩. ತನ್ನ ಐಶ್ವರ್ಯವನ್ನೆಲ್ಲಾ ಹರಿಗೆ ಅನುಗ್ರಹಿಸಿದನು. ಮುಂದೆ ಭಕ್ತವತ್ಸಲನಾದ ಆ ಶಿವನು ಹರಿಯನ್ನು ಸ್ತುತಿಸಿದನು.

೧೪. ಬಳಿಕ ಆ ಶಿವನು ಬ್ರಹ್ಮನನ್ನು ಕುರಿತು ತಾನು ಕೊಟ್ಟ ವರಕ್ಕೆ ಅಧೀನನೆಂಬುವುದನ್ನು ಪ್ರಕಟಿಸುವುದಕ್ಕಾಗಿ ಹೀಗೆ ಹೇಳಿದನು.

॥ ಮಹೇಶ ಉವಾಚ ॥

ಅತಃಪ್ರಭೃತಿ ಲೋಕೇಶ ಮನ್ನಿದೇಶಾದಯಂ ಹರಿಃ ।
ಮಮ ವಂದ್ಯಃ ಸ್ವಯಂ ವಿಷ್ಣುರ್ಜಾತಸ್ಸರ್ವಶ್ಶೃಣೋತಿ ಹಿ ॥ ೧೫ ॥

ಸರ್ವೈರ್ದೇವಾದಿಭಿಸ್ತಾತ ಪ್ರಣಮ ತ್ವಮಮುಂ ಹರಿಂ ।
ವರ್ಣಯಂತು ಹರಿಂ ವೇದಾ ಮನ್ಯೈತೇ ಮಾಮಿವಾಜ್ಞಯಾ ॥ ೧೬ ॥

॥ ರಾಮಃ ಉವಾಚ ॥

ಇತ್ಯುಕ್ತ್ವಾಥ ಸ್ವಯಂ ರುದ್ರೋ ನನೋದ್ವೈ ಗರುಡಧ್ವಜಂ ।
ವಿಷ್ಣುಭಕ್ತಿಪ್ರಸನಾತ್ಮಾ ವರದೋ ಭಕ್ತವತ್ಸಲಃ ॥ ೧೭ ॥

ತತೋ ಬ್ರಹ್ಮಾದಿಭಿರ್ದೇವೈಃ ಸರ್ವರೂಪಸುರೈಸ್ತಥಾ ।
ಮುನಿಸಿದ್ಧಾದಿಭಿಶ್ಚೈವಂ ವಂದಿತೋಽಭೂದ್ಧರಿಸ್ತದಾ ॥ ೧೮ ॥

ತತೋ ಮಹೇಶೋ ಹರಯೇಽಶಂಸದ್ದಿವಿಷದಾಂ ತದಾ ।
ಮಹಾವರಾನ್ಸುಪ್ರಸನ್ನೋ ಧೃತವಾನ್ಭಕ್ತವತ್ಸಲಃ ॥ ೧೯ ॥

---

೧೫-೧೬. ಶಿವನು ಹೇಳಿದನು :—ಎಲೈ ಬ್ರಹ್ಮನೇ, ಇಂದು ಮೊದಲುಗೊಂಡು ಈ ಹರಿಯು ನನ್ನ ಅಪ್ಪಣೆಯಂತೆ ನನ್ನಿಂದಲೂ ನಮಸ್ಕರಿಸಲ್ಪಡಲಿ. ಎಲ್ಲರಿಗೂ ಕೇಳಿಸುವಂತೆ ಈ ಮಾತನ್ನು ಹೇಳುವೆನು. ಎಲ್ಲ ದೇವತೆಗಳೊಡನೆ ನೀನು ಈ ಹರಿಯನ್ನು ನಮಸ್ಕರಿಸು. ಎಲ್ಲ ವೇದಗಳು ನನ್ನನ್ನು ವರ್ಣಿಸುವಂತೆ ಈ ಹರಿಯನ್ನೂ ವರ್ಣಿಸುವವು.

೧೭. ರಾಮನು ಹೇಳಿದನು :—ಓ ದೇವಿ, ಹೀಗೆ ಹೇಳಿ ಭಕ್ತವತ್ಸಲನಾದ ರುದ್ರನು ತನ್ನ ವರದಂತೆ ಆಗಲೇ ವಿಷ್ಣುವನ್ನು ಭಕ್ತಿಯಿಂದ ನಮಸ್ಕರಿಸಿದನು.

೧೮. ಬಳಿಕ ಬ್ರಹ್ಮನೇ ಮೊದಲಾದ ದೇವತೆಗಳೂ, ಕಿನ್ನರಾದಿಗಳೂ, ಮುನಿಗಳೂ ಸಿದ್ಧರೂ ಸಹ ಹರಿಯನ್ನು ನಮಸ್ಕರಿಸಿದರು.

೧೯. ಆಮೇಲೆ ಪರಮೇಶ್ವರನು ಪ್ರಸನ್ನತೆಯಿಂದ ದೇವತೆಗಳೆದುರಿಗೆ ಇನ್ನೂ ಅನೇಕ ವರಗಳನ್ನು ಹರಿಗೆ ಕರುಣಿಸಿದನು.

॥ ಮಹೇಶ ಉವಾಚ ॥

ತ್ವಂ ಕರ್ತಾ ಸರ್ವಲೋಕಾನಾಂ ಭರ್ತಾ ಹರ್ತಾ ಮದಾಜ್ಞಯಾ ।
ದಾತಾ ಧರ್ಮಾರ್ಥಕಾಮಾನಾಂ ಶಾಸ್ತಾ ದುರ್ನಯಕಾರಿಣಾಂ ॥ ೨೦ ॥

ಜಗದೀಶೋ ಜಗತ್ಪೂಜ್ಯೋ ಮಹಾಬಲಪರಾಕ್ರಮಃ ।
ಅಜೇಯಸ್ತ್ವಂ ರಣೇ ಕ್ವಾಪಿ ಮಮಾಪಿ ಹಿ ಭವಿಷ್ಯಸಿ ॥ ೨೧ ॥

ಶಕ್ತಿತ್ರಯಂ ಗೃಹಾಣ ತ್ವಮಿಚ್ಛಾದಿಪ್ರಾಪಿತಂ ಮಯಾ ।
ನಾನಾಲೀಲಾಪ್ರಭಾವತ್ವಂ ಸ್ವತಂತ್ರತ್ವಂ ಭವತ್ರಯೇ ॥ ೨೨ ॥

ತ್ವದ್ದ್ವೇಷ್ಟಾರೋ ಹರೇ ನೂನಂ ಮಯಾ ಶಾಸ್ಯಾಃ ಪ್ರಯತ್ನತಃ ।
ತ್ವದ್ಭಕ್ತಾನಾಂ ಮಯಾ ವಿಷ್ಣೋ ದೇಯಂ ನಿರ್ವಾಣಮುತ್ತಮಂ ॥ ೨೩ ॥

ಮಾಯಾಂ ಚಾಪಿ ಗೃಹಾಣೇಮಾಂ ದುಃಪ್ರಣೋದ್ಯಾಂ ಸುರಾದಿಭಿಃ ।
ಯಯಾ ಸಂಮೋಹಿತಂ ವಿಶ್ವಮಚಿದ್ರೂಪಂ ಭವಿಷ್ಯತಿ ॥ ೨೪ ॥

---

೨೦-೨೨. ಪರಮೇಶ್ವರನು ಮತ್ತೆ ಹೇಳಿದನು :—ಎಲೈ ವಿಷ್ಣುವೇ ನೀನು ನನ್ನ ಅಪ್ಪಣೆಯಂತೆ ಇನ್ನು ಮುಂದೆ ಸಕಲ ಲೋಕಗಳ ಸೃಷ್ಟಿ, ಸ್ಥಿತಿ ಪ್ರಳಯಗಳನ್ನು ಮಾಡುವವನಾಗು. ಭಕ್ತರಿಗೆ ಧರ್ಮ, ಅರ್ಥ, ಕಾಮಗಳನ್ನು ಕರುಣಿಸುತ್ತಾ ದುಷ್ಟರನ್ನು ಶಿಕ್ಷಿಸಿ ಸಜ್ಜನರಿಗೆ ಅನುಗ್ರಹವನ್ನು ಮಾಡು ಮತ್ತು ನೀನು ಜಗತ್ತಿಗೆ ಒಡೆಯನೂ ಪೂಜ್ಯನೂ ಆಗುವೆ. ತುಂಬಾ ಪರಾಕ್ರಮಶಾಲಿಯಾಗುವೆ, ನನಗೂ ಅಜೇಯನಾಗುವೆ. ಇಚ್ಛಾಶಕ್ತಿ, ಜ್ಞಾನಶಕ್ತಿ. ಕ್ರಿಯಾಶಕ್ತಿ ಈ ಮೂರು ಶಕ್ತಿಗಳನ್ನು ಕೊಡುವೆನು. ಇವುಗಳನ್ನು ಪರಿಗ್ರಹಿಸಿ ಅದ್ಭುತವಾದ ಅನೇಕ ಲೀಲೆಗಳನ್ನು ಪ್ರದರ್ಶಿಸುತ್ತಾ ಸ್ವತಂತ್ರನಾಗಿ ಪ್ರವರ್ತಿಸುತ್ತಿರು.

೨೩. ಎಲೈ ಹರಿ, ನಿನ್ನನ್ನು ಯಾರು ದ್ವೇಷಿಸುವರೋ ಅವರನ್ನು ನಾನು ಪ್ರಯತ್ನದಿಂದ ಶಿಕ್ಷಿಸುವೆನು. ನಿನ್ನ ಭಕ್ತರಿಗೆ ಉತ್ತಮಸುಖವನ್ನು ಕಲ್ಪಿಸುವೆನು.

೨೪. ನಾನು ಕೊಡುವ ಈ ಮಾಯೆಯನ್ನೂ ತೆಗೆದುಕೊ, ಇದನ್ನು ದೇವತೆಗಳೂ ಸಹ ಅತಿಕ್ರಮಿಸಲಾರರು. ಈ ಮಾಯೆಯಿಂದ ಜಗತ್ತೆಲ್ಲವೂ ಮೋಹಿಸಲ್ಪಟ್ಟು ಜಡರೂಪವಾಗುವುದು. (ಭ್ರಾಂತಿಮಯವಾಗುವುದು)

ಮಮ ಬಾಹುರ್ಮದೀಯಸ್ತ್ವಂ ದಕ್ಷಿಣೋಽಸೌ ವಿಧಿರ್ಹರೇ ।
ಅಸ್ಯಾಪಿ ಹಿ ವಿಧೇಃ ಪಾತಾ ಜನಿತಾಪಿ ಭವಿಷ್ಯಸಿ ॥ ೨೫ ॥

ಹೃದಯಂ ಮಮ ಯೋ ರುದ್ರಸ್ಸ ಏವಾಹಂ ನ ಸಂಶಯಃ ।
ಪೂಜ್ಯಸ್ತವ ಸದಾ ಸೋಽಪಿ ಬ್ರಹ್ಮಾದೀನಾಮಪಿ ಧ್ರುವಂ ॥ ೨೬ ॥

ಅತ್ರ ಸ್ಥಿತ್ವಾ ಜಗತ್ಸರ್ವಂ ಪಾಲಯ ತ್ವಂ ವಿಶೇಷತಃ ।
ನಾನಾವತಾರಭೇದೈಶ್ಚ ಸದಾ ನಾನೋತಿಕರ್ತೃಭಿಃ ॥ ೨೭ ॥

ಮಮ ಲೋಕೇ ತವೇದಂ ವೈ ಸ್ಥಾನಂ ಚ ಪರಮರ್ದ್ಧಿಮತ್ ।
ಗೋಲೋಕ ಇವ ವಿಖ್ಯಾತಂ ಭವಿಷ್ಯತಿ ಮಹೋಜ್ಜ್ವಲಂ ॥ ೨೮ ॥

ಭವಿಷ್ಯಂತಿ ಹರೇ ಯೇ ತೇಽವತಾರಾ ಭುವಿ ರಕ್ಷಕಾಃ ।
ಮದ್ಭಕ್ತಾಸ್ತಾನ್ಧ್ರುವಂ ದ್ರಕ್ಷ್ಯೇ ಪ್ರೀತಾನಷ್ಟ ನಿಜಾದ್ವರಾತ್ ॥ ೨೯ ॥

---

೨೫. ಎಲೈ ಹರಿ, ನೀನು ನನ್ನ ಎಡಬಾಹುವು. ಈ ಬ್ರಹ್ಮನು ಬಲಬಾಹುವು. ಇಂತಹ ಈ ವಿಧಿಯಸೃಷ್ಟಿ ಸಂರಕ್ಷಣಾದಿಗಳನ್ನು ಮಾಡು.

೨೬. ರುದ್ರನು ನನ್ನ ಹೃದಯವು ಮತ್ತು ನನ್ನ ಪೂರ್ಣಾಂಶನು. ನನಗೂ ಆ ರುದ್ರನಿಗೂ ಭೇದವಿಲ್ಲ. ಆದುದರಿಂದ ನೀನು ಆ ರುದ್ರನನ್ನು ಪೂಜಿಸಿಬೇಕು, ಬ್ರಹ್ಮಾದಿಗಳಿಗೂ ಅವನು ಪೂಜ್ಯನು.

೨೭. ಈ ಭವನ (ಲೋಕ) ದಲ್ಲಿದ್ದು ನೀನು ಜಗತ್ತನ್ನು ಪಾಲಿಸು, ಆಯಾಯ ಅವತಾರಗಳನ್ನು ಮಾಡಿ ದುಷ್ಟರನ್ನು ನಿಗ್ರಹಿಸು.

೨೮. ನನ್ನ ಲೋಕದಲ್ಲಿ ಇದು ನಿನ್ನ ಶ್ರೇಷ್ಠವಾದ ಸ್ಥಾನವು. ಉಜ್ವಲವಾದ ಈ ಸ್ಥಾನಕ್ಕೆ ಗೋಲೋಕವೆಂದು ಹೆಸರು.

೨೯. ಎಲೈ ಹರಿ, ಭೂಪರಿಪಾಲನೆಗಾಗಿ ನೀನು ಮಾಡುವ ಅವತಾರಪುರುಷ ರೆಲ್ಲರೂ ನನ್ನ ಭಕ್ತರಾಗಿರುವರು. ಅವರೆಲ್ಲರನ್ನೂ ನನ್ನ ವರದಂತೆ ಪ್ರೀತಿಯಿಂದ ನೋಡುವೆನು ಎಂದನು.

॥ ರಾಮ ಉವಾಚ ॥

ಅಖಂಡೈಶ್ವರ್ಯಮಾಸಾದ್ಯ ಹರೇರಿತ್ಥಂ ಹರಸ್ಸ್ವಯಂ ।
ಕೈಲಾಸೇ ಸ್ವಗಣೈಸ್ತಸ್ಮಿನ್ಸ್ವೈರಂ ಕ್ರೀಡತ್ಯುಮಾಪತಿಃ ॥ ೩೦ ॥

ತದಾ ಪ್ರಭೃತಿ ಲಕ್ಷ್ಮೀಶೋ ಗೋಪವೇಷೋಽಭವತ್ತಥಾ ।
ಅಯಾಸೀತ್ತತ್ರ ಸುಪ್ರೀತ್ಯಾ ಗೋಪಗೋಪೀಗವಾಂ ಪತಿಃ ॥ ೩೧ ॥

ಸೋಽಪಿ ವಿಷ್ಣುಃ ಪ್ರಸನ್ನಾತ್ಮಾ ಜುಗೋಪ ನಿಖಿಲಂ ಜಗತ್ ।
ನಾನಾವತಾರಸಂಧರ್ತಾ ವನಕರ್ತಾ ಶಿವಾಜ್ಞಯಾ ॥ ೩೨ ॥

ಇದಾನೀಂ ಸ ಚತುರ್ಧಾತ್ರಾವಾತರಚ್ಛಂಕರಾಜ್ಞಯಾ ।
ರಾಮೋಽಹಂ ತತ್ರ ಭರತೋ ಲಕ್ಷ್ಮಣಶ್ಶತ್ರುಹೇತಿ ಚ ॥ ೩೩ ॥

ಅಥ ಪಿತ್ರಾಜ್ಞಯಾ ದೇವಿ ಸಸೀತಾಲಕ್ಷ್ಮಣಸ್ಸತಿ ।
ಆಗತೋಽಹಂ ವನೇ ಚಾದ್ಯ ದುಃಖಿತೋ ದೈವತೋಽಭವಂ ॥ ೩೪ ॥

---

೩೦. ರಾಮನು ಹೇಳಿದನು :—ಹೀಗೆ ಶಿವನು ಹರಿಗೆ ಅಖಂಡವಾದ ಐಶ್ವರ್ಯವನ್ನು ಅನುಗ್ರಹಿಸಿ ಮುಂದೆ ತನ್ನ ಗಣಗಳೊಡನೆ ಕೈಲಾಸದಲ್ಲಿ ಯಥೇಚ್ಛವಾಗಿ ವಿಹರಿಸುತ್ತಲಿದ್ದನು.

೩೧. ಅದು ಮೊದಲುಗೊಂಡು ಹರಿಯು ಗೋಪ (ಹಸು ಕಾಯುವವ ಶ್ರೀಕೃಷ್ಣ) ವೇಷವುಳ್ಳವನಾದನು. ಮುಂದೆ ಅವನು ಗೋಕುಲದಲ್ಲಿ ಅವತರಿಸಿ ಗೋಪರು ಗೋಪಿಯರು, ಗೋವುಗಳು ಇವರೆಲ್ಲರನ್ನೂ ಸಲಹಿದನು.

೩೨. ಮುಂದೆ ಆ ಹರಿಯು ಶಿವನ ಆಜ್ಞೆಯಂತೆ ಜಗತ್ತನ್ನು ಪಾಲಿಸುವುದಕ್ಕಾಗಿ ಅನೇಕ ಅವತಾರಗಳನ್ನು ಮಾಡಿ ಜಗತ್ತನ್ನು ರಕ್ಷಿಸಿದನು.

೩೩. (ರಾವಣನೆಂಬ) ದೈತ್ಯನ ಸಂಹಾರಕ್ಕಾಗಿ ರಾಮ, ಭರತ. ಲಕ್ಷ್ಮಣ, ಶತ್ರುಘ್ನ ಈ ನಾಲ್ಕು ರೂಪದಿಂದ ಅವತರಿಸಿರುವನು. ಆ ನಾಲ್ವರಲ್ಲಿ ನಾನು ರಾಮನಾಗಿರುವೆನು.

೩೪. ಮುಂದೆ ನಾನು ನನ್ನ ತಂದೆಯ ಅಪ್ಪಣೆಯಂತೆ ಸೀತೆ ಮತ್ತು ಲಕ್ಷ್ಮಣರೊಡನೆ ಈ ಕಾಡಿಗೆ ಬಂದಿರುವೆನು. ಪ್ರಕೃತ ದುರದೃಷ್ಟದಿಂದ ನಾನು ತುಂಬಾ ದುಃಖಿತನಾಗಿರುವೆನು. ಓ ದೇವಿ, ನನ್ನನ್ನು ಸಲಹುವವಳಾಗು.

ನಿಶಾಚರೇಣ ಮೇ ಜಾಯಾ ಹೃತಾ ಸೀತೇತಿ ಕೇನಚಿತ್ ।
ಅನ್ವೇಷ್ಯಾಮಿ ಪ್ರಿಯಾಂ ಚಾತ್ರ ವಿರಹೀ ಬಂಧುನಾ ವನೇ ॥ ೩೫ ॥

ದರ್ಶನಂ ತೇ ಯದಿ ಪ್ರಾಪ್ತಂ ಸರ್ವಥಾ ಕುಶಲಂ ಮಮ ।
ಭವಿಷ್ಯತಿ ನ ಸಂದೇಹೋ ಮಾತಸ್ತೇ ಕೃಪಯಾ ಸತಿ ॥ ೩೬ ॥

ಸೀತಾಪ್ರಾಪ್ತಿವರಂ ದೇವಿ ಭವಿಷ್ಯತಿ ನ ಸಂಶಯಃ ।
ತಂ ಹತ್ವಾ ದುಃಖದಂ ಪಾಪಂ ರಾಕ್ಷಸಂ ತ್ವದನುಗ್ರಹಾತ್ ॥ ೩೭ ॥

ಮಹದ್ಭಾಗ್ಯಂ ಮಮಾದ್ಯೈವ ಯದ್ಯಕಾರ್ಷ್ಟಾಂ ಕೃಪಾಂ ಯುವಾಂ।
ಯಸ್ಮಿನ್ಸಕರುಣೌ ಸ್ಯಾತಾಂ ಸ ಧನ್ಯಃ ಪುರುಷೋ ವರಃ ॥ ೩೮ ॥

ಇತ್ಥಮಾಭಾಷ್ಯ ಬಹುಧಾ ಸುಪ್ರಣಮ್ಯ ಸತೀಂ ಶಿವಾಂ ।
ತದಾಜ್ಞಯಾ ವನೇ ತಸ್ಮಿನ್ವಿಚಚಾರ ರಘೂದ್ವಹಃ ॥ ೩೯ ॥

---

೩೫. ಯಾವನೋ ಓರ್ವ ರಾಕ್ಷಸನು ನನ್ನ ಹೆಂಡತಿಯಾದ ಸೀತೆಯನ್ನು ಅಪಹರಿಸಿರುವನು. ಹೀಗೆ ವಿರಹಿಯಾಗಿ ನಾನು ತಮ್ಮನೊಡನೆ ಆ ನನ್ನ ಪತ್ನಿಯನ್ನು ಹುಡುಕುತ್ತಲಿರುವೆನು.

೩೬. ಓ ಸತೀದೇವಿ, ಈ ಮಧ್ಯೆ ಸರ್ವಮಂಗಳೆಯಾದ ನಿನ್ನ ದರ್ಶನವು ನನಗಾಯಿತು. ಇದರಿಂದ ಮುಂದೆ ನಿಶ್ಚಯವಾಗಿ ನಿನ್ನ ಅನುಗ್ರಹದಿಂದ ಮಂಗಳ ವಾಗುವುದೆಂದು ನಾನು ತಿಳಿಯುವೆನು.

೩೭. ಸೀತೆಯನ್ನಪಹರಿಸಿದ ಆ ದುಷ್ಟ ರಾಕ್ಷಸನನ್ನು ಸಂಹರಿಸಿ ನಿನ್ನ ಅನು ಗ್ರಹದಿಂದ ತಿರುಗಿ ಸೀತೆಯನ್ನು ಪಡೆಯುವೆನು. ಓ ದೇವಿ, ಆ ರೀತಿ ಆಗುವಂತೆ ಅನುಗ್ರಹಿಸು.

೩೮. ನಿಮ್ಮಿರ್ವರ (ಸತೀಶಿವರ) ಅನುಗ್ರಹಕ್ಕೆ ಪಾತ್ರನಾದ ನಾನು ಧನ್ಯನು. ಯಾವನು ನಿಮ್ಮ ಕರುಣೆಗೆ ಪಾತ್ರನಾಗುವನೋ ಆ ಪುರುಷನು ಮಹಾಭಾಗ್ಯ ಶಾಲಿಯು, ಧನ್ಯನು.

೩೯. ಹೀಗೆ ರಾಮನು ಸತೀದೇವಿಗೆ ಹೇಳಿ, ಅವಳ ಅನುಮತಿಯನ್ನು ಪಡೆದು ಆ ವನದಲ್ಲಿ ಸೀತೆಯನ್ನು ಹುಡುಕುತ್ತಾ ಸಂಚರಿಸಿದನು.

ಅಥಾಕರ್ಣ್ಯ ಸತೀ ವಾಕ್ಯಂ ರಾಮಸ್ಯ ಪ್ರಯತಾತ್ಮನಃ ।
ಹೃಷ್ಟಾಭೂತ್ಸಾ ಪ್ರಶಂಸಂತಂ ಶಿವಭಕ್ತಿರತಂ ಹೃದಿ ॥ ೪೦ ॥

ಸ್ಮೃತ್ವಾ ಸ್ವಕರ್ಮ ಮನಸಾಕಾರ್ಷೀಚ್ಛೋಕಂ ಸುವಿಸ್ತರಂ ।
ಪ್ರತ್ಯಗಚ್ಛದುದಾಸೀನಾ ವಿವರ್ಣಾ ಶಿವಸನ್ನಿಧೌ ॥ ೪೧ ॥

ಅಚಿಂತತ್ಪಥಿ ಸಾ ದೇವೀ ಸಂಚಲಂತೀ ಪುನಃ ಪುನಃ ।
ನಾಂಗೀಕೃತಂ ಶಿವೋಕ್ತಂ ಮೇ ರಾಮಂ ಪ್ರತಿ ಕುಧೀಃ ಕೃತಾ ॥ ೪೨ ॥

ಕಿಮುತ್ತರಮಹಂ ದಾಸ್ಯೇ ಗತ್ವಾ ಶಂಕರಸನ್ನಿಧೌ ।
ಇತಿ ಸಂಚಿಂತ್ಯ ಬಹುಧಾ ಪಶ್ಚಾತ್ತಾಪೋಽಭವತ್ತದಾ ॥ ೪೩ ॥

ಗತ್ವಾ ಶಂಭುಸಮೀಪಂ ಚ ಪ್ರಣನಾಮ ಶಿವಂ ಹೃದಾ ।
ವಿಷಣ್ಣವದನಾ ಶೋಕವ್ಯಾಕುಲಾ ವಿಗತಪ್ರಭಾ ॥ ೪೪ ॥

---

೪೦. ರಾಮನು ಹೇಳಿದ ಮಾತುಗಳನ್ನು ಕೇಳಿ ಸತೀದೇವಿಯು ತುಂಬಾ ಸಂತುಷ್ಟಳಾದಳು. ಶಿವಭಕ್ತನಾದ ಆ ರಾಮನನ್ನು ಮನಸ್ಸಿನಲ್ಲಿಯೇ ಪ್ರಶಂಸಿದಳು.

೪೧-೪೨. ತಾನು ಮಾಡಿದ ಕಾರ್ಯವನ್ನು ಮನಸ್ಸಿನಲ್ಲಿ ಸ್ಮರಿಸಿ ತುಂಬಾ ತಪ್ಪಾಯಿತೆಂದು ದುಃಖಗೊಂಡು, ಉದಾಸೀನತೆಯಿಂದ ಆ ಸತಿಯು ಶಿವನ ಬಳಿಗೆ ಹೋಗುತ್ತಾ ದಾರಿಯಲ್ಲಿ ಹೀಗೆ ಯೋಚಿಸಿದಳು. ಛೇ, ರಾಮನು ಹರಿಯ ಅವತಾರಿ ಎಂದು ಹೇಳಿದ ಶಿವನ ಮಾತನ್ನು ನಾನು ಮೊದಲು ನಂಬಲಿಲ್ಲ. ಆದಕ್ಕಾಗಿ ವಿವೇಕ ವಿಲ್ಲದೆ ಪರೀಕ್ಷೆಯನ್ನೂ ಮಾಡಿದೆನು.

೪೩. ಈಗ ಶಂಕರನ ಬಳಿಗೆ ಹೋಗಿ ಏನನ್ನು ಹೇಳಲಿ ? ಎಂದು ಮುಂತಾಗಿ ತುಂಬಾ ಚಿಂತೆಗೊಳಗಾಗಿ ಪಶ್ಚಾತ್ತಾಪಪಟ್ಟಳು.

೪೪-೪೫ ದುಃಖದಿಂದ ಬಳಲಿದ ಮುಖವುಳ್ಳವಳಾಗಿ ಶಂಕರನ ಬಳಿಗೆ ಹೋಗಿ ಅವನನ್ನು ನಮಸ್ಕರಿಸಲು, ದುಃಖಿತಳಾದ ಆ ಸತಿಯನ್ನು ನೋಡಿ

ಅಥ ತಾಂ ದುಃಖಿತಾಂ ದೃಷ್ಟ್ವಾ ಪಪ್ರಚ್ಛ ಕುಶಲಂ ಹರಃ ।
ಪ್ರೋವಾಚ ವಚನಂ ಪ್ರೀತ್ಯಾ ತತ್ಪರೀಕ್ಷಾ ಕೃತಾ ಕಥಂ ॥ ೪೫ ॥

ಶ್ರುತ್ವಾ ಶಿವವಚೋ ನಾಹಂ ಕಿಮಪಿ ಪ್ರಣತಾನನಾ ।
ಸತೀ ಶೋಕವಿಷಣ್ಣಾ ಸಾ ತಸ್ಥೌ ತತ್ರ ಸಮೀಪತಃ ॥ ೪೬ ॥

ಅಥ ಧ್ಯಾತ್ವಾ ಮಹೇಶಸ್ತು ಬುಬೋಧ ಚರಿತಂ ಹೃದಾ ।
ದಕ್ಷಜಾಯಾ ಮಹಾಯೋಗೀ ನಾನಾಲೀಲಾವಿಶಾರದಃ ॥ ೪೭ ॥

ಸಸ್ಮಾರ ಸ್ವಪಣಂ ಪೂರ್ವಂ ಯತ್ಕೃತಂ ಹರಿಕೋಪತಃ ।
ತತ್ಪ್ರಾರ್ಥಿತೋಽಥ ರುದ್ರೋಽಸೌ ಮರ್ಯಾದಾಪ್ರತಿಪಾಲಕಃ ॥ ೪೮ ॥

ವಿಷಾದೋಽಭೂತ್ಪ್ರಭೋಸ್ತತ್ರ ಮನಸ್ಯೇವಮುವಾಚ ಹ ।
ಧರ್ಮವಕ್ತಾ ಧರ್ಮಕರ್ತಾ ಧರ್ಮಾವನಕರಸ್ಸದಾ ॥ ೪೯ ॥

---

ಶಂಕರನು ಕುಶಲಪ್ರಶ್ನೆಯನ್ನು ಮಾಡಿ ಎಲೌ ಸತಿ, ರಾಮನ ಪರೀಕ್ಷೆಯನ್ನು ಮಾಡಿದೆಯಾ ? ಎಂದು ಪ್ರೀತಿಯಿಂದ ಕೇಳಿದನು.

೪೬. ಆಗ ಸತೀದೇವಿಯು ಏನನ್ನೂ ಹೇಳಲಿಲ್ಲ. ದುಃಖದಿಂದ ಬಳಲಿದವಳಾಗಿ ಮುಖವನ್ನು ಬಗ್ಗಿಸಿ ಆ ಶಿವನ ಬಳಿಯಲ್ಲಿ ಸುಮ್ಮನೆ ನಿಂತಳು.

೪೭. ಬಳಿಕ ಮಹಾಯೋಗಿಯೂ, ಅನೇಕ ಲೀಲಾವಿಶಾರದನೂ ಆದಂತಹ ಶಿವನು ಧ್ಯಾನಿಸಿ ದಿವ್ಯದೃಷ್ಟಿಯಿಂದ ಸತೀದೇವಿಯು ರಾಮಪರೀಕ್ಷೆಯನ್ನು ಮಾಡಿದ ಸಮಾಚಾರವನ್ನೆಲ್ಲಾ ತಿಳಿದುಕೊಂಡನು.

೪೮. ಮತ್ತು ಲೋಕಮರ್ಯಾದೆಯನ್ನು ರಕ್ಷಿಸುವ ಆ ಶಿವನು ತಾನು ಹಿಂದೆ ಹರಿಯಿಂದ ಪ್ರಾರ್ಥಿಸಲ್ಪಟ್ಟು ಕೋಪದಿಂದ ಮಾಡಿದ ಪ್ರತಿಜ್ಞೆಯನ್ನು ಸ್ಮರಿಸಿಕೊಂಡನು.

೪೯-೫೦. ಧರ್ಮಕರ್ತನೂ, ಧರ್ಮವಕ್ತೃವೂ, ಧರ್ಮಪಾಲಕನೂ ಆದ ಆ ಶಿವನು ಮನಸ್ಸಿನಲ್ಲಿ ತುಂಬಾ ವಿಷಾದಪಟ್ಟು ಹೀಗೆ ಹೇಳಿಕೊಂಡನು. ಈಗ ಮೊದಲಿ

॥ ಶಿವ ಉವಾಚ ॥

ಕುರ್ಯಾಂ ಚೇದ್ದಕ್ಷಜಾಯಾಂ ಹಿ ಸ್ನೇಹಂ ಪೂರ್ವಂ ಯಥಾ ಮಹಾನ್ ।
ನಶ್ಯೇನ್ಮಮ ಪಣಃ ಶುದ್ಧೋ ಲೋಕಲೀಲಾನುಸಾರಿಣಃ ॥ ೫೦ ॥

॥ ಬ್ರಹ್ಮೋವಾಚ ॥

ಇತ್ಥಂ ವಿಚಾರ್ಯ ಬಹುಧಾ ಹೃದಾ ತಾಮುತ್ಸೃಜತ್ಸತೀಂ ।
ಪಣಂ ನ ನಾಶಯಾಮಾಸ ವೇದಧರ್ಮಪ್ರಪಾಲಕಃ ॥ ೫೧ ॥

ತತೋ ವಿಹಾಯ ಮನಸಾ ಸತೀಂ ತಾಂ ಪರಮೇಶ್ವರಃ ।
ಜಗಾಮ ಸ್ವಗಿರಿಂ ಭೇದಂ ಜಗಾವದ್ಧಾ ಸ ಹಿ ಪ್ರಭುಃ ॥ ೫೨ ॥

ಚಲಂತಂ ಪಥಿ ತಂ ವ್ಯೋಮವಾಣ್ಯುವಾಚ ಮಹೇಶ್ವರಂ ।
ಸರ್ವಾನ್ಸಂಶ್ರಾವಯಂಸ್ತತ್ರ ದಕ್ಷಜಾಂ ಚ ವಿಶೇಷತಃ ॥ ೫೩ ॥

॥ ವ್ಯೋಮವಾಣ್ಯುವಾಚ ॥

ಧನ್ಯಸ್ತ್ವಂ ಪರಮೇಶಾನ ತ್ವತ್ಸಮೋಽದ್ಯ ತಥಾ ಪಣಃ ।
ನ ಕೋಽಪ್ಯನ್ಯಸ್ತ್ರಿಲೋಕೇಽಸ್ಮಿನ್ಮಹಾಯೋಗೀ ಮಹಾಪ್ರಭುಃ ॥ ೫೪ ॥

---

ನಂತೆ ಈ ಸತಿಯಲ್ಲಿ ನಾನು ಸ್ನೇಹವನ್ನಿಟ್ಟರೆ ಎಂದೂ ಚ್ಯುತಿಯನ್ನು ಹೊಂದದ ನನ್ನ ಪ್ರತಿಜ್ಞೆಯು ನಷ್ಟವಾಗುವುದು.

೫೧-೫೨. ಹೀಗೆ ತುಂಬಾ ಆಲೋಚಿಸಿ, ಸತಿಯು ನನ್ನ ಮಾತಿನಲ್ಲಿ ಅಪ ನಂಬಿಕೆಯುಳ್ಳವಳಾದರೆ ಅವಳನ್ನು ತ್ಯಜಿಸುವೆನು ಎಂದು ತಾನು ಹಿಂದೆ ಮಾಡಿದ ಪ್ರತಿಜ್ಞೆಯನ್ನು ಸ್ಮರಿಸಿಕೊಂಡು ತನ್ನ ಸಂಕಲ್ಪದಂತೆ ಸತೀದೇವಿಯನ್ನು ಮನಸ್ಸಿನಿಂದಲೇ ಬಿಟ್ಟು ತನ್ನ ವಾಸಸ್ಥಾನವಾದ ಕೈಲಾಸಗಿರಿಗೆ ತೆರಳಿದನು. ಮುಂದೆ ತನಗೂ ಸತೀದೇವಿಗೂ ಸಂಬಂಧವಿಲ್ಲವೆಂದು ಪ್ರಕಟಿಸಿದನು.

೫೩. ಅವನು ಮನಸ್ಸಿನಿಂದ ಸತಿಯನ್ನು ಬಿಟ್ಟು ತೆರಳುವಾಗ ದಾರಿಯಲ್ಲಿ ಸತೀದೇವಿ ಮೊದಲಾದವರಿಗೆಲ್ಲರಿಗೂ ಕೇಳಿಸುವಂತೆ ಹೀಗೆ ಆಕಾಶವಾಣಿಯಾಯಿತು.

೫೪. ಆಕಾಶವಾಣಿಯು ಹೇಳಿತು :—ಓ ಪರಮೇಶ್ವರ ನೀನು ಧನ್ಯನು. ನಿನ್ನಂತೆ ಪ್ರತಿಜ್ಞೆಯನ್ನು ನಿರ್ವಹಿಸುವರು ದುರ್ಲಭವು. ನೀನು ಮಹಾಯೋಗಿಯು ನೀನೇ ಜಗದೊಡೆಯನು.

॥ ಬ್ರಹ್ಮೋವಾಚ ॥

ಶ್ರುತ್ವಾ ವ್ಯೋಮವಚೋ ದೇವೀ ಶಿವಂ ಪಪ್ರಚ್ಛ ವಿಪ್ರಭಾ ।
ಕಂ ಪ್ರಣಂ ಕೃತವಾನ್ನಾಥ ಬ್ರೂಹಿ ಮೇ ಪರಮೇಶ್ವರ ॥ ೫೫ ॥

ಇತಿ ಪೃಷ್ಟೋಽಪಿ ಗಿರಿಶಸ್ಸತ್ಯಾ ಹಿತಕರಃ ಪ್ರಭುಃ ।
ನೋದ್ವಾಹಂ ಸ್ವಂ ಪಣಂ ತಸ್ಯೈ ಕಹರ್ಯರ್ಗ್ರೇಽಕರೋತ್ಪುರಾ ॥ ೫೬ ॥

ತದಾ ಸತೀ ಶಿವಂ ಧ್ಯಾತ್ವಾ ಸ್ವಪತಿಂ ಪ್ರಾಣವಲ್ಲಭಂ ।
ಸರ್ವಂ ಬುಬೋಧ ಹೇತುಂ ತಂ ಪ್ರಿಯತ್ಯಾಗಮಯಂ ಮುನೇ ॥ ೫೭ ॥

ತತೋಽತೀವ ಶುಶೋಚಾಶು ಬುದ್ಧ್ವಾ ಸಾ ತ್ಯಾಗಮಾತ್ಮನಃ ।
ಶಂಭುನಾ ದಕ್ಷಜಾ ತಸ್ಮಾನ್ನಿಃಶ್ವಸಂತೀ ಮುಹುರ್ಮುಹುಃ ॥ ೫೮ ॥

ಶಿವಸ್ತಸ್ಯಾಃ ಸಮಾಜ್ಞಾಯ ಗುಪ್ತಂ ಚಕ್ರೇ ಮನೋಭವಂ ।
ಸತ್ಯೈ ಪಣಂ ಸ್ವಕೀಯಂ ಹಿ ಕಥಾ ಬಹ್ವೀರ್ವದನ್ಪ್ರಭುಃ ॥ ೫೯ ॥

---

೫೫. ಬ್ರಹ್ಮನು ಹೇಳಿದನು :—ಎಲೈ ನಾರದ, ಈ ರೀತಿಯಾದ ಆಕಾಶ ವಾಣಿಯನ್ನು ಕೇಳಿ ಸತೀದೇವಿಯು ಓ ನಾಥ, ನೀನೇನು ಪ್ರತಿಜ್ಞೆಯನ್ನು ಮಾಡಿರುವೆ? ನನಗೆ ಹೇಳು ಎಂದು ಶಿವನನ್ನು ಕೇಳಿದಳು.

೫೬. ಸತಿಯು ಹೀಗೆ ಪ್ರಶ್ನಿಸಿದರೂ ಸಹ ಪರಮೇಶ್ವರನು ಹಿಂದೆ ತನ್ನ ಮದುವೆಯ ಕಾಲದಲ್ಲಿ ಹರಿ ಬ್ರಹ್ಮರ ಎದುರಿಗೆ ತಾನು ಮಾಡಿರುವ ಪ್ರತಿಜ್ಞೆಯನ್ನೂ ಆ ಸತಿಗೆ ಹೇಳಲಿಲ್ಲ.

೫೭. ಆಗ ಸತೀದೇವಿ ತನ್ನ ಪ್ರಾಣಪ್ರಿಯನಾದ ಶಿವನನ್ನು ಭಕ್ತಿಯಿಂದ ಧ್ಯಾನಿಸಿ, ಹಿಂದೆ ನಡೆದ ಪ್ರತಿಜ್ಞೆಯ ಸಮಾಚಾರವನ್ನೆಲ್ಲಾ ತಿಳಿದಳು.

೫೮. ಬಳಿಕ ಆ ಸತಿಯು ಶಿವನು ತನ್ನ ಪ್ರತಿಜ್ಞೆಯಂತೆ ತನ್ನನ್ನು ಮನಸ್ಸಿನಿಂದ ತ್ಯಾಗ ಮಾಡಿರುವನೆಂದು ತಿಳಿದು ದುಃಖಗೊಂಡವಳಾಗಿ ತುಂಬಾ ಶೋಕಿಸಿದಳು.

೫೯. ಆಗ ಶಿವನು ಸತಿಯ ದುಃಖವನ್ನು ತಿಳಿದು ತನ್ನ ಪ್ರತಿಜ್ಞೆಯನ್ನು ಅವಳು ಮರೆಯುವಂತೆ ಅನೇಕ ಮನೋಹರವಾದ ಕಥೆಗಳನ್ನು ಹೇಳಿದನು.

ಸತ್ಯಾ ಪ್ರಾಪ ಸ ಕೈಲಾಸಂ ಕಥಯನ್ವಿವಿಧಾಃ ಕಥಾಃ ।
ವರೇ ಸ್ಥಿತ್ವಾ ನಿಜಂ ರೂಪಂ ದಧೌ ಯೋಗೀ ಸಮಾಧಿಕೃತ್ ॥ ೬೦ ॥

ತತ್ರ ತಸ್ಥೌ ಸತೀ ಧಾಮ್ನಿ ಸ್ವೇಽತಿವಿಷಣ್ಣಮಾನಸಾ ।
ನ ಬುಬೋಧ ಚರಿತ್ರಂ ತತ್ಕಶ್ಚಿಚ್ಚ ಶಿವಯೋರ್ಮುನೇ ॥ ೬೧ ॥

ಮಹಾನ್ಕಾಲೋ ವ್ಯತೀಯಾಯ ತಯೋರಿತ್ಥಂ ಮಹಾಮುನೇ ।
ಸ್ವೋಪಾತ್ತದೇಹಯೋಃ ಪ್ರಭ್ವೋರ್ಲೋಕಲೀಲಾನುಸಾರಿಣೋಃ ॥ ೬೨ ॥

ಧ್ಯಾನಂ ತತ್ಯಾಜ ಗಿರಿಶಸ್ತತಸ್ಸ ಪರಮೋತಿಕೃತ್ ।
ತಜ್ಜ್ಞಾತ್ವಾ ಜಗದಂಬಾ ಹಿ ಸತೀ ತತ್ರಾಜಗಾಮ ಸಾ ॥ ೬೩ ॥

ನನಾಮಾಥ ಶಿವಂ ದೇವೀ ಹೃದಯೇನ ವಿದೂಯತಾ ।
ಆಸನಂ ದತ್ತವಾನ್ಶಂಭುಸ್ಸ್ವಸಂಮುಖ ಉದಾರಧೀಃ ॥ ೬೪ ॥

---

೬೦. ಕಥೆಯನ್ನು ಹೇಳುತ್ತಾ ಶಿವನು ಸತಿಯೊಡನೆ ಕೈಲಾಸಗಿರಿಗೆ ಹೋಗಿ ಅಲ್ಲಿ ಸಮಾಧಿಸ್ಥನಾಗಿ ತನ್ನ ಪರಮಾತ್ಮಸ್ವರೂಪವನ್ನು ಧ್ಯಾನಿಸತೊಡಗಿದನು.

೬೧. ಆಗ ಸತೀದೇವಿಯೂ ಸಹ ದುಃಖಿತಳಾಗಿ ಸ್ವಸ್ವರೂಪ (ಪರಮಾತ್ಮ ಸ್ವರೂಪ) ವನ್ನು ಧ್ಯಾನಿಸಿದಳು. ಈರೀತಿ ಇರುವ ಆ ಸತೀಶಿವರೀರ್ವರ ಸ್ಥಿತಿಯನ್ನು ಯಾವನೂ ತಿಳಿಯಲು ಸಮರ್ಥನಾಗಲಿಲ್ಲ.

೬೨. ಸ್ವೇಚ್ಛೆಯಿಂದ ದೇಹವನ್ನು ಧರಿಸಿ ಲೋಕಲೀಲೆಯಂತೆ ಆಚರಿಸುತ್ತಲಿರುವ ಆ ಸತೀಶಿವರು ಸಮಾಧಿಸ್ಥರಾಗಿ ಧ್ಯಾನಿಸುತ್ತಲಿರಲು ಬಹಳ ಕಾಲವು ಕಳೆಯಿತು.

೬೩-೬೪. ಮುಂದೆ ಕೆಲವುಕಾಲ ಕಳೆದಮೇಲೆ ಪರಮೇಶ್ವರನು ಸಮಾಧಿಯನ್ನು ತ್ಯಜಿಸಿದನು. ಇದನ್ನು ತಿಳಿದು ಪರಮೇಶ್ವರಿಯಾದ ಸತೀದೇವಿಯು ಆ ಶಿವನ ಬಳಿಗೆ ಬಂದು ಹೃದಯದಲ್ಲಿ ದುಃಖವು ತುಂಬಿರಲು ಶಿವನನ್ನು ನಮಸ್ಕರಿಸಿದಳು. ಆಗ ದಯಾಮಯನಾದ ಶಿವನು ತನ್ನ ಎದುರಿನಲ್ಲಿ ಸತಿಗೆ ಆಸನವನ್ನು ಕೊಟ್ಟು

ಕಥಯಾಮಾಸ ಸುಪ್ರೀತ್ಯಾ ಕಥಾ ಬಹ್ವೀರ್ಮನೋರಮಾಃ ।
ನಿಶ್ಶೋಕಾಂ ಕೃತವಾನ್ಸದ್ಯೋ ಲೀಲಾಂ ಕೃತ್ವಾ ಚ ತಾದೃಶೀಂ ॥ ೬೫ ॥

ಪೂರ್ವವತ್ಸಾ ಸುಖಂ ಲೇಭೇ ತತ್ಯಾಜ ಸ್ವಪಣಂ ನ ಸಃ ।
ನೇತ್ಯಾಶ್ಚರ್ಯಂ ಶಿವೇ ತಾತ ಮಂತವ್ಯಂ ಪರಮೇಶ್ವರೇ ॥ ೬೬ ॥

ಇತ್ಥಂ ಶಿವಾಶಿವಕಥಾಂ ವದಂತಿ ಮುನಯೋ ಮುನೇ ।
ಕಿಲ ಕೇಚಿದವಿದ್ವಾಂಸೋ ವಿಯೋಗಶ್ಚ ಕಥಂ ತಯೋಃ ॥ ೬೭ ॥

ಶಿವಾಶಿವಚರಿತ್ರಂ ಕೋ ಜಾನಾತಿ ಪರಮಾರ್ಥತಃ ।
ಸ್ವೇಚ್ಛಯಾ ಕ್ರೀಡತಸ್ತೌ ಹಿ ಚರಿತಂ ಕುರುತಸ್ಸದಾ ॥ ೬೮ ॥

---

ಕೂರಿಸಿಕೊಂಡು, ಮನೋಹರವಾದ ಅನೇಕ ಕಥೆಗಳನ್ನುಹೇಳಿ, ಅನೇಕ ಲೀಲೆಗಳನ್ನು ಪ್ರದರ್ಶಿಸಿ ಆ ಸತೀದೇವಿಯ ಶೋಕವನ್ನು ಹೋಗಲಾಡಿಸಿದನು.

೬೬. ತಿರುಗಿ ಮೊದಲಿನಂತೆ ಸತೀದೇವಿಯು ಸಂತೋಷವನ್ನು ಹೊಂದಿದಳು. ಎಲೈ ನಾರದ, ಹೀಗೆ ಶಿವನು ತನ್ನ ಪ್ರತಿಜ್ಞೆಯನ್ನು ನಿರ್ವಹಿಸಿದನು. ಮಹಾ ಮಹಿಮನಾದ ಆ ಪರಮೇಶ್ವರನಲ್ಲಿ ಇದು ಮಹಾ ಆಶ್ಚರ್ಯವಾದುದೇನಲ್ಲ. ಅವನು ಇನ್ನೂ ಮಹಾ ಆಶ್ಚರ್ಯಗಳನ್ನು ಮಾಡಬಲ್ಲನು.

೬೭. ಹೀಗೆಂದು ಕೆಲವರು ಮುನಿಗಳು ಶಿವಸತೀದೇವಿಯರ ವಿಯೋಗವನ್ನು ವರ್ಣಿಸುವರು. ಆದರೆ ಇದು ಸರಿಯಾದುದಲ್ಲ. ವಾಗರ್ಥಗಳಂತೆ ಸದಾ ಸೇರಿರುವ ಆ ಶಿವಸತಿಯರಿಗೆ ನಿಜವಾಗಿ ವಿಯೋಗವಿಲ್ಲ.

೬೮. ಶಿವ ಮತ್ತು ಸತೀದೇವಿಯರ ಚರಿತ್ರೆಯನ್ನು ಪಾರಮಾರ್ಥಿಕವಾಗಿ ಯಾವನೂ ತಿಳಿಯಲಾರನು. ಅವರು ಸ್ವೇಚ್ಛೆಯಿಂದ ಅನೇಕ ಚರಿತ್ರೆಗಳನ್ನು ಸದಾ ಪ್ರದರ್ಶಿಸುತ್ತಾ ವಿಹರಿಸುವರು.

ವಾಗರ್ಥಾವಿವ ಸಂಪೃಕ್ತೌ ಸದಾ ಖಲು ಸತೀಶಿವೌ ।
ತಯೋರ್ವಿಯೋಗಸ್ಸಂಭಾವ್ಯಸ್ಸಂಭವೇದಿಚ್ಛಯಾ ತಯೋಃ ॥ ೬೯ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ದ್ವಿತೀಯೇ ಸತೀಖಂಡೇ ಸತೀವಿಯೋಗೋನಾಮ
ಪಂಚವಿಂಶೋಽಧ್ಯಾಯಃ

---

೬೯. ಸತೀಶಿವರು ಶಬ್ದಾರ್ಥಗಳಂತೆ ಪರಸ್ಪರ ಸೇರಿರುವ ಅನಾದಿದಂಪತಿಗಳು. ಅವರಿಗೆ ಎಂದಿಗೂ ವಿಯೋಗವೆಂಬುದಿಲ್ಲ. ಆದರೆ ಸ್ವೇಚ್ಛೆಯಿಂದಲೇ ಅವರಿಗೆ ವಿಯೋಗವು ಆದರಾಗಬಹುದು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಇಪ್ಪತ್ತೈದನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಷಡ್ವಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಪುರಾಭವಚ್ಚ ಸರ್ವೇಷಾಮಧ್ವರೋ ವಿಧಿನಾ ಮಹಾನ್ ।
ಪ್ರಯಾಗೇ ಸಮವೇತಾನಾಂ ಮುನೀನಾಂ ಚ ಮಹಾತ್ಮನಾಂ ॥ ೧ ॥

ತತ್ರ ಸಿದ್ಧಾಸ್ಸಮಾಖ್ಯಾತಾಸ್ಸನಕಾದ್ಯಾಸ್ಸುರರ್ಷಯಃ ।
ಸಪ್ರಜಾಪತಯೋ ದೇವಾ ಜ್ಞಾನಿನೋ ಬ್ರಹ್ಮದರ್ಶಿನಃ ॥ ೨ ॥

---

## ಇಪ್ಪತ್ತಾರನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು :—ಎಲೈ ನಾರದ, ಹಿಂದೆ ಪ್ರಯಾಗಕ್ಷೇತ್ರದಲ್ಲಿ ಮಹಾಯಾಗವೊಂದು ನಡೆಯಿತು. ಅಲ್ಲಿ ಅನೇಕ ಮಹಾಮುನಿಗಳು ಸೇರಿದ್ದರು.

೨. ಮತ್ತು ಅಲ್ಲಿಗೆ ಸಿದ್ಧರೂ ಪ್ರಸಿದ್ಧರಾದ ಸನಕನೇ ಮೊದಲಾದ ಮಹರ್ಷಿಗಳೂ ನವಬ್ರಹ್ಮರೂ, ದೇವತೆಗಳೂ, ಜ್ಞಾನಿಗಳೂ, ವೇದವಿದ್ವಾಂಸರೂ ಬಂದಿದ್ದರು.

ಅಹಂ ಸಮಾಗತಸ್ತತ್ರ ಪರಿವಾರಸಮನ್ವಿತಃ ।
ನಿಗಮೈರಾಗಮೈರ್ಯುಕ್ತೋ ಮೂರ್ತಿಮದ್ಭಿರ್ಮಹಾಪ್ರಭೈಃ ॥ ೩ ॥

ಸಮಾಜೋಽಭೂದ್ವಿಚಿತ್ರೋ ಹಿ ತೇಷಾಮುತ್ಸವಸಂಯುತಃ ।
ಜ್ಞಾನವಾದೋಽಭವತ್ತತ್ರ ನಾನಾಶಾಸ್ತ್ರಸಮುದ್ಭವಃ ॥ ೪ ॥

ತಸ್ಮಿನ್ನವಸರೇ ರುದ್ರಸ್ಸಭವಾನೀಗಣಃ ಪ್ರಭುಃ ।
ತ್ರಿಲೋಕಹಿತಕೃತ್ಸ್ವಾಮೀ ತತ್ರಾಗಾತ್ಸೂತಿಕೃನ್ಮನೇ ॥ ೫ ॥

ದೃಷ್ಟ್ವಾ ಶಿವಂ ಸುರಾಸ್ಸರ್ವೇ ಸಿದ್ಧಾಶ್ಚ ಮುನಯಸ್ತಥಾ ।
ಅನಮಂಸ್ತಂ ಪ್ರಭುಂ ಭಕ್ತ್ಯಾ ತುಷ್ಟುವುಶ್ಚ ತಥಾ ಹ್ಯಹಂ ॥ ೬ ॥

ತಸ್ಥುಶ್ಶಿವಾಜ್ಞಯಾ ಸರ್ವೇ ಯಥಾಸ್ಥಾನಂ ಮುದಾನ್ವಿತಾಃ ।
ಪ್ರಭುದರ್ಶನಸಂತುಷ್ಟಾಃ ವರ್ಣಯಂತೋ ನಿಜಂ ವಿಧಿಂ ॥ ೭ ॥

---

೩. ನಾನೂ ಆ ಯಾಗಕ್ಕೆ ಪರಿವಾರದೊಡನೆ ಹೋಗಿದ್ದೆನು. ನನ್ನೊಡನೆ ವೇದಗಳು, ಮತ್ತು ಶಾಸ್ತ್ರಗಳು ಶರೀರವನ್ನು ಧರಿಸಿ ಅಲ್ಲಿಗೆ ಬಂದಿದ್ದುವು.

೪. ಆಗ ಅಲ್ಲಿ ಮಹಾಉತ್ಸವದೊಡನೆ ಸಭೆಯು ಆಯಿತು. ಆ ಸಭೆಯಲ್ಲಿ ಅನೇಕ ಶಾಸ್ತ್ರಗಳ ವಾಕ್ಯಾರ್ಥ (ಚರ್ಚೆ) ವು ನಡೆಯಿತು.

೫. ಆ ಸಮಯದಲ್ಲಿ ಜಗತ್ಕರ್ತನೂ, ಸ್ವಾಮಿಯೂ, ಹಿತದಾಯಕನೂ ಆದ ರುದ್ರನೂ, ಭವಾನಿಯೊಡನೆಯೂ, ತನ್ನ ಗಣಗಳೊಡನೆಯೂ ಆ ಯಾಗಕ್ಕೆ ಬಂದನು.

೬. ಆಗ ಶಿವನನ್ನು ನೋಡಿ, ನಾನೂ, ದೇವತೆಗಳೂ, ಸಿದ್ಧರೂ, ಮುನಿಗಳೂ ಇವರೆಲ್ಲರೂ ಸಹ ಭಕ್ತಿಯಿಂದ ನಮಸ್ಕರಿಸಿ ಸ್ತುತಿಸಿದೆವು.

೭. ಸ್ವಾಮಿಯಾದ ಶಿವನ ದರ್ಶನದಿಂದ ಸಂತುಷ್ಟರಾಗಿ ನಮ್ಮ ಅದೃಷ್ಟವನ್ನು ಹೊಗಳಿಕೊಳ್ಳುತ್ತಾ ನಾವು ಶಿವನ ಅಪ್ಪಣೆಯಂತೆ ನಮ್ಮನಮ್ಮ ಸ್ಥಾನಗಳಲ್ಲಿ ಕುಳಿತೆವು.

ತಸ್ಮಿನ್ನವಸರೇ ದಕ್ಷಃ ಪ್ರಜಾಪತಿಪತಿಃ ಪ್ರಭುಃ ।
ಆಗಮತ್ತತ್ರ ಸುಪ್ರೀತಸ್ಸುವರ್ಚಸ್ವೀ ಯದೃಚ್ಛಯಾ ॥ ೮ ॥

ಮಾಂ ಪ್ರಣಮ್ಯ ಸ ದಕ್ಷೋ ಹಿ ನ್ಯಷ್ಟಸ್ತತ್ರ ಮದಾಜ್ಞಯಾ ।
ಬ್ರಹ್ಮಾಂಡಾಧಿಪತಿರ್ಮಾನ್ಯೋ ಮಾನೀ ತತ್ತ್ವಬಹಿರ್ಮುಖಃ ॥ ೯ ॥

ಸ್ತುತಿಭಿಃ ಪ್ರಣಿಪಾತೈಶ್ಚ ದಕ್ಷಃ ಸರ್ವೈಃ ಸುರರ್ಷಿಭಿಃ ।
ಪೂಜಿತೋ ವರತೇಜಸ್ವೀ ಕರೌ ಬದ್ಧ್ವಾ ವಿನಮ್ರಕೈಃ ॥ ೧೦ ॥

ನಾನಾವಿಹಾರಕೃನ್ನಾಥಸ್ಸ್ವತಂತ್ರಃ ಪರಮೋತಿಕೃತ್ ।
ನಾನಮತ್ತಂ ತದಾ ದಕ್ಷಂ ಸ್ವಾಸನಸ್ಥೋ ಮಹೇಶ್ವರಃ ॥ ೧೧ ॥

ದೃಷ್ಟ್ವಾನತಂ ಹರಂ ತತ್ರ ಸ ಮೇ ಪುತ್ರೋಽಪ್ರಸನ್ನಧೀಃ ।
ಅಕುಪತ್ಸಹಸಾ ರುದ್ರೇ ತದಾ ದಕ್ಷಃ ಪ್ರಜಾಪತಿಃ ॥ ೧೨ ॥

---

೮. ಆದೇ ಸಮಯದಲ್ಲಿ ಪ್ರಜಾಪತಿಗಳಲ್ಲಿ ಮುಖ್ಯನೂ ತೇಜಸ್ವಿಯೂ ಆದಂತಹ ದಕ್ಷಬ್ರಹ್ಮನು ಅಲ್ಲಿಗೆ ಅಕಸ್ಮಾತ್ತಾಗಿ ಬಂದನು.

೯. ಆ ದಕ್ಷನು ತಾನೇ ಬ್ರಹ್ಮಾಂಡಕ್ಕೆ ಅಧಿಪತಿಯೆಂಬ ಗರ್ವವುಳ್ಳವನಾಗಿದ್ದು ವಿವೇಕಿಯಾಗಿರಲಿಲ್ಲವು. ಇಂತಹ ಆವನು ನನಗೆ ನಮಸ್ಕರಿಸಿ ನನ್ನಪ್ಪಣೆಯಂತೆ ಆಸನದಲ್ಲಿ ಕುಳಿತನು.

೧೦. ತೇಜಸ್ವಿಯಾದ ಆ ದಕ್ಷನನ್ನು ದೇವತೆಗಳು ನಮಸ್ಕರಿಸಿ ಪೂಜೆಯನ್ನು ಮಾಡಿ ಕೈಜೋಡಿಸಿ ಸ್ತುತಿಸಿದರು.

೧೧. ಆದರೆ ಅನೇಕ ಮಾಯಾಲೀಲೆಗಳನ್ನು ಪ್ರದರ್ಶಿಸುವಂತಹ ಪರಮೇಶ್ವರನು ತನ್ನ ಆಸನದಲ್ಲಿಯೇ ಕುಳಿತಿದ್ದನು. ದಕ್ಷನನ್ನು ನಮಸ್ಕರಿಸಲಿಲ್ಲ.

೧೨. ಶಿವನು ತನಗೆ ನಮಸ್ಕಾರಮಾಡದಿರುವುದನ್ನು ನೋಡಿ ದಕ್ಷಬ್ರಹ್ಮನು ಅಸಮಾಧಾನಗೊಂಡು ಆ ಶಿವನಮೇಲೆ ಕೋಪಗೊಂಡನು.

ಕ್ರೂರದೃಷ್ಟ್ಯಾ ಮಹಾಗರ್ವೋ ದೃಷ್ಟ್ವಾ ರುದ್ರಂ ಮಹಾಪ್ರಭುಂ ।
ಸರ್ವಾನ್ಸಂಶ್ರಾವಯನ್ನುಚ್ಚೈರವೋಚಜ್ಞಾನವರ್ಜಿತಃ ॥ ೧೩ ॥

॥ ದಕ್ಷ ಉವಾಚ ॥

ಏತೇ ಹಿ ಸರ್ವೇ ಚ ಸುರಾಸುರಾ ಭೃಶಂ
ನಮಂತಿ ಮಾಂ ವಿಪ್ರವರಾಸ್ತಥರ್ಷಯಃ ।
ಕಥಂ ಹ್ಯಸೌ ದುರ್ಜನವನ್ಮಹಾಮನಾ
ತ್ವಭೂತ್ತು ಯಃ ಪ್ರೇತಪಿಶಾಚಸಂವೃತಃ ॥ ೧೪ ॥

ಶ್ಮಶಾನವಾಸೀ ನಿರಪತ್ರಪೋ ಹ್ಯಯಂ
ಕಥಂ ಪ್ರಣಾಮಂ ನ ಕರೋತಿ ಮೇಽಧುನಾ ।
ಲುಪ್ತಕ್ರಿಯೋ ಭೂತಪಿಶಾಚಸೇವಿತೋ
ಮತ್ತೋಽವಿಧೋ ನೀತಿವಿದೂಷಕಸ್ಸದಾ ॥ ೧೫ ॥

ಪಾಖಂಡಿನೋ ದುರ್ಜನಪಾಪಶೀಲಾ
ದೃಷ್ಟ್ವಾ ದ್ವಿಜಂ ಪ್ರೋದ್ಧತನಿಂದಕಾಶ್ಚ ।
ವಧ್ವಾಂ ಸದಾಸಕ್ತರತಿಪ್ರವೀಣ-
ಸ್ತಸ್ಮಾದಮುಂ ಶಪ್ತುಮಹಂ ಪ್ರವೃತ್ತಃ ॥ ೧೬ ॥

---

೧೩. ತುಂಬಾ ಗರ್ವಿಷ್ಠನಾದ ಆ ದಕ್ಷನು ಮಹಾಪ್ರಭುವಾದ ರುದ್ರನನ್ನು ಕ್ರೂರದೃಷ್ಟಿಯಿಂದ ನೋಡಿ ತಿಳುವಳಿಕೆಯಿಲ್ಲದೆ ಹೀಗೆ ಹೇಳಿದನು.

೧೪. ದಕ್ಷನು ಹೇಳಿದನು :—ಇಲ್ಲಿ ಸೇರಿರುವ ದೇವಾಸುರರೂ, ಬ್ರಾಹ್ಮಣೋತ್ತಮರೂ ಮತ್ತು ಋಷಿಗಳೂ ಇವರೆಲ್ಲರೂ ನನಗೆ ನಮಸ್ಕರಿಸುತ್ತಲಿರುವರು. ಆದರೆ ಭೂತಪ್ರೇತಗಳಿಂದ ಕೂಡಿ ತುಂಬಾ ಗರ್ವಿಷ್ಠನಾದ ಈ ರುದ್ರನು ಮಾತ್ರ ನನ್ನನ್ನು ನಮಸ್ಕರಿಸದೆ ತನ್ನ ದುಷ್ಟತನವನ್ನು ಪ್ರದರ್ಶಿಸಿರುವನು.

೧೫. ಸದಾ ಶ್ಮಶಾನದಲ್ಲಿಯೇ ಇರುವ ಈ ರುದ್ರನಿಗೆ ಮಾನಮರ್ಯಾದೆಗಳ ತಿಳಿವಳಿಕೆಯೇ ಇಲ್ಲ. ಆದಕಾರಣವೇ ಇವನು ನನಗೆ ನಮಸ್ಕಾರವನ್ನು ಮಾಡಲಿಲ್ಲ ಇವನು ಸದಾಚಾರಿಯಲ್ಲ. ಭೂತ ಮತ್ತು ಪಿಶಾಚಿಗಳಿಂದ ಕೂಡಿ ತುಂಬಾ ಮೂರ್ಖನಾಗಿರುವನು. ಇವನಿಗೆ ನ್ಯಾಯವೇ ತಿಳಿಯದು. ತುಂಬಾ ಮದಿಸಿರುವನು.

೧೬. ನಾಸ್ತಿಕರು, ದುಷ್ಟರು, ಪಾಪಿಗಳು, ಪರನಿಂದಕರು, ಕಾಮುಕರು ಇವರೇ

॥ ಬ್ರಹ್ಮೋವಾಚ ॥

ಇತ್ಯೇವಮುಕ್ತ್ವಾ ಸ ಮಹಾಖಲಸ್ತದಾ
ರುಷಾನ್ವಿತೋ ರುದ್ರಮಿದಂ ಹ್ಯವೋಚತ್ ।
ಶೃಣ್ವಂತ್ವಮೀ ವಿಪ್ರವರಾಸ್ತಥಾ ಸುರಾ
ವಧ್ಯಂ ಹಿ ಮೇ ಚಾರ್ಹಥ ಕರ್ತುಮೇತಂ ॥ ೧೭ ॥

॥ ದಕ್ಷ ಉವಾಚ ॥

ರುದ್ರೋ ಹ್ಯಯಂ ಯಜ್ಞಬಹಿಷ್ಕೃತೋ ಮೇ
ವರ್ಣೇಷ್ವತೀತೋಽಥ ವಿವರ್ಣರೂಪಃ ।
ದೇವೈರ್ನ ಭಾಗಂ ಲಭತಾಂ ಸಹೈವ
ಶ್ಮಶಾನವಾಸೀ ಕುಲಜನ್ಮಹೀನಃ ॥ ೧೮ ॥

॥ ಬ್ರಹ್ಮೋವಾಚ ॥

ಇತಿ ದಕ್ಷೋಕ್ತಮಾಕರ್ಣ್ಯ ಭೃಗ್ವಾದ್ಯಾ ಬಹವೋ ಜನಾಃ ।
ಅಗರ್ಹಯನ್ನುಷ್ಟಸತ್ತ್ವಂ ರುದ್ರಂ ನತ್ವಾಮರೈಸ್ಸಮಂ ॥ ೧೯ ॥

---

ಈ ರುದ್ರನನ್ನು ಸೇವಿಸುವವರು. ಇವನೂ ಸಹ ಸದಾ ಸ್ತ್ರೀ (ಸತಿ) ಯಲ್ಲಿ ಆಸಕ್ತನಾಗಿರುವನು. ಇಂತಹ ಈ ರುದ್ರನನ್ನು ಈಗ ನಾನು ಶಪಿಸುವೆನು.

೧೭. ಬ್ರಹ್ಮನು ಹೇಳಿದನು :—ಹೀಗೆ ಹೇಳಿ ಮಹಾ ದುಷ್ಟನಾದ ದಕ್ಷನು ಶಿವನನ್ನುದ್ದೇಶಿಸಿ ಕೋಪದಿಂದ ಎಲೈ ದೇವತೆಗಳೇ ಮತ್ತು ಮುನಿಗಳೇ, ನಾನು ಹೇಳುವ ಈ ಮಾತನ್ನು ಕೇಳಿ. ನನ್ನ ಮಾತು ಎಂದಿಗೂ ವ್ಯರ್ಥವಾಗುವುದಿಲ್ಲ.

೧೮. ಈ ರುದ್ರನಿಗೆ ಯಾಗದಲ್ಲಿ ಪ್ರವೇಶವಿಲ್ಲ. ಇವನಿಗೆ ಜಾತಿಯಿಲ್ಲ. ದೇವತೆಗಳೊಡನೆ ಯಜ್ಞಭಾಗವೂ ಇವನಿಗಿಲ್ಲವು. ಇವನು ಕುಲಗೋತ್ರಗಳಿಲ್ಲದವನು, ಶ್ಮಶಾನವಾಸಿಯು, ಅಪವಿತ್ರನು ಎಂದನು.

೧೯. ಬ್ರಹ್ಮನು ಹೇಳಿದನು :—ಎಲೈ ನಾರದ, ಹೀಗೆ ದಕ್ಷನು ಹೇಳಿದುದನು ಕೇಳಿ ಎಲ್ಲಾ ದೇವತೆಗಳು ಮತ್ತು ಋಷಿಗಳು ಅವನನ್ನು ತುಂಬಾ ನಿಂದಿಸಿದರು. ಮತ್ತು ಶಿವನನ್ನು ಭಕ್ತಿಯಿಂದ ನಮಸ್ಕರಿಸಿದರು.

ನಂದೀ ನಿಶಮ್ಯ ತದ್ವಾಕ್ಯಂ ಲೋಲಾಕ್ಷೋऽತಿರುಷಾನ್ವಿತಃ ।
ಅಬ್ರವೀತ್ತ್ವರಿತಂ ದಕ್ಷಂ ಶಾಪಂ ದಾತುಮನಾ ಗಣಃ ॥ ೨೦ ॥

॥ ನಂದೀಶ್ವರ ಉವಾಚ ॥

ರೇ ರೇ ಶಠ ಮಹಾಮೂಢ ದಕ್ಷ ದುಷ್ಟಮತೇ ತ್ವಯಾ ।
ಯಜ್ಞಬಾಹ್ಯೋ ಹಿ ಮೇ ಸ್ವಾಮೀ ಮಹೇಶೋ ಹಿ ಕೃತಃ ಕಥಂ ॥ ೨೧ ॥

ಯಸ್ಯ ಸ್ಮರಣಮಾತ್ರೇಣ ಭವಂತಿ ಸಫಲಾ ಮಖಾಃ ।
ತೀರ್ಥಾನಿ ಚ ಪವಿತ್ರಾಣಿ ಸೋऽಯಂ ಶಪ್ತೋ ಹರಃ ಕಥಂ ॥ ೨೨ ॥

ವೃಥಾ ತೇ ಬ್ರಹ್ಮಚಾಪಲ್ಯಾಚ್ಛಪ್ತೋऽಯಂ ದಕ್ಷ ದುರ್ಮತೇ ।
ವೃಥೋಪಹಸಿತಶ್ಚೈವಾದುಷ್ಟೋ ರುದ್ರೋ ಮಹಾಪ್ರಭುಃ ॥ ೨೩ ॥

---

೨೦. ಆಗ ನಂದಿಕೇಶ್ವರನು ದಕ್ಷನ ಮಾತನ್ನು ಕೇಳಿ ಕೋಪಗೊಂಡವನಾಗಿ ಕಣ್ಣನ್ನು ತಿರುಗಿಸುತ್ತಾ ದಕ್ಷನಿಗೆ ಶಾಪವನ್ನು ಕೊಡಲುದ್ದೇಶದಿಂದ ಹೀಗೆ ಹೇಳಿದನು.

೨೧. ನಂದಿಯು ಹೇಳಿದನು :—ಎಲೈ ದಕ್ಷ, ನೀನು ಮಹಾಮೂಢನು, ಮೂರ್ಖನು, ದುಷ್ಟನು. ಆದಕಾರಣವೇ ನನ್ನ ಪ್ರಭುವಾದ ಶಿವನನ್ನು ಯಜ್ಞಬಾಹ್ಯ ನಾಗುವಂತೆ ಶಪಿಸಿರುವೆ.

೨೨. ಯಾವನನ್ನು ಸ್ಮರಿಸಿದುದರಿಂದಲೇ ಯಾಗಗಳು ಸಾರ್ಥಕವಾಗುವುವೋ, ತೀರ್ಥಗಳು ಪವಿತ್ರಗಳಾಗುವುವೋ ಅಂತಹ ಈ ಶಂಕರನನ್ನು ತಿಳಿವಳಿಕೆಯಿಲ್ಲದೆ ನೀನು ಹೇಗೆ ಶಪಿಸಿರುವೆ ?

೨೩. ಎಲೈ ಮೂಢನಾದ ದಕ್ಷನೇ, ಕೇವಲ ಬ್ರಾಹ್ಮಣ ಚಾಪಲ್ಯದಿಂದಲೇ ನೀನು ಈ ಶಿವನನ್ನು ಶಪಿಸಿರುವೆ. ಸತ್ಪುರುಷನಾದ ಅವನನ್ನು ಅಪಹಾಸ್ಯಮಾಡಿರುವೆ. ಇದು ವ್ಯರ್ಥವಾದುದು.

ಯೇನೇದಂ ಪಾಲ್ಯತೇ ವಿಶ್ವಂ ಸೃಷ್ಟಮಂತೇ ವಿನಾಶಿತಂ ।
ಶಪ್ತೋಽಯಂ ಸ ಕಥಂ ರುದ್ರೋ ಮಹೇಶೋ ಬ್ರಾಹ್ಮಣಾಧಮ ॥ ೨೪ ॥

ಏವಂ ನಿರ್ಭರ್ತ್ಸಿತಸ್ತೇನ ನಂದಿನಾ ಹಿ ಪ್ರಜಾಪತಿಃ ।
ನಂದಿನಂ ಚ ಶಶಾಪಾಥ ದಕ್ಷೋ ರೋಷಸಮನ್ವಿತಃ ॥ ೨೫ ॥

॥ ದಕ್ಷ ಉವಾಚ ॥

ಯೂಯಂ ಸರ್ವೇ ರುದ್ರಗಣಾ ವೇದಬಾಹ್ಯಾ ಭವಂತು ವೈ ।
ವೇದಮಾರ್ಗಪರಿತ್ಯಕ್ತಾಸ್ತಥಾ ತ್ಯಕ್ತಾ ಮಹರ್ಷಿಭಿಃ ॥ ೨೬ ॥

ಪಾಖಂಡವಾದನಿರತಾಃ ಶಿಷ್ಟಾಚಾರಬಹಿಷ್ಕೃತಾಃ ।
ಮದಿರಾಪಾನನಿರತಾ ಜಟಾಭಸ್ಮಾಸ್ಥಿಧಾರಿಣಃ ॥ ೨೭ ॥

॥ ಬ್ರಹ್ಮೋವಾಚ ॥

ಇತಿ ಶಪ್ತಾಸ್ತಥಾ ತೇನ ದಕ್ಷೇಣ ಶಿವಕಿಂಕರಾಃ ।
ತಚ್ಛ್ರುತ್ವಾಽತಿರುಷಾವಿಷ್ಟೋಽಭವನ್ನಂದೀ ಶಿವಪ್ರಿಯಃ ॥ ೨೮ ॥

---

೨೪. ಶಂಕರನು ಮಹಾಪ್ರಭುವು. ಅವನೇ ಈ ಜಗತ್ತನ್ನು ಸೃಷ್ಟಿಸುವನು, ಸಲಹುವನು, ಕೊನೆಯಲ್ಲಿ ನಾಶಮಾಡುವನು. ಎಲೈ ಬ್ರಾಹ್ಮಣಾಧಮ, ಇಂತಹ ಈ ರುದ್ರನನ್ನು ಹೇಗೆ ಶಪಿಸಿರುವೆ ?

೨೫. ಹೀಗೆ ನಂದಿಯು ತಿರಸ್ಕರಿಸಲು ದಕ್ಷಪ್ರಜಾಪತಿಯು ಕೋಪಗೊಂಡು ಆ ನಂದಿಯನ್ನೂ ಹೀಗೆ ಶಪಿಸಿದನು.

೨೬-೨೭. ದಕ್ಷನು ಹೇಳಿದನು :—ಎಲೈ ನಂದಿ, ರುದ್ರಗಣಗಳಾದ ನೀವು ವೇದಬಾಹ್ಯರಾಗಿರಿ, ವೇದಮಾರ್ಗವನ್ನು ತ್ಯಜಿಸಿರಿ. ಮಹರ್ಷಿಗಳೂ ನಿಮ್ಮನ್ನು ಬಹಿಷ್ಕರಿಸುವರು. ಕೇವಲ ನಾಸ್ತಿಕರಾಗಿದ್ದು ಶಿಷ್ಟಾಚಾರವನ್ನು ಬಿಟ್ಟು ಮದ್ಯಪಾನಾದಿಗಳನ್ನು ಮಾಡುತ್ತಾ ಅಪವಿತ್ರವಾದ ಮೂಳೆಗಳನ್ನು ಧರಿಸಿರಿ.

೨೮. ಹೀಗೆ ದಕ್ಷನು ರುದ್ರಗಣಗಳನ್ನು ಶಪಿಸಲು ಅದನ್ನು ಕೇಳಿ ಶಿವಪ್ರಿಯನಾದ ನಂದಿಯು ತುಂಬಾ ಕೋಪಗೊಂಡನು.

ಪ್ರತ್ಯುವಾಚ ದ್ರುತಂ ದಕ್ಷಂ ಗರ್ವಿತಂ ತಂ ಮಹಾಖಲಂ ।
ಶಿಲಾದತನಯೋ ನಂದೀ ತೇಜಸ್ವೀ ಶಿವವಲ್ಲಭಃ ॥ ೨೯ ॥

॥ ನಂದೀಶ್ವರ ಉವಾಚ ॥

ರೇ ದಕ್ಷ ಶಠ ದುರ್ಬುದ್ಧೇ ವೃಥೈವ ಶಿವಕಿಂಕರಾಃ ।
ಶಪ್ತಾಸ್ತೇ ಬ್ರಹ್ಮಚಾಪಲ್ಯಾಚ್ಛಿವ ತತ್ತ್ವಮಜಾನತಾ ॥ ೩೦ ॥

ಭೃಗ್ವಾದ್ಯೈರ್ದುಷ್ಟಚಿತ್ತೈಶ್ಚ ಮೂಢೈಸ್ಸ ಉಪಹಾಸಿತಃ ।
ಮಹಾಪ್ರಭುರ್ಮಹೇಶಾನೋ ಬ್ರಾಹ್ಮಣತ್ವಾದಹಂಮತೇ ॥ ೩೧ ॥

ಯೇ ರುದ್ರವಿಮುಖಾಶ್ಚಾತ್ರ ಬ್ರಾಹ್ಮಣಾಸ್ತ್ವಾದೃಶಾಃ ಖಲಾಃ ।
ರುದ್ರತೇಜಃಪ್ರಭಾವತ್ವಾತ್ತೇಷಾಂ ಶಾಪಂ ದದಾಮ್ಯಹಂ ॥ ೩೨ ॥

ವೇದವಾದರತಾ ಯೂಯಂ ವೇದತತ್ತ್ವಬಹಿರ್ಮುಖಾಃ ।
ಭವಂತು ಸತತಂ ವಿಪ್ರಾ ನಾನ್ಯದಸ್ತೀತಿ ವಾದಿನಃ ॥ ೩೩ ॥

---

೨೯. ಆ ನಂದಿಯು ಮಹಾತೇಜಸ್ವಿಯಾದ ಶಿಲಾದನ ಪುತ್ರನು. ಶಿವನಿಗೆ ತುಂಬಾ ಪ್ರಿಯನು, ಮಹಾತೇಜಸ್ವಿಯು. ಇಂತಹ ನಂದಿಯು ಗರ್ವಿಷ್ಠನೂ, ದುಷ್ಟನೂ ಆದ ದಕ್ಷನನ್ನು ಕುರಿತು,

೩೦. ನಂದಿಯು ಹೇಳಿದನು :—ಎಲೈ ದಕ್ಷ, ನೀನು ದುರ್ಬುದ್ಧಿಯು. ಮೂರ್ಖನು, ನಿನಗೆ ಶಿವನಮಹಿಮೆಯು ತಿಳಿಯದು. ಆದಕಾರಣ ಆ ಶಿವನ ಗಣಗಳಾದ ನಮ್ಮನ್ನು ಬ್ರಾಹ್ಮಣಚಾಪಲ್ಯದಿಂದ ವೃಥಾ ಶಪಿಸಿರುವೆ.

೩೧. ಭೃಗು ಮೊದಲಾದ ಮೂಢರೂ ಸಹ ಮಹಾಪ್ರಭುವಾದ ಶಿವನನ್ನು ತಿಳಿವಳಿಕೆಯಿಲ್ಲದೇ ಅಹಂಕಾರದಿಂದ ಅಪಹಾಸ್ಯಮಾಡಿರುವರು.

೩೨. ಇನ್ನೂ ನಿನ್ನಂತೇ ರುದ್ರನನ್ನು ನಿಂದಿಸುವ ಯಾವ ಮೂರ್ಖಬ್ರಾಹ್ಮಣರಿರುವರೋ ಅವರೆಲ್ಲರನ್ನೂ ರುದ್ರನ ತೇಜಸ್ಸಿನ ಮಹಿಮೆಯಿಂದ ನಾನು ಶಪಿಸುವೆನು.

೩೩-೩೫. ಎಲೈ ದಕ್ಷ, ಶಿವದ್ವೇಷಿಗಳಾದ ನೀವೆಲ್ಲರೂ ವೇದವಾದವನ್ನೇ ಮಾಡುವವರಾದರೂ ವೇದಕ್ಕೆ ವಿಪರೀತವಾದ ಅರ್ಥವನ್ನು ಮಾಡುತ್ತಾ ಮೂಢತೆ

**ಕಾಮಾತ್ಮಾನಸ್ಸ್ವರ್ಗಪರಾಃ ಕ್ರೋಧಲೋಭಮದಾನ್ವಿತಾಃ ।**
**ಭವಂತು ಸತತಂ ವಿಪ್ರಾ ಭಿಕ್ಷುಕಾ ನಿರಪತ್ರಪಾಃ ॥ ೩೪ ॥**

**ವೇದಮಾರ್ಗಂ ಪುರಸ್ಕೃತ್ಯ ಬ್ರಾಹ್ಮಣಾಶ್ಶೂದ್ರಯಾಜಿನಃ ।**
**ದರಿದ್ರಾ ವೈ ಭವಿಷ್ಯಂತಿ ಪ್ರತಿಗ್ರಹರತಾಸ್ಸದಾ ॥ ೩೫ ॥**

**ಅಸತ್ಪ್ರತಿಗ್ರಹಾಶ್ಚೈವ ಸರ್ವೇ ನಿರಯಗಾಮಿನಃ ।**
**ಭವಿಷ್ಯಂತಿ ಸದಾ ದಕ್ಷ ಕೇಚಿದ್ವೈ ಬ್ರಹ್ಮರಾಕ್ಷಸಾಃ ॥ ೩೬ ॥**

**ಯಶ್ಶಿವಂ ಸುರಸಾಮಾನ್ಯಮುದ್ದಿಶ್ಯ ಪರಮೇಶ್ವರಂ ।**
**ದ್ರುಹ್ಯತ್ಯಜೋ ದುಷ್ಟಮತಿಸ್ತತ್ತ್ವತೋ ವಿಮುಖೋ ಭವೇತ್ ॥ ೩೭ ॥**

**ಕೂಟಧರ್ಮೇಷು ಗೇಹೇಷು ಸದಾ ಗ್ರಾಮ್ಯಸುಖೇಚ್ಛಯಾ ।**
**ಕರ್ಮತಂತ್ರಂ ವಿತನುತಾ ವೇದವಾದಂ ಚ ಶಾಶ್ವತಂ ॥ ೩೮ ॥**

---

ಯಿಂದ ಅದೇ ವೇದಾರ್ಥ, ಬೇರೆಯಿಲ್ಲ ಎಂದು ವಾದಿಸುವ ವೈದಿಕನಾಸ್ತಿಕರಾಗಿ ಜನಿಸಿರಿ. ಕೇವಲ ಕಾಮಪ್ರಧಾನರಾಗಿರಿ. ಯಜ್ಞಾದಿಗಳನ್ನು ಮಾಡುತ್ತಾ ಕೇವಲ ಸ್ವರ್ಗದಲ್ಲಿ ಆಸಕ್ತರಾಗಿದ್ದು ಮುಕ್ತಿಮಾರ್ಗಕ್ಕೆ ಬರದಿರುವವರಾಗಿ. ಕೋಪ, ಲೋಭ, ಮದ ಇವುಗಳುಳ್ಳವರೂ ಭಿಕ್ಷುಕರೂ ಮರ್ಯಾದೆಯಿಲ್ಲದವರೂ ಆಗುವಿರಿ. ವೇದ ಮಾರ್ಗದಿಂದ ಶೂದ್ರರಿಗೆ ಕರ್ಮಗಳನ್ನು ಮಾಡಿಸುವವರಾಗಿರಿ. ಸದಾ ದುರ್ದಾನ ಗಳನ್ನೇ ತೆಗೆದುಕೊಳ್ಳುತ್ತಾ ದರಿದ್ರರಾಗಿಯೇ ಇರಿ.

೩೬. ಎಲೈ ದಕ್ಷ, ಶಿವನನ್ನು ದ್ವೇಷಿಸುವವರೆಲ್ಲರೂ ದುರಾಚಾರವನ್ನು ಮಾಡುತ್ತಾ ನರಕಕ್ಕೆ ಹೋಗುವರು. ಕೆಲವರು ಬ್ರಹ್ಮರಾಕ್ಷಸರಾಗುವರು.

೩೭. ಶಿವನು (ಯಾವನೋ ಒಬ್ಬ) ಸಾಮಾನ್ಯದೇವನೆಂದು ತಿಳಿದು ಪರಮೇ ಶ್ವರನಾದ ಅವನನ್ನು ದ್ವೇಷಿಸುವ ದುಷ್ಟಮತಿಯಾದ ನಿನಗೆ ಎಂದೆಂದಿಗೂ ಪರತತ್ವವು ಗೋಚರಿಸಲಾರದು.

೩೮-೩೯. ಎಲೈ ದಕ್ಷ, ನೀನು ಸದಾ ಮೋಸಧರ್ಮದಲ್ಲಿಯೇ ಇದ್ದು, ಸಂಸಾರ ದಲ್ಲಿ ವ್ಯಾಪೃತನಾಗಿ ನೀಚವಾದ ಕಾಮಸುಖವನ್ನನುಭವಿಸುತ್ತಾ ದುಷ್ಟಾಚಾರವುಳ್ಳ ವನಾಗುವೆ. ವೇದವಾದವನ್ನು ಹೇಳುವವನಾದರೂ ಅದರಿಂದ ಲಭಿಸುವ ನಿತ್ಯಾತ್ಮಾ

ವಿನಷ್ಟಾನಂದಕಮುಖೋ ವಿಸ್ಮೃತಾತ್ಮಗತಿಃ ಪಶುಃ ।
ಭ್ರಷ್ಟಕರ್ಮಾನಯುಸದಾ ದಕ್ಷೋ ಬಸ್ತಮುಖೋಽಚಿರಾತ್ ॥ ೩೯ ॥

ಶಪ್ತಾಸ್ತೇ ಕೋಪಿನಾ ತತ್ರ ನಂದಿನಾ ಬ್ರಾಹ್ಮಣಾ ಯದಾ ।
ಹಾಹಾಕಾರೋ ಮಹಾನಾಸೀಚ್ಛಪ್ತೋ ದಕ್ಷೇಣ ಚೇಶ್ವರಃ ॥ ೪೦ ॥

ತದಾಕರ್ಣ್ಯಾಹಮತ್ಯಂತಮನಿಂದಂ ತಂ ಮುಹುರ್ಮುಹುಃ ।
ಭೃಗ್ವಾದೀನಪಿ ವಿಪ್ರಾಂಶ್ಚ ವೇದಸೃಟ್ ಶಿವತತ್ತ್ವವಿತ್ ॥ ೪೧ ॥

ಈಶ್ವರೋಽಪಿ ವಚಃ ಶ್ರುತ್ವಾ ನಂದಿನಃ ಪ್ರಹಸನ್ನಿವ ।
ಉವಾಚ ಮಧುರಂ ವಾಕ್ಯಂ ಬೋಧಯಂಸ್ತಂ ಸದಾಶಿವಃ ॥ ೪೨ ॥

॥ ಸದಾಶಿವ ಉವಾಚ ॥

ಶೃಣು ನಂದಿನ್ಮಹಾಪ್ರಾಜ್ಞ ನ ಕರ್ತುಂ ಕ್ರೋಧಮರ್ಹಸಿ ।
ವೃಥಾ ಶಪ್ತಂ ಬ್ರಹ್ಮಕುಲಂ ಮತ್ವಾ ಶಪ್ತಂ ಚ ಮಾಂ ಭ್ರಮಾತ್ ॥ ೪೩ ॥

---

ನಂದವನ್ನು ಪಡೆಯದೆ ಕೇವಲ ಪಶುವಿನಂತೆ ಗ್ರಾಮ್ಯಸುಖದಲ್ಲಿಯೇ ಪ್ರವರ್ತಿಸುವೆ. ಅದಕ್ಕನುಸಾರವಾಗಿ ಕೆಲವುದಿನಗಳಲ್ಲಿಯೇ ನೀನು ಪಶುವಾದ ಆಡಿನಮುಖವುಳ್ಳವನಾಗುವೆ.

೪೦. ಹೀಗೆ ಕೋಪಗೊಂಡ ನಂದಿಕೇಶ್ವರನು ಅಲ್ಲಿರುವ ಶಿವದ್ವೇಷಿಗಳಾದ ಬ್ರಾಹ್ಮಣರೆಲ್ಲರನ್ನೂ ಶಪಿಸಿದನು. ಆದರಿಂದ ಅಲ್ಲಿ ಸೇರಿದವರು ದುಃಖದಿಂದ ತುಂಬಾ ಹಾಹಾಕಾರಮಾಡಿದರು.

೪೧-೪೨. ಎಲೈ ನಾರದ, ಆಗ ನಾನು, ದಕ್ಷನು ಶಾಪಕೊಟ್ಟುದದಕ್ಕಾಗಿ ಅವನನ್ನು ತುಂಬಾ ನಿಂದಿಸಿದೆನು. ಮತ್ತು ವೇದವಕ್ತೃವೂ ಶಿವತತ್ವವನ್ನು ಬಲ್ಲವನೂ ಆದ ನಾನು ಶಿವದ್ವೇಷಿಗಳಾದ ಭೃಗು ಮೊದಲಾದ ಮುನಿಗಳನ್ನೂ ನಿಂದಿಸಿ ನಂದಿಯು ಕೋಪದಿಂದ ಶಾಪಕೊಟ್ಟುದುವನ್ನು ನೋಡಿ, ಸದಾ ಮಂಗಳರೂಪನಾದ ಶಿವನು ಮಂದಹಾಸವನ್ನು ಬೀರುತ್ತಾ ನಂದಿಕೇಶ್ವರನನ್ನು ಮಧುರವಾದ ಮಾತಿನಿಂದ ಹೀಗೆ ಸಮಾಧಾನಮಾಡಿದೆನು.

೪೩. ಸದಾಶಿವನು ಹೇಳಿದನು ;—ಎಲೈ ಪ್ರಾಜ್ಞನಾದ ನಂದಿ, ಕೋಪವನ್ನು ಮಾಡಲಾಗದು. ದಕ್ಷನು ನನ್ನನ್ನು ಶಪಿಸಿದನೆಂಬ ಭ್ರಮದಿಂದ ನೀನು ಬ್ರಾಹ್ಮಣರನ್ನೆಲ್ಲಾ ಶಪಿಸಿರುವೆ, ಇದು ಸರಿಯಲ್ಲ.

**ವೇದೋ ಮಂತ್ರಾಕ್ಷರಮಯಸ್ಸಾಕ್ಷಾತ್ಸೂಕ್ತಮಯೋ ಭೃಶಂ ।
ಸೂಕ್ತೇ ಪ್ರತಿಷ್ಠಿತೋ ಹ್ಯಾತ್ಮಾ ಸರ್ವೇಷಾಮಪಿ ದೇಹಿನಾಂ ॥ ೪೪ ॥**

**ತಸ್ಮಾದಾತ್ಮವಿದೋ ನಿತ್ಯಂ ತ್ವಂ ಮಾ ಶಪ ರುಷಾನ್ವಿತಃ ।
ಶಪ್ಯಾ ನ ವೇದಾಃ ಕೇನಾಪಿ ದುರ್ಧಿಯಾಪಿ ಕದಾಚನ ॥ ೪೫ ॥**

**ಅಹಂ ಶಪ್ತೋ ನ ಚೇದಾನೀಂ ತತ್ತ್ವತೋ ಬೋದ್ಧುಮರ್ಹಸಿ ।
ಶಾಂತೋ ಭವ ಮಹಾಧೀಮನ್ಸನಕಾದಿವಿಬೋಧಕಃ ॥ ೪೬ ॥**

**ಯಜ್ಞೋಽಹಂ ಯಜ್ಞಕರ್ಮಾಹಂ ಯಜ್ಞಾಂಗಾನಿ ಚ ಸರ್ವಶಃ ।
ಯಜ್ಞಾತ್ಮಾ ಯಜ್ಞನಿರತೋ ಯಜ್ಞಬಾಹ್ಯೋಽಹಮೇವ ವೈ ॥ ೪೭ ॥**

---

೪೪. ವೇದವು ಮಂತ್ರ ಮತ್ತು ಸೂಕ್ತಗಳ ಸ್ವರೂಪವಾಗಿರುವುದು ಆ ಸೂಕ್ತಗಳಲ್ಲಿ ಸರ್ವಪ್ರಾಣಿಗಳ ಆತ್ಮನಾದ ಪರಮಾತ್ಮನು ನೆಲಸಿರುವನು.

೪೫. ಆ ಸೂಕ್ತಗಳನ್ನು ಅಧ್ಯಯನಮಾಡಿ ಈ ಬ್ರಾಹ್ಮಣರು ಆತ್ಮವಿತ್ತುಗಳಾಗಿರುವರು. ಇವರನ್ನು ಶಪಿಸಿದರೆ ಆ ವೇದಗಳನ್ನೇ ಶಪಿಸಿದಂತಾಗುವುದು. ಅದು ಸರಿಯಲ್ಲ. ಎಂತಹ ಮೂಢನೂ ಸಹ ವೇದಗಳನ್ನು ಶಪಿಸಬಾರದು.

೪೬. ಎಲೈ ಬುದ್ಧಿಶಾಲಿಯಾದ ನಂದಿಯೇ, ನಸ್ತುತಃ ನಾನು ಶಪ್ತನಾಗಿಲ್ಲ. ನನ್ನನ್ನು ಶಪಿಸಲು ಯಾರಿಗೂ ಸಾಧ್ಯವಿಲ್ಲ. ಆದುದರಿಂದ ನೀನು ಶಾಂತನಾಗು. ಸನಕನೇ ಮೊದಲಾದ ಮಹಾಮುನಿಗಳಿಗೂ ಉಪದೇಶಿಸಿರುವಂತಹ ನೀನು ಹೀಗೆ ಕೋಪಕ್ಕೊಳಗಾಗುವುದು ಸರಿಯಲ್ಲ.

೪೭. ನಾನೇ ಯಜ್ಞವು. ಅದರಲ್ಲಿ ನಡೆಯುವ ಕರ್ಮಗಳೂ ನಾನೇ. ಯಜ್ಞಸಾಧನಗಳೂ ನಾನೇ. ಯಜ್ಞಸ್ವರೂಪಿಯು ನಾನು. ಅಲ್ಲದೇ ಯಜ್ಞಮಾಡುವ ಯಜಮಾನನೂ ನಾನೇ ಆಗಿರುವೆನು. ಮತ್ತು ಯಜ್ಞವಲ್ಲದ ಮಿಕ್ಕೆಲ್ಲವೂ ನಾನೇ ಆಗಿರುವೆನು. ನನ್ನ ಹೊರತು ಬೇರೆ ಯಾವುದೂ ಇಲ್ಲ.

ಕೋಽಯಂ ಕಸ್ತ್ವಮಿಮೇ ಕೇ ಹಿ ಸರ್ವೋಽಹಮಪಿ ತತ್ತ್ವತಃ ।
ಇತಿ ಬುದ್ಧ್ಯಾ ಹಿ ವಿಮೃಶ ವೃಥಾ ಶಪ್ತಾಸ್ತ್ವಯಾ ದ್ವಿಜಾಃ ॥ ೪೮ ॥

ತತ್ತ್ವಜ್ಞಾನೇನ ನಿರ್ಹೃತ್ಯ ಪ್ರಪಂಚರಚನೋ ಭವ ।
ಬುಧಸ್ಸ್ವಸ್ಥೋ ಮಹಾಬುದ್ಧೇ ನಂದಿನ್ಕ್ರೋಧಾದಿವರ್ಜಿತಃ ॥ ೪೯ ॥

॥ ಬ್ರಹ್ಮೋವಾಚ ॥

ಏವಂ ಪ್ರಬೋಧಿತಸ್ತೇನ ಶಂಭುನಾ ನಂದಿಕೇಶ್ವರಃ ।
ವಿವೇಕಪರಮೋ ಭೂತ್ವಾ ಶಾಂತೋಽಭೂತ್ಕ್ರೋಧವರ್ಜಿತಃ ॥ ೫೦ ॥

ಶಿವೋಽಪಿ ತಂ ಪ್ರಬೋಧ್ಯಾಶು ಸ್ವಗಣಂ ಪ್ರಾಣವಲ್ಲಭಂ ।
ಸಗಣಸ್ಸ ಯಯೌ ತಸ್ಮಾತ್ಸ್ವಸ್ಥಾನಂ ಪ್ರಮುದಾನ್ವಿತಃ ॥ ೫೧ ॥

ದಕ್ಷೋಽಪಿ ಸ ರುಷಾವಿಷ್ಟಸ್ತೈರ್ದ್ವಿಜೈಃ ಪರಿವಾರಿತಃ ।
ಸ್ವಸ್ಥಾನಂ ಚ ಯಯೌ ಚಿತ್ತೇ ಶಿವದ್ರೋಹಪರಾಯಣಃ ॥ ೫೨ ॥

---

೪೮. ಎಲೈ ನಂದಿ, ಈ ದಕ್ಷನಾರು? ಮಿಕ್ಕ ಈ ದೇವತೆಗಳು ಮುಂತಾದವರು ಯಾರೆಂದು ತಿಳಿದಿರುವೆ? ಎಲ್ಲವೂ ನಾನೇ ಆಗಿರುವೆನು. ನನ್ನ ಹೊರತು ಬೇರೆ ಯಾರೂ ಇಲ್ಲ. ಇದನ್ನು ವಿಮರ್ಶಿಸು. ಬ್ರಾಹ್ಮಣರನ್ನು ಶಪಿಸಿದುದು ವ್ಯರ್ಥವೆಂದು ಆಗ ನಿನಗೆ ತಿಳಿಯುವುದು.

೪೯. ಎಲೈ ನಂದಿ, ನೀನು ತುಂಬಾ ಬುದ್ಧಿಶಾಲಿಯು, ಪಂಡಿತನು. ಇಂತಹ ನೀನು ಈ ಕೋಪವನ್ನು ತ್ಯಜಿಸಿ ಸ್ವಸ್ಥನಾಗು. ತತ್ವಜ್ಞಾನದಿಂದ ಚೆನ್ನಾಗಿ ವಿಮರ್ಶಿಸು ಎಂದು ಸಮಾಧಾನಮಾಡಿದನು.

೫೦. ಹೀಗೆ ಶಂಕರನು ನಂದಿಕೇಶ್ವರನನ್ನು ಎಚ್ಚರಗೊಳಿಸಲು ಆ ನಂದಿಯು ವಿವೇಕವನ್ನು ಹೊಂದಿ ಕೋಪವನ್ನು ತ್ಯಜಿಸಿ ಶಾಂತನಾದನು.

೫೧. ಹೀಗೆ ಶಿವನು ತನ್ನ ಪ್ರೀತಿಪಾತ್ರನಾದ ನಂದಿಕೇಶ್ವರನನ್ನು ಸಮಾಧಾನಗೊಳಿಸಿ ಮಿಕ್ಕ ತನ್ನ ಗಣಗಳೊಡನೆ ತನ್ನ ಸ್ಥಾನಕ್ಕೆ ತೆರಳಿದನು.

೫೨. ಅತ್ತಲಾಗಿ ದಕ್ಷಬ್ರಹ್ಮನೂ ಸಹ ಶಿವನಮೇಲೆ ಕೋಪಗೊಂಡು ಶಿವನಿಗೆ ದ್ರೋಹಮಾಡಬೇಕೆಂಬ ದುರ್ಬುದ್ಧಿಯುಳ್ಳವನಾಗಿ ಮಿಕ್ಕ ಎಲ್ಲಾ ಬ್ರಾಹ್ಮಣರೊಡನೆ ತನ್ನ ಸ್ಥಾನಕ್ಕೆ ತೆರಳಿದನು.

ರುದ್ರಂ ತದಾನೀಂ ಪರಿಶಪ್ಯಮಾನಂ
ಸಂಸ್ಮೃತ್ಯ ದಕ್ಷಃ ಪರಯಾ ರುಷಾನ್ವಿತಃ ।
ಶ್ರದ್ಧಾಂ ವಿಹಾಯ್ಯೈವ ಸ ಮೂಢಬುದ್ಧಿ-
ರ್ನಿಂದಾಪರೋಽಭೂಚ್ಛಿವಪೂಜಕಾನಾಂ ॥ ೫೩ ॥

ಇತ್ಯುಕ್ತೋ ದಕ್ಷದುರ್ಬುದ್ಧಿಶ್ಶಂಭುನಾ ಪರಮಾತ್ಮನಾ ।
ಪರಾಂ ದುರ್ಧಿಷಣಾಂ ತಸ್ಯ ಶೃಣು ತಾತ ವದಾಮ್ಯಹಂ ॥ ೫೪ ॥

**ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ದ್ವಿತೀಯೇ ಸತೀಖಂಡೇ ಸತ್ಯುಪಾಖ್ಯಾನೇ ಶಿವೇನ ದಕ್ಷವಿರೋಧೋ ನಾಮ ಷಡ್ವಿಂಶೋಽಧ್ಯಾಯಃ**

---

೫೩. ಮುಂದೆ ಆ ದಕ್ಷನು ತನಗೆ ರುದ್ರನು ನಮಸ್ಕಾರವನ್ನು ಮಾಡದಿರುವುದನ್ನು ಸ್ಮರಿಸಿಕೊಂಡು ಮತ್ತಷ್ಟು ಕೋಪವುಳ್ಳವನಾದನು. ಮೂರ್ಖನಾದ ಅವನು ಶಿವನಲ್ಲಿ ಶ್ರದ್ಧೆಯಿಲ್ಲದೆ ಶಿವಭಕ್ತರನ್ನು ನಿಂದಿಸುತ್ತಿದ್ದನು.

೫೪. ಎಲೈ ನಾರದ, ಹೀಗೆ ದಕ್ಷನು ಶಿವದ್ವೇಷಿಯಾಗಲು, ಮುಂದೆ ಅವನಿಗೆ ಪರಮಾತ್ಮನಾದ ಶಿವನಿಂದಾದ ಶಿಕ್ಷೆಯನ್ನು ಹೇಳುವೆನು ಕೇಳು ಎಂದನು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಸಪ್ತವಿಂಶೋಽಧ್ಯಾಯಃ

॥ ಬ್ರಹ್ಮೋವಾಚ ॥

ಏಕದಾ ತು ಮುನೇ ತೇನ ಯಜ್ಞಃ ಪ್ರಾರಂಭಿತೋ ಮಹಾನ್ ।
ತತ್ರಾಹೂತಾಸ್ತದಾ ಸರ್ವೇ ದೀಕ್ಷಿತೇನ ಸುರರ್ಷಯಃ ॥ ೧ ॥

ಮಹರ್ಷಯೋಽಖಿಲಾಸ್ತತ್ರ ನಿರ್ಜರಾಶ್ಚ ಸಮಾಗತಾಃ ।
ಯದ್ಯಜ್ಞಕರಣಾರ್ಥಂ ಹಿ ಶಿವಮಾಯಾವಿಮೋಹಿತಾಃ ॥ ೨ ॥

---

## ಇಪ್ಪತ್ತೇಳನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು:--ಎಲೈ ನಾರದ! ಮುಂದೆ ಆ ದಕ್ಷನು ಒಂದು ಕಾಲದಲ್ಲಿ ಮಹಾಯಜ್ಞವೊಂದನ್ನು ಮಾಡಲು ಆರಂಭಿಸಿದನು. ಆ ಯಜ್ಞಕ್ಕೆ ದೇವಋಷಿಗಳೆಲ್ಲರನ್ನೂ ಆ ದಕ್ಷನು ಆಹ್ವಾನಿಸಿದನು.

೨. ಶಿವಮಾಯಾಮೋಹಿತನಾದ ದಕ್ಷನು ಮಾಡುತ್ತಲಿರುವ ಆ ಯಜ್ಞಕ್ಕೆ ಅನೇಕ ಜನ ಮಹರ್ಷಿಗಳೂ, ದೇವತೆಗಳೂ ಯಜ್ಞಸಹಾಯಕ್ಕಾಗಿ ಬಂದರು.

ಅಗಸ್ತ್ಯಃ ಕಶ್ಯಪೋಽತ್ರಿಶ್ಚ ವಾಮದೇವಸ್ತಥಾ ಭೃಗುಃ ।
ದಧೀಚಿರ್ಭಗವಾನ್ವ್ಯಾಸೋ ಭರದ್ವಾಜೋಽಥ ಗೌತಮಃ ॥ ೩ ॥

ಪೈಲಃ ಪರಾಶರೋ ಗರ್ಗೋ ಭಾರ್ಗವಃ ಕುಕುಪಸ್ಸಿತಃ ।
ಸುಮಂತುತ್ರಿಕಕಂಕಾಶ್ಚ ವೈಶಂಪಾಯನ ಏವ ಚ ॥ ೪ ॥

ಏತೇ ಚಾನ್ಯೇ ಚ ಬಹವೋ ಮುನಯೋ ಹರ್ಷಿತಾ ಯಯುಃ ।
ಮಮ ಪುತ್ರಸ್ಯ ದಕ್ಷಸ್ಯ ಸದಾರಾಸ್ಸಸುತಾ ಮಖಂ ॥ ೫ ॥

ತಥಾ ಸರ್ವೇ ಸುರಗಣಾ ಲೋಕಪಾಲಾ ಮಹೋದಯಾಃ ।
ತಥೋಪನಿರ್ಜರಾಸ್ಸರ್ವೇ ಸ್ವೋಪಕಾರಬಲಾನ್ವಿತಾಃ ॥ ೬ ॥

ಸತ್ಯಲೋಕಾತ್ಸಮಾನೀತೋ ನುತೋಽಹಂ ವಿಶ್ವಕಾರಕಃ ।
ಸಸುತಸ್ಸಪರೀವಾರೋ ಮೂರ್ತವೇದಾದಿಸಂಯುತಃ ॥ ೭ ॥

---

೩-೪. ಅಗಸ್ತ್ಯ, ಕಶ್ಯಪ, ಅತ್ರಿ, ವಾಮದೇವ, ಭೃಗು, ದಧೀಚಿ, ವ್ಯಾಸ, ಭಾರದ್ವಾಜ, ಗೌತಮ, ಪೈಲಮುನಿ, ಪರಾಶರ, ಗರ್ಗಮುನಿ, ಭಾರ್ಗವ, ಕಕುಪ, ಸಿತಮುನಿ, ಸುಮಂತುಮುನಿ, ತ್ರಿಕಮುನಿ, ಕಂಕಮುನಿ, ವೈಶಂಪಾಯನಮುನಿ ಮುಂತಾದ ಅನೇಕ ಮಹರ್ಷಿಗಳು ಆ ಯಜ್ಞಕ್ಕೆ ಸಂತೋಷದಿಂದ ಬಂದರು.

೫-೬. ಅಲ್ಲದೆ ದಕ್ಷಬ್ರಹ್ಮನ ಪುತ್ರಿಯರೂ ಸಹ ತಮ್ಮ ಮಕ್ಕಳು ಮತ್ತು ಪತಿಗಳೊಡನೆ ಬಂದರು. ಮತ್ತು ಎಲ್ಲ ದೇವತೆಗಳು, ಮಹಾನುಭಾವರಾದ ಲೋಕಪಾಲಕರು, ಗಂಧರ್ವರೇ ಮೊದಲಾದ ಮಿಕ್ಕ ದೇವಜಾತಿಯವರೂ ಸಹ ಯಥಾಶಕ್ತಿಯಾಗಿ ಸಹಾಯದ್ರವ್ಯಗಳನ್ನು ತೆಗೆದುಕೊಂಡು ತಮ್ಮ ಪರಿವಾರದೊಡದೆ ಆ ಯಜ್ಞಕ್ಕೆ ಬಂದರು.

೭. ಸತ್ಯಲೋಕದಿಂದ ಜಗತ್ಸ್ರಷ್ಟೃವಾದ ನನ್ನನ್ನು ದಕ್ಷನು ಸ್ತುತಿಸಿ ಆಹ್ವಾನಿಸಿ ಪರಿವಾರಪೊಡನೆಯೂ ವೇದಪುರುಷರೊಡನೆಯೂ ಸನಕಾದಿಗಳೊಡನೆಯೂ ಆ ಯಾಗಕ್ಕೆ ಕರೆದುಕೊಂಡು ಬಂದನು.

ವೈಕುಂಠಾಚ್ಚ ತಥಾ ವಿಷ್ಣುಸ್ಸಂಪ್ರಾರ್ಥ್ಯ ವಿವಿಧಾದರಾತ್ ।
ಸಪಾರ್ಷದಪರೀವಾರಸ್ಸಮಾನೀತೋ ಮಖಂ ಪ್ರತಿ ॥ ೮ ॥

ಏವಮನ್ಯೇ ಸಮಾಯಾತಾ ದಕ್ಷಯಜ್ಞಂ ವಿಮೋಹಿತಾಃ ।
ಸತ್ಕೃತಾಸ್ತೇನ ದಕ್ಷೇಣ ಸರ್ವೇ ತೇ ಹಿ ದುರಾತ್ಮನಾ ॥ ೯ ॥

ಭವನಾನಿ ಮಹಾರ್ಹಾಣಿ ಸುಪ್ರಭಾಣಿ ಮಹಾಂತಿ ಚ ।
ತ್ವಷ್ಟ್ರಾ ಕೃತಾನಿ ದಿವ್ಯಾನಿ ತೇಭ್ಯೋ ದತ್ತಾನಿ ತೇನ ವೈ ॥ ೧೦ ॥

ತೇಷು ಸರ್ವೇಷು ಧಿಷ್ಣ್ಯೇಷು ಯಥಾಯೋಗ್ಯಂ ಚ ಸಂಸ್ಥಿತಾಃ ।
ಸಂಮಾನಿತಾ ಅರಾಜಂಸ್ತೇ ಸಕಲಾ ವಿಷ್ಣುನಾ ಮಯಾ ॥ ೧೧ ॥

ವರ್ತಮಾನೇ ಮಹಾಯಜ್ಞೇ ತೀರ್ಥೇ ಕನಖಲೇ ತದಾ ।
ಋತ್ವಿಜಶ್ಚ ಕೃತಾಸ್ತೇನ ಭೃಗ್ವಾದ್ಯಾಶ್ಚ ತಪೋಧನಾಃ ॥ ೧೨ ॥

---

೮. ವಿಷ್ಣುವೂ ಸಹ ದಕ್ಷನಿಂದ ಪ್ರಾರ್ಥಿಸಲ್ಪಟ್ಟವನಾಗಿ ತನ್ನ ಪಾರ್ಷದಗಳೊಡನೆ ಕೂಡಿಕೊಂಡು ಆ ಯಾಗಕ್ಕೆ ಬಂದನು.

೯. ಶಿವದ್ವೇಷಿಯಾದ ಆ ದಕ್ಷನು, ಶಿವಮಾಯಾಮೋಹಿತರಾಗಿ ತನ್ನ ಆ ಯಾಗಕ್ಕೆ ಬಂದಿರುವವರೆಲ್ಲರನ್ನೂ ಸತ್ಕರಿಸಿದನು.

೧೦. ದೇವಶಿಲ್ಪಿಯಾದ ತ್ವಷ್ಟೃಬ್ರಹ್ಮನು ತುಂಬಾ ಬೆಲೆಯುಳ್ಳವುಗಳೂ, ಸುಂದರವಾದುವುಗಳೂ ಆದಂತಹ ಮಹಾಭವನಗಳನ್ನು ನಿರ್ಮಿಸಿದನು. ದಕ್ಷನು ಆ ಭವನಗಳನ್ನು ಬಂದಂತಹ ಅತಿಥಿಗಳ ವಾಸಕ್ಕಾಗಿ ಕೊಟ್ಟನು.

೧೧. ಆ ಭವನಗಳಲ್ಲಿ ಬಂದಿರುವ ಅತಿಥಿಗಳೆಲ್ಲರೂ ಯೋಗ್ಯವಾಗಿ ವಾಸವನ್ನು ಕಲ್ಪಿಸಿಕೊಂಡರು. ನಾನು ಮತ್ತು ವಿಷ್ಣು ಇವರೊಡನೆ ಸನ್ಮಾನಿತರಾಗಿದ್ದೆವು.

೧೨. ಆ ಯಜ್ಞವು ಕನಖಲವೆಂಬ ತೀರ್ಥಕ್ಷೇತ್ರದಲ್ಲಿ ನಡೆಯಿತು. ದಕ್ಷನು ಭೃಗುಮುನಿ ಮೊದಲಾದ ತಪೋಧನರನ್ನು ಋತ್ವಿಜರನ್ನಾಗಿ ವರಣಮಾಡಿದನು.

ಅಧಿಷ್ಠಾತಾ ಸ್ವಯಂ ವಿಷ್ಣುಸ್ಸಹ ಸರ್ವಮರುದ್ಗಣೈಃ ।
ಅಹಂ ತತ್ರಾಭವಂ ಬ್ರಹ್ಮಾ ತ್ರಯೀವಿಧಿನಿದರ್ಶಕಃ ॥ ೧೩ ॥

ತಥೈವ ಸರ್ವದಿಕ್ಪಾಲಾ ದ್ವಾರಪಾಲಾಶ್ಚ ರಕ್ಷಕಾಃ ।
ಸಾಯುಧಾಸ್ಸಪರೀವಾರಾಃ ಕುತೂಹಲಕರಾಸ್ಸದಾ ॥ ೧೪ ॥

ಉಪತಸ್ಥೇ ಸ್ವಯಂ ಯಜ್ಞಸ್ಸುರೂಪಸ್ತಸ್ಯ ಚಾಧ್ವರೇ ।
ಸರ್ವೇ ಮಹಾಮುನಿಶ್ರೇಷ್ಠಾಃ ಸ್ವಯಂ ವೇದಧರಾ ಽಭವನ್ ॥ ೧೫ ॥

ತನೂನಪಾದಪಿ ನಿಜಂ ಚಕ್ರೇ ರೂಪಂ ಸಹಸ್ರಶಃ ।
ಹವಿಷಾಂ ಗ್ರಹಣಾಯಾಶು ತಸ್ಮಿನ್ಯಜ್ಞೇ ಮಹೋತ್ಸವೇ ॥ ೧೬ ॥

ಅಷ್ಟಾಶೀತಿಸಹಸ್ರಾಣಿ ಜುಹ್ವತಿ ಸಹ ಋತ್ವಿಜಃ ।
ಉದ್ಗಾತಾರಶ್ಚತುಷಷ್ಟಿಸಹಸ್ರಾಣಿ ಸುರರ್ಷಯಃ ॥ ೧೭ ॥

---

೧೩. ಎಲ್ಲಾ ದೇವತೆಗಳೊಡನಿರುವ ವಿಷ್ಣುವೇ ಸ್ವಯಂ ಆ ಯಜ್ಞಕ್ಕೆ ಸರ್ವಾಧ್ಯಕ್ಷನಾದನು. ನಾನು ವೇದತ್ರಯಗಳ ವಿಧಿಯನ್ನು ನಿರ್ದೇಶಿಸುವ ಬ್ರಹ್ಮನಾದೆನು.

೧೪. ದಿಕ್ಪಾಲಕರೆಲ್ಲರೂ ಸಹ ಆ ಯಜ್ಞಕ್ಕೆ ಆಯುಧಗಳನ್ನು ಧರಿಸಿ ದ್ವಾರಪಾಲಕರಾಗಿ ನಿಂತು ಆ ಯಾಗವನ್ನು ರಕ್ಷಿಸುವವರಾದರು.

೧೫. ಆ ಯಜ್ಞದಲ್ಲಿ ಯಜ್ಞಪುರುಷನು ಸುಂದರವಾದ ರೂಪವನ್ನು ಧರಿಸಿ ಸನ್ನಿಹಿತನಾದನು. ಮಹಾಮುನಿಗಳೆಲ್ಲರೂ ವೇದಘೋಷವನ್ನು ಶ್ರಾವ್ಯವಾಗಿ ಮಾಡಿದರು.

೧೬. ಅಗ್ನಿಯು ಆ ಯಾಗದಲ್ಲಿ ಅನೇಕ ರೂಪವಾಗಿ ಜ್ವಾಲೆಗಳನ್ನು ಪ್ರಕಟಿಸಿ ಹವಿಸ್ಸನ್ನು ಸ್ವೀಕರಿಸತೊಡಗಿದನು.

೧೭. ಎಂಭತ್ತೆಂಟು ಸಾವಿರ ಋತ್ವಿಜರು ಹೋಮವನ್ನು ಮಾಡುತ್ತಲಿದ್ದರು. ಅರವತ್ತನಾಲ್ಕುಸಾವಿರ ದೇವಮುನಿಗಳು ಸಾಮಗಾನವನ್ನು ಮಾಡುತ್ತಲಿದ್ದರು.

ಅಧ್ವರ್ಯುರ್ವೋsಥ ಹೋತಾರಸ್ತಾವಂತೋ ನಾರದಾದಯಃ ।
ಸಪ್ತರ್ಷಯಸ್ಸಮಾ ಗಾಥಾಃ ಕುರ್ವಂತಿ ಸ್ಮ ಪೃಥಕ್ಪೃಥಕ್ ॥ ೧೮ ॥

ಗಂಧರ್ವವಿದ್ಯಾಧರಸಿದ್ಧಸಂಘಾ-
ನಾದಿತ್ಯಸಂಘಾನ್ಸಗಣಾನ್ಸಯಜ್ಞಾನ್ ।
ಸಂಖ್ಯಾವರಾನ್ನಾಗಚರಾನ್ಸಮಸ್ತಾನ್
ವವ್ರೇ ಸ ದಕ್ಷೋ ಹಿ ಮಹಾಧ್ವರೇ ಸ್ವೇ ॥ ೧೯ ॥

ದ್ವಿಜರ್ಷಿರಾಜರ್ಷಿಸುರರ್ಷಿಸಂಘಾ
ನೃಪಾಸ್ಸಮಿತ್ರಾಃ ಸಚಿವಾಸ್ಸಸೈನ್ಯಾಃ ।
ವಸುಪ್ರಮುಖ್ಯಾ ಗಣದೇವತಾಶ್ಚ
ಸರ್ವೇ ವೃತಾಸ್ತೇನ ಮಖೋಪವೇತ್ರಾಃ ॥ ೨೦ ॥

ದೀಕ್ಷಾಯುಕ್ತಸ್ತದಾ ದಕ್ಷಃ ಕೃತಕೌತುಕಮಂಗಲಃ ।
ಭಾರ್ಯಯಾ ಸಹಿತೋ ರೇಜೇ ಕೃತಸ್ವಸ್ತ್ಯಯನೋ ಭೃಶಂ ॥ ೨೧ ॥

---

೧೮. ಅಧ್ವರ್ಯುಗಳು ಮತ್ತು ಹೋತೃಗಳು ಅರವತ್ತುನಾಲ್ಕುಸಾವಿರ ಜನಗಳಿದ್ದರು. ಅವರು ನಾರದಮುನಿ ಮೊದಲಾದವರು ಸಪ್ತಋಷಿಗಳು ಆಖ್ಯಾನಗಳನ್ನು ಹೇಳುವವರಾಗಿದ್ದರು.

೧೯. ಗಂಧರ್ವರು, ವಿದ್ಯಾಧರರು, ಸಿದ್ಧರು, ದ್ವಾದಶಾದಿತ್ಯರು ನಾಗಪುರುಷರು, ಕಿನ್ನರರು, ಕಿಂಪುರುಷರು ಇವರೆಲ್ಲರನ್ನೂ ಆ ಯಜ್ಞಕ್ಕೆ ದಕ್ಷನು ಆಹ್ವಾನಿಸಿದ್ದನು.

೨೦. ಬ್ರಹ್ಮರ್ಷಿಗಳು, ರಾಜರ್ಷಿಗಳು, ದೇವಋಷಿಗಳು, ಅಷ್ಟವಸುಗಳು, ಮುಂತಾದ ಗಣದೇವತೆಗಳು ಇವರೆಲ್ಲರನ್ನೂ, ಎಲ್ಲಾ ರಾಜರುಗಳನ್ನೂ, ಅವರವರ ಮಂತ್ರಿ ಮತ್ತು ಸೈನ್ಯದೊಡನೆ ಆಹ್ವಾನಿಸಿದ್ದನು.

೨೧. ಆಗ ದಕ್ಷನು ಪತ್ನಿಯೊಡನೆ ಮಂಗಳಸ್ನಾನವನ್ನು ಮಾಡಿ ಪುಣ್ಯಾಹ ಮೊದಲಾದ ಮಂಗಳಕಾರ್ಯಗಳನ್ನು ನೆರವೇರಿಸಿ ಯಜ್ಞದೀಕ್ಷೆಯನ್ನು ಕೈಗೊಂಡು ತುಂಬ ಪ್ರಕಾಶಿಸಿದನು.

ತಸ್ಮಿನ್ಯಜ್ಞೇ ವೃತಶ್ಶಂಭುರ್ನ ದಕ್ಷೇಣ ದುರಾತ್ಮನಾ ।
ಕಪಾಲೀತಿ ವಿನಿಶ್ಚಿತ್ಯ ತಸ್ಯ ಯಜ್ಞಾರ್ಹತಾ ನ ಹಿ ॥ ೨೨ ॥

ಕಪಾಲಿಭಾರ್ಯೇತಿ ಸತೀ ದಯಿತಾ ಸ್ವಸುತಾಪಿ ಚ ।
ನಾಹೂತಾ ಯಜ್ಞವಿಷಯೇ ದಕ್ಷೇಣಾಗುಣದರ್ಶಿನಾ ॥ ೨೩ ॥

ಏವಂ ಪ್ರವರ್ತಮಾನೇ ಹಿ ದಕ್ಷಯಜ್ಞೇ ಮಹೋತ್ಸವೇ ।
ಸ್ವಕಾರ್ಯಲಗ್ನಾಸ್ತತ್ರಾಸನ್ಸರ್ವೇ ತೇಽಧ್ವರ್ಯಸಂಯುತಾಃ ॥ ೨೪ ॥

ಏತಸ್ಮಿನ್ನಂತರೇ ತತ್ರ ದೃಷ್ಟ್ವಾ ವೈ ಶಂಕರಂ ಪ್ರಭುಂ ।
ಪ್ರೋದ್ವಿಗ್ನಮಾನಸಶ್ಶೈವೋ ದಧೀಚೋ ವಾಕ್ಯಮಬ್ರವೀತ್ ॥ ೨೫ ॥

॥ ದಧೀಚ ಉವಾಚ ॥

ಸರ್ವೇ ಶೃಣುತ ಮದ್ವಾಕ್ಯಂ ದೇವರ್ಷಿಪ್ರಮುಖಾ ಮುದಾ ।
ಕಸ್ಮಾನ್ನೈವಾಗತಶ್ಶಂಭುರಸ್ಮಿನ್ಯಜ್ಞೇ ಮಹೋತ್ಸವೇ ॥ ೨೬

---

೨೨. ದುರಾತ್ಮನಾದ ಆ ದಕ್ಷನು ಆ ಯಜ್ಞಕ್ಕೆ ಶಿವನನ್ನು ಆಹ್ವಾನಿಸಲಿಲ್ಲ. ಈಶ್ವರನು ಅಪವಿತ್ರವಾದ ಕಪಾಲ (ನರಶಿರಸ್ಸನ್ನು)ವನ್ನು ಧರಿಸಿರುವನು. ಅವನುಪವಿತ್ರವಾದ ಯಾಗಕ್ಕೆ ಯೋಗ್ಯನಲ್ಲ ಎಂಬ ದುರಭಿಪ್ರಾಯದಿಂದ ಶಿವನನ್ನು ಕರೆಯಲಿಲ್ಲ

೨೩. ಆ ಕಪಾಲಿಯ ಪತ್ನಿಯೆಂದು ತನ್ನ ಮಗಳಾದ ಸತೀದೇವಿಯನ್ನೂ ಆ ದಕ್ಷನು ಯಾಗಕ್ಕೆ ಕರೆಯಲಿಲ್ಲ.

೨೪. ಹೀಗೆ ದಕ್ಷಯಜ್ಞಮಹೋತ್ಸವವು ಪ್ರಾರಂಭವಾಗಲು, ಋತ್ವಿಜರೇ ಮೊದಲಾದ ಸಮಸ್ತರೂ ತಮ್ಮ ತಮ್ಮ ಕಾರ್ಯದಲ್ಲಿ ಆಸಕ್ತರಾದರು.

೨೫. ಈ ಮಧ್ಯದಲ್ಲಿ ದಧೀಚನೆಂಬ ಶಿವಭಕ್ತನಾದ ಮುನಿಯು ಆ ಯಾಗದಲ್ಲಿ ಶಿವನು ಬರದಿರುವುದನ್ನು ನೋಡಿ ವ್ಯಥೆಗೊಂಡು ಅಲ್ಲಿರುವವರನ್ನು ಕುರಿತು ಹೀಗೆ ಹೇಳಿದನು.

೨೬. ದಧೀಚಮುನಿಯು ಹೇಳಿದನು :—ದೇವರ್ಷಿಗಳೇ ಮೊದಲಾದ ಎಲ್ಲರೂ ನನ್ನ ಮಾತನ್ನು ಕೇಳಿರಿ ಶಂಕರನು ಈ ಯಜ್ಞಮಹೋತ್ಸವಕ್ಕೆ ಏಕೆ ಬರಲಿಲ್ಲ?

ಏತೇ ಸುರೇಶಾ ಮುನಯೋ ಮಹತ್ತರಾ-
ಸ್ಸಲೋಕಪಾಲಾಶ್ಚ ಸಮಾಗತಾ ಹಿ ।
ತಥಾಪಿ ಯಜ್ಞಸ್ತು ನ ಶೋಭತೇ ಭೃಶಂ
ಪಿನಾಕಿನಾ ತೇನ ಮಹಾತ್ಮನಾ ವಿನಾ ॥ ೨೭ ॥

ಯೇನೈವ ಸರ್ವಾಣ್ಯಪಿ ಮಂಗಲಾನಿ
ಭವಂತಿ ಶಂಸಂತಿ ಮಹಾವಿಪಶ್ಚಿತಃ ।
ಸೋಽಸೌ ನ ದೃಷ್ಟೋಽತ್ರ ಪುಮಾನ್ಪುರಾಣೋ
ವೃಷಧ್ವಜೋ ನೀಲಗಲಃ ಪರೇಶಃ ॥ ೨೮ ॥

ಅಮಂಗಲಾನ್ಯೇವ ಚ ಮಂಗಲಾನಿ
ಭವಂತಿ ಯೇನಾಧಿಗತಾನಿ ದಕ್ಷಃ ।
ತ್ರಿಪಂಚಕೇನಾಪ್ಯಥ ಮಂಗಲಾನಿ
ಭವಂತಿ ಸದ್ಯಃ ಪರತಃ ಪುರಾಣಿ ॥ ೨೯ ॥

ತಸ್ಮಾತ್ತ್ವಯೈವ ಕರ್ತವ್ಯಮಾಹ್ವಾನಂ ಪರಮೇಶಿತುಃ ।
ತ್ವರಿತಂ ಬ್ರಹ್ಮಣಾ ವಾಪಿ ವಿಷ್ಣುನಾ ಪ್ರಭವಿಷ್ಣುನಾ ॥ ೩೦ ॥

---

೨೭. ಮಹಾನುಭಾವರಾದ ದೇವತೆಗಳು, ಮಹಾತ್ಮರಾದ ಮುನಿಗಳು ಲೋಕಪಾಲಕರು, ಇವರೆಲ್ಲರೂ ಈ ಯಜ್ಞಕ್ಕೆ ಬಂದಿರುವರು. ಆದರೂ ಮಹಾತ್ಮನಾದ ಶಿವನು ಬರದಿದ್ದುದರಿಂದ ಈ ಯಜ್ಞವು ಶೋಭಿಸುತ್ತಲಿಲ್ಲ.

೨೮. ಪರಮಾತ್ಮನಾದ ಆ ಶಿವನಿಂದಲೇ ಸಕಲ ಮಂಗಳಗಳೂ ಆಗುವದೆಂದು ತಿಳಿದವರು ಹೇಳುವರು. ಇಂತಹ ಪುರಾಣ ಪುರುಷನೂ, ನೀಲಕಂಠನೂ. ಪರಮೇಶ್ವರನೂ ಆದ ಶಿವನು ಈ ಯಾಗದಲ್ಲಿ ಕಾಣಿಸುತ್ತಲಿಲ್ಲವಲ್ಲಾ ?

೨೯. ಆ ಶಿವನು ಅನುಗ್ರಹಿಸಿದರೆ ಅಮಂಗಳಗಳೂ ಮಂಗಳಕರವಾಗುವುವು. ತಾಪತ್ರಯಗಳೂ ಮಹಾಪಾತಕಗಳೂ ನಾಶವಾಗುವುವು.

೩೦. ಆದುದರಿಂದ ಎಲೈ ದಕ್ಷನೆ, ನೀನಾಗಲೀ, ಬ್ರಹ್ಮನಾಗಲೀ, ಸಮರ್ಥನಾದ ವಿಷ್ಣುವಾಗಲೀ ಆ ಪರಮೇಶ್ವರನನ್ನು ಕರೆದುಕೊಂಡು ಬರಬೇಕು.

ಇಂದ್ರೇಣ ಲೋಕಪಾಲೈಶ್ಚ ದ್ವಿಜೈಸ್ಸಿದ್ಧೈಸ್ಸಹಾಧುನಾ ।
ಸರ್ವಥಾನಯನೀಯೋऽಸೌ ಶಂಕರೋ ಯಜ್ಞಪೂರ್ತಯೇ ॥ ೩೧ ॥

ಸರ್ವೈರ್ಭವದ್ಭಿರ್ಗಂತವ್ಯಂ ಯತ್ರ ದೇವೋ ಮಹೇಶ್ವರಃ ।
ದಾಕ್ಷಾಯಣ್ಯಾ ಸಮಂ ಶಂಭುಮಾನಯಧ್ವಂ ತ್ವರಾನ್ವಿತಾಃ ॥ ೩೨ ॥

ತೇನ ಸರ್ವಂ ಪವಿತ್ರಂ ಸ್ಯಾಚ್ಛಂಭುನಾ ಪರಮಾತ್ಮನಾ ।
ಅತ್ರಾಗತೇನ ದೇವೇಶಾಃ ಸಾಂಬೇನ ಪರಮಾತ್ಮನಾ ॥ ೩೩ ॥

ಯಸ್ಯ ಸ್ಮೃತ್ವಾ ಚ ನಾಮೋಕ್ತ್ಯಾ ಸಮಗ್ರಂ ಸುಕೃತಂ ಭವೇತ್ ।
ತಸ್ಮಾತ್ಸರ್ವಪ್ರಯತ್ನೇನ ಹ್ಯಾನೇತವ್ಯೋ ವೃಷಧ್ವಜಃ ॥ ೩೪ ॥

ಸಮಾಗತೇ ಶಂಕರೇऽತ್ರ ಪಾವನೋ ಹಿ ಭವೇನ್ಮಖಃ ।
ಭವಿಷ್ಯತ್ಯನ್ಯಥಾऽಪೂರ್ಣಃ ಸತ್ಯಮೇತದ್ಬ್ರವೀಮ್ಯಹಂ ॥ ೩೫ ॥

---

೩೧. ಇಂದ್ರ, ಮತ್ತು ಲೋಕಪಾಲಕರು, ಬ್ರಾಹ್ಮಣರು, ಸಿದ್ಧರು, ಇವರೆಲ್ಲರೂ ಸೇರಿ ಆ ಶಿವನನ್ನು ಕರೆದುಕೊಂಡುಬನ್ನಿರಿ. ಅವನು ಬಂದರೆ ಯಜ್ಞವು ಸಾಂಗವಾಗಿ ನೆರವೇರುವುದು.

೩೨. ನೀವೆಲ್ಲರೂ ಈಗಲೇ ಶಿವನ ಬಳಿಗೆ ತೆರಳಿ ಪರಮೇಶ್ವರನಾದ ಅವನನ್ನು ಸತೀದೇವಿಯೊಡನೆ ಇಲ್ಲಿಗೆ ಕರೆದುಕೊಂಡು ಬನ್ನಿರಿ.

೩೩. ಆ ಪರಮಾತ್ಮನಾದ ಆ ಶಿವನು ಇಲ್ಲಿಗೆ ಬಂದುದಾದರೆ ಇಲ್ಲಿ ನಡೆಯುವ ಕಾರ್ಯವೆಲ್ಲವೂ ಪವಿತ್ರವಾಗುವುದು.

೩೪. ಆ ಶಿವನನ್ನು ಸ್ಮರಿಸಿದರೆ ಅಥವಾ ಅವನ ನಾಮವನ್ನು ಪಠಿಸಿದರೆ ಮಹಾಪುಣ್ಯವು ಲಭಿಸುವುದು. ಆದುದರಿಂದ ಎಲೈ ದೇವತೆಗಳೇ ಆ ಶಂಕರನನ್ನು ಪ್ರಯತ್ನದಿಂದ ಈ ಯಾಗಕ್ಕೆ ಕರೆದುಕೊಂಡು ಬನ್ನಿರಿ.

೩೫. ಆ ಶಂಕರನು ಬಂದರೆ ಈ ಯಾಗವು ಪವಿತ್ರವಾಗುವುದು. ಅವನು ಬರದಿದ್ದರೆ ಈ ಯಾಗವು ಪೂರ್ತಿಯಾಗಲಾರದು. ಇದು ಸತ್ಯವಾದುದು ಎಂದನು.

॥ ಬ್ರಹ್ಮೋವಾಚ ॥

ತಸ್ಯ ತದ್ವಚನಂ ಶ್ರುತ್ವಾ ದಕ್ಷೋ ರೋಷಸಮನ್ವಿತಃ ।
ಉವಾಚ ತ್ವರಿತಂ ಮೂಢಃ ಪ್ರಹಸನ್ನಿವ ದುಷ್ಟಧೀಃ ॥ ೩೬ ॥

ಮೂಲಂ ವಿಷ್ಣುರ್ದೇವತಾನಾಂ ಯತ್ರ ಧರ್ಮಸ್ಸನಾತನಃ ।
ಸಮಾನೀತೋ ಮಯಾ ಸಮ್ಯಕ್ಕಿಮೂನಂ ಯಜ್ಞಕರ್ಮಣಿ ॥ ೩೭ ॥

ಯಸ್ಮಿನ್ವೇದಾಶ್ಚ ಯಜ್ಞಾಶ್ಚ ಕರ್ಮಾಣಿ ವಿವಿಧಾನಿ ಚ ।
ಪ್ರತಿಷ್ಠಿತಾನಿ ಸರ್ವಾಣಿ ಸೋಽಸೌ ವಿಷ್ಣುರಿಹಾಗತಃ ॥ ೩೮ ॥

ಸತ್ಯಲೋಕಾತ್ಸಮಾಯಾತೋ ಬ್ರಹ್ಮಾ ಲೋಕಪಿತಾಮಹಃ ।
ವೇದೈಸ್ಸೋಪನಿಷದ್ಭಿಶ್ಚ ವಿವಿಧೈರಾಗಮೈಸ್ಸಹ ॥ ೩೯ ॥

ತಥಾ ಸುರಗಣೈಸ್ಸಾಕಮಾಗತಸ್ಸುರರಾಟ್ಸ್ವಯಂ ।
ತಥಾ ಯೂಯಂ ಸಮಾಯಾತಾ ಋಷಯೋ ವೀತಕಲ್ಮಷಾಃ ॥ ೪೦ ॥

೩೬. ಬ್ರಹ್ಮನು ಹೇಳಿದನು :—ಹೀಗೆ ದಧೀಚಿಯು ಹೇಳಿದ ಮಾತುಗಳನ್ನು ಕೇಳಿ ಮೂರ್ಖನಾದ ದಕ್ಷನು ಕೋಪಗೊಂಡು ಅಪಹಾಸ್ಯಮಾಡುತ್ತಾ ದಧೀಚಿಮುನಿಯನ್ನು ಕುರಿತು ಹೀಗೆ ಹೇಳಿದನು.

೩೭. ದಕ್ಷನು ಹೇಳಿದನು :—ಎಲೈ ದಧೀಚಿ, ವಿಷ್ಣುವು ದೇವತೆಗಳಿಗೆ ಆದಿ ಕಾರಣನು. ಅವನು ಅನಾದಿಧರ್ಮವನ್ನು ರಕ್ಷಿಸುವವನು. ಇಂತಹ ವಿಷ್ಣುವನ್ನು ನಾನು ಈ ಯಜ್ಞಕ್ಕೆ ಬರಮಾಡಿಕೊಂಡಿರುವೆನು. ಹೀಗಿರಲು ಈ ಯಜ್ಞದಲ್ಲಿ ಇನ್ನಾವ ನ್ಯೂನತೆಯಿರುವುದು ?

೩೮. ಯಾವ ದೇವನಲ್ಲಿ ವೇದಗಳು, ಯಜ್ಞಗಳು, ಮಿಕ್ಕ ಎಲ್ಲಾ ವೈದಿಕ ಲೌಕಿಕಕರ್ಮಗಳು, ಇವೆಲ್ಲವೂ ನೆಲಸಿರುವುವೋ ಅಂತಹ ವಿಷ್ಣುವು ಈ ಯಜ್ಞಕ್ಕೆ ಬಂದಿರುವನು.

೩೯. ಅಲ್ಲದೆ ಸತ್ಯಲೋಕದಿಂದ ಜಗತ್ಪಿತಾಮಹನಾದ ಬ್ರಹ್ಮನೂ ಸಹ ವೇದ ಪುರುಷರುಗಳು, ಉಪನಿಷತ್ತುಗಳು, ಆಗಮಗಳು, ಇವುಗಳೊಡನೆ ಇಲ್ಲಿಗೆ ಬಂದಿರುವನು.

೪೦. ಆದಲ್ಲದೆ ದೇವೇಂದ್ರನೂ ಸಹ ದೇವಗಣಗಳೊಡನೆ ಬಂದಿರುವನು. ಮತ್ತು ಪವಿತ್ರ ತಪೋಧನರಾದ ನೀವೆಲ್ಲರೂ ಋಷಿಗಳು ಬಂದಿರುವಿರಿ.

ಯೇ ಯೇ ಯಜ್ಞೋಚಿತಾಶ್ಯಾಂತಾಃ ಪಾತ್ರಭೂತಾಸ್ಸಮಾಗತಾಃ ।
ವೇದವೇದಾರ್ಥತತ್ತ್ವಜ್ಞಾಸ್ಸರ್ವೇ ಯೂಯಂ ದೃಢವ್ರತಾಃ ॥ ೪೧ ॥

ಅತ್ರೈವ ಚ ಕಿಮಸ್ಮಾಕಂ ರುದ್ರೇಣಾಪಿ ಪ್ರಯೋಜನಂ ।
ಕನ್ಯಾ ದತ್ತಾ ಮಯಾ ವಿಪ್ರ ಬ್ರಹ್ಮಣಾ ನೋದಿತೇನ ಹಿ ॥ ೪೨ ॥

ಹರೋಽಕುಲೀನೋಽಸೌ ವಿಪ್ರ ಪಿತೃಮಾತೃವಿವರ್ಜಿತಃ ।
ಭೂತಪ್ರೇತಪಿಶಾಚಾನಾಂ ಪತಿರೇಕೋ ದುರತ್ಯಯಃ ॥ ೪೩ ॥

ಆತ್ಮಸಂಭಾವಿತೋ ಮೂಢಸ್ತಬ್ಧೋ ಮೌನೀ ಸಮತ್ಸರಃ ।
ಕರ್ಮಣ್ಯಸ್ಮಿನ್ನ ಯೋಗ್ಯೋಽಸೌ ನಾನೀತೋ ಹಿ ಮಯಾಽಧುನಾ ॥೪೪॥

ತಸ್ಮಾತ್ತ್ವಮೀದೃಶಂ ವಾಕ್ಯಂ ಪುನರ್ವಾಚ್ಯಂ ನ ಹಿ ಕ್ವಚಿತ್ ।
ಸರ್ವೈರ್ಭವದ್ಭಿಃ ಕರ್ತವ್ಯೋ ಯಜ್ಞೋ ಮೇ ಸಫಲೋ ಮಹಾನ್ ॥ ೪೫ ॥

---

೪೧. ನೀವೆಲ್ಲರೂ ವೇದವೇದಾಂಗಗಳ ರಹಸ್ಯಗಳನ್ನು ಬಲ್ಲವರು. ತಪೋನಿಷ್ಠರು, ಜಿತೇಂದ್ರಿಯರು, ಶಾಂತರು ಮತ್ತು ಇಂತಹ ಯಜ್ಞಗಳಿಗೆ ಯೋಗ್ಯರಾದವರು. ಇಂತಹ ನೀವು ಬಂದಿರುವಿರಿ.

೪೨. ಇಂತಹ ಈ ಯಜ್ಞದಲ್ಲಿ ಆ ರುದ್ರನಿಂದ ಆಗಬೇಕಾದ ಪ್ರಯೋಜನವೇನು? ಆ ರುದ್ರನಿಗೆ ಬ್ರಹ್ಮನಮಾತಿನಂತೆ ನನ್ನ ಪುತ್ರಿಯನ್ನು ಮದುವೆಮಾಡಿ ಕೊಟ್ಟೆನು. ಇಲ್ಲದಿದ್ದರೆ ಕೊಡುತ್ತಿರಲಿಲ್ಲ.

೪೩-೪೪. ಆ ರುದ್ರನು ಕುಲಗೋತ್ರಗಳಿಲ್ಲದವನು. ಅವನಿಗೆ ತಂದೆತಾಯಿಗಳಿಲ್ಲ. ಭೂತ ಮತ್ತು ಪ್ರೇತಗಳಿಗೆ ಅವನು ಒಡೆಯನು, ದುರಹಂಕಾರಿಯು, ಮೂಢನು, ಗರ್ವಿಷ್ಠನು, ಅಸೂಯಾಪರನು. ಇಂತಹವನು ಯಜ್ಞಕ್ಕೆ ಯೋಗ್ಯನಲ್ಲ. ಆದಕಾರಣವೇ ಆ ಶಿವನನ್ನು ನಾನು ಯಜ್ಞಕ್ಕೆ ಆಹ್ವಾನಿಸಿಲ್ಲ.

೪೫. ಆದುದರಿಂದ ಎಲೈ ದಧೀಚಿಮುನಿ, ತಿರುಗಿ ನೀನು ಇಂತಹ ಮಾತುಗಳನ್ನಾಡಲಾಗದು. ನೀವೆಲ್ಲರೂ ಸೇರಿ ಶ್ರದ್ಧೆಯಿಂದ ಈ ಯಜ್ಞವನ್ನು ಸಫಲವಾಗುವಂತೆ ನಿರ್ವಹಿಸಿ ಕಾರ್ಯೋನ್ಮುಖರಾಗಿರಿ ಎಂದನು.

॥ ಬ್ರಹ್ಮೋವಾಚ ॥

ಏತಚ್ಛ್ರುತ್ವಾ ವಚಸ್ತಸ್ಯ ದಧೀಚೋ ವಾಕ್ಯಮಬ್ರವೀತ್ ।
ಸರ್ವೇಷಾಂ ಶೃಣ್ವತಾಂ ದೇವಮುನೀನಾಂ ಸಾರಸಂಯುತಂ ॥ ೪೬ ॥

॥ ದಧೀಚ ಉವಾಚ ॥

ಅಯಜ್ಞೋಽಯಂ ಮಹಾಜಾತೋ ವಿನಾ ತೇನ ಶಿವೇನ ಹಿ ।
ವಿನಾಶೋಽಪಿ ವಿಶೇಷೇಣ ಹ್ಯತ್ರ ತೇ ಹಿ ಭವಿಷ್ಯತಿ ॥ ೪೭ ॥

ಏವಮುಕ್ತ್ವಾ ದಧೀಚೋಽಸಾವೇಕ ಏವ ವಿನಿರ್ಗತಃ ।
ಯಜ್ಞವಾಟಾಚ್ಚ ದಕ್ಷಸ್ಯ ತ್ವರಿತಃ ಸ್ವಾಶ್ರಮಂ ಯಯೌ ॥ ೪೮ ॥

ತತೋಽನ್ಯೇ ಶಾಂಕರಾ ಯೇ ಚ ಮುಖ್ಯಾಶ್ಶಿವಮತಾನುಗಾಃ ।
ನಿರ್ಯಯುಸ್ಸ್ವಾಶ್ರಮಾನ್ಸದ್ಯಶ್ಶಾಪಂ ದತ್ವಾ ತಥೈವ ಚ ॥ ೪೯ ॥

ಮುನೌ ವಿನಿರ್ಗತೇ ತಸ್ಮಿನ್ಮಖಾದನ್ಯೇಷು ದುಷ್ಟಧೀಃ ।
ಶಿವದ್ರೋಹೀ ಮುನೀನ್ದಕ್ಷಃ ಪ್ರಹಸನ್ನಿದಮಬ್ರವೀತ್ ॥ ೫೦ ॥

---

೪೬. ಬ್ರಹ್ಮನು ಹೇಳಿದನು :—ಹೀಗೆ ದಕ್ಷನು ಹೇಳಲು ದಧೀಚಿಮುನಿಯು ತಿರುಗಿ ಅಲ್ಲಿ ಸೇರಿರುವ ದೇವತೆಗಳು ಮತ್ತು ಮುನಿಗಳೆದುರಿನಲ್ಲಿ ಸಾರಯುತವಾದ ಮಾತನ್ನು ಹೇಳಿದನು.

೪೭-೪೮. ದಧೀಚಿಮುನಿಯು ಹೇಳಿದನು :—ಎಲೈ ದಕ್ಷನೇ, ಶಿವನು ಇಲ್ಲದ ಈ ಯಜ್ಞವು ಯಜ್ಞವಲ್ಲ ಇಲ್ಲಿ ನಿನಗೆ ತುಂಬಾ ತೊಂದರೆ ಯಾಗುವುದು ಎಂದು ಹೇಳಿ ದಧೀಚಿಮುನಿಯು ಆಗ ಆ ಯಜ್ಞಶಾಲೆಯಿಂದ ಹೊರಟು ತನ್ನ ಆಶ್ರಮಕ್ಕೆ ತೆರಳಿದನು.

೪೯. ಆಮೇಲೆ ಮಿಕ್ಕ ಶಿವಭಕ್ತರಾದ ತಪಸ್ವಿಗಳೆಲ್ಲರೂ ಸಹ ದಕ್ಷನಿಗೆ ಶಾಪವನ್ನು ಕೊಟ್ಟು ತಮ್ಮ ಆಶ್ರಮಗಳಿಗೆ ಆಕೂಡಲೇ ಹೊರಟುಹೋದರು.

೫೦. ಹೀಗೆ ದಧೀಚಿಮುನಿಯೂ ಮಿಕ್ಕ ಶಿವಭಕ್ತಮುನಿಗಳೂ ಸಹ ಯಜ್ಞಶಾಲೆಯಿಂದ ಹೊರಟುಹೋಗಲು ಶಿವದ್ರೋಹಿಯಾದ ದಕ್ಷನು ಮಿಕ್ಕ ಅಲ್ಲಿರುವ ಮುನಿಗಳನ್ನು ಕುರಿತು ಹೀಗೆ ಹೇಳಿದನು.

॥ ದಕ್ಷ ಉವಾಚ ॥

ಗತಃ ಶಿವಪ್ರಿಯೋ ವಿಪ್ರೋ ದಧೀಚೋ ನಾಮ ನಾಮತಃ ।
ಅನ್ಯೇ ತಥಾವಿಧಾ ಯೇ ಚ ಗತಾಸ್ತೇ ಮಮ ಚಾಧ್ವರಾತ್ ॥ ೫೧ ॥

ಏತಚ್ಛುಭತರಂ ಜಾತಂ ಸಂಮತಂ ಮೇ ಹಿ ಸರ್ವದಾ ।
ಸತ್ಯಂ ಬ್ರವೀಮಿ ದೇವೇಶ ಸುರಾಶ್ಚ ಮುನಯಸ್ತಥಾ ॥ ೫೨ ॥

ವಿನಷ್ಟಚಿತ್ತಾ ಮಂದಾಶ್ಚ ಮಿಥ್ಯಾವಾದರತಾಃ ಖಲಾಃ ।
ವೇದಬಾಹ್ಯಾ ದುರಾಚಾರಾಸ್ತ್ಯಾಜ್ಯಾಸ್ತೇ ಮಖಕರ್ಮಣಿ ॥ ೫೩ ॥

ವೇದವಾದರತಾ ಯೂಯಂ ಸರ್ವೇ ವಿಷ್ಣುಪುರೋಗಮಾಃ ।
ಯಜ್ಞಂ ಮೇ ಸಫಲಂ ವಿಪ್ರಾಸ್ಸುರಾಃ ಕುರ್ವಂತು ಮಾ ಚಿರಂ ॥ ೫೪ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ಶಿವಮಾಯಾವಿಮೋಹಿತಾಃ ।
ಯನ್ಮಖೇ ದೇವಯಜನಂ ಚಕ್ರುಸ್ಸರ್ವೇ ಸುರರ್ಷಯಃ ॥ ೫೫ ॥

---

೫೧. ಎಲೈ ಮುನಿಗಳೇ, ಶಿವಭಕ್ತನಾದ ದಧೀಚಿಮುನಿಯು ಹೊರಟು ಹೋದನು. ಅವನಂತೆ ಮಿಕ್ಕ ಶಿವಭಕ್ತಮುನಿಗಳೂ ಹೊರಟುಹೋದರು. ಇದು ಒಳ್ಳೆಯದೇ ಆಯಿತು. ನನಗಿಷ್ಟವಾದುದೇ ಆಗಿರುವುದು.

೫೨-೫೩. ದೇವೇಂದ್ರ ಮತ್ತು ದೇವತೆಗಳು- ಮುನಿಗಳು, ಎಲ್ಲರೂ ಕೇಳಿರಿ. ನಾನು ಸತ್ಯವಾದುದನ್ನು ಹೇಳುತ್ತಿರುವೆನು. ದುರಹಂಕಾರಿಗಳೂ, ಮೂಢರೂ ಇಲ್ಲದಿದ್ದುದನ್ನು ಹೇಳುವವರೂ, ದುರಾಚಾರಿಗಳೂ, ಆದಂತಹವರನ್ನು ತ್ಯಜಿಸಬೇಕು, ಅವರು ಯಜ್ಞಕ್ಕೆ ಯೋಗ್ಯರಲ್ಲ.

೫೪. ಎಲೈ ತಪೋಧನರೆ, ನೀವೆಲ್ಲರೂ ವಿಷ್ಣುಭಕ್ತರಾಗಿದ್ದು ವೇದವಿದ್ವಾಂಸರಾಗಿರುವಿರಿ. ಇಂತಹ ನೀವುಗಳೂ, ದೇವತೆಗಳೂ ಸೇರಿ ನನ್ನ ಯಜ್ಞವು ಸಫಲವಾಗುವಂತೆ ಮಾಡುವವರಾಗಿರಿ.

೫೫. ಬ್ರಹ್ಮನು ಹೇಳಿದನು :—ಹೀಗೆ ದಕ್ಷನು ಹೇಳಿದುದನ್ನು ಕೇಳಿ ದೇವಮುನಿಗಳು ಶಿವಮಾಯೆಯಿಂದ ಮೂಢರಾಗಿ ಆ ಯಜ್ಞವನ್ನು ಪ್ರಾರಂಭಿಸಿದರು.

**ಇತಿ ತನ್ಮಖಶಾಪೋ ಹಿ ವರ್ಣಿತೋ ಮೇ ಮುನೀಶ್ವರ ।**
**ಯಜ್ಞವಿಧ್ವಂಸಯೋಗೋಽಪಿ ಪ್ರೋಚ್ಯತೇ ಶೃಣು ಸಾದರಂ ॥ ೫೬ ॥**

**ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ದ್ವಿತೀಯೇ ಸತೀಖಂಡೇ ಯಜ್ಞಪ್ರಾರಂಭೋನಾಮ ಸಪ್ತವಿಂಶೋಽಧ್ಯಾಯಃ**



---

೫೬. ಎಲೈ ನಾರದಮುನಿ, ಹೀಗೆ ದಕ್ಷಯಜ್ಞಕ್ಕೆ ಬಂದ ಶಾಪವನ್ನು ನಿನಗೆ ವರ್ಣಿಸಿ ಹೇಳಿರುವೆನು. ಮುಂದೆ ಆ ಯಜ್ಞವು ಧ್ವಂಸವಾದ ವಿವರವನ್ನು ಹೇಳುವೆನು ಆದರದಿಂದ ಕೇಳು ಎಂದನು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಅಷ್ಟವಿಂಶೋಽಧ್ಯಾಯಃ

॥ ಬ್ರಹ್ಮೋವಾಚ ॥

ಯದಾ ಯಯುರ್ದಕ್ಷಮಖಮುತ್ಸವೇನ ಸುರರ್ಷಯಃ ।
ತಸ್ಮಿನ್ನೇವಾಂತರಂ ದೇವ್ಯೋ ಪರ್ವತೇ ಗಂಧಮಾದನೇ ॥ ೧ ॥

ಧಾರಾಗೃಹೇ ವಿತಾನೇನ ಸಖೀಭಿಃ ಪರಿವಾರಿತಾ ।
ದಾಕ್ಷಾಯಣೀ ಮಹಾಕ್ರೀಡಾಶ್ಚಕಾರ ವಿವಿಧಾಸ್ಸತೀ ॥ ೨ ॥

ಕ್ರೀಡಾಸಕ್ತಾ ತದಾ ದೇವೀ ದದರ್ಶಾಥ ಮುದಾ ಸತೀ ।
ದಕ್ಷಯಜ್ಞೇ ಪ್ರಯಾಂತಂ ಚ ರೋಹಿಣ್ಯಾಪೃಚ್ಛ್ಯ ಸತ್ವರಂ ॥ ೩ ॥

---

### ಇಪ್ಪತ್ತೆಂಟನೆಯ ಅಧ್ಯಾಯವು.

೧-೨. ಬ್ರಹ್ಮನು ಹೇಳಿದನು :—ಎಲೈ ನಾರದ, ಹೀಗೆ ದಕ್ಷಯಜ್ಞಕ್ಕೆ ದೇವತೆಗಳು ಮತ್ತು ದೇವಮುನಿಗಳು ಬರುತ್ತಿರುವಾಗ ಸತೀದೇವಿಯು ಗಂಧಮಾದನ ಪರ್ವತದಲ್ಲಿ ಧಾರಾಗೃಹವೆಂಬ ಜಲವಿಹಾರಗೃಹವಲ್ಲಿ ಸಖಿಯರೊಡನೆ ಕೂಡಿ ವಿತಾನಾದಿಗಳಿಂದ ಜಲಕೇಳೀವಿನೋದದಲ್ಲಿ ಮಗ್ನಳಾಗಿದ್ದಳು.

೩. ಹೀಗೆ ಸತಿಯು ಕ್ರೀಡಿಸುತ್ತಿರುವಾಗ ಚಂದ್ರನು ರೋಹಿಣಿಯ ಅನುಮತಿಯನ್ನು ಪಡೆದು ದಕ್ಷಯಜ್ಞಕ್ಕೆ ತ್ವರೆಯಿಂದ ಹೊರಟನು.

ದೃಷ್ಟ್ವಾ ಸೀಮಂತಯಾ ಭೂತಾಂ ವಿಜಯಾಂ ಪ್ರಾಹ ಸಾ ಸತೀ ।
ಸ್ವಸಖೀಂ ಪ್ರವರಾಂ ಪ್ರಾಣಪ್ರಿಯಾಂ ಸಾ ಹಿ ಹಿತಾವಹಾಂ ॥ ೪ ॥

॥ ಸತ್ಯುವಾಚ ॥

ಹೇ ಸಖೀಪ್ರವರೇ ಪ್ರಾಣಪ್ರಿಯೇ ತ್ವಂ ವಿಜಯೇ ಮಮ ।
ಕ್ವ ಗಮಿಷ್ಯತಿ ಚಂದ್ರೋಽಯಂ ರೋಹಿಣ್ಯಾಪೃಚ್ಛ್ಯ ಸತ್ವರಂ ॥ ೫ ॥

॥ ಬ್ರಹ್ಮೋವಾಚ ॥

ತಥೋಕ್ತಾ ವಿಜಯಾ ಸತ್ಯಾ ಗತ್ವಾ ತತ್ಸನ್ನಿಧೌ ದ್ರುತಂ ।
ಕ್ವ ಗಚ್ಛಸೀತಿ ಪಪ್ರಚ್ಛ ಶಶಿನಂ ತಂ ಯಥೋಚಿತಂ ॥ ೬ ॥

ವಿಜಯೋಕ್ತಮಥಾಕರ್ಣ್ಯ ಸ್ವಯಾತ್ರಾಂ ಪೂರ್ವಮಾದರಾತ್ ।
ಕಥಿತಂ ತೇನ ತತ್ಸರ್ವಂ ದಕ್ಷಯಜ್ಞೋತ್ಸವಾದಿಕಂ ॥ ೭ ॥

ತಚ್ಛ್ರುತ್ವಾ ವಿಜಯಾ ದೇವೀಂ ತ್ವರಿತಾ ಜಾತಸಂಭ್ರಮಾ ।
ಕಥಯಾಮಾಸ ತತ್ಸರ್ವಂ ಯದುಕ್ತಂ ಶಶಿನಾ ಸತೀಂ ॥ ೮ ॥

---

೪. ಸತೀದೇವಿಯು ತನ್ನ ಶಿಸ್ಸನಲ್ಲಿರುವ ಚಂದ್ರನು ತ್ವರೆಯಿಂದ ಹೊರಟು ದನ್ನು ನೋಡಿ ತನಗೆ ಪ್ರಾಣಪ್ರಿಯಳೂ ಸಖಿಯರಲ್ಲಿ ಉತ್ತಮಳೂ ಆದಂತಹ ವಿಜಯೆ ಯನ್ನು ಕುರಿತು,

೫. ಸತೀದೇವಿಯು ಹೇಳಿದಳು :—ಎಲೌ ವಿಜಯೇ, ನೀನು ಸಖಿಯರಲ್ಲಿ ಉತ್ತಮಳಾಗಿರುವೆ ಅಲ್ಲದೆ ನನಗೆ ಪ್ರಾಣಪ್ರಿಯಳಾಗಿರುವೆ. ಈಗ ರೋಹಿಣಿಯಿಂದ ಬೀಳ್ಕೊಂಡ ಈ ಚಂದ್ರನು ಎಲ್ಲಿಗೆ ಹೋಗುತ್ತಲಿರುವನು, ಹೇಳು ಎಂದು ಕೇಳಿದಳು.

೬-೭. ಬ್ರಹ್ಮನು ಹೇಳಿದನು ;-ಹೀಗೆ ಸತೀದೇವಿಯು ಕೇಳಲು, ವಿಜಯೆಯು ಆ ಕೂಡಲೇ ಚಂದ್ರನಬಳಿಗೆ ಹೋಗಿ ಅವನನ್ನು ಉಚಿತರೀತಿಯಿಂದ ಮಾತನಾಡಿಸಿ, ಇಷ್ಟು ತ್ವರೆಯಿಂದ ಎಲ್ಲಿಗೆ ಹೊರಟಿರುವೆ ? ಅಂತಹ ಅವಶ್ಯಕವಾದ ಕೆಲಸವಾವುದು ? ಎಂದು ಕೇಳಲು ವಿಜಯೆಯ ಮಾತನ್ನು ಕೇಳಿ ಚಂದ್ರನು ತಾನು ದಕ್ಷಯಜ್ಞಕ್ಕೆ ಹೋಗುತ್ತಲಿರುವೆನೆಂದು ಅಲ್ಲಿ ನಡೆಯುವ ಉತ್ಸವಾದಿಗಳನ್ನು ವಿವರಿಸಿದನು.

೮. ಚಂದ್ರನು ಹೇಳಿದುದನ್ನು ಕೇಳಿ ವಿಜಯೆಯು ಆಶ್ಚರ್ಯಗೊಂಡು ಆ ಕೂಡಲೇ ಸತೀದೇವಿಯ ಬಳಿಗೆ ಬಂದು ಚಂದ್ರನು ಹೇಳಿದುದೆಲ್ಲವನ್ನೂ ಅವಳಿಗೆ ಯಥಾವತ್ತಾಗಿ ಹೇಳಿದಳು.

ತಚ್ಛ್ರುತ್ವಾ ಕಾಲಿಕಾ ದೇವೀ ವಿಸ್ಮಿತಾಭೂತ್ಸತೀ ತದಾ ।
ವಿಮೃಶ್ಯ ಕಾರಣಂ ತತ್ರಾಜ್ಞಾತ್ವಾ ಚೇತಸ್ಯಚಿಂತಯತ್ ॥ ೯ ॥

ದಕ್ಷಃ ಪಿತಾ ಮೇ ಮಾತಾ ಚ ವೀರಿಣೀ ನೌ ಕುತಸ್ಸತೀ ।
ಆಹ್ವಾನಂ ನ ಕರೋತಿ ಸ್ಮ ವಿಸ್ಮೃತಾ ಮಾಂ ಪ್ರಿಯಾಂ ಸುತಾಂ ॥ ೧೦ ॥

ಪೃಚ್ಛೇಯಂ ಶಂಕರಂ ತತ್ರ ಕಾರಣಂ ಸರ್ವಮಾದರಾತ್ ।
ಚಿಂತಯಿತ್ವೇತಿ ಸಾಸೀದ್ವೈ ತತ್ರ ಗಂತುಂ ಸುನಿಶ್ಚಯಾ ॥ ೧೧ ॥

ಅಥ ದಾಕ್ಷಾಯಣೀ ದೇವೀ ವಿಜಯಾಂ ಪ್ರವರಾಂ ಸಖೀಂ ।
ಸ್ಥಾಪಯಿತ್ವಾ ದ್ರುತಂ ತತ್ರ ಸಮಗಚ್ಛಚ್ಛಿವಾಂತಿಕಂ ॥ ೧೨ ॥

ದದರ್ಶ ತಂ ಸಭಾಮಧ್ಯೇ ಸಂಸ್ಥಿತಂ ಬಹುಭಿರ್ಗಣೈಃ ।
ನಂದ್ಯಾದಿಭಿರ್ಮಹಾವೀರೈಃ ಪ್ರವರೈರ್ಯೂಥಯೂಥಪೈಃ ॥ ೧೩ ॥

ದೃಷ್ಟ್ವಾ ತಂ ಪ್ರಭುಮೀಶಾನಂ ಸ್ವಪತಿಂ ಸಾಥ ದಕ್ಷಜಾ ।
ಪ್ರಷ್ಟುಂ ತತ್ಕಾರಣಂ ಶೀಘ್ರಂ ಪ್ರಾಪ ಶಂಕರಸನ್ನಿಧಿಂ ॥ ೧೪ ॥

---

೯. ಅವನ್ನು ಕೇಳಿ ಸತೀದೇವಿಯು ತುಂಬಾ ಆಶ್ಚರ್ಯಗೊಂಡಳು. ಅವರ ಕಾರಣವು ಆವಳಿಗೆ ತಿಳಿಯದೆ ಹೀಗೆ ತುಂಬಾ ಯೋಚಿಸಿದಳು.

೧೦. ದಕ್ಷನು ನನ್ನ ತಂದೆಯು. ಪತಿವ್ರತೆಯಾದ ವೀರಿಣಿಯು ನನ್ನ ತಾಯಿಯು. ಅವರೀರ್ವರಿಗೆ ನಾನು ಪ್ರಿಯಳಾದ ಸುತೆಯು. ಹೀಗಿರಲು ನನ್ನ ತಂದೆತಾಯಿಗಳು ನನ್ನನ್ನು ಯಜ್ಞಕ್ಕೆ ಏಕೆ ಕರೆಯಲಿಲ್ಲ?

೧೧-೧೨. ಇವರ ಕಾರಣವೇನೆಂದು ಶಂಕರನನ್ನು ಪ್ರಶ್ನಿಸುವೆನು. ಹೀಗೆಂದು ಆಲೋಚಿಸಿ ಸತೀದೇವಿಯು ಶಿವನಬಳಿಗೆ ಹೋಗಲು ನಿಶ್ಚಯಿಸಿ, ತನ್ನ ಸಖಿಯಾದ ವಿಜಯೆಯನ್ನು ಅಲ್ಲಿರಿಸಿ ಕೂಡಲೇ ಶಿವನಬಳಿಗೆ ತೆರಳಿದಳು.

೧೩. ಆಗ ಶಿವನು ಮಹಾವೀರರೂ ಶ್ರೇಷ್ಠರೂ ಆದಂತಹ ನಂದಿಯೇ ಮೊದಲಾದ ಗಣಗಳ ಮಧ್ಯದಲ್ಲಿ ಕುಳಿತು ವಿರಾಜಿಸುತ್ತಲಿದ್ದನು.

೧೪-೧೫. ತನ್ನ ಪತಿಯಾದ ಶಿವನನ್ನು ನೋಡಿ ದಾಕ್ಷಾಯಣಿಯು ದಕ್ಷನು ಯಜ್ಞಕ್ಕೆ ತಮ್ಮನ್ನಾಹ್ವಾನಿಸದಿರುವ ಕಾರಣವನ್ನು ಕೇಳಲಿಚ್ಛೆಯಿಂದ ಅವನಬಳಿಗೆ

ಶಿವೇನ ಸ್ಥಾಪಿತಾ ಸ್ವಾಂಕೇ ಪ್ರೀತಿಯುಕ್ತೇನ ಸ್ವಪ್ರಿಯಾ ।
ಪ್ರಮೋದಿತಾ ವಚೋಭಿಸ್ಸಾ ಬಹುಮಾನಪುರಸ್ಸರಂ ॥ ೧೫ ॥

ಅಥ ಶಂಭುರ್ಮಹಾಲೀಲಸ್ಸರ್ವೇಶಸ್ಸುಖದಸ್ಸತಾಂ ।
ಸತೀಮುವಾಚ ತ್ವರಿತಂ ಗಣಮಧ್ಯಸ್ಥ ಆದರಾತ್ ॥ ೧೬ ॥

॥ ಶಂಭುರುವಾಚ ॥
ಕಿಮರ್ಥಮಾಗತಾತ್ರ ತ್ವಂ ಸಭಾಮಧ್ಯೇ ಸುವಿಸ್ಮಯಾ ।
ಕಾರಣಂ ತಸ್ಯ ಸುಪ್ರೀತ್ಯಾ ಶೀಘ್ರಂ ವದ ಸುಮಧ್ಯಮೇ ॥ ೧೭ ॥

॥ ಬ್ರಹ್ಮೋವಾಚ ॥
ಏವಮುಕ್ತಾ ತದಾ ತೇನ ಮಹೇಶೇನ ಮುನೀಶ್ವರ ।
ಸಾಂಜಲಿಸ್ಸುಪ್ರಣಮ್ಯಾಶು ಸತ್ಯುವಾಚ ಪ್ರಭುಂ ಶಿವಾ ॥ ೧೮ ॥

॥ ಸತ್ಯುವಾಚ ॥
ಪಿತುರ್ಮಮ ಮಹಾನ್ಯಜ್ಞೋ ಭವತೀತಿ ಮಯಾ ಶ್ರುತಂ ।
ತತ್ರೋತ್ಸವೋ ಮಹಾನಸ್ತಿ ಸಮವೇತಾಸ್ಸುರರ್ಷಯಃ ॥ ೧೯ ॥

---

ಹೋಗಲು ಆಗ ಶಿವನು ಸತೀದೇವಿಯನ್ನು ಪ್ರೀತಿಯಿಂದ ಕರೆದುಕೊಂಡು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡನು ಮತ್ತು ಮಧುರವಾದ ಮಾತುಗಳಿಂದ ಅವಳನ್ನು ಗೌರವಿಸಿದನು.

೧೬. ಬಳಿಕ ಮಹಾಲೀಲಾಮಯನೂ, ಪರಮೇಶ್ವರನೂ, ಸತ್ಪುರುಷರಿಗೆ ಸುಖವನ್ನು ಕೊಡುವವನೂ ಆದಂತಹ ಶಿವನು ಸತೀದೇವಿಯನ್ನು ಕುರಿತು,

೧೭. ಶಂಕರನು ಹೇಳಿದನು:—ಎಲೌ ಸತೀದೇವಿ, ಅಕಸ್ಮಾತ್ತಾಗಿ ನೀನು ಈ ಸಭಾಮಧ್ಯಕ್ಕೆ ಬರಲು ಕಾರಣವೇನು? ಅಂತಹ ಮಹತ್ತ್ವವಿಚಾರವೇನಾದರೂ ಇದ್ದರೆ ಜಾಗ್ರತೆಯಿಂದ ಹೇಳು ಎಂದನು.

೧೮. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ಪರಮೇಶ್ವರನು ಪ್ರಶ್ನಿಸಲು, ಸತೀದೇವಿಯು ಅವನನ್ನು ನಮಸ್ಕರಿಸಿ ಅಂಜಲಿಯನ್ನು ಧರಿಸಿ,

೧೯. ಸತೀದೇವಿಯು ಹೇಳಿದಳು ;-ಓ ಸ್ವಾಮಿ, ನನ್ನ ತಂದೆಯಾದ ದಕ್ಷನು

**ಪಿತುರ್ಮಮ ಮಹಾಯಜ್ಞೇ ಕಸ್ಮಾತ್ತತ್ರ ನ ರೋಚತೇ ।**
**ಗಮನಂ ದೇವದೇವೇಶ ತತ್ಸರ್ವಂ ಕಥಯ ಪ್ರಭೋ ॥ ೨೦ ॥**

**ಸುಹೃದಾಮೇಷ ವೈ ಧರ್ಮಸ್ಸುಹೃದ್ಭಿಸ್ಸಹ ಸಂಗತಿಃ ।**
**ಕುರ್ವಂತಿ ಯನ್ಮಹಾದೇವ ಸುಹೃದಃ ಪ್ರೀತಿವರ್ಧಿನೀಂ ॥ ೨೧ ॥**

**ತಸ್ಮಾತ್ಸರ್ವಪ್ರಯತ್ನೇನ ಮಯಾ ಗಚ್ಛ ಸಹ ಪ್ರಭೋ ।**
**ಯಜ್ಞವಾಟಂ ಪಿತುರ್ಮೇಽದ್ಯ ಸ್ವಾಮಿನ್ಪ್ರಾರ್ಥನಯಾ ಮಮ ॥ ೨೨ ॥**

**॥ ಬ್ರಹ್ಮೋವಾಚ ॥**

**ತಸ್ಯಾಸ್ತದ್ವಚನಂ ಶ್ರುತ್ವಾ ಸತ್ಯಾ ದೇವೋ ಮಹೇಶ್ವರಃ ।**
**ದಕ್ಷವಾಗಿಷುಹೃದ್ವಿದ್ಧೋ ಬಭಾಷೇ ಸೂನೃತಂ ವಚಃ ॥ ೨೩ ॥**

---

ದೊಡ್ಡ ಯಜ್ಞವೊಂದನ್ನು ಮಾಡುವನೆಂದು ಕೇಳಿದೆನು. ಅಲ್ಲಿ ಮಹತ್ತಾದ ಉತ್ಸವವು ನಡೆಯುವುದು. ದೇವತೆಗಳು ಮತ್ತು ಮುನಿಗಳೆಲ್ಲರೂ ಅಲ್ಲಿ ಸೇರಿರುವರು.

೨೦. ದೇವದೇವನಾದ ನೀನು ನನ್ನ ತಂದೆಯು ಮಾಡುವ ಯಜ್ಞಕ್ಕೆ ಹೋಗದಿರಲು ಕಾರಣವೇನು ? ನನಗೆ ಎಲ್ಲವನ್ನೂ ಹೇಳು.

೨೧. ಉತ್ಸವಾದಿ ಸಂತೋಷಕಾಲಗಳಲ್ಲಿ ನಮಗೆ ಪ್ರಿಯರಾದ ಬಂಧುಗಳೊಡನೆ ಸೇರುವುದು ಲೋಕಧರ್ಮವಷ್ಟೆ. ಅವರು ತಮ್ಮ ಪ್ರಿಯಬಂಧುಗಳಿಗೆ ಪ್ರೀತಿಯಾಗುವಂತಹ ಕಾರ್ಯವನ್ನೇ ಮಾಡುವರು.

೨೨. ಆದುದರಿಂದ ಓ ಶಂಕರ, ನನ್ನೊಡನೆ ನೀನೂ ಆ ದಕ್ಷಯಜ್ಞಕ್ಕೆ ಹೊರಡಬೇಕು. ನನ್ನ ಈ ಪ್ರಾರ್ಥನೆಯನ್ನು ಮನ್ನಿಸು ಎಂದಳು.

೨೩. ಬ್ರಹ್ಮನು ಹೇಳಿದನು ;—ಎಲೈ ನಾರದನೇ, ಸತಿಯು ಹೇಳಿದ ಮಾತನ್ನು ಕೇಳಿದಕೂಡಲೇ ಹಿಂದೆ ದಕ್ಷನು ಆಡಿದ ಶಲ್ಯಘಾತದಂತೆ ಮರ್ಮವಿದ್ಧವಾದ ಮಾತುಗಳು ಶಂಕರನಿಗೆ ಜ್ಞಾಪಕಕ್ಕೆ ಬಂದು ಅದರಿಂದ ವ್ಯಾಕುಲಚಿತ್ತನಾಗಿ ಆ ಸತಿಯನ್ನು ಕುರಿತು,

॥ ಮಹೇಶ ಉವಾಚ ॥

ದಕ್ಷಸ್ತವ ಪಿತಾ ದೇವಿ ಮಮ ದ್ರೋಹೀ ವಿಶೇಷತಃ ॥ ೨೪ ॥

ಯಸ್ಯ ಯೇ ಮಾನಿನಸ್ಸರ್ವೇ ಸಸುರರ್ಷಿಮುಖಾಃ ಪರೇ ।
ತೇ ಮೂಢಾ ಯಜನಂ ಪ್ರಾಪ್ತಾಃ ಪಿತುಸ್ತೇ ಜ್ಞಾನವರ್ಜಿತಾಃ ॥ ೨೫ ॥

ಅನಾಹೂತಾಶ್ಚ ಯೇ ದೇವಿ ಗಚ್ಛಂತಿ ಪರಮಂದಿರಂ ।
ಅವಮಾನಂ ಪ್ರಾಪ್ನುವಂತಿ ಮರಣಾದಧಿಕಂ ತಥಾ ॥ ೨೬ ॥

ಪರಾಲಯಂ ಗತೋಽಪೀಂದ್ರೋ ಲಘುರ್ಭವತಿ ತದ್ವಿಧಃ ।
ಕಾ ಕಥಾ ಚ ಪರೇಷಾಂ ವೈ ರೀಢಾ ಯಾತ್ರಾ ಹಿ ತದ್ವಿಧಾ ॥ ೨೭ ॥

ಯಸ್ಮಾತ್ತ್ವಯಾ ಮಯಾ ಚಾಪಿ ದಕ್ಷಸ್ಯ ಯಜನಂ ಪ್ರತಿ ।
ನ ಗಂತವ್ಯಂ ವಿಶೇಷೇಣ ಸತ್ಯಮುಕ್ತಂ ಮಯಾ ಪ್ರಿಯೇ ॥ ೨೮ ॥

ತಥಾರಿಭಿರ್ನ ವ್ಯಥತೇ ಹ್ಯರ್ದಿತೋಽಪಿ ಶರೈರ್ಜನಃ ।
ಸ್ವಾನಾಂ ದುರುಕ್ತಿಭಿರ್ಮರ್ಮತಾಡಿತಸ್ಸ ಯಥಾ ಮತಃ ॥ ೨೯ ॥

---

೨೪-೨೫. ಮಹೇಶ್ವರನು ಹೇಳಿದನು ;—ಎಲೌ ದೇವಿ, ನಿನ್ನ ತಂದೆಯಾದ ದಕ್ಷಬ್ರಹ್ಮನು ನನ್ನನ್ನು ದ್ವೇಷಿಸುತ್ತಲಿರುವನು. ಅವನು ದುರಹಂಕಾರಿಯು. ಇಂತಹ ಅವನ ಯಾಗಕ್ಕೆ ಯಾರಾರು ದೇವರ್ಷಿ ಮುಂತಾದವರು ಹೋಗಿರುವರೋ ಅವರು ಮೂಢರು, ತಿಳುವಳಿಕೆಯಿಲ್ಲದವರು.

೨೬. ಕರೆಯಲ್ಪಡದೆ ಪರರ ಮನೆಗೆ ಹೋಗಕೂಡದು. ಹಾಗೆ ಹೋದರೆ ಅವಮಾನವಾಗುವುದು. ಅವಮಾನವೆಂಬುದು ಮರಣಕ್ಕಿಂತಲೂ ಹೆಚ್ಚಾದುದು.

೨೭. ಕರೆಯದೆ ಪರರ ಮನೆಗೆ ಹೋದರೆ ಇಂದ್ರನಂತವರಿಗೂ ಲಾಘವವು (ತಿರಸ್ಕಾರವು) ಉಂಟಾಗುವುದು. ಇನ್ನು ಸಾಮಾನ್ಯರ ಪಾಡೇನು ?

೨೮. ಆದುದರಿಂದ ಎಲೈ ಪ್ರಿಯಳೇ, ಸತ್ಯವಾದುದನ್ನು ಹೇಳುತ್ತಲಿರುವೆನು. ನೀನೂ ನಾನೂ ಸಹ ಆ ದಕ್ಷನ ಯಜ್ಞಕ್ಕೆ ಹೋಗಕೂಡದು ಅದು ಉಚಿತವಲ್ಲ.

೨೯. ತಮ್ಮ ಬಂಧುಗಳ ದುರಕ್ತಿಗಳಿಂದ ಆಗುವ ವ್ಯಥೆಯು ಶತ್ರುಗಳ ಬಾಣದ ಏಟಿನಿಂದಲೂ ಆಗುವುದಿಲ್ಲ

ವಿದ್ಯಾದಿಭಿರ್ಗುಣೈಃ ಷಡ್ಭಿರಸದನ್ಯೈಸ್ಸತಾಂ ಸ್ಮೃತೌ ।
ಹತಾಯೋಂ ಭೂಯಸಾಂ ಧಾಮ ನ ಪಶ್ಯಂತಿ ಖಲಾಃ ಪ್ರಿಯೇ ॥ ೩೦ ॥

॥ ಬ್ರಹ್ಮೋವಾಚ ॥
ಏವಮುಕ್ತಾ ಸತೀ ತೇನ ಮಹೇಶೇನ ಮಹಾತ್ಮನಾ ।
ಉವಾಚ ರೋಷಸಂಯುಕ್ತಾ ಶಿವಂ ವಾಕ್ಯವಿದಾಂ ವರಂ ॥ ೩೧ ॥

॥ ಸತ್ಯುವಾಚ ॥
ಯಜ್ಞಸ್ಯಾಖಿಲಫಲೋ ಯೇನ ಸ ತ್ವಂ ಶಂಭೋಽಖಿಲೇಶ್ವರಃ ।
ಅನಾಹೂತೋಽಸಿ ತೇನಾದ್ಯ ಪಿತ್ರಾ ಮೇ ದುಷ್ಟಕಾರಿಣಾ ॥ ೩೨ ॥

ತತ್ಸರ್ವಂ ಜ್ಞಾತುಮಿಚ್ಛಾಮಿ ಭವ ಭಾವಂ ದುರಾತ್ಮನಃ ।
ಸುರರ್ಷೀಣಾಂ ಚ ಸರ್ವೇಷಾಮಾಗತಾನಾಂ ದುರಾತ್ಮನಾಂ ॥ ೩೩ ॥

ತಸ್ಮಾಚ್ಚಾದ್ಯೈವ ಗಚ್ಛಾಮಿ ಸ್ವಪಿತುರ್ಯಜನಂ ಪ್ರಭೋ ।
ಅನುಜ್ಞಾಂ ದೇಹಿ ಮೇ ನಾಥ ತತ್ರ ಗಂತುಂ ಮಹೇಶ್ವರ ॥ ೩೪ ॥

---

೩೦. ವಿದ್ಯೆ, ವಿನಯ ಮುಂತಾದ ಸತ್ಪುರುಷರ ಗುಣಗಳನ್ನು ದುಷ್ಟರು ವಿಮರ್ಶಿಸುವುದೇ ಇಲ್ಲ. ಕೇವಲ ದೋಷದೃಷ್ಟಿಯಿಂದಲೇ ನೋಡುವರು ಎಂದನು.

೩೧. ಬ್ರಹ್ಮನು ಹೇಳಿದನು :—ಹೀಗೆ ಮಹಾತ್ಮನಾದ ಶಿವನು ಹಿತವಾಗಿ ಹೇಳಲು ಸತೀದೇವಿಯು ಅದನ್ನು ಲಾಲಿಸದೆ ಕೋಪಗೊಂಡು,

೩೨. ಸತೀದೇವಿಯು ಹೇಳಿದಳು ;—ಓ ಶಂಕರ, ನೀನು ಪರಮೇಶ್ವರನು. ಯಜ್ಞಗಳ ಫಲದಾತೃವು. ಇಂತಹ ನಿನ್ನನ್ನು ದುಷ್ಟನಾದ ಆ ನನ್ನ ತಂದೆಯು (ದಕ್ಷನು) ಆಹ್ವಾನಿಸಿಲ್ಲ. ಆದಕಾರಣ ಅವನಿಗೆ ಯಜ್ಞದಲ್ಲಿ ಒಳ್ಳೆಯ ಫಲವು ದೊರೆಯಲಾರದು.

೩೩. ಆದುದರಿಂದ ಈ ವಿಷಯದಲ್ಲಿ ದುರಾತ್ಮನಾದ ಆ ದಕ್ಷ ಮತ್ತು ದೇವ ಋಷಿಗಳು ಮತ್ತು ಅಲ್ಲಿ ಸೇರಿರುವ ಮಿಕ್ಕೆಲ್ಲರ ಅಭಿಪ್ರಾಯವನ್ನೂ ತಿಳಿಯುವೆನು.

೩೪. ಈಗಲೇ ನನ್ನ ತಂದೆಯ ಯಜ್ಞಶಾಲೆಗೆ ಹೋಗುವೆನು. ಓ ಸ್ವಾಮಿಯೆ, ಅಲ್ಲಿಗೆ ಹೋಗಲು ನನಗನುಮತಿಯನ್ನು ಕೊಡು ಎಂದಳು.

॥ ಬ್ರಹ್ಮೋವಾಚ ॥

ಇತ್ಯುಕ್ತೋ ಭಗವಾನ್ರುದ್ರಸ್ತಯಾ ದೇವ್ಯಾ ಶಿವಸ್ಸ್ವಯಂ ।
ವಿಜ್ಞಾತಾಖಿಲದೃಗ್ದ್ರಷ್ಟಾ ಸತೀಂ ಸೂತಿಕರೋಽಬ್ರವೀತ್ ॥ ೩೫ ॥

॥ ಶಿವ ಉವಾಚ ॥

ಯದ್ಯೇವ ತೇ ರುಚಿರ್ದೇವಿ ತತ್ರ ಗಂತುಮವಶ್ಯಕಂ ।
ಸುವ್ರತೇ ವಚನಾನ್ಮೇ ತ್ವಂ ಗಚ್ಛ ಶೀಘ್ರಂ ಪಿತುರ್ಮಖಂ ॥ ೩೬ ॥

ಏತಂ ನಂದಿನಮಾರುಹ್ಯ ವೃಷಭಂ ಸಜ್ಜಮಾಪರಾತ್ ।
ಮಹಾರಾಜೋಪಚಾರಾಣಿ ಕೃತ್ವಾ ಬಹುಗುಣಾನ್ವಿತಾ ॥ ೩೭ ॥

ಭೂಷಿತಂ ವೃಷಮಾರೋಹೇತ್ಯುಕ್ತಾ ರುದ್ರೇಣ ಸಾ ಸತೀ ।
ಸುಭೂಷಿತಾ ಸತೀ ಯುಕ್ತಾ ಹ್ಯಗಮತ್ಪಿತೃಮಂದಿರಂ ॥ ೩೮ ॥

ಮಹಾರಾಜೋಪಚಾರಾಣಿ ದತ್ತಾನಿ ಪರಮಾತ್ಮನಾ ।
ಸುಚ್ಛತ್ರಚಾಮರಾದೀನಿ ಸದ್ವಸ್ತ್ರಾಭರಣಾನಿ ಚ ॥ ೩೯ ॥

---

೩೫. ಬ್ರಹ್ಮನು ಹೇಳಿದನು ;—ಹೀಗೆ ಸತೀದೇವಿಯು ಹೇಳಲು, ಸಕಲವನ್ನೂ ತನ್ನ ಜ್ಞಾನದೃಷ್ಟಿಯಿಂದ ತಿಳಿದಿರುವ ಸರ್ವಜ್ಞನಾದ ಆ ಪರಮೇಶ್ವರನು ಅವಳನ್ನು ಕುರಿತು,

೩೬. ಶಿವನು ಹೇಳಿದನು ;—ಎಲೌ ದೇವಿ, ದಕ್ಷಯಜ್ಞಕ್ಕೆ ಹೋಗುವುದು ಅವಶ್ಯಕವೆಂದು ನಿನಗೆ ತೋರಿದರೆ ನೀನು ಹೋಗಬಹುದು. ನಾನು ಅನುಮತಿಯನ್ನು ಕೊಟ್ಟಿರುವೆನು.

೩೭-೩೮. ಎಲೌ ಸತೀದೇವಿ, ರಾಜಯೋಗ್ಯವಾದಂತಹ ಅಲಂಕಾರಗಳಿಂದ ಅಲಂಕರಿಸಿಕೊಂಡು ನೀನು ಅಲಂಕೃತವಾಗಿ ನಿಂತಿರುವ ಈ ನಂದಿಕೇಶ್ವರನನ್ನೇರಿ ದಕ್ಷಯಜ್ಞಶಾಲೆಗೆ ತೆರಳು ಎಂದು ಶಂಕರನು ಹೇಳಲು, ಸತೀದೇವಿಯು ಅದರಂತೆ ನಂದಿಯಮೇಲೆ ಕುಳಿತು ದಕ್ಷನಮನೆಗೆ ಹೊರಟಳು.

೩೯. ರಾಜಯೋಗ್ಯವಾದಂತಹ ಛತ್ರ, ಚಾಮರ, ಮತ್ತು ಒಳ್ಳೆಯ ರತ್ನ ಪೀತಾಂಬರ ಮುಂತಾದುವುಗಳನ್ನು ಸತೀದೇವಿಗೆ ಪರಮೇಶ್ವರನು ಕಲ್ಪಿಸಿಕೊಟ್ಟನು.

ಗಣಾಃ ಷಷ್ಟಿಸಹಸ್ರಾಣಿ ರೌದ್ರಾ ಜಗ್ಮುಶ್ಶಿವಾಜ್ಞಯಾ।
ಕುತೂಹಲಯುತಾಃ ಪ್ರೀತಾ ಮಹೋತ್ಸವಸಮನ್ವಿತಾಃ ॥ ೪೦ ॥

ತದೋತ್ಸವೋ ಮಹಾನಾಸೀದ್ಯಜನೇ ತತ್ರ ಸರ್ವತಃ ।
ಸತ್ಯಾಶ್ಶಿವಪ್ರಿಯಾಯಾಸ್ತು ವಾಮದೇವಗಣೈಃ ಕೃತಃ • ॥ ೪೧ ॥

ಕುತೂಹಲಂ ಗಣಾಶ್ಚಕ್ರುಶ್ಶಿವಯೋರ್ಯಶ ಉಜ್ಜಗುಃ ।
ಬಾಲಾಂತಃ ಪುಪ್ಲುವುಃ ಪ್ರೀತ್ಯಾ ಮಹಾವೀರಾಶ್ಶಿವಪ್ರಿಯಾಃ ॥ ೪೨ ॥

ಸರ್ವಥಾಸೀನ್ಮಹಾಶೋಭಾ ಗಮನೇ ಜಗದಂಬಿಕೇ ।
ಸುಖಾರಾವಸ್ಸಂಬಭೂವ ಪೂರಿತಂ ಭುವನತ್ರಯಂ ॥ ೪೩ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ದ್ವಿತೀಯೇ ಸತೀಖಂಡೇ ಸತೀಯಾತ್ರಾವರ್ಣನಂ ನಾಮ
ಅಷ್ಟವಿಂಶೋಽಧ್ಯಾಯಃ

---

೪೦. ಶಿವನಪ್ಪಣೆಯಂತೆ ಅರವತ್ತುಸಾವಿರ ರುದ್ರಗಣಗಳು ಕುತೂಹಲವುಳ್ಳವರಾಗಿ ಮಹತ್ತಾದ ಉತ್ಸವದೊಡನೆ ಸತೀದೇವಿಯನ್ನು ಓಲೈಸುತ್ತಾ ಹಿಂಬಾಲಿಸಿದರು.

೪೧. ಯಜ್ಞಕ್ಕೆ ಸತೀದೇವಿಯು ರುದ್ರಗಣಗಳೊಂದಿಗೆ ಹೊರಡಲು ಆಗ ಮಹಾಉತ್ಸವವು ಆಯಿತು.

೪೨. ಆಗ ಶಿವನಿಗೆ ಪ್ರಿಯರಾದ ಮತ್ತು ಶಿವಮಹಾವೀರರಾದ ಆ ರುದ್ರಗಣಗಳು ಶಿವ ಸತೀದೇವಿಯರ ಯಶಸ್ಸನ್ನು ಗಾನಮಾಡಿದರು. ಸಂತೋಷದಿಂದ ಹಾರಾಡಿದರು. ಕುಣಿದಾಡಿದರು.

೪೩. ಹೀಗೆ ಜಗನ್ಮಾತೆಯಾದ ದೇವಿಯು ದಕ್ಷಯಜ್ಞಕ್ಕೆ ಹೊರಡಲು ಪ್ರಭೆಯು ಬೆಳಗಿತು. ಸುಖಕರವಾದ ಧ್ವನಿಯಿಂದ ಜಗತ್ತೆಲ್ಲವೂ ತುಂಬಿ ಹೋಯಿತು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಏಕೋನತ್ರಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ದಾಕ್ಷಾಯಣೀ ಗತಾ ತತ್ರ ಯತ್ರ ಯಜ್ಞೋ ಮಹಾಪ್ರಭಃ ।
ಸುರಾಸುರಮುನೀಂದ್ರಾದಿಕುತೂಹಲಸಮನ್ವಿತಃ ॥ ೧ ॥

ಸ್ವಪಿತುರ್ಭವನಂ ತತ್ರ ನಾನಾಶ್ಚರ್ಯಸಮನ್ವಿತಂ ।
ದದರ್ಶ ಸುಪ್ರಭಂ ಚಾರು ಸುರರ್ಷಿಗಣಸ್ಸಂಯುತಂ ॥ ೨ ॥

---

### ಇಪ್ಪತ್ತೊಂಭತ್ತನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು :—ಎಲೈ ನಾರದ, ಶಿವನ ಅನುಮತಿಯನ್ನು ಪಡೆದು ಹೊರಟ ಸತೀದೇವಿಯು, ದೇವದಾನವರು ಮುನಿಗಳು ಮುಂತಾದವರು ಸೇರಿ ವಿಜೃಂಭಣೆಯಿಂದ ಯಜ್ಞವು ನಡೆಯುತ್ತಲಿದ್ದ ಆ ಯಜ್ಞಶಾಗೆ ಹೋದಳು.

೨. ಆ ಯಜ್ಞಶಾಲೆಯಲ್ಲಿ ಅನೇಕ ಆಶ್ಚರ್ಯಗಳಿಂದ ಶೋಭಿಸುವಂತಹ ಮತ್ತು ದೇವಋಷಿಗಳಿಂದ ಅಲಂಕೃತವಾಗಿರುವಂತಹ ತನ್ನ ತಂದೆಯ ಸುಂದರವಾದ ಗೃಹವನ್ನು ನೋಡಿದಳು.

ದ್ವಾರಿ ಸ್ಥಿತಾ ತದಾ ದೇವೀ ಹ್ಯವರುಹ್ಯ ನಿಜಾಸನಾತ್ ।
ನಂದಿನೋಽಭ್ಯಂತರಂ ಶೀಘ್ರಮೇಕೈವಾಗಚ್ಛದಧ್ವರಂ ॥ ೩ ॥

ಆಗತಾಂ ಚ ಸತೀಂ ದೃಷ್ಟ್ವಾಽಸಿಕ್ನೀ ಮಾತಾ ಯಶಸ್ವಿನೀ ।
ಅಕರೋದಾದರಂ ತಸ್ಯಾ ಭಗಿನ್ಯಶ್ಚ ಯಥೋಚಿತಂ ॥ ೪ ॥

ನಾಕರೋದಾದರಂ ದಕ್ಷೋ ದೃಷ್ಟ್ವಾ ತಾಮಪಿ ಕಿಂಚನ ।
ನಾನ್ಯೋಽಪಿ ತದ್ಭಯಾತ್ತತ್ರ ಶಿವಮಾಯಾವಿಮೋಹಿತಃ ॥ ೫ ॥

ಅಥ ಸಾ ಮಾತರಂ ದೇವೀ ಪಿತರಂ ಚ ಸತೀ ಮುನೇ ।
ಅನಮದ್ವಿಸ್ಮಿತಾತ್ಯಂತಂ ಸರ್ವಲೋಕಪರಾಭವಾತ್ ॥ ೬ ॥

ಭಾಗಾನಪಶ್ಯದ್ದೇವಾನಾಂ ಹರ್ಯಾದೀನಾಂ ತದಧ್ವರೇ ।
ನ ಶಂಭುಭಾಗಮಕರೋತ್ಕ್ರೋಧಂ ದುರ್ವಿಷಹಂ ಸತೀ ॥ ೭ ॥

---

೩. ಅಲ್ಲಿ ಮನೆಯ ಬಾಗಿಲಲ್ಲಿಯೇ ನಂದಿಯಿಂದ ಇಳಿದು ದೇವಿಯು ತಾನೋರ್ವಳೇ ಯಜ್ಞಶಾಲೆಯ ಒಳಕ್ಕೆ ಹೋದಳು.

೪. ಸತೀದೇವಿಯು ಬಂದುದನ್ನು ನೋಡಿ ಸುಜನೆಯಾದ ಅವಳ ತಾಯಿ ಅಸಿಕ್ನಿಯು ಪ್ರೀತಿಯಿಂದ ಎದುರ್ಗೊಂಡಳು. ಅಕ್ಕತಂಗಿಯರೂ ಸಹ ಆದರದಿಂದ ಎದುರ್ಗೊಂಡರು.

೫. ಆದರೆ ದಕ್ಷಪ್ರಜಾಪ್ರತಿಯು ಸತೀದೇವಿಯನ್ನು ನೋಡಿದರೂ ಆದರವನ್ನು ತೋರಿಸಲಿಲ್ಲ. ಅವನ ಭಯದಿಂದಲೂ ಶಿವನ ಮಾಯೆಯಿಂದಲೂ ಸಹ ಮಿಕ್ಕವರೂ ಆ ಸತಿಯಲ್ಲಿ ಆದರವನ್ನು ಪ್ರಕಟಿಸಲಿಲ್ಲ.

೬. ಬಳಿಕ ಆ ಸತೀದೇವಿಯು ತಂದೆಯನ್ನೂ ತಾಯಿಯನ್ನೂ ನಮಸ್ಕರಿಸಿ, ಅಲ್ಲಿ ಸೇರಿರುವರೆಲ್ಲರೂ ತನ್ನಲ್ಲಿ ಆದರವನ್ನು ತೋರಿಸದಿದ್ದುದಕ್ಕಾಗಿ ತುಂಬಾ ಆಶ್ಚರ್ಯಗೊಂಡಳು.

೭. ಆ ಯಾಗದಲ್ಲಿ ಇಂದ್ರನೇ ಮೊದಲಾದ ದೇವತೆಗಳಿಗೆ ಕಲ್ಪಿಸಿದ ಹವಿರ್ಭಾಗವನ್ನು ನೋಡಿದಳು. ಆದರೆ ಶಂಕರನಿಗೆ ಭಾಗವನ್ನು ಕಲ್ಪಿಸಿಯೇ ಇರಲಿಲ್ಲ. ಇದನ್ನು ನೋಡಿ ಸತಿಗೆ ತುಂಬಾ ಕೋಪಬಂದಿತು.

॥ ಸತ್ಯುವಾಚ ॥

ತದಾ ದಕ್ಷಂ ದಹಂತೀವ ರುಷಾ ಪೂರ್ಣಾ ಸತೀ ಭೃಶಂ ।
ಕ್ರೂರದೃಷ್ಟ್ಯಾ ವಿಲೋಕ್ಯೈವ ಸರ್ವಾನಪ್ಯುಪಮಾನಿತಾ ॥ ೮ ॥

॥ ಸತ್ಯುವಾಚ ॥

ಅನಾಹೂತಸ್ತ್ವಯಾ ಕಸ್ಮಾಚ್ಛಂಭುಃ ಪರಮಶೋಭನಃ ।
ಯೇನ ಪೂತಮಿದಂ ವಿಶ್ವಂ ಸಮಗ್ರಂ ಸಚರಾಚರಂ ॥ ೯ ॥

ಯಜ್ಞೋ ಯಜ್ಞವಿದಾಂ ಶ್ರೇಷ್ಠೋ ಯಜ್ಞಾಂಗೋ ಯಜ್ಞದಕ್ಷಿಣಃ ।
ಯಜ್ಞಕರ್ತಾ ಚ ಯಶ್ಶಂಭುಸ್ತಂ ವಿನಾ ಚ ಕಥಂ ಮಖಃ ॥ ೧೦ ॥

ಯಸ್ಯ ಸ್ಮರಣಮಾತ್ರೇಣ ಸರ್ವಂ ಪೂತಂ ಭವತ್ಯಹೋ ।
ವಿನಾ ತೇನ ಕೃತಂ ಸರ್ವಮಪವಿತ್ರಂ ಭವಿಷ್ಯತಿ ॥ ೧೧ ॥

---

೮. ಹೀಗೆ ಕೋಪಗೊಂಡ ಸತೀದೇವಿಯು ದಕ್ಷನನ್ನು ಸುಡುವಂತೆ ಕ್ರೂರ ದೃಷ್ಟಿಯಿಂದ ನೋಡಿ ಅಲ್ಲಿ ಸೇರಿರುವರೆಲ್ಲರನ್ನೂ ತಿರಸ್ಕರಿಸುತ್ತಾ ಹೀಗೆ ಹೇಳಿದಳು.

೯. ಸತಿಯು ಹೇಳಿದಳು ;—ಎಲೈ ದಕ್ಷನೇ, ಶಂಕರನು ಪರಮಮಂಗಳ ಸ್ವರೂಪನು. ಅವನಿಂದ ಈ ಜಗತ್ತೆಲ್ಲವೂ ಪವಿತ್ರವಾಗಿರುವುದು, ನಿಂತಿರುವುದು, ಇಂತಹ ಶಂಕರನನ್ನು ನೀನು ಯಜ್ಞಕ್ಕೆ ಏಕೆ ಆಹ್ವಾನಿಸಲಿಲ್ಲ ?

೧೦. ಶಂಕರನು ಯಜ್ಞಸ್ವರೂಪಿಯು. ಯಜ್ಞಸ್ವರೂಪವನ್ನು ಬಲ್ಲ ವಿದ್ವಾಂಸರಲ್ಲಿ ಉತ್ತಮನು, ಯಜ್ಞಕ್ಕೆ ಸಾಧನನು. ಯಜ್ಞದಲ್ಲಿ ಕೊಡುವ ದಕ್ಷಿಣೆಯೂ ಆ ಶಿವನೇ ಆಗಿರುವನು. ಯಜ್ಞವನ್ನು ಮಾಡುವ ಯಜಮಾನನೂ ಅಂತರ್ಯಾಮಿಯಾದ ಆ ಶಿವನೇ. ಇಂತಹ ಶಿವನನ್ನು ಬಿಟ್ಟು ಯಜ್ಞವೆಂದರೇನು ?

೧೧. ಆ ಶಿವನನ್ನು ಸ್ಮರಿಸಿದ ಮಾತ್ರದಿಂದಲೇ ಎಲ್ಲವೂ ಪರಿಶುದ್ಧವಾಗುವುದು. ಇಂತಹ ಶಿವನನ್ನು ಬಿಟ್ಟುಮಾಡಿದ ಕರ್ಮವೆಲ್ಲವೂ ಅಪವಿತ್ರವಾಗುವುದು.

ದ್ರವ್ಯಮಂತ್ರಾದಿಕಂ ಸರ್ವಂ ಹವ್ಯಂ ಕವ್ಯಂ ಚ ಯನ್ಮಯಂ ।
ಶಂಭುನಾ ಹಿ ವಿನಾ ತೇನ ಕಥಂ ಯಜ್ಞಃ ಪ್ರವರ್ತಿತಃ ॥ ೧೨ ॥

ಕಿಂ ಶಿವಂ ಸುರಸಾಮಾನ್ಯಂ ಮತ್ವಾಕಾರ್ಷೀರನಾದರಂ ।
ಭ್ರಷ್ಟಬುದ್ಧಿರ್ಭವಾನದ್ಯ ಜಾತೋಽಸಿ ಜನಕಾಧಮ ॥ ೧೩ ॥

ವಿಷ್ಣುಬ್ರಹ್ಮಾದಯೋ ದೇವಾ ಯಂ ಸಂಸೇವ್ಯ ಮಹೇಶ್ವರಂ ।
ಪ್ರಾಪ್ತಾಃ ಸ್ವಪದವೀಂ ಸರ್ವೇ ತಂ ನ ಜಾನಾಸಿ ರೇ ಹರಂ ॥ ೧೪ ॥

ಏತೇ ಕಥಂ ಸಮಾಯಾತಾ ವಿಷ್ಣುಬ್ರಹ್ಮಾದಯಸ್ಸುರಾಃ ।
ತವ ಯಜ್ಞೇ ವಿನಾ ಶಂಭುಂ ಸ್ವಪ್ರಭುಂ ಮುನಯಸ್ತಥಾ ॥ ೧೫ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಪರಮೇಶಾನೀ ವಿಷ್ಣ್ವಾದೀನ್ಸಕಲಾನ್ಪೃಥಿ ।
ಪೃಥಕ್ಪೃಥಗವೋಚತ್ಸಾ ಭರ್ತ್ಸಯಂತೀ ಭವಾತ್ಮಿಕಾ ॥ ೧೬ ॥

---

೧೨. ದ್ರವ್ಯ, ಮಂತ್ರ, ಹವ್ಯ, ಕವ್ಯ ಮುಂತಾದ ಯಜ್ಞಾಂಗಗಳೆಲ್ಲವೂ ಪರಮೇಶ್ವರನ ಸ್ವರೂಪವಾದವು. ಇಂತಹ ಪರಮೇಶ್ವರನನ್ನು ತ್ಯಜಿಸಿ ನೀವು ಯಜ್ಞವನ್ನು ಹೇಗೆ ಪ್ರಾರಂಭಿಸಿರುವಿರಿ?

೧೩. ದುರ್ಬುದ್ಧಿಯುಳ್ಳ ಎಲೈ ದಕ್ಷನೆ, ನೀನು ಶಿವನನ್ನು ಸಾಮಾನ್ಯದೇವನೆಂದು ತಿಳಿದು ಹೀಗೆ ತಿರಸ್ಕಾರವುಳ್ಳವನಾಗಿರುವಿಯೇನು? ಹಾಗಿದ್ದರೆ ನೀನು ಅತಿ ನೀಚನು.

೧೪. ವಿಷ್ಣು ಬ್ರಹ್ಮ ಮೊದಲಾದ ದೇವತೆಗಳೂ ಸಹ ಆ ಮಹೇಶ್ವರನನ್ನು ಪೂಜಿಸಿ ತಮ್ಮ ತಮ್ಮ ಪದವಿಯನ್ನು ಪಡೆದಿರುವರು. ಇಂತಹ ಪರಮೇಶ್ವರನ ಮಹಿಮೆಯು ನಿನಗೆ ತಿಳಿದಿಲ್ಲವೇ?

೧೫. ಅಲ್ಲದೆ ಈ ವಿಷ್ಣು ಬ್ರಹ್ಮ ಮೊದಲಾದ ದೇವತೆಗಳು ಮತ್ತು ಮುನಿಗಳು ತಮ್ಮ ಪ್ರಭುವಾದ ಶಿವನನ್ನು ಬಿಟ್ಟು ಯಜ್ಞಕ್ಕೆ ಹೇಗೆ ಬಂದರು?

೧೬. ಬ್ರಹ್ಮನು ಹೇಳಿದನು:—ಹೀಗೆ ಸತೀದೇವಿಯು ಒಮ್ಮೆ ಎಲ್ಲರನ್ನೂ ನಿಂದಿಸಿ ತಿರುಗಿ ಪ್ರತ್ಯೇಕವಾಗಿ ಪ್ರತಿಯೊಬ್ಬರನ್ನೂ ನಿಂದಿಸುತ್ತಾ ಹೀಗೆ ಹೇಳಿದಳು.

|| ಸತ್ಯುವಾಚ ||

ಹೇ ವಿಷ್ಣೋ ತ್ವಂ ಮಹಾದೇವಂ ಕಿಂ ನ ಜಾನಾಸಿ ತತ್ತ್ವತಃ ।
ಸಗುಣಂ ನಿರ್ಗುಣಂ ಚಾಪಿ ಶ್ರುತಯೋ ಯಂ ವದಂತಿ ಹ || ೧೭ ||

ಯದ್ಯಪಿ ತ್ವಾಂ ಕರಂ ದತ್ವಾ ಬಹುವಾರಂ ಮಹೇಶ್ವರಃ ।
ಅಶಿಕ್ಷಯತ್ಪುರಾ ಶಾಲ್ವಪ್ರಮುಖಾಕೃತಿಭಿರ್ಹರೇ || ೧೮ ||

ತದಪಿ ಜ್ಞಾನಮಾಯಾತಂ ನ ತೇ ಚೇತಸಿ ದುರ್ಮತೇ ।
ಭಾಗಾರ್ಥೀ ದಕ್ಷಯಜ್ಞೇಽಸ್ಮಿನ್ ಶಿವಂ ಸ್ವಸ್ವಾಮಿನಂ ವಿನಾ || ೧೯ ||

ಪುರಾ ಪಂಚಮುಖೋ ಭೂತ್ವಾ ಗರ್ವಿತೋಽಸಿ ಸದಾಶಿವಂ ।
ಕೃತಶ್ಚತುರ್ಮುಖಸ್ತೇನ ವಿಸ್ಮೃತೋಽಸಿ ತದದ್ಭುತಂ || ೨೦ ||

ಇಂದ್ರ ತ್ವಂ ಕಿಂ ನ ಜಾನಾಸಿ ಮಹಾದೇವಸ್ಯ ವಿಕ್ರಮಂ ।
ಭಸ್ಮೀಕೃತಃ ಪವಿಸ್ತೇ ಹಿ ಹರೇಣ ಕ್ರೂರಕರ್ಮಣಾ || ೨೧ ||

---

೧೭. ಸತೀದೇವಿಯು ಹೇಳಿದಳು :—ಎಲೈ ವಿಷ್ಣು, ನೀನು ಮಹಾದೇವನ ಸ್ವರೂಪವನ್ನು ತಿಳಿದಿರುವುದಿಲ್ಲವೆ ? ಆ ಶಿವನು ಮಾಯಾಮಯವಾದ ಸಗುಣ (ಈಶ್ವರ) ಸ್ವರೂಪವುಳ್ಳವನೂ, ವಸ್ತುತಃ ನಿರ್ಗುಣಸ್ವರೂಪನೂ ಆಗಿರುವನೆಂದು ವೇದಗಳು ಹೇಳುತ್ತಿವೆಯಲ್ಲವೇ ?

೧೮. ಆದರೂ ಆ ಪರಮೇಶ್ವರನು ಶಾಲ್ವ ಮೊದಲಾದ ರಾಜರುಗಳ ರೂಪ ದಿಂದ ನಿನ್ನಿಂದ ಕಪ್ಪವನ್ನು ತೆಗೆದುಕೊಂಡು ನಿನ್ನನ್ನು ಅನೇಕ ಬಾರಿ ಶಿಕ್ಷಿಸಿರುವನು.

೧೯. ಎಲೈ ದುರ್ಬುದ್ಧಿಯುಳ್ಳ ಹರಿಯೇ, ಹಿಂದಿನ ಆ ಸಮಾಚಾರವೆಲ್ಲವೂ ನಿನಗೆ ಮರತೇಹೋಯಿತೇ ? ಈಗ ನಿನ್ನ ಪ್ರಭುವಾದ ಶಿವನನ್ನು ಬಿಟ್ಟು ಈ ಯಜ್ಞಕ್ಕೆ ಬಂದಿರುವೆಯಲ್ಲಾ ?

೨೦. ಎಲೈ ಬ್ರಹ್ಮನೇ, ಹಿಂದೆ ನೀನು ಶಿವನಂತೆ ಐದು ಮುಖವುಳ್ಳವ ನಾಗಿದ್ದು ತುಂಬಾ ಗರ್ವಿತನಾಗಿದ್ದೆ. ಆಗ ಶಿವನು ನಿನ್ನ ಒಂದು ಮುಖವನ್ನು ಕತ್ತರಿಸಿ ನಾಲ್ಕುಮುಖವುಳ್ಳವನ್ನಾಗಿಮಾಡಿ ನಿನ್ನ ಗರ್ವವನ್ನು ಮುರಿದನು.

೨೧. ಎಲೈ ಇಂದ್ರ, ಮಹಾದೇವನ ಪರಾಕ್ರಮವು ನಿನಗೆ ತಿಳಿಯದೆ ? ಅವನು ನಿನ್ನ ವಜ್ರಾಯುಧವನ್ನು ಕ್ರೂರದೃಷ್ಟಿಯಿಂದಲೇ ಭಸ್ಮಮಾಡಲಿಲ್ಲವೇ ?

ಹೇ ಸುರಾಃ ಕಿನ್ನ ಜಾನೀಥ ಮಹಾದೇವಸ್ಯ ವಿಕ್ರಮಂ ।
ಅತ್ರೇ ವಸಿಷ್ಠ ಮುನಯೋ ಯುಷ್ಮಾಭಿಃ ಕಿಂ ಕೃತಂ ತ್ವಿಹ ॥ ೨೨ ॥

ಭಿಕ್ಷಾಟನಂ ಚ ಕೃತವಾನ್ಪುರಾ ದಾರುವನೇ ವಿಭುಃ ।
ಶಪ್ತೋ ಯದ್ಭಿಕ್ಷುಕೋ ರುದ್ರೋ ಭವದ್ಭಿರ್ಮುನಿಭಿಸ್ತದಾ ॥ ೨೩ ॥

ಶಪ್ತೇನಾಪಿ ಚ ರುದ್ರೇಣ ಯತ್ಕೃತಂ ವಿಸ್ಮೃತಂ ಕಥಂ ।
ತಲ್ಲಿಂಗೇನಾಖಿಲಂ ದಗ್ಧಂ ಭುವನಂ ಸಚರಾಚರಂ ॥ ೨೪ ॥

ಸರ್ವೇ ಮೂಢಾಶ್ಚ ಸಂಜಾತಾ ವಿಷ್ಣುಬ್ರಹ್ಮಾದಯಸ್ಸುರಾಃ ।
ಮುನಯೋಽನ್ಯೇ ವಿನಾ ಶಂಭುಮಾಗತಾ ಯದಿಹಾಧ್ವರೇ ॥ ೨೫ ॥

ಸರ್ವೇ ವೇದಾಶ್ಚ ಸಂಭೂತಾ ಸಾಂಗಾಶ್ಶಾಸ್ತ್ರಾಣಿ ವಾಗ್ಯತಃ ।
ಯೋಽಸೌ ವೇದಾಂತಗಶ್ಶಂಭುಃ ಕೈಶ್ಚಿಜ್ಜ್ಞಾತುಂ ನ ಪಾರ್ಯತೇ ॥ ೨೬ ॥

---

೨೨. ಎಲೈ ದೇವತೆಗಳೇ, ನಿಮಗೆ ಮಹಾದೇವನ ಮಹಿಮೆಯು ತಿಳಿಯದೆ? ಎಲೈ ಅತ್ರಿಮುನಿ, ವಸಿಷ್ಠಮುನಿ, ತಿಳಿದವರಾದ ನೀವುಗಳೂ ಸಹ ಇದೇನು ಅನ್ಯಾಯವನ್ನು ಮಾಡಿರುವಿರಿ ?

೨೩. ಹಿಂದೊಮ್ಮೆ ಪರಮೇಶ್ವರನು ಭಿಕ್ಷುರೂಪದಿಂದ ದಾರುವನದಲ್ಲಿ ಭಿಕ್ಷಾಟನವನ್ನು ಮಾಡುತ್ತಲಿದ್ದನು. ಆಗ ಆ ರುದ್ರನನ್ನು ನೀವೆಲ್ಲ ಮುನಿಗಳು ಕಾರಣವಿಲ್ಲದೇ ಶಪಿಸಿರುವಿರಿ.

೨೪. ಹಾಗೆ ನೀವು ಶಪಿಸಲು ಶಿವನು ಆಗ ಏನು ಮಾಡಿದನೆಂಬುದನ್ನು ಮರೆತಿರುವಿರಾ ? ಆಗ ಶಿವನು ಲಿಂಗರೂಪದಿಂದ ಸಕಲ ಜಗತ್ತನ್ನೂ ದಹಿಸಲಿಲ್ಲವೆ ?

೨೫. ಆಗ ನೀವೆಲ್ಲ ಮುನಿಗಳೂ ಬ್ರಹ್ಮ ವಿಷ್ಣು ಮೊದಲಾದವರೂ ಸಹ ಮೂಢರಾಗಲಿಲ್ಲವೆ ? ಶಿವನ ಮಹಿಮೆಯು ಅಂತಹುದು. ಹೀಗಿರಲು ಆ ಶಿವನನ್ನು ಬಿಟ್ಟು ನೀವು ಈ ಯಜ್ಞಕ್ಕೆ ಬರುವುದು ನ್ಯಾಯವೇ ?

೨೬. ಆ ಶಂಕರನು ವೇದಾಂತವೊಂದರಿಂದಲೇ ತಿಳಿಯಲ್ಪಡತಕ್ಕವನು, ಅದಲ್ಲದೆ ಮಿಕ್ಕ ವೇದಗಳು, ವೇದಾಂಗಗಳು, ಶಾಸ್ತ್ರಗಳು, ಆಗಮಗಳು ಇವಾವುವೂ ಪರಮೇಶ್ವರನನ್ನು ತಿಳಿಸಿಕೊಡಲಾರವು.

॥ ಬ್ರಹ್ಮೋವಾಚ ॥

ಇತ್ಯನೇಕವಿಧಾ ವಾಣೀರಗದಜ್ಜಗದಂಬಿಕಾ ।
ಕೋಪಾನ್ವಿತಾ ಸತೀ ತತ್ರ ಹೃದಯೇನ ವಿದೂಯತಾ ॥ ೨೭ ॥

ವಿಷ್ಣ್ವಾದಯೋಽಖಿಲಾ ದೇವಾ ಮುನಯೋ ಯೇ ಚ ತದ್ವಚಃ ।
ಮೌನೀಭೂತಾಸ್ತದಾಕರ್ಣ್ಯ ಭಯವ್ಯಾಕುಲಮಾನಸಾಃ ॥ ೨೮ ॥

ಅಥ ದಕ್ಷಸ್ಸಮಾಕರ್ಣ್ಯ ಸ್ವಪುತ್ರ್ಯಾಸ್ತಾದೃಶಂ ವಚಃ ।
ವಿಲೋಕ್ಯ ಕ್ರೂರದೃಷ್ಟ್ಯಾ ತಾಂ ಸತೀಂ ಕ್ರುದ್ಧೋಽಬ್ರವೀದ್ವಚಃ ॥ ೨೯ ॥

॥ ದಕ್ಷ ಉವಾಚ ॥

ತವ ಕಿಂ ಬಹುನೋಕ್ತೇನ ಕಾರ್ಯಂ ನಾಸ್ತೀಹ ಸಾಂಪ್ರತಂ ।
ಗಚ್ಛ ವಾ ತಿಷ್ಠ ವಾ ಭದ್ರೇ ಕಸ್ಮಾತ್ತ್ವಂ ಹಿ ಸಮಾಗತಾ ॥ ೩೦ ॥

ಅಮಂಗಲಸ್ತು ತೇ ಭರ್ತಾ ಶಿವೋಽಸೌ ಗಮ್ಯತೇ ಬುಧೈಃ ।
ಅಕುಲೀನೋ ವೇದಬಾಹ್ಯೋ ಭೂತಪ್ರೇತಪಿಶಾಚರಾಟ್ ॥ ೩೧ ॥

---

೨೭. ಬ್ರಹ್ಮನು ಹೇಳಿದನು :—ಹೀಗೆ ಕೋಪಗೊಂಡ ದೇವಿಯು ತುಂಬಾ ವ್ಯಥೆಗೊಂಡು ಅನೇಕ ವಿಧವಾಗಿ ಅಲ್ಲಿ ಸೇರಿರುವರೆಲ್ಲರನ್ನೂ ನಿಂದಿಸಿದಳು.

೨೮. ಸತೀದೇವಿಯು ಹೇಳಿದ ಮಾತುಗಳನ್ನು ಕೇಳಿ ವಿಷ್ಣು ಬ್ರಹ್ಮ ಮೊದಲಾದ ದೇವತೆಗಳು ಮತ್ತು ಮುನಿಗಳು ಭಯದಿಂದ ಕೂಡಿದವರಾಗಿ ಯಾವ ಮಾತನ್ನೂ ಆಡದೆ ಮೌನವಾಗಿದ್ದರು.

೨೯. ಆಗ ದಕ್ಷಬ್ರಹ್ಮನು ಸತೀದೇವಿಯ ಮಾತುಗಳನ್ನು ಕೇಳಿ ಕೋಪಗೊಂಡು ಕ್ರೂರದೃಷ್ಟಿಯಿಂದ ಸತಿಯನ್ನು ನೋಡಿ.

೩೦. ದಕ್ಷನು ಹೇಳಿದನು :—ಎಲೌ ಸತಿ, ನಿನ್ನ ಹೆಚ್ಚು ಮಾತುಗಳು ಇಲ್ಲಿ ಬೇಕಾಗಿಲ್ಲ. ನೀನು ಇಲ್ಲಿಂದ ಹೊರಟುಹೋದರೂ ಸರಿಯೆ. ಇದ್ದರೂ ಸರಿಯೆ. ಇಲ್ಲಿಗೆ ನಾನು ನಿನ್ನನ್ನು ಆಹ್ವಾನಿಸಿರಲಿಲ್ಲ. ಹೀಗಿರಲು ನೀನು ಇಲ್ಲಿಗೆ ಬಂದುದೇಕೆ ?

೩೧. ನಿನ್ನ ಪತಿಯು ಅಮಂಗಳರೂಪನು ಹೀಗಿದ್ದರೂ ತಿಳಿವಳಿಕೆಯಿಲ್ಲದವರು ಅವನನ್ನು ಶಿವ (ಮಂಗಳರೂಪ) ನೆಂದು ಕರೆಯುತ್ತಲಿರುವರು. ಅವನು ಕುಲ

**ತಸ್ಮಾನ್ನಾಹ್ವಾರಿತೋ ರುದ್ರೋ ಯಜ್ಞಾರ್ಥಂ ಸುಕುವೇಷಭೃತ್ ।**
**ದೇವರ್ಷಿಸಂಸದಿ ಮಯಾ ಜ್ಞಾತ್ವಾ ಪುತ್ರಿ ವಿಪಶ್ಚಿತಾ ॥ ೩೨ ॥**

**ವಿಧಿನಾ ಪ್ರೇರಿತೇನ ತ್ವಂ ದತ್ತಾ ಮಂದೇನ ಪಾಪಿನಾ ।**
**ರುದ್ರಾಯಾವಿದಿತಾರ್ಥಾಯ ಚೋದ್ಧತಾಯ ದುರಾತ್ಮನೇ ॥ ೩೩ ॥**

**ತಸ್ಮಾತ್ಕೋಪಂ ಪರಿತ್ಯಜ್ಯ ಸ್ವಸ್ಥಾ ಭವ ಶುಚಿಸ್ಮಿತೇ ।**
**ಯದ್ಯಾಗತಾಸಿ ಯಜ್ಞೇಽಸ್ಮಿನ್ಮಾದಾಯಂ ಗೃಹ್ಣೀಷ್ವ ಚಾತ್ಮನಾ ॥ ೩೪ ॥**

**॥ ಬ್ರಹ್ಮೋವಾಚ ॥**

**ದಕ್ಷೇಣೋಕ್ತೇತಿ ಸಾ ಪುತ್ರೀ ಸತೀ ತ್ರೈಲೋಕ್ಯಪೂಜಿತಾ ।**
**ನಿಂದಾಯುಕ್ತಂ ಸ್ವಪಿತರಂ ದೃಷ್ಟ್ವಾಸೀದ್ರುಷಿತಾ ಭೃಶಂ ॥ ೩೫ ॥**

---

ಗೋತ್ರಗಳಿಲ್ಲದವನು. ವೇದಮಾರ್ಗಕ್ಕೆ ಬಹಿಷ್ಕೃತನು. ಭೂತಪ್ರೇತ ಮತ್ತು ಪಿಶಾಚಿಗಳಿಗೆ ಅಧಿಪತಿಯು.

೩೨. ಎಲೌ ಪುತ್ರಿ, ಹೀಗೆ ನಿನ್ನ ಪತಿಯಾದ ರುದ್ರನು ಅಪವಿತ್ರನಾದವನು. ಆದಕಾರಣ ಅವನನ್ನು ದೇವಋಷಿಗಳು ಸೇರಿ ನಡೆಸುವಂತಹ ಈ ಯಜ್ಞಕ್ಕೆ ತಿಳಿವಳಿಕೆಯುಳ್ಳ ನಾನು ಕರೆಯಲಿಲ್ಲ.

೩೩. ಅವಿವೇಕಿಯೂ ಮೂರ್ಖನೂ ಆದಂತಹ ಬ್ರಹ್ಮನ ಮಾತಿಗೆ ಮರುಳಾಗಿ ನಾನು ನಿನ್ನನ್ನು ಆ ಮೂಢನೂ, ಕೊಬ್ಬಿದವನೂ, ದುರಹಂಕಾರಿಯೂ ಆದಂತಹ ರುದ್ರನಿಗೆ ಮದುವೆಮಾಡಿಕೊಟ್ಟೆನು.

೩೪. ಎಲೌ ಸತಿ, ಈಗ ನಿನ್ನ ಕೋಪವನ್ನು ಬಿಟ್ಟುಬಿಡು. ಪ್ರಕೃತ ನೀನು ಯಜ್ಞಕ್ಕೆ ಬಂದಿರುವೆ. ಇಲ್ಲಿ ನಿನ್ನ ಗೌರವವನ್ನು ನೀನು ಕಾಪಾಡಿಕೋ ಎಂದನು.

೩೫-೩೭. ಬ್ರಹ್ಮನು ಹೇಳಿದನು:—ಹೀಗೆ ದಕ್ಷನು ಹೇಳಲು, ಮೂರು ಲೋಕಗಳಿಗೆ ಮಾತೆಯಾದ ಸತೀದೇವಿಯು ಹರನನ್ನು ನಿಂದಿಸುತ್ತಲಿರುವ ತನ್ನ ತಂದೆಯ (ದಕ್ಷನ) ಮೇಲೆ ತುಂಬಾ ಕೋಪಗೊಂಡು, ಈಗ ನಾನು ಶಂಕರನ ಬಳಿಗೆ

ಅಚಿಂತಯತ್ತದಾ ಸೇತಿ ಕಥಂ ಯಾಸ್ಯಾಮಿ ಶಂಕರಂ ।
ಶಂಕರಂ ದ್ರಷ್ಟುಕಾಮಾಹಂ ಪೃಷ್ಟಾ ವಕ್ಷ್ಯೇ ಕಿಮುತ್ತರಂ　　॥ ೩೬ ॥

ಅಥ ಪ್ರೋವಾಚ ಪಿತರಂ ದಕ್ಷಂ ತಂ ದುಷ್ಟಮಾನಸಂ ।
ನಿಃಶ್ವಸಂತೀ ರುಷಾವಿಷ್ಟಾ ಸಾ ಸತೀ ತ್ರಿಜಗತ್ಪ್ರಸೂಃ　　॥ ೩೭ ॥

॥ ಸತ್ಯುವಾಚ ॥

ಯೋ ನಿಂದತಿ ಮಹಾದೇವಂ ನಿಂದ್ಯಮಾನಂ ಶೃಣೋತಿ ವಾ ।
ತಾವುಭೌ ನರಕಂ ಯಾತೌ ಯಾವಚ್ಚಂದ್ರದಿವಾಕರೌ　　॥ ೩೮ ॥

ತಸ್ಮಾತ್ತ್ಯಕ್ಷ್ಯಾಮ್ಯಹಂ ದೇಹಂ ಪ್ರವೇಕ್ಷ್ಯಾಮಿ ಹುತಾಶನಂ ।
ಕಿಂ ಜೀವಿತೇನ ಮೇ ತಾತ ಶೃಣ್ವಂತ್ಯಾನಾದರಂ ಪ್ರಭೋಃ　　॥ ೩೯ ॥

ಯದಿ ಶಕ್ತಸ್ಸ್ವಯಂ ಶಂಭೋರ್ನಿಂದಕಸ್ಯ ವಿಶೇಷತಃ ।
ಛಿಂದ್ಯಾತ್ಪ್ರಸಹ್ಯ ರಸನಾಂ ತದಶುದ್ಧ್ಯೇನ್ನ ಸಂಶಯಃ　　॥ ೪೦ ॥

---

ಹೇಗೆ ಹೋಗಲಿ ? ಅವನು ಪ್ರಶ್ನಿಸಿದರೆ ಏನು ಉತ್ತರವನ್ನು ಹೇಳಲಿ ? ಎಂದು ಚಿಂತಾಪರಳಾಗಿ ಆ ತನ್ನ ತಂದೆಯಾದ ದಕ್ಷನನ್ನು ಕುರಿತು ಕೋಪದಿಂದ ಹೀಗೆ ಹೇಳಿದಳು.

೩೮. ಎಲೈ ದಕ್ಷನೆ, ಮಹಾದೇವನನ್ನು ನಿಂದಿಸುವವನು ಮತ್ತು ಅವನ ನಿಂದೆಯನ್ನು ಕೇಳುವವನು ಇವರೀರ್ವರೂ ಚಂದ್ರಸೂರ್ಯರಿರುವವರೆಗೆ ನರಕವನ್ನು ಅನುಭವಿಸುವರು.

೩೯. ಆದುದರಿಂದ ಆ ಶಿವನ ನಿಂದೆಯನ್ನು ಕೇಳಿರುವ ನಾನು ಈಗ ಶರೀರ ವನ್ನು ತ್ಯಜಿಸುವೆನು. ಅಗ್ನಿಯಲ್ಲಿ ಪ್ರವೇಶಮಾಡುವೆನು. ನನ್ನ ಸ್ವಾಮಿಯ ನಿಂದೆ ಯನ್ನು ಕೇಳುವ ನಾನು ಬದುಕಿ ಪ್ರಯೋಜನವೇನು ?

೪೦. ಶಕ್ತಿಯಿದ್ದುದಾದರೆ ಯಾವನು ಶಂಕರನನ್ನು ನಿಂದಿಸುವನೋ ಅವನ ನಾಲಿಗೆಯನ್ನು ಬಲಾತ್ಕಾರದಿಂದ ಕತ್ತರಿಸಬೇಕು. ಹಾಗೆ ಮಾಡಿದರೆ ಶಂಕರನಿಂದೆ ಯನ್ನು ಕೇಳಿದ ಪಾಪವು ನಾಶವಾಗುವುದು.

ಯದ್ಯಶಕ್ತೋ ಜನಸ್ತತ್ರ ನಿರಯಾತ್ಸುಪಿಧಾಯ ವೈ ।
ಕರ್ಣೌ ಧೀಮಾನ್ತತಶ್ಶುಧ್ಯೇದ್ವದತೀದಂ ಬುಧಾನ್ವರಾನ್ ॥ ೪೧ ॥

॥ ಬ್ರಹ್ಮೋವಾಚ ॥

ಇತ್ಥಮುಕ್ತ್ವಾ ಧರ್ಮನೀತಿಂ ಪಶ್ಚಾತ್ತಾಪಮವಾಪ ಸಾ ।
ಅಸ್ಮರಚ್ಛಾಂಕರಂ ವಾಕ್ಯಂ ದೂಯಮಾನೇನ ಚೇತಸಾ ॥ ೪೨ ॥

ತತಸ್ಸಕ್ರುಧ್ಯ ಸಾ ದಕ್ಷಂ ನಿಶ್ಶಂಕಂ ಪ್ರಾಹ ತಾನಪಿ ।
ಸರ್ವಾನ್ವಿಷ್ಣ್ವಾದಿಕಾನ್ದೇವಾನ್ಮುನೀನಪಿ ಸತೀ ಧ್ರುವಂ ॥ ೪೩ ॥

॥ ಸತ್ಯುವಾಚ ॥

ತಾತ ತ್ವಂ ನಿಂದಕಶ್ಶಂಭೋಃ ಪಶ್ಚಾತ್ತಾಪಂ ಗಮಿಷ್ಯಸಿ ।
ಇಹ ಭುಕ್ತ್ವಾ ಮಹಾದುಃಖಮಂತೇ ಯಾಸ್ಯಸಿ ಯಾತನಾಂ ॥ ೪೪ ॥

---

೪೧. ಹಾಗೆ ಶಿವದ್ವೇಷಿಯನ್ನು ಶಿಕ್ಷಿಸಲು ಅಶಕ್ತನಾದವನು ತನ್ನ ಕಿವಿಗಳನ್ನು ಮುಚ್ಚಿಕೊಂಡು ಆ ಸ್ಥಳದಿಂದ ಹೊರಟುಹೋಗಬೇಕು. ಮತ್ತು ಆ ಪಾಪಕ್ಕೆ ತಕ್ಕ ಪ್ರಾಯಶ್ಚಿತವನ್ನು ಮಾಡಿಕೊಳ್ಳಬೇಕು ಎಂದು ತಿಳಿದವರು ಹೇಳುವರು.

೪೨. ಹೀಗೆ ಧರ್ಮನೀತಿಯನ್ನು ಹೇಳಿ ಆ ಸತಿಯು ತುಂಬಾ ಪಶ್ಚಾತ್ತಾಪ ಗೊಂಡಳು. ಮತ್ತು ತಾನು ಹೊರಡುವಾಗ ಶಂಕರನು ಹೇಳಿದ ಮಾತನ್ನು ಸ್ಮರಿಸಿ ಕೊಂಡಳು.

೪೩. ಬಳಿಕ ಆ ಸತೀದೇವಿಯು ತುಂಬಾ ಕೋಪಗೊಂಡವಳಾಗಿ ದಕ್ಷ ಮತ್ತು ವಿಷ್ಣು ಮೊದಲಾದ ದೇವತೆಗಳನ್ನು ಕುರಿತು ನಿರ್ದಾಕ್ಷಿಣ್ಯತೆಯಿಂದ ಮತ್ತೆ

೪೪. ಸತೀದೇವಿಯು ಹೇಳಿದಳು :—ಎಲೈ ತಂದೆಯೆ, ಈಗ ರುದ್ರನನ್ನು ನಿಂದಿಸುತ್ತಲಿರುವೆ. ಕೊನೆಗೊಮ್ಮೆ ಪಶ್ಚಾತ್ತಾಪವನ್ನು ಹೊಂದಿಯೇ ಹೊಂದುವೆ. ಮತ್ತು ಇಹದಲ್ಲಿ ಮಹತ್ತಾದ ದುಃಖವನ್ನು ಅನುಭವಿಸಿ ಮರಣಕಾಲದಲ್ಲಿಯೂ ಮಹಾಯಾತನೆಯನ್ನು ಹೊಂದುವೆ.

ಯಸ್ಯ ಲೋಕೇಽಪ್ರಿಯೋ ನಾಸ್ತಿ ಪ್ರಿಯಶ್ಚೈವ ಪರಾತ್ಮನಃ ।
ತಸ್ಮಿನ್ನವೈರೇ ಶರ್ವೇಽಸ್ಮಿನ್ ತ್ವಾಂ ವಿನಾ ಕಃ ಪ್ರತೀಪಕಃ ॥ ೪೫ ॥

ಮಹದ್ವಿನಿಂದಾ ನಾಶ್ಚರ್ಯಂ ಸರ್ವದಾಽಸತ್ಸು ಸೇರ್ಷ್ಯಕಂ ।
ಮಹದಂಘ್ರಿರಜೋಧ್ವಸ್ತತಮಸ್ಸು ಸೈವ ಶೋಭನಾ ॥ ೪೬ ॥

ಶಿವೇತಿ ದ್ವ್ಯಕ್ಷರಂ ಯಸ್ಯ ನೃಣಾಂ ನಾಮ ಗಿರೇರಿತಂ ।
ಸಕೃತ್ಪ್ರಸಂಗಾತ್ಸಕಲಮಘಮಾಶು ವಿಹಂತಿ ತತ್ ॥ ೪೭ ॥

ಪವಿತ್ರಕೀರ್ತಿತಮಲಂ ಭವಾನ್ದ್ವೇಷ್ಟಿ ಶಿವೇತರಃ ।
ಅಲಂಘ್ಯಶಾಸನಂ ಶಂಭುಮಹೋ ಸರ್ವೇಶ್ವರಂ ಖಲಃ ॥ ೪೮ ॥

ಯತ್ಪಾದಪದ್ಮಂ ಮಹತಾಂ ಮನೋಽಲಿಸುನಿಷೇವಿತಂ ।
ಸರ್ವಾರ್ಥದಂ ಬ್ರಹ್ಮರಸೈಃ ಸರ್ವಾರ್ಥಿಭಿರಥಾದರಾತ್ ॥ ೪೯ ॥

---

೪೫. ಮೂರು ಲೋಕದಲ್ಲಿಯೂ ಆ ಶಿವನಿಗೆ ಅಪ್ರಿಯರಾದವರು ಯಾರೂ ಇಲ್ಲ. ಅಂತಹ ಪರಮಾತ್ಮನಾದ ಶಿವನ ವಿಷಯದಲ್ಲಿ ನೀನೊರ್ವನು ದ್ವೇಷವನ್ನು ತಳೆದಿರುವೆ. ನಿನ್ನ ಹೊರತು ಅವನಿಗೆ ವೈರಿಗಳಾದವರು ಯಾರೂ ಇಲ್ಲವೇ ಇಲ್ಲ.

೪೬. ಮಹಾತ್ಮರ ಪಾದವನ್ನು ಸೇವಿಸಿ ಪರಿಶುದ್ಧರಾದ ಸತ್ಪುರುಷರು ಮಹಾತ್ಮರನ್ನು ನಿಂದಿಸಿದರೆ ಆಶ್ಚರ್ಯವು. ತಿಳಿವಳಿಕೆಯಿಲ್ಲದ ಮೂರ್ಖನಾದ ನಿನ್ನಂತಹವನು ಮಹಾತ್ಮರನ್ನು ನಿಂದಿಸುವುದು ಸ್ವಭಾವವೇ ಆಗಿರುವುದು.

೪೭. ಶಿವ ಎಂಬ ಎರಡಕ್ಷರಗಳನ್ನು ಒಂದು ಬಾರಿ ಮಾತ್ರ ಜಪಿಸಿದರೂ ಸಾಕು. ಅದರಿಂದ ಮನುಷ್ಯರ ಸಕಲ ಪಾಪಗಳೂ ನಾಶವಾಗುವುವು.

೪೮. ಶಿವನು ಪವಿತ್ರವಾದ ಕೀರ್ತಿಯುಳ್ಳವನು. ತಡೆಯಿಲ್ಲದ ಶಾಸನವುಳ್ಳವನು. ಸರ್ವೇಶ್ವರನು. ಇಂತಹವನನ್ನು ದುಷ್ಟನೂ ಅಪವಿತ್ರನೂ ಆದ ನೀನು (ದಕ್ಷನು) ದ್ವೇಷಿಸುತ್ತಲಿರುವೆ.

೪೯. ಭೋಗ ಮತ್ತು ಮೋಕ್ಷಗಳನ್ನಪೇಕ್ಷಿಸುವವರ ಮನಸ್ಸೆಂಬ ದುಂಬಿಯು ಆ ಶಿವನ ಪಾದಗಳೆಂಬ ಕಮಲಗಳನ್ನು ಸೇವಿಸುವುದು. ಅದರಿಂದ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವು

**ಯದ್ವರ್ಷತ್ಯರ್ಥಿನಶ್ಶೀಘ್ರಂ ಲೋಕಸ್ಯ ಶಿವ ಆದರಾತ್ ।**
**ಭವಾನ್ದ್ರುಹ್ಯತಿ ಮೂರ್ಖತ್ವಾತ್ತಸ್ಮೈ ಚಾಶೇಷಬಂಧವೇ ॥ ೫೦ ॥**

**ಕಿಂ ವಾ ಶಿವಾಖ್ಯಮಶಿವಂ ತ್ವದನ್ಯೇ ನ ವಿದುರ್ಬುಧಾಃ ।**
**ಬ್ರಹಾದಯಸ್ತಂ ಮುನಯಸ್ಸನಕಾದ್ಯಾಸ್ತಥಾ ಪರೇ ॥ ೫೧ ॥**

**ಅವಕೀರ್ಯ ಜಟಾ ಭೂತೈಶ್ಶ್ಮಶಾನೇ ಸ ಕಪಾಲಧೃಕ್ ।**
**ತನ್ಮಾಲ್ಯಭಸ್ಮ ನಾ ಜ್ಞಾತ್ವಾ ಪ್ರೀತ್ಯಾವಸಮುದಾರಧೀಃ ॥ ೫೨ ॥**

**ಯೋ ಮೂರ್ಧಭಿರ್ದಧತಿ ತಚ್ಚರಣೋತ್ಸೃಷ್ಟಮಾದರಾತ್ ।**
**ನಿರ್ಮಾಲ್ಯಂ ಮುನಯೋ ದೇವಾಸ್ಸ ಶಿವಃ ಪರಮೇಶ್ವರಃ ॥ ೫೩ ॥**

**ಪ್ರವೃತ್ತಂ ಚ ನಿವೃತ್ತಂ ಚ ದ್ವಿವಿಧಂ ಕರ್ಮ ಚೋದಿತಂ ।**
**ವೇದೇ ವಿವಿಚ್ಯ ವೃತ್ತಂ ಚ ತದ್ವಿಚಾರ್ಯ ಮನೀಷಿಭಿಃ ॥ ೫೪ ॥**

---

೫೦. ಶಿವನು ತನ್ನ ಭಕ್ತರು ಯಾವಾವುದನ್ನು ಕೇಳಿದರೂ ಕೂಡಲೇ ಅದನ್ನು ಅನುಗ್ರಹಿಸುವನು. ಹೀಗೆ ಸಕಲ ಜನಗಳಿಗೆ ಬಂಧುವಾದ ಶಿವನನ್ನು ನೀನು ಕಾರಣವಿಲ್ಲದೆ ದ್ವೇಷಿಸುತ್ತಲಿರುವೆ.

೫೧. ಅದಿರಲಿ, ನಿನ್ನ ಬಿಟ್ಟು ಮಿಕ್ಕ ಬ್ರಹ್ಮ ಮತ್ತು ಸನಕಮುನಿ ಮುಂತಾದವರು ಶಿವನನ್ನು ಅಪವಿತ್ರನೆಂದು ಭಾವಿಸುವರೇ? ನೀನೊಬ್ಬನೇ ತಿಳಿವಳಿಕೆಯಿಲ್ಲದೆ ಅನ್ಯಾಯವನ್ನು ಆಚರಿಸುತ್ತಲಿರುವೆ.

೫೨. ಕಪಾಲಧಾರಿಯಾದ ಆಶಂಕರನು, ಶ್ಮಶಾನದಲ್ಲಿ ಭೂತಗಳೊಂದಿಗೆ ತಲೆಗೂದಲನ್ನು ಕೆದರಿಕೊಂಡು ವಿಹರಿಸುವನು, ಚಿತಾಭಸ್ಮವನ್ನು ಧರಿಸುವನು. ಈ ಕಾರ್ಯಗಳೆಲ್ಲವೂ ಲೋಕಕ್ಷೇಮಕ್ಕಾಗಿಯೇ ಅಲ್ಲದೆ ಬೇರೆಯಲ್ಲ.

೫೩. ಆ ಶಿವನ ಪಾದಸ್ಪರ್ಶದಿಂದ ಪವಿತ್ರವಾದ ಚಿತಾಭಸ್ಮವನ್ನು ಯಾರು ಆದರದಿಂದ ಶಿರಸ್ಸಿನಲ್ಲಿ ಧರಿಸುವರೋ ಅವರು ಸಾಕ್ಷಾತ್ಪರಶಿವನ ಸ್ವರೂಪವನ್ನು ಹೊಂದುವರು.

೫೪. ವೇದದಲ್ಲಿ ‑ಪ್ರವೃತ್ತಿಮಾರ್ಗ ಎಂದರೆ ಸಂಸಾರಸುಖಪರವಾದಂತಹ ಮತ್ತು ನಿವೃತ್ತಿ ಅಂದರೆ ಮುಕ್ತಿಪರವಾದಂತಹ ಎರಡು ಕರ್ಮಗಳನ್ನು ಹೇಳಿರುವುದು. ತಿಳಿವಳಿಕೆಯುಳ್ಳವರು ಅವೆರಡು ಕರ್ಮಗಳನ್ನೂ ವಿಮರ್ಶಿಸಿ ನಿಶ್ಚಯಿಸಬೇಕು.

ವಿರೋಧೆಯೌಗಪದ್ಯೈಕಕರ್ತೃಕೇ ಚ ತಥಾ ದ್ವಯಂ ।
ಪರಬ್ರಹ್ಮಣಿ ಶಂಭೌ ತು ಕರ್ಮಚರ್ಯಂತಿ ನ ಕಿಂಚನ ॥ ೫೫ ॥

ಮಾ ವಃ ಪದವ್ಯಸ್ಮ ಪಿತಃ ಯಾ ಅಸ್ಮದಾಸ್ಥಿತಾಸ್ಸದಾ ।
ಯಜ್ಞಶಾಲಾಸು ವೋ ಧೂಮ್ರವರ್ತ್ಮಭುಕ್ತ್ರೋಜ್ಝಿತಾಃ ಪರಂ ॥ ೫೬ ॥

ನೋ ವ್ಯಕ್ತಲಿಂಗಸ್ಸತತಮನವಧೂತಸುಸೇವಿತಃ ।
ಅಭಿಮಾನಮತೋ ನ ತ್ವಂ ಕುರು ತಾತ ಕುಬುದ್ಧಿಧೃಕ್ ॥ ೫೭ ॥

ಕಿಂ ಬಹೂಕ್ತೇನ ವಚಸಾ ದುಷ್ಟಸ್ತ್ವಂ ಸರ್ವಥಾ ಕುಧೀಃ ।
ತ್ವದುದ್ಭವೇನ ದೇಹೇನ ನ ಮೇ ಕಿಂಚಿತ್ಪ್ರಯೋಜನಂ ॥ ೫೮ ॥

---

೫೫. ಆ ಎರಡು ಕರ್ಮಗಳೂ ಪರಸ್ಪರ ವಿರುದ್ಧವಾಗಿರುವುವು. ಆದಕಾರಣ ಒಬ್ಬನು ಎರಡು ಕರ್ಮಗಳನ್ನೂ ಮಾಡಲಸದಳವು. ಆದರೆ ಪರಬ್ರಹ್ಮನಾದ ಪರಮೇಶ್ವರನಲ್ಲಿ ಈ ಎರಡು ಕರ್ಮಗಳ ಅವಶ್ಯಕತೆಯೂ ಇಲ್ಲ. ಜ್ಞಾನದಿಂದಲೇ ಮುಕ್ತಿಯು.

೫೬. ಓ ತಂದೆಯೇ, ಸದಾ ಶ್ಮಶಾನದಲ್ಲಿ ಚಿತಾಭಸ್ಮದ ಮೇಲೆಯೇ ಸಂಚರಿಸುವಂತಹ ನಮ್ಮ ಗಣಗಳ ಪದ (ಹೆಜ್ಜೆ) ಗಳು ಈ ನಿನ್ನ ಯಜ್ಞಶಾಲೆಯಲ್ಲಿ ಬರದಿರಲಿ, ನೀನೀರೀತಿಯಾಗಿ ಶಿವನನ್ನು ನಿಂದಿಸಿದರೆ ಯಜ್ಞನಾಶಕ್ಕಾಗಿ ಶಿವಗಣಗಳು ಯಜ್ಞಶಾಲೆಯನ್ನು ಪ್ರವೇಶಿಸುವುವು. ಅದಾಗದಂತೆ ನೋಡಿಕೊ.

೫೭. ಇಂದ್ರಿಯಗಳಿಂದ ತಿಳಿಯಲ್ಪಡದ ಆ ಪರಮಾತ್ಮರೂಪೀ ಮಹೇಶ್ವರನು ಅಮಂಗಳರಾದ ಪಿಶಾಚಿಗಳಿಂದ ಸದಾ ಸೇವಿಸಲ್ಪಡುವುದಿಲ್ಲ. ಆದಕಾರಣ ನೀನು ಅಹಂಕಾರವನ್ನು ತ್ಯಜಿಸು, ದುರ್ಬುದ್ಧಿಯನ್ನು ಬಿಡು.

೫೮. ಎಲೈ ದಕ್ಷನೆ, ಹೆಚ್ಚು ಹೇಳಿ ಪ್ರಯೋಜನವಿಲ್ಲ. ಸರ್ವಥಾ ನೀನು ದುಷ್ಟನು. ಇಂತಹ ನಿನ್ನಿಂದ ಜನಿಸಿದ ಈ ನನ್ನ ಶರೀರದಿಂದಲೂ ಪ್ರಯೋಜನವಿಲ್ಲ.

ತಜ್ಜನ್ಮಧಿಗ್ಯೋ ಮಹತಾಂ ಸರ್ವಥಾವದ್ಯಕೃತ್ಖಲಃ ।
ಪರಿತ್ಯಾಜ್ಯೋ ವಿಶೇಷೇಣ ತತ್ಸಂಬಂಧೋ ವಿಪಶ್ಚಿತಾ ॥ ೫೯ ॥

ಗೋತ್ರಂ ತ್ವದೀಯಂ ಭಗವಾನ್ಯದಾಹ ವೃಷಭಧ್ವಜಃ ।
ದಾಕ್ಷಾಯಣೀತಿ ಸಹಸಾಹಂ ಭವಾಮಿ ಸುದುರ್ಮನಾ ॥ ೬೦ ॥

ತಸ್ಮಾತ್ತ್ವದಂಗಜಂ ದೇಹಂ ಕುಣಪಂ ಗರ್ಹಿತಂ ಸದಾ ।
ವ್ಯುತ್ಸೃಜ್ಯ ನೂನಮಧುನಾ ಭವಿಷ್ಯಾಮಿ ಸುಖಾವಹಾ ॥ ೬೧ ॥

ಹೇ ಸುರಾ ಮುನಯಸ್ಸರ್ವೇ ಯೂಯಂ ಶೃಣುತ ಮದ್ವಚಃ ।
ಸರ್ವಥಾನುಚಿತಂ ಕರ್ಮ ಯುಷ್ಮಾಕಂ ದುಷ್ಟಚೇತಸಾಂ ॥ ೬೨ ॥

ಸರ್ವೇ ಯೂಯಂ ವಿಮೂಢಾ ಹಿ ಶಿವನಿಂದಾಃ ಕಲಿಪ್ರಿಯಾಃ ।
ಪ್ರಾಪ್ಸ್ಯಂತಿ ದಂಡಂ ನಿಯತಮಖಿಲಂ ಚ ಹರಾದ್ಧ್ರುವಂ ॥ ೬೩ ॥

---

೫೯. ಯಾವನು ಮಹಾತ್ಮರನ್ನು ನಿಂದಿಸುವನೋ ಅವನ ಜನ್ಮಕ್ಕೆ ಧಿಕ್ಕಾರವಿರಲಿ. ಅಂತಹ ದುಷ್ಟನ ಸಂಬಂಧವನ್ನೂ ಸಹ ತಿಳಿದವನು ಬಿಟ್ಟು ಬಿಡಬೇಕು.

೬೦. ಆಕಸ್ಮಾತ್ತಾಗಿ ಶಿವನು ನನ್ನನ್ನು ಮೂರ್ಖನಾದ ನಿನ್ನ ಮಗಳೆಂದು ಎಂದರೆ "ದಾಕ್ಷಾಯಣಿ" ಎಂದು ಕರೆದರೆ ನನಗೆ ತುಂಬಾ ಖೇದವಾಗುವುದು.

೬೧. ಆದುದರಿಂದ ಎಲೈ ದಕ್ಷನೆ, ನಿನ್ನ ಶರೀರದಿಂದ ಜನಿಸಿದ ನನ್ನ ಈ ಅಪವಿತ್ರವಾದ ಶರೀರವನ್ನು ತ್ಯಜಿಸಿ ಸುಖವನ್ನು ಹೊಂದುವೆನು.

೬೨. ಎಲೈ ದೇವತೆಗಳೇ, ಮುನಿಗಳೇ, ಎಲ್ಲರೂ ನಾನು ಹೇಳುವುದನು ಕೇಳಿರಿ- ಈಗ ನೀವು ಮಾಡುತ್ತಲಿರುವ ಕಾರ್ಯವು ಸರ್ವಥಾ ಯೋಗ್ಯವಾದುದಲ್ಲ. ನ್ಯಾಯುವಾದುದಲ್ಲ.

೬೩. ನೀವೆಲ್ಲರೂ ಮೂಢರು, ಶಿವನನ್ನು ನಿಂದಿಸುತ್ತಾ ಪಾಪಿಷ್ಠರಾಗಿರುವಿರಿ. ಇಂತಹ ನಿಮಗೆ ಶಿವನಿಂದ ಶಿಕ್ಷೆಯು ಖಂಡಿತ ಆಗುವುದು. ಮರೆಯಬೇಡಿರಿ.

॥ ಬ್ರಹ್ಮೋವಾಚ ॥

ದಕ್ಷಮುಕ್ತ್ವಾಧ್ವರೇ ತಾಂಶ್ಚ ವ್ಯರಮತ್ಸಾ ಸತೀ ತದಾ ।
ಅನೂದ್ಯ ಚೇತಸಾ ಶಂಭುಮಸ್ಮರತ್ಪ್ರಾಣವಲ್ಲಭಂ　　　　॥ ೬೪ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ದ್ವಿತೀಯೇ ಸತೀಖಂಡೇ ಸತೀವಾಕ್ಯವರ್ಣನಂನಾಮ
ಏಕೋನತ್ರಿಂಶೋಽಧ್ಯಾಯಃ



---

೬೪. ಬ್ರಹ್ಮನು ಹೇಳಿದನು:—ಹೀಗೆ ದಕ್ಷ ಮುಂತಾದವರಿಗೆ ಹೇಳಿ ಆ ಸತೀದೇವಿಯು ಸುಮ್ಮನಾದಳು. ಮತ್ತು ಮನಸ್ಸಿನಲ್ಲಿ ತನ್ನ ಪ್ರಾಣಪ್ರಿಯನಾದ ಶಂಕರನನ್ನು ಸ್ಮರಿಸಿದಳು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಇಪ್ಪತ್ತೊಂಭತ್ತನೆಯ
ಅಧ್ಯಾಯವು ಮುಗಿದುದು.



|| ಶ್ರೀ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ
## ತ್ರಿಂಶೋಽಧ್ಯಾಯಃ

---

|| ನಾರದ ಉವಾಚ ||

**ಮೌನೀಭೂತಾ ಯದಾ ಸಾಸೀತ್ಸತೀ ಶಂಕರವಲ್ಲಭಾ |**
**ಚರಿತ್ರಂ ಕಿಮಭೂತ್ತತ್ರ ವಿಧೇ ತದ್ವದ ಚಾದರಾತ್ || ೧ ||**

|| ಬ್ರಹ್ಮೋವಾಚ ||

**ಮೌನೀಭೂತಾ ಸತೀದೇವೀ ಸ್ಮೃತ್ವಾ ಸ್ವಪತಿಮಾದರಾತ್ |**
**ಕ್ಷಿತಾವುದೀಚ್ಯಾಂ ಸಹಸಾ ನಿಷಸಾದ ಪ್ರಶಾಂತಧೀಃ || ೨ ||**

---

## ಮೂವತ್ತನೆಯ ಅಧ್ಯಾಯವು.

೧. ನಾರದಮುನಿಯು ಬ್ರಹ್ಮನನ್ನು ಮತ್ತೆ ಕೇಳಿದನು ;—ಎಲೈ ಬ್ರಹ್ಮನೆ, ಹಿಂದೆ ಹೇಳಿದಂತೆ ಶಂಕರನ ಪ್ರಿಯೆಯಾದ ಸತೀದೇವಿಯು ದಕ್ಷಾದಿಗಳಿಗೆ ಬುದ್ಧಿವಾದವನ್ನು ಹೇಳಿ ಸುಮ್ಮನಾದಮೇಲೆ ಅಲ್ಲಿ ಮುಂದೇನಾಯಿತೆಂಬುದನ್ನು ಹೇಳೆನಲು,

೨-೩. ಬ್ರಹ್ಮನು ಹೇಳಿದನು :—ಎಲೈ ನಾರದ, ಹಾಗೆ ದಕ್ಷಾದಿಗಳಿಗೆ ಹೇಳಿ ಸತಿಯು ಆ ಕೂಡಲೇ ಯಜ್ಞಶಾಲೆಯ ಉತ್ತರದಿಕ್ಕಿನಲ್ಲಿ ಶಾಂತಿಯಿಂದ ಆಸನವನ್ನು

ಜಲಮಾಚಮ್ಯ ವಿಧಿವತ್ಸಂವೃತಾ ವಾಸಸಾ ಶುಚಿಃ ।
ದೃಙ್ನಿಮೀಲ್ಯ ಪತಿಂ ಸ್ಮೃತ್ವಾ ಯೋಗಮಾರ್ಗಂ ಸಮಾವಿಶತ್ ॥ ೩ ॥

ಕೃತ್ವಾ ಸಮಾನಾವನಿಲೌ ಪ್ರಾಣಾಪಾನೌ ಸಿತಾನನಾ ।
ಉತ್ಥಾಪ್ಯೋದಾನಮಥ ಚ ಯತ್ನಾತ್ಸಾ ನಾಭಿಚಕ್ರತಃ ॥ ೪ ॥

ಹೃದಿ ಸ್ಥಾಪ್ಯೋರಸಿ ಧಿಯಾ ಸ್ಥಿತಂ ಕಂಠಾದ್ಭ್ರುವೋಸ್ಸತೀ ।
ಅನಿಂದಿತಾನಯನ್ಮಧ್ಯಂ ಶಂಕರಪ್ರಾಣವಲ್ಲಭಾ ॥ ೫ ॥

ಏವಂ ಸ್ವದೇಹಂ ಸಹಸಾ ದಕ್ಷಕೋಪಾಜ್ಜಿಹಾಸತೀ ।
ದಗ್ಧೇ ಗಾತ್ರೇ ವಾಯುಶುಚಿಧಾರಣಂ ಯೋಗಮಾರ್ಗತಃ ॥ ೬ ॥

ತತಃ ಸ್ವಭರ್ತುಶ್ಚರಣಂ ಚಿಂತಯಂತೀ ನ ಚಾಪರಂ ।
ಅಪಶ್ಯತ್ಸಾ ಸತೀ ತತ್ರ ಯೋಗಮಾರ್ಗನಿವಿಷ್ಟಧೀಃ ॥ ೭ ॥

ಹತಕಲ್ಮಷತದ್ದೇಹಃ ಪ್ರಾಪತಚ್ಚ ತದಗ್ನಿನಾ ।
ಭಸ್ಮಸಾದಭವತ್ಸದ್ಯೋ ಮುನಿಶ್ರೇಷ್ಠ ತದಿಚ್ಛಯಾ ॥ ೮ ॥

---

ಹಾಕಿ ಕುಳಿತು ಜಲವನ್ನು ಆಚಮನವಮಾಡಿ ಪರಿಶುದ್ಧಳಾಗಿ ಕಣ್ಣುಗಳನ್ನು ಮುಚ್ಚಿ ಪತಿಯಾದ ಶಿವನನ್ನು ಸ್ಮರಿಸಿ ಯೋಗ (ಸಮಾಧಿ) ದಲ್ಲಿ ಆಸಕ್ತಳಾದಳು.

೪-೫. ಬಳಿಕ ಆ ಸತೀದೇವಿಯು ಪ್ರಾಣ ಮತ್ತು ಅಪಾನ ಎಂಬ ಎರಡು ಪ್ರಾಣವಾಯುಗಳನ್ನು ಸಮಾನಗತಿಗೆ ತಂದು ಉದಾನವಾಯುವನ್ನು ಹೊಕ್ಕಳುಮಧ್ಯದಿಂದ ಮೇಲಕ್ಕೆ ತಂದು ಹೃದಯದಲ್ಲಿ ಸ್ಥಾಪಿಸಿದಳು. ಆಮೇಲೆ ಹೃದಯದಿಂದ ಕಂಠಕ್ಕೇರಿಸಿದಳು. ಆಮೇಲೆ ಹುಬ್ಬುಗಳ ನಡುವೆ ತಂದಳು.

೬-೮. ಬಳಿಕ ಆ ಸತೀದೇವಿಯು ಯೋಗಧ್ಯಾನದ ರೀತಿಯಲ್ಲಿ ತನ್ನ ಪತಿಯಾದ ಶಂಕರನ ಚರಣಗಳನ್ನು ಏಕದೃಷ್ಟಿಯಿಂದ ಚಿಂತಿಸುತ್ತಾ ಆ ಶಿವನನ್ನೇ ಸಾಕ್ಷಾತ್ಕರಿಸಿ ಯೋಗಮಾರ್ಗದಿಂದ ಪ್ರಾಣವಾಯುಗಳನ್ನು ಬಂಧಿಸಿ ಆ ಕೂಡಲೇ ದಕ್ಷನ ಮೇಲಿನ ಕೋಪದಿಂದ ತನ್ನ ಶರೀರದಲ್ಲಿ ಜಿಹಾಸೆಯನ್ನೂ ಹೊಂದಿದಳು. ಯೋಗಕ್ರಮದಿಂದ ಆವಳ ಶರೀರವು ಕಲ್ಮಷರಹಿತವಾಗಿ ಪವಿತ್ರವಾಯಿತು. ಮತ್ತೂ ಆ ಸತಿಯು ತನ್ನ ಇಚ್ಛೆಯಿಂದಲೇ ತನ್ನ ಶರೀರವನ್ನು ಯೋಗಮಾರ್ಗದಿಂದ ದಹಿಸಿ ಭಸ್ಮವಾಗುವಂತೆ ಮಾಡಿದಳು.

**ತತ್ಪಶ್ಯತಾಂ ಚ ಖೇ ಭೂಮೌ ನಾದೋಽಭೂತ್ಸುಮಹಾಂಸ್ತದಾ ।**
**ಹಾಹೇತಿ ಸೋದ್ಭುತಶ್ಚಿತ್ರಸ್ಸುರಾದೀನಾಂ ಭಯಾವಹಃ ॥ ೯ ॥**

**ಹಂತ ಪ್ರಿಯಾ ಪರಾ ಶಂಭೋರ್ದೇವೀ ದೈವತಮಸ್ಯ ಹಿ ।**
**ಅಹಾದಸೂರ್ಣ ಸತೀ ಕೇನ ಸುದುಷ್ಟೇನ ಪ್ರಕೋಪಿತಾ ॥ ೧೦ ॥**

**ಅಹೋತ್ವನಾತ್ಮ್ಯಂ ಸುಮಹದಸ್ಯ ದಕ್ಷಸ್ಯ ಪಶ್ಯತ ।**
**ಚರಾಚರಂ ಪ್ರಜಾ ಯಸ್ಯ ಯತ್ಪುತ್ರಸ್ಯ ಪ್ರಜಾಪತೇಃ ॥ ೧೧ ॥**

**ಅಹೋಽದ್ಯ ವಿಮನಾಽಭೂತ್ಸಾ ಸತೀ ದೇವೀ ಮನಸ್ವಿನೀ ।**
**ವೃಷಧ್ವಜಪ್ರಿಯಾಭೀಕ್ಷ್ಣಂ ಮಾನಯೋಗ್ಯಾ ಸತಾಂ ಸದಾ ॥ ೧೨ ॥**

**ಸೋಽಯಂ ದುರ್ಮರ್ಷಹೃದಯೋ ಬ್ರಹ್ಮಧೃಕ್ಸ ಪ್ರಜಾಪತಿಃ ।**
**ಮಹತೀಮಪಕೀರ್ತಿಂ ಹಿ ಪ್ರಾಪ್ಸ್ಯತಿ ತ್ವಖಿಲೇ ಭವೇ ॥ ೧೩ ॥**

---

೯. ಸತಿಯು ಹೀಗೆ ಶರೀರವನ್ನು ಬಿಟ್ಟುದದನ್ನು ನೋಡಿ ಆಕಾಶಚಾರಿಗಳಾದ ದೇವತೆಗಳೂ ಭೂಲೋಕದ ಮನುಷ್ಯರೂ ದುಃಖದಿಂದ ಹಾಹಾಕಾರಮಾಡಿದರು.

೧೦. ಅಯ್ಯೋ ! ಸತೀದೇವಿಯು ಜಗತ್ತಿಗೇ ಮಾತೆಯು. ಪರಮೇಶ್ವರನ ಪ್ರಿಯೆಯು. ಇಂತಹವಳು ಪ್ರಾಣಗಳನ್ನು ತ್ಯಜಿಸಿದಳು. ಯಾವ ಮೂರ್ಖನು ಅವಳು ಪ್ರಾಣಕಳೆದುಕೊಳ್ಳುವಷ್ಟು ಅವಮಾನಮಾಡಿದನು ?

೧೧. ಆಶ್ಚರ್ಯವು. ದಕ್ಷನು ಬ್ರಹ್ಮನ ಪುತ್ರನು. ಜಗತ್ತೆಲ್ಲವೂ ಆ ದಕ್ಷನ ಪ್ರಜೆಯು. ಇಂತವನು ಇಂತಹ ಮೂರ್ಖತನವನ್ನು ಮಾಡಿರುವನು. ಇದು ತುಂಬಾ ಆಶ್ಚರ್ಯಕರವಾದುದು.

೧೨. ಆ ದಕ್ಷನು ಅವಮಾನಮಾಡಿದ್ದುದರಿಂದಲೇ ಮಾನವತಿಯೂ ಪೂಜಿಸಲು ಯೋಗ್ಯಳೂ, ಶಂಕರಪ್ರಿಯೆಯೂ ಆದಂತಹ ಸತೀದೇವಿಯು ಪ್ರಾಣವನ್ನು ತ್ಯಜಿಸಿರುವಳು.

೧೩. ಈ ದಕ್ಷನು ತುಂಬಾ ಅಸೂಯಾಪರನು. ಇವನಿಗೆ ಬ್ರಹ್ಮನ ಮಗನೆಂದು ತುಂಬಾ ಹೆಮ್ಮೆಯಿರುವುದು. ಇವನು ಜಗತ್ತಿನಲ್ಲಿ ಮಹತ್ತಾದ ಅಪಕೀರ್ತಿಯನ್ನು ಹೊಂದುವನು.

ಯತ್ಸ್ವಾಂಗಜಾಂ ಸುತಾಂ ಶಂಭುದ್ವಿಟ್ ನ್ಯಷೇಧತ್ಸಮುದ್ಯತಾಂ ।
ಮಹಾನರಕಭೋಗೀ ಸ ಮೃತಯೇ ನೋಽಪರಾಧತಃ ॥ ೧೪ ॥

ವದತ್ಸ್ವೇವಂ ಜನೇ ಸತ್ಯಾ ದೃಷ್ಟ್ವಾಽಸುತ್ಯಾಗಮುದ್ಭುತಂ ।
ದ್ರುತಂ ತತ್ಪಾರ್ಷದಾಃ ಕ್ರೋಧಾದುದತಿಷ್ಠನ್ನುದಾಯುಧಾಃ ॥ ೧೫ ॥

ದ್ವಾರಿ ಸ್ಥಿತಾ ಗಣಾಸ್ಸರ್ವೇ ರಸಾಯುತಮಿತಾ ರುಷಾ ।
ಶಂಕರಸ್ಯ ಪ್ರಭೋಸ್ತೇ ವಾಽಕ್ರುಧ್ಯನ್ನತಿಮಹಾಬಲಾಃ ॥ ೧೬॥

ಹಾಹಾಕಾರಮಕುರ್ವಂಸ್ತೇ ಧಿಕ್ ಧಿಕ್ ನ ನೇತಿ ವಾದಿನಃ ।
ಉಚ್ಚೈಸ್ಸರ್ವೇಽಸಕೃದ್ವೀರಾಶ್ಶಂಕರಸ್ಯ ಗಣಾಧಿಪಾಃ ॥ ೧೭ ॥

ಹಾಹಾಕಾರೇಣ ಮಹತಾ ವ್ಯಾಪ್ತಮಾಸೀದ್ದಿಗಂತರಂ ।
ಸರ್ವೇ ಪ್ರಾಪುರ್ಭಯಂ ದೇವಾ ಮುನಯೋಽನ್ಯೇಽಪಿ ತೇ ಸ್ಥಿತಾಃ ॥

---

೧೪. ಶಂಕರದ್ವೇಷಿಯಾದ ಈ ದಕ್ಷನು ತಾನಾಗಿ ಬಂದ ತನ್ನ ಮಗಳನ್ನೂ ಸಹ ತಡೆದು ಅವಮಾನಗೊಳಿಸಿರುವನು. ಇದರ ಫಲವಾಗಿ ಇವನು ಮಹಾನರಕವನ್ನೂ ಅಪಮೃತ್ಯುವನ್ನೂ ಪಡೆಯುವನು.

೧೫. ಹೀಗೆ ಜನಗಳು ಹೇಳುತ್ತಲಿರಲು, ಸತಿಯು ದೇಹತ್ಯಾಗವನ್ನು ಮಾಡಿದದನ್ನು ನೋಡಿ ಶಂಕರನ ಪ್ರಮಥಗಣಗಳು ಕೋಪದಿಂದ ಆಯುಧಗಳನ್ನು ಹಿಡಿದು ನಿಂತರು.

೧೬-೧೭. ಸತೀದೇವಿಯ ಜೊತೆಗೆ ಬಂದ ಮಹಾಬಲಶಾಲಿಗಳಾದ ಹತ್ತು ಸಾವಿರ ಶಿವಗಣಗಳೂ ಸಹ ಬಾಗಿಲಲ್ಲಿ ನಿಂತು ದಕ್ಷನನ್ನು ಧಿಕ್ಕಾರವನ್ನು ಮಾಡಿ ನಿಂದಿಸುತ್ತಾ ಗಟ್ಟಿಯಾಗಿ ಹಾಹಾಕಾರವನ್ನು ಮಾಡಿದರು.

೧೮. ಮಹತ್ತಾದ ಆ ಹಾಹಾಕಾರದಿಂದ ದಿಙ್ಮಂಡಲವೆಲ್ಲವೂ ತುಂಬಿ ಹೋಯಿತು. ಅಲ್ಲಿ ಸೇರಿದ್ದ ದೇವತೆಗಳು ಮುನಿಗಳು ಮುಂತಾದವರೆಲ್ಲರೂ ಭಯಗೊಂಡರು.

ಗಣಾಸ್ಸಮ್ಮಂತ್ರ್ಯ ತೇ ಸರ್ವೇऽಭೂವರ್ ಕ್ರುದ್ಧಾ ಉದಾಯುಧಾಃ ।
ಕುರ್ವಂತಃ ಪ್ರಲಯಂ ವಾದ್ಯಶಸ್ತ್ರೈರ್ವ್ಯಾಪ್ತಂ ದಿಗಂತರಂ ॥ ೧೯ ॥

ಶಸ್ತ್ರೈರಘ್ನನ್ನಿಜಾಂಗಾನಿ ಕೇಚಿತ್ತತ್ರ ಶುಚಾಕುಲಾಃ ।
ಶಿರೋಮುಖಾನಿ ದೇವರ್ಷೇ ಸುತೀಕ್ಷ್ಣೈಃ ಪ್ರಾಣನಾಶಿಭಿಃ ॥ ೨೦ ॥

ಇತ್ಥಂ ತೇ ವಿಲಯಂ ಪ್ರಾಪ್ತಾ ದಾಕ್ಷಾಯಣ್ಯಾ ಸಮಂ ತದಾ ।
ಗಣಾಯುತೇ ದ್ವೇ ಚ ತದಾ ತದದ್ಭುತಮಿವಾಭವತ್ ॥ ೨೧ ॥

ಗಣಾ ನಾಶಾವಶಿಷ್ಟಾ ಯೇ ಶಂಕರಸ್ಯ ಮಹಾತ್ಮನಃ ।
ದಕ್ಷಂ ತಂ ಕ್ರೋಧಿತಂ ಹಂತುಮುದತಿಷ್ಠನ್ನುದಾಯುಧಾಃ ॥ ೨೨ ॥

---

೧೯. ಈಶ್ವರನ ಪ್ರಮಥಗಣಗಳೆಲ್ಲರೂ ತಮ್ಮತಮ್ಮಲ್ಲೇ ಮಾತನಾಡಿಕೊಂಡು ಕೋಪದಿಂದ ದಕ್ಷಯಜ್ಞವನ್ನು ನಾಶಮಾಡಲೋಸುಗ ಆಯುಧಗಳನ್ನು ಹಿಡಿದು ನಿಂತರು. ಅವರು ಪ್ರಯೋಗಿಸಿದ ಆಯುಧಧ್ವನಿಗಳಿಂದಲೂ ವಾದ್ಯಧ್ವನಿಯಿಂದಲೂ ದಶದಿಕ್ಕುಗಳು ತುಂಬಿಹೋದುವು.

೨೦. ಎಲೈ ನಾರದ, ಕೆಲವು ಗಣಗಳು ಸತಿಯು ಪ್ರಾಣವನ್ನು ತ್ಯಜಿಸಿದುದರಿಂದ ಶೋಕಗೊಂಡು ಹರಿತವಾದವುಗಳೂ, ಪ್ರಾಣವನ್ನು ನಾಶಮಾಡುವಂತಹವೂ ಆದಂತಹ ಆಯುಧಗಳಿಂದ ತಮ್ಮ ಶಿರಸ್ಸು, ಮುಖ ಮುಂತಾದ ತಮ್ಮ ತಮ್ಮ ಅವಯವಗಳನ್ನೇ ಪ್ರಹರಿಸಿಕೊಂಡರು.

೨೧. ಹೀಗೆ ಇಪ್ಪತ್ತುಸಾವಿರ ಗಣಗಳು ತಮ್ಮ ಅವಯವಗಳನ್ನು ಪ್ರಹರಿಸಿಕೊಂಡು ಸತಿಯೊಡನೆ ನಾಶವಾದವು. ಗಣಗಳ ಈ ಕೃತ್ಯವು ಅಲ್ಲಿ ಎಲ್ಲರಿಗೂ ತುಂಬಾ ಆಶ್ಚರ್ಯವನ್ನುಂಟುಮಾಡಿತು.

೨೨. ಸತಿಯೊಡನೆ ನಾಶಹೊಂದಿ ಉಳಿದ ಮತ್ತೆ ಕೆಲವು ಗಣಗಳು ಕ್ರೋಧಗೊಂಡಿರುವ ದಕ್ಷಬ್ರಹ್ಮನನ್ನು ನಾಶಮಾಡಲು ಕೋಪದಿಂದ ಆಯುಧಗಳನ್ನು ಹಿಡಿದು ಮುನ್ನುಗ್ಗಿಬಂದವು.

ತೇಷಾಮಾಪತತಾಂ ವೇಗಂ ನಿಶಮ್ಯ ಭಗವಾನ್ ಭೃಗುಃ ।
ಯಜ್ಞಘ್ನಘ್ನೇನ ಯಜುಷಾ ದಕ್ಷಿಣಾಗ್ನೌ ಜುಹೋನ್ಮುನೇ ॥ ೨೩ ॥

ಹೂಯಮಾನೇ ಚ ಭೃಗುಣಾ ಸಮುತ್ಪೇತುರ್ಮಹಾಸುರಾಃ ।
ಋಭವೋ ನಾಮ ಪ್ರಬಲವೀರಾಸ್ತತ್ರ ಸಹಸ್ರಶಃ ॥ ೨೪ ॥

ತೈರಲಾತಾಯುಧೈಸ್ತತ್ರ ಪ್ರಮಥಾನಾಂ ಮುನೀಶ್ವರ ।
ಅಭೂದ್ಯುದ್ಧಂ ಸುವಿಕಟಂ ಶೃಣ್ವತಾಂ ರೋಮಹರ್ಷಣಂ ॥ ೨೫ ॥

ಋಭುಭಿಸ್ತೈರ್ಮಹಾವೀರ್ಯೈರ್ಹನ್ಯಮಾನಾಸ್ಸಮಂತತಃ ।
ಅಯತ್ನಯಾನಾಃ ಪ್ರಮಥಾ ಉಶದ್ಭಿರ್ಬ್ರಹ್ಮತೇಜಸಾ ॥ ೨೬ ॥

ಏವಂ ಶಿವಗಣಾಸ್ತೇ ವೈ ಹತಾ ವಿದ್ರಾವಿತಾ ದ್ರುತಂ ।
ಶಿವೇಚ್ಛಯಾ ಮಹಾಶಕ್ತ್ಯಾ ತದದ್ಭುತಮಿವಾಭವತ್ ॥ ೨೭ ॥

---

೨೩. ಹೀಗೆ ಗಣಗಳು ದಕ್ಷನನ್ನು ಸಂಹರಿಸಲು ವೇಗವಾಗಿ ಬರುತ್ತಿರುವುದನ್ನು ನೋಡಿ ಅಧ್ವರ್ಯುವಾದ ಭೃಗುಮುನಿಯು ಯಜ್ಞಶತ್ರುಗಳನ್ನು ನಾಶಮಾಡುವಂತಹ ಯಜುರ್ವೇದವಾಕ್ಯದಿಂದ ಹೋಮಮಾಡಿದನು.

೨೪. ಹೋಮಮಾಡಿದಕೂಡಲೇ ಅಗ್ನಿಯಿಂದ "ಋಭವ" ರೆಂಬ ಬಲಶಾಲಿಗಳೂ ವೀರರೂ ಆದಂತಹ ರಾಕ್ಷಸರು ಸಹಸ್ರಸಂಖ್ಯೆಯಿಂದ ಜನಿಸಿದರು.

೨೫. ಬೆಂಕಿಯುಕೊಳ್ಳಿಗಳನ್ನು ಹಿಡಿದು ಆ ರಾಕ್ಷಸರು ಪ್ರಮಥಗಣಗಳೊಡನೆ ಭಯಂಕರವಾಗಿ ಯುದ್ಧವನ್ನು ಮಾಡಿದರು.

೨೬-೨೭. ಬ್ರಹ್ಮತೇಜಸ್ಸಿನಿಂದ ಜನಿಸಿದ ಆ ಋಭುರಾಕ್ಷಸರಿಂದ ಪ್ರಮಥಗಳ ಗಣಗಳು ಪ್ರಹರಿಸಲ್ಪಡುತ್ತಿರಲು, ಪ್ರತೀಕಾರಮಾಡಲು ಅಶಕ್ತರಾಗಿ ಕೆಲವು ಗಣಗಳು ನಾಶವನ್ನು ಹೊಂದಿದವು. ಕೆಲವು ಓಡಿಹೋದುವು. ಹೀಗೆ ತುಂಬಾ ಆಶ್ಚರ್ಯಕರವಾದ ಕಾರ್ಯವು ನಡೆಯಿತು. ಇದೆಲ್ಲಾ ಶಿವೇಚ್ಛೆಯು.

ತದ್ದೃಷ್ಟ್ವಾ ಋಷಯೋ ದೇವಾಶ್ಶಕ್ರಾದ್ಯಾಸ್ಸಮರುದ್ಗಣಾಃ ।
ವಿಶ್ವೇಽಶ್ವಿನೌ ಲೋಕಪಾಲಾಸ್ತೂಷ್ಣೀಂಭೂತಾಸ್ತದಾಭವನ್ ॥ ೨೮ ॥

ಕೇಚಿದ್ವಿಷ್ಣುಂ ಪ್ರಭುಂ ತತ್ರ ಪ್ರಾರ್ಥಯಂತಸ್ಸಮಂತತಃ ।
ಉದ್ವಿಗ್ನಾ ಮಂತ್ರಯಂತಶ್ಚ ವಿಘ್ನಾಭಾವಂ ಮುಹುರ್ಮುಹುಃ ॥ ೨೯ ॥

ಸುವಿಚಾರ್ಯೋದರ್ಕಫಲಮಹೋದ್ವಿಗ್ನಾಸ್ಸುಬುದ್ಧಯಃ ।
ಸುರವಿಷ್ಣ್ವಾದಯೋಽಭೂವಂಸ್ತನ್ನಾಶಾದ್ರಾವಣಾನ್ಮುಹುಃ ॥ ೩೦ ॥

ಏವಂ ಭೂತಸ್ತದಾ ಯಜ್ಞೋ ವಿಘ್ನೋ ಜಾತೋ ದುರಾತ್ಮನಃ ।
ಬ್ರಹ್ಮಬಂಧೋಶ್ಚ ದಕ್ಷಸ್ಯ ಶಂಕರದ್ರೋಹಿಣೋ ಮುನೇ ॥ ೩೧ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಸತೀಖಂಡೇ ತ್ರಿಂಶೋಽಧ್ಯಾಯಃ.

---

೨೮. ಇದನ್ನು ನೋಡಿ ಮುನಿಗಳೂ, ಇಂದ್ರನೇ ಮೊದಲಾದ ದೇವತೆಗಳೂ, ವಿಶ್ವೇದೇವರೂ, ಅಶ್ವಿನೀದೇವತೆಗಳೂ, ಲೋಕಪಾಲಕರೂ ಇವರೆಲ್ಲರೂ ಭಯದಿಂದ ಏನೂಮಾಡಲಾರದೆ ಸುಮ್ಮನಿದ್ದರು.

೨೯. ಇನ್ನು ಕೆಲವರು ತಮ್ಮಲ್ಲೇ ಆಲೋಚಿಸಿಕೊಂಡು ಪ್ರಭುವಾದ ವಿಷ್ಣುವಿನಬಳಿಗೆ ಬಂದು ಅವನನ್ನು ಪ್ರಾರ್ಥಿಸಿ, ಮುಂದೆ ಯಾಗದಲ್ಲಿ ವಿಘ್ನಬರದಂತೆ ಕಾಯಬೇಕೆಂದು ಕೇಳಿಕೊಂಡರು.

೩೦. ಬುದ್ಧಿಶಾಲಿಗಳಾದ ವಿಷ್ಣು ಮೊದಲಾದವರು ವಿಮರ್ಶಿಸಿ, ಪ್ರಮಥಗಳು ನಷ್ಟವಾದುದರಿಂದಲೂ, ಓಡಿಹೋದುದರಿಂದಲೂ ಮುಂದೆ ಯಜ್ಞಕ್ಕೆ ಮಹಾವಿಘ್ನವು ಬರುವುದೆಂದು ತಿಳಿದರು.

೩೧. ಎಲೈ ನಾರದ, ಹೀಗೆ ಬ್ರಾಹ್ಮಣನೆಂಬ ಅಹಂಕಾರವುಳ್ಳವನೂ ಶಂಕರದ್ವೇಷಿಯೂ ದುರಾತ್ಮನೂ ಆದಂತಹ ದಕ್ಷನ ಯಾಗಕ್ಕೆ ವಿಘ್ನವು ಬಂದೊದಗಿತು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಮೂವತ್ತನೆಯ
ಅಧ್ಯಾಯವು ಮುಗಿದುದು.



|| ಶ್ರೀಃ ||

|| ಓಂ ನಮಃ ಶಿವಾಯ ||

---

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಏಕತ್ರಿಂಶೋಽಧ್ಯಾಯಃ

---

|| ಬ್ರಹ್ಮೋವಾಚ ||

ಏತಸ್ಮಿನ್ನಂತರೇ ತತ್ರ ನಭೋವಾಣೀ ಮುನೀಶ್ವರ ।
ಅವೋಚಚ್ಛೃಣ್ವತಾಂ ದಕ್ಷಸುರಾದೀನಾಂ ಯಥಾರ್ಥತಃ || ೧ ||

|| ವ್ಯೋಮವಾಣ್ಯುವಾಚ ||

ರೇ ರೇ ದಕ್ಷ ದುರಾಚಾರ ದಂಭಾಽಽಚಾರಪರಾಯಣ ।
ಕಿಂ ಕೃತಂ ತೇ ಮಹಾಮೂಢ ಕರ್ಮ ಚಾನರ್ಥಕಾರಕಂ || ೨ ||

---

### ಮೂವತ್ತೊಂದನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು ;—ಎಲೈ ನಾರದ, ಈ ಮಧ್ಯದಲ್ಲಿ ದಕ್ಷ ಮತ್ತು ದೇವತೆಗಳು ಮುಂತಾದವರಿಗೆ ಕೇಳಿಸುವಂತೆ ಸ್ಪಷ್ಟವಾಗಿ ಆಕಾಶವಾಣಿಯು ಹೀಗೆ ಕೇಳಿಸಿತು.

೨. ಆಕಾಶವಾಣಿಯು ಹೇಳಿತು ;—ಎಲೈ ದಕ್ಷನೇ, ನೀನು ದುರಾಚಾರಿಯು, ಗರ್ವಿಷ್ಠನು, ಮೂರ್ಖನು. ಬರಿಯ ಡಂಭವನ್ನು ಪ್ರದರ್ಶಿಸುವೆ. ಇಂತಹ ನೀನು ಮಾಡಿದ ಈ ಯಜ್ಞವು ಅನರ್ಥವನ್ನೇ ಉಂಟುಮಾಡುವುದು.

ನ ಕೃತಂ ಶೈವರಾಜಸ್ಯ ದಧೀಚೇರ್ವಚನಸ್ಯ ಹಿ ।
ಪ್ರಮಾಣಂ ತತ್ಕೃತೇ ಮೂಢ ಸರ್ವಾನಂದಕರಂ ಶುಭಂ ॥ ೩ ॥

ನಿರ್ಗತಸ್ತೇ ಮುಖಾದ್ವಿಪ್ರಃ ಶಾಪಂ ದತ್ವಾ ಸುದುಸ್ಸಹಂ ।
ತತೋಽಪಿ ಬುದ್ಧಂ ಕಿಂಚಿನ್ನೋ ತ್ವಯಾ ಮೂಢೇನ ಚೇತಸಿ ॥ ೪ ॥

ತತಃ ಕೃತಃ ಕಥಂ ನೈವ ಸ್ವಪುತ್ರ್ಯಾಸ್ತ್ವಾದರಃ ಪರಃ ।
ಸಮಾಗತಾಯಾಸ್ಸತ್ಯಾಶ್ಚ ಮಂಗಲಾಯಾ ಗೃಹಂ ಸ್ವತಃ ॥ ೫ ॥

ಸತೀಭವೌ ನಾರ್ಚಿತೌ ಹಿ ಕಿಮಿದಂ ಜ್ಞಾನದುರ್ಬಲ ।
ಬ್ರಹ್ಮಪುತ್ರ ಇತಿ ವೃಥಾ ಗರ್ವಿತೋಽಸಿ ವಿಮೋಹಿತಃ ॥ ೬ ॥

ಸಾ ಸತ್ಯೇವ ಸದಾರಾಧ್ಯಾ ಸರ್ವಕರ್ಮಫಲಪ್ರದಾ ।
ತ್ರಿಲೋಕಮಾತಾ ಕಲ್ಯಾಣೀ ಶಂಕರಾರ್ಧಾಂಗಭಾಗಿನೀ ॥ ೭ ॥

---

೩. ಪರಮಶಿವಭಕ್ತನಾದ ದಧೀಚಿಮುನಿಯ ಮಾತನ್ನು ನೀನು ಗಮನಿಸಲಿಲ್ಲ. ಆ ಮುನಿಯು ಹೇಳಿದುದು ಮಂಗಳಕರವೂ, ಸುಖದಾಯಕವೂ ಆಗಿದ್ದಿತು.

೪. ಆ ದಧೀಚಿಮುನಿಯು ನಿನ್ನ ಯಜ್ಞವು ನಾಶವಾಗುವಂತೆ ನಿನಗೆ ಶಾಪವನ್ನಿತ್ತು ಯಜ್ಞಶಾಲೆಯಿಂದ ಹೊರಟುಹೋದನು. ಅದರಿಂದಲೂ ಮೂಢನಾದ ನಿನಗೆ ತಿಳಿವಳಿಕೆಯು ಬರಲಿಲ್ಲ.

೫. ಆಮೇಲೆ ಮಂಗಳೆಯಾದ ನಿನ್ನ ಪುತ್ರಿ ಸತೀದೇವಿಯು ತಾನಾಗಿಯೇ ನಿನ್ನ ಮನೆಗೆ ಬಂದಳು. ನೀನು ಅವಳನ್ನು ಆದರಿಸಿ ಏಕೆ ಗೌರವಿಸಲಿಲ್ಲ ?

೬. ಪರಮಪೂಜ್ಯರಾದ ಸತೀಶಂಕರರನ್ನು ಅಜ್ಞಾನದಿಂದ ಅರ್ಚಿಸಲಿಲ್ಲ. ನಾನು ಬ್ರಹ್ಮಪುತ್ರನೆಂದು ವೃಥಾ ಗರ್ವಿಷ್ಠನಾಗಿರುವೆ.

೭. ಆ ಸತಿಯನ್ನೇ ಸದಾ ಅರ್ಚಿಸಬೇಕು. ಅವಳು ಸಕಲ ಕರ್ಮಗಳಿಗೂ ಫಲವನ್ನು ಕೊಡುವಳು. ಜಗತ್ತಿಗೇ ತಾಯಿಯು ಮಂಗಳರೂಪಳು, ಶಂಕರನ ಅರ್ಧಾಂಗಿಯು.

**ಸಾ ಸತ್ಯೇವಾರ್ಚಿತಾ ನಿತ್ಯಂ ಸರ್ವಸೌಭಾಗ್ಯಧಾಯಿನೀ ।**
**ಮಾಹೇಶ್ವರೀ ಸ್ವಭಕ್ತಾನಾಂ ಸರ್ವಮಂಗಲದಾಯಿನೀ ॥ ೮ ॥**

**ಸಾ ಸತ್ಯೇವಾರ್ಚಿತಾ ನಿತ್ಯಂ ಸಂಸಾರಭಯನಾಶಿನೀ ।**
**ಮನೋಭೀಷ್ಟಪ್ರದಾ ದೇವೀ ಸರ್ವೋಪದ್ರವಹಾರಿಣೀ ॥ ೯ ॥**

**ಸಾ ಸತ್ಯೇವಾರ್ಚಿತಾ ನಿತ್ಯಂ ಕೀರ್ತಿಸಂಪತ್ಪ್ರದಾಯಿನೀ ।**
**ಪರಮಾ ಪರಮೇಶಾನೀ ಭುಕ್ತಿಮುಕ್ತಿಪ್ರದಾಯಿನೀ ॥ ೧೦ ॥**

**ಸಾ ಸತ್ಯೇವ ಜಗದ್ಧಾತ್ರೀ ಜಗದ್ರಕ್ಷಣಕಾರಿಣೀ ।**
**ಅನಾದಿಶಕ್ತಿಃ ಕಲ್ಪಾಂತೇ ಜಗತ್ಸಂಹಾರಕಾರಿಣೀ ॥ ೧೧ ॥**

**ಸಾ ಸತ್ಯೇವ ಜಗನ್ಮಾತಾ ವಿಷ್ಣುಮಾತಾ ವಿಲಾಸಿನೀ ।**
**ಬ್ರಹ್ಮೇಂದ್ರಚಂದ್ರವಹ್ನ್ಯರ್ಕದೇವಾದಿಜನನೀ ಸ್ಮೃತಾ ॥ ೧೨ ॥**

---

೮. ಆ ಸತೀದೇವಿಯನ್ನು ನಿತ್ಯವೂ ಅರ್ಚಿಸಿದರೆ ಸಕಲ ಸೌಭಾಗ್ಯಗಳೂ ಲಭಿಸುವುವು. ಅವಳು ಮಹೇಶ್ವರನ ಪ್ರಿಯೆಯು. ತನ್ನ ಭಕ್ತರಿಗೆ ಸಕಲ ಕಲ್ಯಾಣಗಳನ್ನೂ ಉಂಟುಮಾಡುವಳು.

೯. ಆ ಸತಿಯನ್ನು ಅರ್ಚಿಸಿದರೆ ಅವಳು ಸಂಸಾರಭಯವನ್ನು ಹೋಗಲಾಡಿಸುವಳು. ಸಕಲ ಮನೋರಥಗಳನ್ನೂ ಉಂಟುಮಾಡುವಳು ತೊಂದರೆಗಳನ್ನೆಲ್ಲಾ ಪರಿಹರಿಸುವಳು.

೧೦. ಆ ಸತೀದೇವಿಯನ್ನು ನಿತ್ಯವೂ ಅರ್ಚಿಸಿದರೆ ಕೀರ್ತಿಸಂಪತ್ತುಗಳು. ಉಂಟಾಗುವುವು. ಅವಳು ಭೋಗ ಮತ್ತು ಮೋಕ್ಷಗಳನ್ನು ಕರುಣಿಸುವಳು· ಅವಳು ಸಾಕ್ಷಾತ್ ಪರಮೇಶ್ವರಿಯು.

೧೧. ಆ ಸತೀದೇವಿಯು ಆದಿಯಿಲ್ಲದ ಮಾಯಾಶಕ್ತಿಯು, ಅವಳೇ ಜಗತ್ತನ್ನು ಸೃಷ್ಟಿಸುವಳು, ರಕ್ಷಿಸುವಳು ಪ್ರಳಯಕಾಲದಲ್ಲಿ ಸಂಹರಿಸುವಳು.

೧೨. ಆ ಸತೀದೇವಿಯೇ ಜಗತ್ತಿಗೆ ತಾಯಿಯು. ವಿಷ್ಣುವಿಗೂ ತಾಯಿಯು. ತನ್ನ ಮಾಯೆಯಿಂದ ಅನೇಕ ಲೀಲೆಗಳನ್ನು ಪ್ರದರ್ಶಿಸುವಳು. ಮತ್ತು ಬ್ರಹ್ಮ ಇಂದ್ರ ಚಂದ್ರ ಅಗ್ನಿ ಸೂರ್ಯ ಮುಂತಾದ ದೇವತೆಗಳಿಗೆ ಮಾತೆಯು.

ಸಾ ಸತ್ಯೇವ ತಪೋಧರ್ಮದಾನಾದಿಫಲದಾಯಿನೀ ।
ಶಂಭುಶಕ್ತಿರ್ಮಹಾದೇವೀ ದುಷ್ಟಹಂತ್ರೀ ಪರಾತ್ಪರಾ ॥ ೧೩ ॥

ಈದೃಗ್ವಿಧಾ ಸತೀದೇವೀ ಯಸ್ಯ ಪತ್ನೀ ಸದಾ ಪ್ರಿಯಾ ।
ತಸ್ಮೈ ಭಾಗೋ ನ ದತ್ತಸ್ತೇ ಮೂಢೇನ ಕುವಿಚಾರಿಣಾ ॥ ೧೪ ॥

ಶಂಭುರ್ಹಿ ಪರಮೇಶಾನಸ್ಸರ್ವಸ್ವಾಮೀ ಪರಾತ್ಪರಃ ।
ವಿಷ್ಣುಬ್ರಹ್ಮಾದಿಸಂಸೇವ್ಯಸ್ಸರ್ವಕಲ್ಯಾಣಕಾರಕಃ ॥ ೧೫ ॥

ತಪ್ಯತೇ ಹಿ ತಪಸ್ಸಿದ್ಧೈರೇತದ್ದರ್ಶನಕಾಂಕ್ಷಿಭಿಃ ।
ಯುಜ್ಯತೇ ಯೋಗಿಭಿರ್ಯೋಗೈರೇತದ್ದರ್ಶನಕಾಂಕ್ಷಿಭಿಃ ॥ ೧೬ ॥

ಅನಂತಧನಧಾನ್ಯಾನಾಂ ಯಾಗಾದೀನಾಂ ತಥೈವ ಚ ।
ದರ್ಶನಂ ಶಂಕರಸ್ಯೈವ ಮಹತ್ಫಲಮುದಾಹೃತಂ ॥ ೧೭ ॥

---

೧೩. ಆ ಸತೀದೇವಿಯೇ ತಪಸ್ಸು, ಧರ್ಮ, ದಾನ ಮುಂತಾದ ಶುಭ ಕಾರ್ಯಗಳಿಗೆ ಫಲವನ್ನು ಕೊಡುವಳು. ಅವಳು ಶಿವನ ಶಕ್ತಿ (ಮಾಯೆ) ಯು, ದೇವತೆಗಳಿಗೂ ದೇವಿಯು. ದುಷ್ಟರನ್ನು ಶಿಕ್ಷಿಸುವಳು, ಸರ್ವೋತ್ಕೃಷ್ಟಳು.

೧೪. ಇಂತಹ ಮಹಿಮೆಯುಳ್ಳ ಸತೀದೇವಿಯು ಶಂಕರನಿಗೆ ಪ್ರಿಯಪತ್ನಿಯು. ಆದರೂ ಅಂತಹ ಶಂಕರನಿಗೆ ದುರ್ಬುದ್ಧಿಯುಳ್ಳ ನೀನು ಯಜ್ಞಭಾಗವನ್ನು ಕೊಡಲಿಲ್ಲ.

೧೫. ಆ ಶಂಕರನು ಪರಮೇಶ್ವರನು, ಎಲ್ಲರಿಗೂ ಸ್ವಾಮಿಯು. ಸರ್ವೋತ್ತಮನು, ಸಕಲ ಮಂಗಳರೂಪನು. ವಿಷ್ಣು ಬ್ರಹ್ಮ ಮೊದಲಾದ ದೇವತೆಗಳೂ ಅವನನ್ನು ಸೇವಿಸಬೇಕು.

೧೬. ಆ ಶಿವನ ಸಾಕ್ಷಾತ್ಕಾರವನ್ನು ಪಡೆಯಲೋಸುಗ ಸಿದ್ಧರು, ಅವನನ್ನು ಕುರಿತು ತಪಸ್ಸನ್ನಾಚರಿಸುವರು. ಯೋಗಿಗಳು ಯೋಗಾಭ್ಯಾಸವನ್ನು ಮಾಡುವರು.

೧೭. ಆ ಶಂಕರನ ದರ್ಶನವನ್ನು ಮಾಡಿದರೆ ಹೆಚ್ಚಾಗಿ ಧನ ಧಾನ್ಯಗಳು ಸಿದ್ಧಿಸುವವು. ಯಾಗಾದಿಗಳಿಗೆ ಮಹಾಫಲವುಂಟಾಗುವುದು.

ಶಿವ ಏವ ಜಗದ್ಧಾತಾ ಸರ್ವವಿದ್ಯಾಪತಿಃ ಪ್ರಭುಃ ।
ಆದಿವಿದ್ಯಾವರಸ್ವಾಮೀ ಸರ್ವಮಂಗಲಮಂಗಲಃ ॥ ೧೮ ॥

ತಚ್ಛಕ್ತೇರ್ನ ಕೃತೋ ಯಸ್ಮಾತ್ಸತ್ಕಾರೋಽದ್ಯ ತ್ವಯಾ ಖಲ ।
ಅತ ಏವಾಧ್ವರಸ್ಯಾಸ್ಯ ವಿನಾಶೋ ಹಿ ಭವಿಷ್ಯತಿ ॥ ೧೯ ॥

ಅಮಂಗಲಂ ಭವತ್ಯೇವ ಪೂಜಾಹರ್ಾಣಾಮಪೂಜಯಾ ।
ಪೂಜ್ಯಮಾನಾ ಚ ನಾಸೌ ಹಿ ಯತಃ ಪೂಜ್ಯತಮಾ ಶಿವಾ ॥ ೨೦ ॥

ಸಹಸ್ರೇಣಾಪಿ ಶಿರಸಾಂ ಶೇಷೋ ಯತ್ಪಾದಜಂ ರಜಃ ।
ವಹತ್ಯಹರಹಃ ಪ್ರೀತ್ಯಾ ತಸ್ಯ ಶಕ್ತಿಶ್ಶಿವಾ ಸತೀ ॥ ೨೧ ॥

ಯತ್ಪಾದಪದ್ಮಮನಿಶಂ ಧ್ಯಾತ್ವಾ ಸಂಪೂಜ್ಯ ಸಾದರಂ ।
ವಿಷ್ಣುರ್ವಿಷ್ಣುತ್ವಮಾಪನ್ನಸ್ತಸ್ಯ ಶಂಭೋಃ ಪ್ರಿಯಾ ಸತೀ ॥ ೨೨ ॥

---

೧೮. ಶಿವನೇ ಜಗತ್ತನ್ನು ಸೃಷ್ಟಿಸುವನು, ಸಕಲ ವಿದ್ಯೆಗಳಿಗೂ ಒಡೆಯನು. ಆದಿವಿದ್ಯಾರೂಪಳಾದ ಆದಿಶಕ್ತಿಯ ಪ್ರಿಯಪತಿಯು. ಎಲ್ಲ ಮಂಗಳಗಳಿಗೂ ಮಂಗಳ ರೂಪನು.

೧೯. ಎಲೈ ಮೂರ್ಖನಾದ ದಕ್ಷನೇ ಆ ಶಿವನ ಶಕ್ತಿರೂಪಳಾದ ಸತೀದೇವಿಗೆ ನೀನು ಸತ್ಕಾರವನ್ನು ಮಾಡಲಿಲ್ಲ. ಆದಕಾರಣ ಈ ನಿನ್ನ ಯಜ್ಞವು ನಾಶ ವಾಗುವುದು.

೨೦. ಪೂಜಿಸಲು ಯೋಗ್ಯರಾದವರನ್ನು ಪೂಜಿಸದಿದ್ದರೆ ಅಮಂಗಲವುಂಟಾಗು ವುದು. ಹೀಗಿರಲು ಪೂಜಿಸಲು ಯೋಗ್ಯಳಾದಂತಹ ಸತೀದೇವಿಯನ್ನು ನೀನು ಅರ್ಚಿಸಲಿಲ್ಲ. ಅವಳು ಎಲ್ಲರಿಂದಲೂ ಪೂಜಿಸಲ್ಪಡುತ್ತಲಿರುವಳು.

೨೧. ಆ ಶಿವನ ಪಾದಧೂಳಿಯನ್ನು ಆದಿಶೇಷನು ತನ್ನ ಸಾವಿರ ಶಿರಸ್ಸು ಗಳಿಂದ ದಿನವೂ ಧರಿಸುವನು. ಅಂತಹ ಪರಮೇಶ್ವರನ ಪ್ರಿಯಪತ್ನಿಯು ಈ ಸತೀದೇವಿಯು. ಇಂತಹವಳನ್ನು ನೀನು ಅವಮಾನಪಡಿಸಿರುವೆ

೨೨. ವಿಷ್ಣುವು ಶಿವನ ಪಾದಕಮಲಗಳನ್ನು ಭಕ್ತಿಯಿಂದ ನಿತ್ಯವೂ ಧ್ಯಾನ ಮಾಡಿ ಪೂಜಿಸಿ ತನ್ನ ವಿಷ್ಣುತ್ವವನ್ನು ಪಡೆದಿರುವನು. ಇಂತಹ ಶಿವನ ಪ್ರಿಯೆಯೇ ಆ ಸತೀದೇವಿಯು.

ಯತ್ಪಾದಪದ್ಮಮನಿಶಂ ಧ್ಯಾತ್ವಾ ಸಂಪೂಜ್ಯ ಸಾದರಂ ।
ಬ್ರಹ್ಮಾ ಬ್ರಹ್ಮತ್ವಮಾಪನ್ನಸ್ತಸ್ಯ ಶಂಭೋಃ ಪ್ರಿಯಾ ಸತೀ ॥ ೨೩ ॥

ಯತ್ಪಾದಪದ್ಮಮನಿಶಂ ಧ್ಯಾತ್ವಾ ಸಂಪೂಜ್ಯ ಸಾದರಂ ।
ಇಂದ್ರಾದಯೋ ಲೋಕಪಾಲಾಃ ಪ್ರಾಪುಃ ಸ್ವಂ ಸ್ವಂ ಪರಂ ಪದಂ ॥ ೨೪ ॥

ಜಗತ್ಪಿತಾ ಶಿವಶ್ಶಕ್ತಿರ್ಜಗನ್ಮಾತಾ ಚ ಸಾ ಸತೀ ।
ಸತ್ಕೃತೌ ನ ತ್ವಯಾ ಮೂಢ ಕಥಂ ಶ್ರೇಯೋ ಭವಿಷ್ಯತಿ ॥ ೨೫ ॥

ದೌರ್ಭಾಗ್ಯಂ ತ್ವಯಿ ಸಂಕ್ರಾಂತಂ ಸಂಕ್ರಾಂತಾಸ್ತ್ವಯಿ ಚಾಪದಃ ।
ಯೌ ಚ ನಾರಾಧಿತೌ ಭಕ್ತ್ಯಾ ಭವಾನೀಶಂಕರೌ ಚ ತೌ ॥ ೨೬ ॥

ಅನಭ್ಯರ್ಚ್ಯ ಶಿವಂ ಶಂಭುಂ ಕಲ್ಯಾಣಂ ಪ್ರಾಪ್ನುಯಾಮಿತಿ ।
ಕಿಮಸ್ತಿ ಗರ್ವೋ ದುರ್ವಾರಸ್ಸ ಗರ್ವೋಽದ್ಯ ವಿನಶ್ಯತಿ ॥ ೨೭ ॥

---

೨೩. ಆ ಶಿವನ ಪಾದಕಮಲವನ್ನೇ ಸದಾ ಧ್ಯಾನಿಸಿ ಭಕ್ತಿಯಿಂದ ಅರ್ಚಿಸಿ ಬ್ರಹ್ಮನು ಬ್ರಹ್ಮತ್ವವನ್ನು ಪಡೆದಿರುವನು. ಆ ಸತೀದೇವಿಯು ಇಂತಹ ಶಿವನ ಪ್ರಿಯಪತ್ನಿಯು.

೨೪. ಆ ಶಂಕರನ ಪಾದಕಮಲವನ್ನೇ ಭಕ್ತಿಯಿಂದ ಧ್ಯಾನಿಸಿ ಅರ್ಚಿಸಿ ಇಂದ್ರಾದಿ ಲೋಕಪಾಲರು ತಮ್ಮ ತಮ್ಮ ಉತ್ಕೃಷ್ಟವಾದ ಸ್ಥಾನವನ್ನು ಪಡೆದಿರುವರು.

೨೫. ಶಿವನು ಜಗತ್ತಿಗೆ ತಂದೆಯು. ಸತೀದೇವಿಯು ಜಗನ್ಮಾತೆಯು, ಇಂತಹ ಸತೀಶಿವರನ್ನು ಮೂಢನಾದ ನೀನು ಸತ್ಕರಿಸಲಿಲ್ಲ. ಹೀಗಿರಲು ನಿನಗೆ ಶ್ರೇಯಸ್ಸು ಲಭಿಸುವುದೆಂತು ?

೨೬. ಎಲೈ ದಕ್ಷ, ನಿನಗೆ ದುರದೃಷ್ಟವು ಬಂದೊದಗಿರುವುದು. ಆಪತ್ತುಗಳು ನಿನಗೆ ಸಿದ್ಧವಾಗಿರುವುವು, ಆದಕಾರಣ ನೀನು ಭವಾನೀ ಶಂಕರರನ್ನು ಆರಾಧಿಸಲಿಲ್ಲ,

೨೭. ಮಂಗಳಕರನಾದ ಆ ಶಿವನನ್ನರ್ಚಿಸದೆ ಶ್ರೇಯಸ್ಸನ್ನು ಪಡೆಯುವೆನೆಂದು ನಿನಗೆ ಗರ್ವವಿರುವುದೇನು? ಹಾಗಿದ್ದರೆ ಆ ಗರ್ವವು ಈಗ ನಾಶವಾಗುವುದು.

ಸರ್ವೇಶವಿಮುಖೋ ಭೂತ್ವಾ ದೇವೇಷ್ವೇತೇಷು ಕಸ್ತವ ।
ಕರಿಷ್ಯತಿ ಸಹಾಯಂ ತಂ ನ ತೇ ಪಶ್ಯಾಮಿ ಸರ್ವಥಾ ॥ ೨೮ ॥

ಯದಿ ದೇವಾಃ ಕರಿಷ್ಯಂತಿ ಸಾಹಾಯ್ಯಮಧುನಾ ತವ ।
ತದಾ ನಾಶಂ ಸಮಾಪ್ಸ್ಯಂತಿ ಶಲಭಾ ಇವ ವಹ್ನಿನಾ ॥ ೨೯ ॥

ಜ್ವಲತ್ವದ್ಯ ಮುಖಂ ತೇ ವೈ ಯಜ್ಞಧ್ವಂಸೋ ಭವತ್ವತಿ ।
ಸಹಾಯಾಸ್ತವ ಯಾವಂತಸ್ತೇ ಜ್ವಲಂತ್ವದ್ಯ ಸತ್ವರಂ ॥ ೩೦ ॥

ಅಮರಾಣಾಂ ಚ ಸರ್ವೇಷಾಂ ಶಪಥೋಽಮಂಗಲಾಯ ತೇ ।
ಕರಿಷ್ಯಂತ್ಯದ್ಯ ಸಾಹಾಯ್ಯಂ ಯದೇತಸ್ಯ ದುರಾತ್ಮನಃ ॥ ೩೧ ॥

ನಿರ್ಗಚ್ಛಂತ್ವಮರಾಃ ಸ್ವೋಕೋತದಧ್ವರಮಂಟಪಾತ್ ।
ಅನ್ಯಥಾ ಭವತೋ ನಾಶೋ ಭವಿಷ್ಯತ್ಯದ್ಯ ಸರ್ವಥಾ ॥ ೩೨ ॥

---

೨೮. ಈಶ್ವರನನ್ನು ದ್ವೇಷಿಸುವಂತಹ ನಿನಗೆ ದೇವತೆಗಳಲ್ಲಿ ಯಾವನು ಸಹಾಯವನ್ನು ಮಾಡಿಯಾನು ? ಯಾವನೂ ಮಾಡಲಸಮರ್ಥನು.

೨೯. ದೇವತೆಗಳು ನಿನಗೆ ಈಗ ಸಹಾಯವನ್ನು ಮಾಡಿದರೆ ಬೆಂಕಿಯಿಂದ ಪತಂಗಗಳು ನಾಶವಾಗುವಂತೆ ಈಶ್ವರ ತೇಜಸ್ಸಿನಿಂದ ನಾಶವನ್ನು ಹೊಂದುವರು.

೩೦. ಎಲೈ ದಕ್ಷನೆ, ಈಗ ನಿನ್ನ ಮುಖವು ಭಸ್ಮವಾಗಲಿ. ಯಜ್ಞವು ನಾಶವಾಗಲಿ, ನಿನಗೆ ಯಾರಾರು ಸಹಾಯಮಾಡುವರೋ ಅವರೂ ಉರಿದುಹೋಗಲಿ.

೩೧. ದುರಾತ್ಮನಾದ ಈ ದಕ್ಷನ ಸಹಾಯಕ್ಕಾಗಿ ದೇವತೆಗಳೆಲ್ಲರೂ ಶಪಥವನ್ನು ಮಾಡಿದರೂ ಅಮಂಗಳವೇ ಎಂದರೆ ಅನಿಷ್ಟವೇ ಆಗುವುದು.

೩೨. ಆದಕಾರಣ ಎಲೈ ದೇವತೆಗಳೇ ನೀವೆಲ್ಲರೂ ಈ ಯಜ್ಞಶಾಲೆಯನ್ನು ಬಿಟ್ಟು ನಿಮ್ಮ ನಿಮ್ಮ ಸ್ಥಾನಗಳಿಗೆ ಹೊರಟುಹೋಗಿರಿ, ಇಲ್ಲದಿದ್ದರೆ ನಿಮಗೆ ಸರ್ವಥಾ ನಾಶವುಂಟಾಗುವುದು.

ನಿರ್ಗಚ್ಛಂತ್ವಪರೇ ಸರ್ವೇ ಮುನಿನಾಗಾದಯೋ ಮುಖಾತ್ ।
ಅನ್ಯಥಾ ಭವತಾಂ ನಾಶೋ ಭವಿಷ್ಯತ್ಯದ್ಯ ಸರ್ವಥಾ ॥ ೩೩ ॥

ನಿರ್ಗಚ್ಛ ತ್ವಂ ಹರೇ ಶೀಘ್ರಮೇತದಧ್ವರಮಂಡಪಾತ್ ।
ಅನ್ಯಥಾ ಭವತೋ ನಾಶೋ ಭವಿಷ್ಯತ್ಯದ್ಯ ಸರ್ವಥಾ ॥ ೩೪ ॥

ನಿರ್ಗಚ್ಛ ತ್ವಂ ವಿಧೇ ಶೀಘ್ರಮೇತದಧ್ವರಮಂಟಪಾತ್ ।
ಅನ್ಯಥಾ ಭವತೋ ನಾಶೋ ಭವಿಷ್ಯತ್ಯದ್ಯ ಸರ್ವಥಾ ॥ ೩೫ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾಧ್ವರಶಾಲಾಯಾಮಖಿಲಾಯಾಂ ಸುಸಂಸ್ಥಿತಾಃ ।
ವ್ಯರಮತ್ಸಾ ನಭೋವಾಣೀ ಸರ್ವಕಲ್ಯಾಣಕಾರಿಣೀ ॥ ೩೬ ॥

ತಚ್ಛ್ರುತ್ವಾ ವ್ಯೋಮವಚನಂ ಸರ್ವೇ ಹರ್ಯಾದಯಸ್ಸುರಾಃ ।
ಅಕಾರ್ಷುರ್ವಿಸ್ಮಯಂ ತಾತ ಮುನಯಶ್ಚ ತಥಾ ಪರೇ ॥ ೩೭ ॥

**ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಸತೀಖಂಡೇ ಏಕತ್ರಿಂಶೋಽಧ್ಯಾಯಃ**

---

೩೩. ಮತ್ತು ಮುನಿಗಳು ನಾಗರು ಮುಂತಾದವರೆಲ್ಲರೂ ಯಜ್ಞದಿಂದ ಹೊರಟುಹೋಗಿರಿ. ಇಲ್ಲದಿದ್ದರೆ ನಿಮಗೂ ನಾಶವು ತಪ್ಪಿದುದಲ್ಲ.

೩೪. ಎಲೈ ವಿಷ್ಣು, ನೀನೂ ಸಹ ಈ ಯಜ್ಞಶಾಲೆಯಿಂದ ಹೊರಟುಹೋಗು. ಇಲ್ಲದಿದ್ದರೆ ನಿನಗೂ ನಾಶವು ಖಂಡಿತ ಆಗುವುದು.

೩೫. ಎಲೈ ಬ್ರಹ್ಮ, ನೀನು ಈಗಲೇ ಈ ಯಜ್ಞಶಾಲೆಯಿಂದ ಹೊರಡು ಇಲ್ಲದಿದ್ದರೆ ನೀನೂ ನಾಶವನ್ನು ಹೊಂದುತ್ತೀಯೆ.

೩೬. ಬ್ರಹ್ಮನು ಹೇಳಿದನು :—ಹೀಗೆ ಯಜ್ಞಶಾಲೆಯಲ್ಲಿರುವ ಎಲ್ಲರಿಗೂ ಹಿತವಾಗಲೆಂದು ಆಕಾಶವಾಣಿಯು ಹೇಳಿ ಸುಮ್ಮನಾಯಿತು.

೩೭. ಎಲೈ ನಾರದ, ಇಂತಹ ಆಕಾಶವಾಣಿಯನ್ನು ಕೇಳಿ ಇಂದ್ರಾದಿದೇವತೆಗಳೂ ಮುನಿಗಳೂ ಸಹ ತುಂಬಾ ಆಶ್ಚರ್ಯಭರಿತರಾದರು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಮೂವತ್ತೊಂದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

---

|| ಓಂ ನಮಃ ಶಿವಾಯ ||

# ಅಥ ಶ್ರೀಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ದ್ವಾತ್ರಿಂಶೋಽಧ್ಯಾಯಃ

---

|| ನಾರದ ಉವಾಚ ||

ಶ್ರುತ್ವಾ ವ್ಯೋಮಗಿರಂ ದಕ್ಷಃ ಕಿಮಕಾರ್ಷೀತ್ತದಾಽಬುಧಃ ।
ಅನ್ಯೇ ಚ ಕೃತವಂತಃ ಕಿಂ ತತಶ್ಚ ಕಿಮಭೂದ್ವದ || ೧ ||

ಪರಾಜಿತಾಶ್ಶಿವಗಣಾಃ ಭೃಗುಮಂತ್ರಬಲೇನ ವೈ ।
ಕಿಮಕಾರ್ಷುಃ ಕುತ್ರ ಗತಾಸ್ತತ್ತ್ವಂ ವದ ಮಹಾಮತೇ || ೨ ||

---

### ಮೂವತ್ತೆರಡನೆಯ ಅಧ್ಯಾಯವು.

೧. ನಾರದಮುನಿಯು ಬ್ರಹ್ಮನನ್ನು ಮತ್ತೆ ಪ್ರಶ್ನೆಮಾಡಿದನು :—ಎಲೈ ಬ್ರಹ್ಮನೇ, ಆಕಾಶವಾಣಿಯನ್ನು ಕೇಳಿ ದಕ್ಷಬ್ರಹ್ಮನು ಏನುಮಾಡಿದನು ? ಮಿಕ್ಕವರು ಏನುಮಾಡಿದರು ? ಮುಂದೇನಾಯಿತು ? ಎಂಬುದನ್ನು ಹೇಳು.

೨. ಭೃಗುಮುನಿಯ ಮಂತ್ರಬಲದಿಂದ ಸೋತೋಡಿಹೋದ ಶಿವಗಣಗಳು ಏನುಮಾಡಿದವು ? ಎಲ್ಲಿಗೆಹೋದವು ? ಸರ್ವಜ್ಞನಾದ ಓ ವಿಧಿಯೇ, ಇದೆಲ್ಲವನ್ನೂ ಹೇಳು ಎನ್ನಲು,

॥ ಬ್ರಹ್ಮೋವಾಚ ॥

ಶ್ರುತ್ವಾ ವ್ಯೋಮಗಿರಂ ಸರ್ವೇ ವಿಸ್ಮಿತಾಶ್ಚ ಸುರಾದಯಃ ।
ನಾವೋಚನ್ ಕಿಂಚಿದಪಿ ತೇ ತಿಷ್ಠಂತಸ್ತು ವಿಮೋಹಿತಾಃ ॥ ೩ ॥

ಪಲಾಯಮಾನಾ ಯೇ ವೀರಾ ಭೃಗುಮಂತ್ರಬಲೇನ ತೇ ।
ಅವಶಿಷ್ಟಾಃ ಶಿವಗಣಾಶ್ಶಿವಂ ಶರಣಮಾಯಯುಃ ॥ ೪ ॥

ಸರ್ವಂ ನಿವೇದಯಾಮಾಸೂ ರುದ್ರಾಯಾಮಿತತೇಜಸೇ ।
ಚರಿತ್ರಂ ಚ ತಥಾಭೂತಂ ಸುಪ್ರಣಮ್ಯಾದರಾಚ್ಚ ತೇ ॥ ೫ ॥

॥ ಗಣಾ ಊಚುಃ ॥

ದೇವ ದೇವ ಮಹಾದೇವ ಪಾಹಿ ನಶ್ಶರಣಾಗತಾನ್ ।
ಸಂಶೃಣ್ವಾದರತೋ ನಾಥ ಸತೀವಾರ್ತಾಂ ಚ ವಿಸ್ತರಾತ್ ॥ ೬ ॥

ಗರ್ವಿತೇನ ಮಹೇಶಾನ ದಕ್ಷೇಣ ಸುದುರಾತ್ಮನಾ ।
ಅಪಮಾನಃ ಕೃತಸ್ಸತ್ಯಾನಾದರೋ ನಿರ್ಜರೈಸ್ತಥಾ ॥ ೭ ॥

---

೩. ಬ್ರಹ್ಮನು ಹೇಳಿದನು :—ಎಲೈ ನಾರದ, ಆಕಾಶವಾಣಿಯನ್ನು ಕೇಳಿ ದೇವತೆಗಳು ಮುಂತಾದವರು ತುಂಬಾ ಆಶ್ಚರ್ಯಗೊಂಡರು ಮತ್ತು ಶಿವಮಾಯೆಯಿಂದ ಮೋಹಿತರಾಗಿ ಏನನ್ನೂ ಹೇಳದೇ ಅಲ್ಲಿಯೇ ಸುಮ್ಮನೆ ಸ್ತಬ್ಧರಾಗಿದ್ದರು.

೪. ಭೃಗುಮುನಿಯ ಮಂತ್ರಬಲದಿಂದ ನಾಶಹೊಂದಿ ಉಳಿದು ಓಡಿಹೋದ ಶಿವಗಣಗಳು ಶಿವನನ್ನು ಮರೆಹೊಕ್ಕವು.

೫. ಆ ಶಿವಗಣಗಳು ಶಿವನನ್ನು ನಮಸ್ಕರಿಸಿ ಮಹಾತೇಜಸ್ವಿಯಾದ ಆ ರುದ್ರನಿಗೆ ನಡೆದ ಸಮಾಚಾರವನ್ನೆಲ್ಲಾ ಹೀಗೆ ಹೇಳಿದುವು.

೬. ಗಣಗಳು ಹೇಳಿದುವು :—ದೇವದೇವನಾದ ಓ ಮಹಾದೇವನೆ, ಶರಣಾಗತರಾದ ನಮ್ಮನ್ನು ರಕ್ಷಿಸು. ಸತೀದೇವಿಯ ಸಮಾಚಾರವನ್ನು ವಿಸ್ತಾರವಾಗಿ ಹೇಳುವೆವು. ಸಾವಧಾನತೆಯಿಂದ ಕೇಳು.

೭. ಓ ಮಹೇಶ್ವರ, ಗರ್ವಿಷ್ಠನೂ ದುರ್ಮತಿಯೂ ಆದ ದಕ್ಷನು ಸತೀದೇವಿಗೆ ಅಪಮಾನವನ್ನು ಮಾಡಿದನು. ದೇವತೆಗಳೂ ಸಹ ಆ ದೇವಿಯನ್ನು ಆದರಿಸಲಿಲ್ಲ.

ತುಭ್ಯಂ ಭಾಗಮುದಾನ್ನೋ ಸ ದೇವೇಭ್ಯಶ್ಚ ಪ್ರದತ್ತವಾನ್ ।
ದುರ್ವಚಾಂಸ್ಯವದತ್ಪ್ರೋಚ್ಚೈರ್ದುರ್ಘಷ್ಟೋ ದಕ್ಷಸ್ಸುಗರ್ವಿತಃ ॥ ೮ ॥

ತತೋ ದೃಷ್ಟ್ವಾ ನ ತೇ ಭಾಗಂ ಯಜ್ಞೇಽಕುಪ್ಯತ್ಸತೀ ಪ್ರಭೋ।
ವಿನಿಂದ್ಯ ಬಹುಶಸ್ತಾತಮಧಾಕ್ಷೀತ್ಸ್ವತನುಂ ತದಾ ॥ ೯ ॥

ಗಣಾಸ್ತ್ವಯುತಸಂಖ್ಯಾಕಾ ಮೃತಾಸ್ತತ್ರ ವಿಲಜ್ಜಯಾ ।
ಸ್ವಾಂಗಾನ್ಯಾಚ್ಛಿದ್ಯ ಶಸ್ತ್ರೈಶ್ಚ ಕ್ರುದ್ಧಾ ವಯಂ ಹ್ಯಪರೇ ವಯಂ ॥ ೧೦ ॥

ತದ್ಯಜ್ಞಂ ಧ್ವಂಸಿತುಂ ವೇಗಾತ್ಸನ್ನದ್ಧಾಸ್ತು ಭಯಾವಹಾಃ ।
ತಿರಸ್ಕೃತಾ ಹಿ ಭೃಗುಣಾ ಸ್ವಪ್ರಭಾವಾದ್ವಿರೋಧಿನಾ ॥ ೧೧ ॥

ತೇ ವಯಂ ಶರಣಂ ಪ್ರಾಪ್ತಾಸ್ತವ ವಿಶ್ವಂಭರ ಪ್ರಭೋ ।
ನಿರ್ಭಯಾನ್ ಕುರು ನಸ್ತಸ್ಮಾದ್ದಯಮಾನ ಭವಾದ್ಭಯಾತ್ ॥ ೧೨ ॥

---

೮. ಯಜ್ಞದಲ್ಲಿ ನಿನಗೆ ಯಜ್ಞಭಾಗವನ್ನು ಕೊಡಲಿಲ್ಲ. ಮಿಕ್ಕ ದೇವತೆಗಳಿಗೆ ಕೊಟ್ಟಿರುವನು. ಅಷ್ಟೇ ಅಲ್ಲ. ನಿನ್ನ ವಿಷಯದಲ್ಲಿ ತುಂಬಾ ಕೆಟ್ಟಮಾತುಗಳನ್ನಾಡಿದನು.

೯. ಸತೀದೇವಿಯು ನಿನಗೆ ಯಜ್ಞಭಾಗವಿಲ್ಲದಿರುವುದನ್ನು ನೋಡಿ ತುಂಬಾ ಕೋಪಗೊಂಡಳು. ತನ್ನ ತಂದೆಯಾದ ದಕ್ಷನನ್ನು ತುಂಬಾ ನಿಂದಿಸಿ ತನ್ನ ಶರೀರವನ್ನು ದಹಿಸಿದಳು.

೧೦. ಸತಿಯು ಪ್ರಾಣತ್ಯಾಗಮಾಡಿದುದರಿಂದ ಶೋಕಗೊಂಡು ಹತ್ತುಸಾವಿರ ಗಣಗಳು ಅಲ್ಲಿಯೇ ಶಸ್ತ್ರಗಳಿಂದ ತಮ್ಮ ಶರೀರಗಳನ್ನೇ ಪ್ರಹರಿಸಿಕೊಂಡು ಮೃತವಾದುವು. ಇನ್ನುಳಿದ ನಾವು ಕ್ರೋಧದಿಂದ ಯುದ್ಧಮಾಡಿದೆವು.

೧೧. ಮತ್ತು ಆ ಯಜ್ಞವನ್ನು ಧ್ವಂಸಮಾಡಲು ಆಯುಧಗಳನ್ನು ಹಿಡಿದು ಸಿದ್ಧರಾದೆವು. ಆಗ ಭೃಗುಮುನಿಯು ತನ್ನ ಮಂತ್ರಬಲದಿಂದ ನಮ್ಮನ್ನು ಪರಾಜಯಗೊಳಿಸಿದನು.

೧೨. ಈಗ ನಾವು ನಿಮ್ಮನ್ನು ಮರೆಹೊಕ್ಕಿರುವೆವು. ಜಗದ್ರಕ್ಷಕನಾದ ಓ ಸ್ವಾಮಿ, ದುಃಖಿತರಾದ ನಮ್ಮನ್ನು ಕರುಣಾಮಯನಾದ ನೀನು ರಕ್ಷಿಸು.

ಅಪಮಾನಂ ವಿಶೇಷೇಣ ತಸ್ಮಿನ್ ಯಜ್ಞೇ ಮಹಾಪ್ರಭೋ ।
ದಕ್ಷಾದ್ಯಾಸ್ತೇಽಖಿಲಾ ದುಷ್ಟಾ ಅಕುರ್ವನ್ ಗರ್ವಿತಾ ಅತಿ ॥ ೧೩ ॥

ಇತ್ಯುಕ್ತಂ ನಿಖಿಲಂ ವೃತ್ತಂ ಸ್ವೇಷಾಂ ಸತ್ಯಾಶ್ಚ ಮಾನದ ।
ತೇಷಾಂ ಚ ಮೂಢಬುದ್ಧೀನಾಂ ಯಥೇಚ್ಛಸಿ ತಥಾ ಕುರು ॥ ೧೪ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ಸ್ವಗಣಾನಾಂ ವಚಃ ಪ್ರಭುಃ ।
ಸಸ್ಮಾರ ನಾರದಂ ಸರ್ವಂ ಜ್ಞಾತುಂ ತಚ್ಚರಿತಂ ಲಘು ॥ ೧೫ ॥

ಆಗತಸ್ತ್ವಂ ದ್ರುತಂ ತತ್ರ ದೇವರ್ಷೇ ದಿವ್ಯದರ್ಶನಃ ।
ಪ್ರಣಮ್ಯ ಶಂಕರಂ ಭಕ್ತ್ಯಾ ಸಾಂಜಲಿಸ್ತತ್ರ ಸಂಸ್ಥಿವಾನ್ ॥ ೧೬ ॥

ತ್ವಾಂ ಪ್ರಶಸ್ಯಾಥ ಸ ಸ್ವಾಮೀ ಸತ್ಯಾ ವಾರ್ತಾಂ ಚ ಪೃಷ್ಟವಾನ್ ।
ದಕ್ಷಯಜ್ಞಗತಾಯಾ ವೈ ಪರಂ ಚ ಚರಿತಂ ತಥಾ ॥ ೧೭ ॥

---

೧೩. ಓ ಮಹಾಪ್ರಭು, ವಿಶೇಷವಾಗಿ ಆ ಯಜ್ಞದಲ್ಲಿ ದಕ್ಷನೇ ಮೊದಲಾದ ಗರ್ವಿಷ್ಠರಾದ ದುಷ್ಟರು ನಿನ್ನನ್ನು ತುಂಬಾ ಅಪಹಾಸ್ಯಮಾಡಿದರು.

೧೪. ಓ ಮಹಾಪ್ರಭು, ಈರೀತಿಯಾಗಿ ನಮ್ಮಗಳ ಮತ್ತು ಸತೀದೇವಿಯ ಸಮಾಚಾರವನ್ನು ಹೇಳಿರುವೆವು. ದುಷ್ಟರಾದ ಆ ದಕ್ಷಾದಿಗಳಿಗೆ ನಿನ್ನಿಷ್ಟಬಂದಂತೆ ತಕ್ಕ ಪ್ರತೀಕಾರವನ್ನು ಮಾಡು ಎಂದರು.

೧೫. ಬ್ರಹ್ಮನು ಹೇಳಿದನು :—ಎಲೈ ನಾರದ, ತನ್ನ ಗಣಗಳು ಹೇಳಿದ ಮಾತುಗಳನ್ನು ಕೇಳಿ ಪರಮೇಶ್ವರನು ಸಕಲ ವೃತ್ತಾಂತವನ್ನೂ ತಿಳಿಯುಲೋಸುಗ ನಾರದನನ್ನು ಆ ಕೂಡಲೇ ಸ್ಮರಿಸಿದನು.

೧೬. ಎಲೈ ನಾರದ, ದಿವ್ಯದೃಷ್ಟಿಯುಳ್ಳ ನೀನು ಶಿವನು ಸ್ಮರಿಸಿದೊಡನೆಯೇ ಆಗ ಅವನಬಳಿಗೆ ಹೋಗಿ ಅವನಿಗೆ ಭಕ್ತಿಯಿಂದ ನಮಸ್ಕರಿಸಿ ಅಂಜಲಿಬದ್ಧನಾಗಿ ವಿನಯದಿಂದ ನಿಂತಿರಲು,

೧೭. ಆಗ ಪರಮೇಶ್ವರನು ನಿನ್ನನ್ನು ಪ್ರಶಂಸಿಸಿ, ದಕ್ಷಯಜ್ಞಕ್ಕೆ ಹೊರಟು ಹೋದ ಸತೀದೇವಿಯ ವೃತ್ತಾಂತವನ್ನು ಪ್ರಶ್ನಿಸಿದನು. ಮತ್ತು ಅಲ್ಲಿ ನಡೆದಿರುವ ಮಿಕ್ಕ ಸಮಾಚಾರವನ್ನೂ ಹೇಳಬೇಕೆಂದು ಕೇಳಿದನು.

ಪೃಷ್ಟೇನ ಶಂಭುನಾ ತಾತ ತ್ವಯಾಶ್ವೇವ ಶಿವಾತ್ಮನಾ ।
ತತ್ಸರ್ವಂ ಕಥಿತಂ ವೃತ್ತಂ ಜಾತಂ ದಕ್ಷಾಧ್ವರೇ ಚ ಯತ್ ॥ ೧೮ ॥

ತದಾಕರ್ಣ್ಯೇಶ್ವರೋ ವಾಕ್ಯಂ ಮುನೇ ತತ್ತ್ವನ್ಮುಖೋದಿತಂ ।
ಚುಕೋಪಾತಿದ್ರುತಂ ರುದ್ರೋ ಮಹಾರೌದ್ರಪರಾಕ್ರಮಃ ॥ ೧೯ ॥

ಉತ್ಪಾಟ್ಯೈಕಾಂ ಜಟಾಂ ರುದ್ರೋ ಲೋಕಸಂಹಾರಕಾರಕಃ ।
ಆಸ್ಫಾಲಯಾಮಾಸ ರುಷಾ ಪರ್ವತಸ್ಯ ತದೋಪರಿ ॥ ೨೦ ॥

ತೋದನಾಚ್ಚ ದ್ವಿಧಾ ಭೂತಾ ಜಟಾ ಸಾ ಚ ಮುನೇ ಪ್ರಭೋಃ ।
ಸಂಬಭೂವ ಮಹಾರಾವೋ ಮಹಾಪ್ರಲಯಭೀಷಣಃ ॥ ೨೧ ॥

ತಜ್ಜಟಾಯಾಸ್ಸಮುದ್ಭೂತೋ ವೀರಭದ್ರೋ ಮಹಾಬಲಃ ।
ಪೂರ್ವಭಾಗೇನ ದೇವರ್ಷೇ ಮಹಾಭೀಮೋ ಗಣಾಗ್ರಣೀಃ ॥ ೨೨ ॥

ಸ ಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠದ್ದಶಾಂಗುಲಂ ।
ಪ್ರಲಯಾನಲಸಂಕಾಶಃ ಪ್ರೋನ್ನತೋ ದೋಸ್ಸಹಸ್ರವಾನ್ ॥ ೨೩ ॥

---

೧೮. ಶಂಕರನು ಹಾಗೆ ಪ್ರಶ್ನಿಸಲು ಶಿವಭಕ್ತನಾದ ನೀನು ದಕ್ಷಯಜ್ಞದಲ್ಲಿ ನಡೆದ ಸಮಾಚಾರವೆಲ್ಲವನ್ನೂ ಹೇಳಿದೆಯಷ್ಟೆ.

೧೯-೨೦. ಎಲೈ ನಾರದ, ನೀನು ಹೇಳಿದ ವಾಕ್ಯವನ್ನು ಕೇಳಿ ಮಹಾಪರಾಕ್ರಮಿಯೂ, ಜಗತ್ಪ್ರಳಯವನ್ನೇ ಮಾಡುವವನೂ ಆದ ಆ ರುದ್ರನು ತುಂಬಾ ಕೋಪಗೊಂಡು ತನ್ನ ಜಟೆಯನ್ನು ಪರ್ವತದಮೇಲೆ ಅಪ್ಪಳಿಸಿ ಹೊಡೆದನು.

೨೧. ಹಾಗೆ ಹೊಡೆಯಲು ಆ ಜಟೆಯು ಎರಡುಭಾಗವಾಯಿತು. ಆಗ ಪ್ರಲಯಕಾಲದಂತೆ ಭಯಂಕರವಾದ ಮಹಾಶಬ್ದವಾಯಿತು.

೨೨. ಆ ಜಟೆಯ ಮೊದಲನೆಯ ಭಾಗದಿಂದ ಮಹಾಬಲಶಾಲಿಯಾದ ವೀರಭದ್ರನು ಜನಿಸಿದನು. ಅವನು ಮುಂದೆ ಶಿವನ ಗಣಗಳಲ್ಲಿ ಶ್ರೇಷ್ಠನೆನಿಸಿದನು.

೨೩. ಆ ವೀರಭದ್ರನು ಭೂಮಿಯೆಲ್ಲವನ್ನೂ ವ್ಯಾಪಿಸಿ ಹತ್ತುಅಂಗುಲಗಳಿಂದಲೆ ಆಕ್ರಮಿಸಿದನು. ಮತ್ತು ಅವನು ಪ್ರಲಯಾಗ್ನಿಯಂತೆ ಭಯಂಕರನಾಗಿದ್ದನು. ಎತ್ತರವಾಗಿದ್ದನು. ಅವನಿಗೆ ಸಾವಿರ ಕೈಗಳಿದ್ದವು.

ಕೋಪನಿಃಶ್ವಾಸತಸ್ತತ್ರ ಮಹಾರುದ್ರಸ್ಯ ಚೇಶಿತುಃ ।
ಜಾತಂ ಜ್ವರಾಣಾಂ ಶತಕಂ ಸನ್ನಿಪಾತಾಸ್ತ್ರಯೋದಶ ॥ ೨೪ ॥

ಮಹಾಕಾಲೀ ಸಮುತ್ಪನ್ನಾ ತಜ್ಜಟಾಪರಭಾಗತಃ ।
ಮಹಾಭಯಂಕರಾ ತಾತ ಭೂತಕೋಟಿಭಿರಾವೃತಾ ॥ ೨೫ ॥

ಸರ್ವೇ ಮೂರ್ತಿಧರಾಃ ಕ್ರೂರಾ ಜ್ವರಾ ಲೋಕಭಯಂಕರಾಃ ।
ಸ್ವತೇಜಸಾ ಪ್ರಜ್ವಲಂತೋ ದಹಂತ ಇವ ಸರ್ವತಃ ॥ ೨೬ ॥

ಅಥ ವೀರೋ ವೀರಭದ್ರಃ ಪ್ರಣಮ್ಯ ಪರಮೇಶ್ವರಂ ।
ಕೃತಾಂಜಲಿಪುಟಃ ಪ್ರಾಹ ವಾಕ್ಯಂ ವಾಕ್ಯವಿಶಾರದಃ ॥ ೨೭ ॥

॥ ವೀರಭದ್ರ ಉವಾಚ ॥

ಮಹಾರುದ್ರ ಮಹಾರೌದ್ರ ಸೋಮಸೂರ್ಯಾಗ್ನಿಲೋಚನ ।
ಕಿಂ ಕರ್ತವ್ಯಂ ಮಯಾ ಕಾರ್ಯಂ ಶೀಘ್ರಮಾಜ್ಞಾಪಯ ಪ್ರಭೋ ॥

---

೨೪. ಆ ರುದ್ರನ ಕೋಪನಿಶ್ವಾಸದಿಂದ ನೂರಾರು ಜ್ವರಗಳು ಜನಿಸಿದುವು. ಹದಿಮೂರು ಸನ್ನಿಪಾತಜ್ವರಗಳು ಜನಿಸಿದುವು.

೨೫. ರುದ್ರನ ಎರಡನೆಯ ಜಟಾಭಾಗದಿಂದ ಮಹಾಭಯಂಕರಳಾದ ಮಹಾಕಾಳಿಯು ಜನಿಸಿದಳು. ಅವಳೊಡನೆ ಅನೇಕ ಭೂತಗಳೂ ಜನಿಸಿದುವು.

೨೬. ಜ್ವರಗಳೆಲ್ಲವೂ ಭಯಂಕರವಾದ ಶರೀರಗಳನ್ನು ಧರಿಸಿ ಲೋಕಕ್ಕೆ ತೊಂದರೆಯನ್ನುಂಟುಮಾಡುವ ಸಾಮರ್ಥ್ಯದಿಂದ ಕೂಡಿ ಮಹಾತೇಜಸ್ಸಿನಿಂದ ಜ್ವಲಿಸುತ್ತಿದ್ದವು.

೨೭. ಬಳಿಕ ವೀರನಾದ ವೀರಭದ್ರನು ಪರಮೇಶ್ವರನನ್ನು ನಮಸ್ಕರಿಸಿ, ಕೈಮುಗಿದುಕೊಂಡು ನಿಂತು ವಿನಯದಿಂದ ಹೀಗೆ ಹೇಳಿದನು.

೨೮. ವೀರಭದ್ರನು ಹೇಳಿದನು :—ಮಹಾಭಯಂಕರನೂ, ಚಂದ್ರಸೂರ್ಯರೇ ನೇತ್ರಗಳುಳ್ಳವನೂ ಆದ ಓ ಮಹಾರುದ್ರನೆ, ನಾನು ಈಗ ಏನನ್ನು ಮಾಡಬೇಕು? ಓ ಸ್ವಾಮಿ, ಜಾಗ್ರತೆ ಅಪ್ಪಣೆಮಾಡು.

ಶೋಷಣೀಯಾಃ ಕಿಮೀಶಾನ ಕ್ಷಣಾರ್ಧೇನೈವ ಸಿಂಧವಃ ।
ಪೇಷಣೀಯಾಃ ಕಿಮಿಶಾನ ಕ್ಷಣಾರ್ಧೇನೈವ ಪರ್ವತಾಃ ॥ ೨೯ ॥

ಕ್ಷಣೇನ ಭಸ್ಮಸಾತ್ಕುರ್ಯಾಂ ಬ್ರಹ್ಮಾಂಡಮುತ ಕಿಂ ಹರ ।
ಕ್ಷಣೇನ ಭಸ್ಮಸಾತ್ಕುರ್ಯಾಂ ಸುರಾನ್ ವಾ ಕಿಂ ಮುನೀಶ್ವರಾನ್ ॥ ೩೦ ॥

ವ್ಯಾಶ್ವಾಸಃ ಸರ್ವಲೋಕಾನಾಂ ಕಿಮು ಕಾರ್ಯೋ ಹಿ ಶಂಕರ ।
ಕರ್ತವ್ಯಂ ಕಿಮುತೇಶಾನ ಸರ್ವಪ್ರಾಣಿವಿಹಂಸನಂ ॥ ೩೧ ॥

ಮಮಾಶಕ್ಯಂ ನ ಕುತ್ರಾಪಿ ತ್ವತ್ಪ್ರಸಾದಾನ್ಮಹೇಶ್ವರ ।
ಪರಾಕ್ರಮೇಣ ಮತ್ತುಲ್ಯೋ ನ ಭೂತೋ ನ ಭವಿಷ್ಯತಿ ॥ ೩೨ ॥

ಯತ್ರ ಯತ್ಕಾರ್ಯಮುದ್ದಿಶ್ಯ ಪ್ರೇಷಯಿಷ್ಯಸಿ ಮಾಂ ಪ್ರಭೋ ।
ತತ್ಕಾರ್ಯಂ ಸಾಧಯಾಮ್ಯೇವ ಸತ್ವರಂ ತ್ವತ್ಪ್ರಸಾದತಃ ॥ ೩೩ ॥

---

೨೯. ಓ ಪರಮೇಶ್ವರ, ಈ ಕೂಡಲೇ ಸಪ್ತಸಮುದ್ರಗಳನ್ನೂ ಬತ್ತಿಸಬೇಕೇನು? ಅಥವಾ ಕ್ಷಣಾರ್ಧದಲ್ಲಿಯೇ ಮಹಾಪರ್ವತಗಳನ್ನು ಚೂರುಚೂರು ಮಾಡಲೆ ?

೩೦ ಅಥವಾ ಒಂದುಕ್ಷಣದಲ್ಲಿಯೇ ಬ್ರಹ್ಮಾಂಡವನ್ನು ಭಸ್ಮಮಾಡಲೆ ? ಅಥವಾ ದೇವತೆಗಳನ್ನಾಗಲೀ ಮುನಿಗಳನ್ನಾಗಲೀ ಸುಟ್ಟುಹಾಕಲೇನು ?

೩೧. ಸಕಲ ಲೋಕಗಳನ್ನೂ ಪ್ರಲಯಮಾಡಿಸಬೇಕೇ? ಅಥವಾ ಸರ್ವ ಪ್ರಾಣಿಗಳನ್ನೂ ಹಿಂಸಿಸಬೇಕೆ ?

೩೨. ನಿನ್ನ ಪ್ರಸಾದದಿಂದ ನನಗೆ ಅಸಾಧ್ಯವಾದಂತಹ ಯಾವ ಕಾರ್ಯವೂ ಇಲ್ಲ. ನನ್ನಂತಹ ಪರಾಕ್ರಮಿಯು ಹಿಂದೆ ಜನಿಸಿರಲಿಲ್ಲ. ಮುಂದೂ ಜನಿಸುವುದಿಲ್ಲ.

೩೩. ಓ ಸ್ವಾಮಿ, ಯಾವ ಕಾರ್ಯಕ್ಕಾಗಿ ನೀನು ನನ್ನನ್ನು ಎಲ್ಲಿಗೆ ಕಳುಹಿಸಿದರೂ ಸರಿಯೆ, ಆ ಕಾರ್ಯವನ್ನು ನಾನು ನಿನ್ನ ಅನುಗ್ರಹದಿಂದ ಸಾಧಿಸಿಕೊಂಡೇ ಬರುವೆನು.

ಕ್ಷುದ್ರಾಸ್ತರಂತಿ ಲೋಕಾಬ್ಧಿಂ ಶಾಸನಾಚ್ಛಂಕರಸ್ಯ ತೇ ।
ಹರಾತೋಽಹಂ ನ ಕಿಂ ಕರ್ತುಂ ಮಹಾಪತ್ಸಾಗರಂ ಕ್ಷಮಃ ॥ ೩೪ ॥

ತ್ವತ್ಪ್ರೇಕ್ಷಿತತೃಣೇನಾಪಿ ಮಹತ್ಕಾರ್ಯಮಯತ್ನತಃ ।
ಕ್ಷಣೇನ ಶಕ್ಯತೇ ಕರ್ತುಂ ಶಂಕರಾತ್ರ ನ ಸಂಶಯಃ ॥ ೩೫ ॥

ಲೀಲಾಮಾತ್ರೇಣ ತೇ ಶಂಭೋ ಕಾರ್ಯಂ ಯದ್ಯಪಿ ಸಿಧ್ಯತಿ ।
ತಥಾಪ್ಯಹಂ ಪ್ರೇಷಣೀಯಸ್ತ್ವಯ್ಯೈವಾನುಗ್ರಹೋ ಹ್ಯಯಂ ॥ ೩೬ ॥

ಶಕ್ತಿರೇತಾದೃಶೀ ಶಂಭೋ ಮಮಾಪಿ ತ್ವದನುಗ್ರಹಾತ್ ।
ವಿನಾ ಶಕ್ತಿರ್ನ ಕಸ್ಯಾಪಿ ಶಂಕರ ತ್ವದನುಗ್ರಹಾತ್ ॥ ೩೭ ॥

ತ್ವದಾಜ್ಞಯಾ ವಿನಾ ಕೋಽಪಿ ತೃಣಾದೀನಪಿ ವಸ್ತುನಃ ।
ನೈವ ಚಾಲಯಿತುಂ ಶಕ್ತಸ್ಸತ್ಯಮೇತನ್ನ ಸಂಶಯಃ ॥ ೩೮ ॥

---

೩೪. ಸಾಮಾನ್ಯಮಾನವರೂ ಸಹ ನಿನ್ನ ಅನುಗ್ರಹದಿಂದ ಸಂಸಾರಸಾಗರವನ್ನು ದಾಟುವರು ಎಂದಮೇಲೆ ನಾನು ನಿನ್ನ ಅನುಗ್ರಹದಿಂದ ಎಂತಹ ಮಹತ್ತಾದ ಆಪತ್ತೆಂಬ ಸಮುದ್ರಗಳನ್ನೂ ದಾಟಲಾರೆನೇನು ?

೩೫. ಓ ಶಂಕರ, ನೀನು ಕಳುಹಿಸಿದ ಒಂದು ಹುಲ್ಲುಕಡ್ಡಿಯೂ ಸಹ ಎಂತಹ ಮಹಾಕಾರ್ಯವನ್ನಾದರೂ ಅನಾಯಾಸವಾಗಿ ಸಾಧಿಸುವುದು.

೩೬. ನೀನು ಲೀಲೆಯಿಂದಲೇ ಸಕಲ ಕಾರ್ಯವನ್ನೂ ಸಾಧಿಸಲು ಸಮರ್ಥನು. ಆದರೂ ಕೆಲವು ಕಾರ್ಯಗಳನ್ನು ಸಾಧಿಸಲು ನನ್ನನ್ನು ಕಳುಹಿಸುವೆ. ಇದು ನಿನಗೆ ನನ್ನಲ್ಲಿರುವ ಅನುಗ್ರಹವಲ್ಲದೆ ಬೇರೆಯಲ್ಲ.

೩೭. ಓ ಶಂಕರ, ನಿನ್ನ ಅನುಗ್ರಹದಿಂದಲೇ ನನಗೆ ಇಷ್ಟು ಶಕ್ತಿಯು ಇರುವುದು. ನಿನ್ನ ಅನುಗ್ರಹವಿಲ್ಲದೇ ಯಾವನಿಗೂ ಶಕ್ತಿಯು ಬರಲಾರದು.

೩೮. ನಿನ್ನಾಜ್ಞೆಯಿಲ್ಲದೆ ಯಾವನೂ ಸಹ ಒಂದು ಹುಲ್ಲುಕಡ್ಡಿಯನ್ನೂ ಅಲುಗಾಡಿಸಲಾರನು. ಇದು ನಿಜವಾದ ಮಾತು.

ಶಂಭೋ ನಿಯಮ್ಯಾಸ್ಸರ್ವೇಽಪಿ ದೇವಾದ್ಯಾಸ್ತೇ ಮಹೇಶ್ವರ ।
ತಥೈವಾಹಂ ನಿಯಮ್ಯಸ್ತೇ ನಿಯಂತುಸ್ಸರ್ವದೇಹಿನಾಂ ॥ ೩೯ ॥

ಪ್ರಣತೋಽಸ್ಮಿ ಮಹಾದೇವ ಭೂಯೋಽಪಿ ಪ್ರಣತೋಽಸ್ಮ್ಯಹಂ ।
ಪ್ರೇಷಯಸ್ವೇಷ್ಟಸಿದ್ಧ್ಯರ್ಥಂ ಮಮಾದ್ಯ ಹರ ಸತ್ವರಂ ॥ ೪೦ ॥

ಸ್ಪಂದೋಽಪಿ ಜಾಯತೇ ಶಂಭೋ ಸವ್ಯಾಂಗಾನಾಂ ಮುಹುರ್ಮುಹುಃ ।
ಭವಿಷ್ಯತ್ಯದ್ಯ ವಿಜಯೋ ಮಾಮತಃ ಪ್ರೇಷಯ ಪ್ರಭೋ ॥ ೪೧ ॥

ಹರ್ಷೋತ್ಸಾಹವಿಶೇಷೋಽಪಿ ಜಾಯತೇ ಮಮ ಕಶ್ಚನ ।
ಶಂಭೋ ತ್ವತ್ಪಾದಕಮಲೇ ಸಂಸಕ್ತಂ ಚ ಮನೋ ಮಮ ॥ ೪೨ ॥

ಭವಿಷ್ಯತಿ ಪ್ರತಿಪದಂ ಶುಭಸಂತಾನಸಂತತಿಃ ॥ ೪೩ ॥

ತಸ್ಯೈವ ವಿಜಯೋ ನಿತ್ಯಂ ತಸ್ಯೈವ ಶುಭಮನ್ವಹಂ ।
ಯಸ್ಯ ಶಂಭೌ ದೃಢಾ ಭಕ್ತಿಸ್ತ್ವಯಿ ಶೋಭನಸಂಶ್ರಯೇ ॥ ೪೪ ॥

---

೩೯. ಓ ಶಂಭು, ದೇವತೆಗಳೇ ಮೊದಲಾದವರೆಲ್ಲರೂ ನಿನ್ನ ಆಜ್ಞೆಗೆ ಒಳಪಟ್ಟವರು. ಅದರಂತೆ ನಾನೂ ಸಹ ನಿನ್ನ ಆಜ್ಞೆಗೆ ಒಳಪಟ್ಟವನು.

೪೦. ಆದಕಾರಣ ಓ ಮಹಾದೇವ, ನಿನಗೆ ನಾನು ಸದಾ ಪ್ರಣತನಾಗಿರುವೆನು. ನಿನ್ನ ಇಷ್ಟಕಾರ್ಯದ ಸಿದ್ಧಿಗಾಗಿ ನನಗೆ ಜಾಗ್ರತೆ ಅಪ್ಪಣೆಮಾಡು.

೪೧. ನನ್ನ ಬಲಗಡೆಯ ಅವಯವಗಳು ಅದರುತ್ತಿರುವುವು. ಇದು ಶುಭ ಸೂಚಕವು. ಇಂದು ಖಂಡಿತ ಜಯವು ಲಭಿಸುವುದು. ಆದಕಾರಣ ಓ ಸ್ವಾಮಿ, ನನ್ನನ್ನು ಬೇಗನೆ ಕಳುಹಿಸು.

೪೨. ನನಗೆ ಈಗ ತುಂಬಾ ಹರ್ಷವೂ ಉತ್ಸಾಹವೂ ಆಗುತ್ತಲಿರುವುದು. ಓ ಶಂಕರ, ನನ್ನ ಮನಸ್ಸು ನಿನ್ನ ಪಾದಕಮಲದಲ್ಲಿ ಭಕ್ತಿಯಿಂದ ಸೇರಿರುವುದು.

೪೩-೪೪. ಯಾವನಿಗೆ ಮಂಗಳಕರನಾದ ಶಂಕರನಲ್ಲಿ ದೃಢವಾದ ಭಕ್ತಿಯು ಇರುವುದೋ ಅವನಿಗೆ ಸದಾ ಮಂಗಳಗಳು ಆಗುವುದು. ಜಯವು ಲಭಿಸವುದು ಎಂದನು.

॥ ಬ್ರಹ್ಮೋವಾಚ ॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಸಂತುಷ್ಟೋ ಮಂಗಲಾಪತಿಃ ।
ವೀರಭದ್ರ ಜಯೇತಿ ತ್ವಂ ಪ್ರೋಕ್ತಾಶೀಃ ಪ್ರಾಹ ತಂ ಪುನಃ ॥ ೪೫ ॥

॥ ಮಹೇಶ್ವರ ಉವಾಚ ॥

ಶೃಣು ಮದ್ವಚನಂ ತಾತ ವೀರಭದ್ರ ಸುಚೇತಸಾ ।
ಕರಣೀಯಂ ಪ್ರಯತ್ನೇನ ತದ್ದ್ರುತಂ ಮೇ ಪ್ರತೋಷಕಂ ॥ ೪೬ ॥

ಯಾಗಂ ಕರ್ತುಂ ಸಮುದ್ಯುಕ್ತೋ ದಕ್ಷೋ ವಿಧಿಸುತಃ ಖಲಃ ।
ಮದ್ವಿರೋಧೀ ವಿಶೇಷೇಣ ಮಹಾಗರ್ವೋಽಬುಧೋಽಧುನಾ ॥ ೪೭ ॥

ತನ್ಮಖಂ ಭಸ್ಮಸಾತ್ಕೃತ್ವಾ ಸಯಾಗಪರಿವಾರಕಂ ।
ಪುನರಾಯಾಹಿ ಮತ್ಸ್ಥಾನಂ ಸತ್ವರಂ ಗಣಸತ್ತಮ ॥ ೪೮ ॥

ತತ್ರಾಸ್ತು ವಿಷ್ಣುರ್ಬ್ರಹ್ಮಾ ವಾ ಶಚೀಶೋ ವಾ ಯಮೋಽಪಿ ವಾ ।
ಅಪಿ ಚಾದ್ಯೈವ ತಾನ್ ಸರ್ವಾನ್ ಪಾತಯಸ್ವ ಪ್ರಯತ್ನತಃ ॥ ೪೯ ॥

---

೪೫. ಬ್ರಹ್ಮನು ಹೇಳಿದನು:—ಹೀಗೆ ವೀರಭದ್ರನು ಹೇಳಿದುದನ್ನು ಕೇಳಿ ಪರಮೇಶ್ವರನು ಸಂತುಷ್ಟನಾಗಿ ಎಲೈ ವೀರಭದ್ರ, ಜಯಶಾಲಿಯಾಗು ಎಂದು ಅವನಿಗೆ ಆಶೀರ್ವಾದಮಾಡಿ ಮತ್ತೆ ಹೇಳಿದನು.

೪೬. ಮಹೇಶ್ವರನು ಹೇಳದನು:—ಎಲೈ ವೀರಭದ್ರ, ನನ್ನ ಮಾತನ್ನು ಸಾವಧಾನತೆಯಿಂದ ಕೇಳು. ಅದನ್ನು ಪ್ರಯತ್ನಪಟ್ಟು ಸಂಪೂರ್ಣನಾಗಿ ಜಾಗ್ರತೆ ಸಾಧಿಸು.

೪೭. ಈಗ ಬ್ರಹ್ಮಪುತ್ರನಾದ ದಕ್ಷನು ಯಾಗವನ್ನು ಮಾಡುತ್ತಲಿರುವನು. ಅವನು ಮಹಾಮೂರ್ಖನು. ನನ್ನನ್ನು ದ್ವೇಷಿಸುತ್ತಲಿರುವನು. ಗರ್ವಿಷ್ಠನು.

೪೮. ಆ ದಕ್ಷನ ಯಾಗವನ್ನು ಅದರ ಸಾಮಗ್ರಿಗಳೊಡನೆ ಧ್ವಂಸಮಾಡಿ ನನ್ನ ಬಳಿಗೆ ಜಾಗ್ರತೆ ಬರಬೇಕು.

೪೯. ಅಲ್ಲಿ ವಿಷ್ಣುವಾಗಲೀ ಬ್ರಹ್ಮನಾಗಲೀ ಇಂದ್ರನಾಗಲೀ ಯಮನಾಗಲೀ ಯಾರಿದ್ದರೂ ಅವರೆಲ್ಲರನ್ನೂ ನಿಗ್ರಹಿಸು.

**ಸುರಾ ಭವಂತು ಗಂಧರ್ವಾ ಯಕ್ಷಾ ವಾನ್ಯೇ ಚ ಕೇಚನ ।**
**ತಾನಪ್ಯದ್ಯೈವ ಸಹಸಾ ಭಸ್ಮಸಾತ್ಕುರು ಸತ್ವರಂ ॥ ೫೦ ॥**

**ದಧೀಚಿಕೃತಮುಲ್ಲಂಘ್ಯ ಶಪಥಂ ಮಯಿ ತತ್ರ ಯೇ ।**
**ತಿಷ್ಠಂತಿ ತೇ ಪ್ರಯತ್ನೇನ ಜ್ವಾಲನೀಯಾಸ್ತ್ವಯಾ ಧ್ರುವಂ ॥ ೫೧ ॥**

**ಪ್ರಮಥಾಶ್ಚಾಗಮಿಷ್ಯಂತಿ ಯದಿ ವಿಷ್ಣ್ವಾದಯೋ ಭ್ರಮಾತ್ ।**
**ನಾನಾಕರ್ಷಣಮಂತ್ರೇಣ ಜ್ವಾಲಯಾನೀಯ ಸತ್ವರಂ ॥ ೫೨ ॥**

**ಯೇ ತತ್ರೋಲ್ಲಂಘ್ಯ ಶಪಥಂ ಮದೀಯಂ ಗರ್ವಿತಾಃ ಸ್ಥಿತಾಃ ।**
**ತೇ ಹಿ ಮದ್ರೋಹಿಣೋಽತಸ್ತಾನ್ ಜ್ವಾಲಯಾನಲಮಾಲಯಾ ॥ ೫೩ ॥**

**ಸಪತ್ನೀಕಾನ್ ಸಸಾರಾಂಶ್ಚ ದಕ್ಷಯಾಗಸ್ಥಲಸ್ಥಿತಾನ್ ।**
**ಪ್ರಜ್ವಾಲ್ಯ ಭಸ್ಮಸಾತ್ಕೃತ್ವಾ ಪುನರಾಯಾಹಿ ಸತ್ವರಂ ॥ ೫೪ ॥**

---

೫೦. ಮಿಕ್ಕ ದೇವತೆಗಳು ಗಂಧರ್ವರು ಯಕ್ಷರು ಇವರೆಲ್ಲರನ್ನೂ ನಿಗ್ರಹಿಸಿ ಭಸ್ಮಮಾಡು.

೫೧. ಶೈವನಾದ ದಧೀಚಿಮುನಿಯ ಶಪಥವನ್ನು ಮೀರಿ ಅಲ್ಲಿ ಯಾರಾರು ಸೇರಿರುವರೋ ಅವರೆಲ್ಲರನ್ನೂ ಪ್ರಯತ್ನದಿಂದ ಭಸ್ಮಮಾಡು.

೫೨. ನಿನ್ನ ಸಹಾಯಕ್ಕಾಗಿ ಪ್ರಮಥಗಣಗಳೂ ನಿನ್ನೊಡನೆ ಬರುವುವು. ವಿಷ್ಣು ಮುಂತಾದವರು ಭ್ರಮದಿಂದ ನಿನ್ನ ಮೇಲೇರಿಬಂದರೆ ಅವರನ್ನೂ ಆಕರ್ಷಣ ಮಂತ್ರದಿಂದ ಆಕರ್ಷಿಸಿ ನಾಶಗೊಳಿಸು.

೫೩. ಆ ಯಜ್ಞಶಾಲೆಯಲ್ಲಿ ನನ್ನ ಶಪಥವನ್ನು ಮೀರಿ ಯಾರು ಗರ್ವದಿಂದಿರುವರೋ ಅವರು ನನ್ನ ದ್ರೋಹಿಗಳು. ಅವರನ್ನು ಅಗ್ನಿಜ್ವಾಲೆಯಿಂದ ಸುಟ್ಟು ಭಸ್ಮಮಾಡು.

೫೪. ದಕ್ಷಯಜ್ಞಶಾಲೆಯಲ್ಲಿರುವ ಎಲ್ಲರನ್ನೂ ಪತ್ನಿಪುತ್ರ ಮುಂತಾದ ಪರಿವಾರದೊಡನೆಯೇ ಭಸ್ಮಮಾಡಿ ಜಾಗ್ರತೆ ನನ್ನಬಳಿಗೆ ಹಿಂತಿರುಗಿ ಬಾ.

ತತ್ರ ತ್ವಯಿ ಗತೇ ದೇವಾ ವಿಶ್ವಾದ್ಯಾ ಅಪಿ ಸಾದರಂ ।
ಸ್ತೋಷ್ಯಂತಿ ತ್ವಾಂ ತದಾತ್ವಾಶು ಜ್ವಾಲಯಾ ಜ್ವಾಲಯೈವ ತಾನ್ ॥ ೫೫ ॥

ದೇವಾನಪಿ ಕೃತದ್ರೋಹಾನ್ ಜ್ವಾಲಾಮಾಲಾಸಮಾಕುಲೈಃ ।
ಜ್ವಾಲಯ ಜ್ವಲನೈಶ್ಶೀಘ್ರಂ ಮಾಧ್ಯಾಯಾಧ್ಯಾಯ ಪಾಲಕಂ ॥ ೫೬ ॥

ದಕ್ಷಾದೀನ್ ಸಕಲಾಂಸ್ತತ್ರ ಸಪತ್ನೀಕಾನ್ ಸಬಾಂಧವಾನ್ ।
ಪ್ರಜ್ವಾಲ್ಯ ವೀರ ದಕ್ಷಂ ತು ಸಲೀಲಂ ಸಲಿಲಂ ಪಿಬ ॥ ೫೭ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ರೋಷತಾಮ್ರಾಕ್ಷೋ ವೇದಮರ್ಯಾದಪಾಲಕಃ ।
ವಿರರಾಮ ಮಹಾವೀರಂ ಕಾಲಾರಿಸ್ಸಕಲೇಶ್ವರಃ ॥ ೫೮ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಸತೀಖಂಡೇ
ದ್ವಾತ್ರಿಂಶೋಽಧ್ಯಾಯಃ

---

೫೫. ನೀನು ಯಜ್ಞಶಾಲೆಗೆ ಹೋದೊಡನೆಯೇ ವಿಶ್ವೇದೇವರು ಮೊದಲಾದವರು ಭಯದಿಂದ ನಿನ್ನನ್ನು ಸ್ತುತಿಸುವರು. ಆದರೂ ಅದನ್ನು ಗಮನಿಸದೆ ನೀನು ಅವರೆಲ್ಲರನ್ನೂ ಅಗ್ನಿಜ್ವಾಲೆಯಿಂದ ಸುಡಬೇಕು.

೫೬. ನನ್ನ ದ್ರೋಹಿಗಳಾದ ದೇವತೆಗಳನ್ನೂ ಸಹ ಅಗ್ನಿಜ್ವಾಲೆಗಳಿಂದ ದಹಿಸಿ ಯಜ್ಞರಕ್ಷಕರನ್ನೂ ಧ್ವಂಸಮಾಡು.

೫೭. ಎಲೈ ವೀರನಾದ ವೀರಭದ್ರನೆ, ದಕ್ಷನೇ ಮೊದಲಾದ ಮೂರ್ಖರನ್ನು ಅವರ ಪತ್ನಿ ಪುತ್ರ ಮತ್ತು ಪರಿವಾರನೊಡನೆ ಭಸ್ಮಮಾಡಿ ಯಜ್ಞಸೋಮವನ್ನು ಪಾನಮಾಡು ಎಂದಪ್ಪಣೆಮಾಡಿದನು.

೫೮. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ಯಮನನ್ನು ಶಿಕ್ಷಿಸುವವನೂ, ವೇದಮಾರ್ಗವನ್ನು ಪಾಲಿಸುವವನೂ ಆದಂತಹ ಪರಮೇಶ್ವರನೂ, ರೋಷದಿಂದ ವೀರಭದ್ರನಿಗೆ ಹೀಗೆ ಅಪ್ಪಣೆಮಾಡಿ ಸುಮ್ಮನಾದನು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಮೂವತ್ತೆರಡನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ತ್ರಯಸ್ತ್ರಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಇತ್ಯುಕ್ತಂ ಶ್ರೀಮಹೇಶಸ್ಯ ಶ್ರುತ್ವಾ ವಚನಮಾದರಾತ್ ।
ವೀರಭದ್ರೋಽತಿ ಸಂತುಷ್ಟಃ ಪ್ರಣನಾಮ ಮಹೇಶ್ವರಂ ॥ ೧ ॥

ಶಾಸನಂ ಶಿರಸಾ ಧೃತ್ವಾ ದೇವದೇವಸ್ಯ ಶೂಲಿನಃ ।
ಪ್ರಚಚಾಲ ತತಶ್ಶೀಘ್ರಂ ವೀರಭದ್ರೋ ಮಖಂ ಪ್ರತಿ ॥ ೨ ॥

---

### ಮೂವತ್ತಮೂರನೆಯ ಅಧ್ಯಾಯವು.

೧-೨. ಬ್ರಹ್ಮನು ಹೇಳಿದನು :—ಹೀಗೆ ಪರಮೇಶ್ವರನು ಹೇಳಿದ ಮಾತುಗಳನ್ನು ಕೇಳಿ ವೀರಭದ್ರನು ತುಂಬಾ ಸಂತೋಷಗೊಂಡು ಪರಮೇಶ್ವರನನ್ನು ಭಕ್ತಿಯಿಂದ ನಮಸ್ಕರಿಸಿ ದೇವದೇವನಾದ ಶಿವನ ಆಜ್ಞೆಯನ್ನು ಶಿರಸ್ಸಿನಲ್ಲಿ ಧರಿಸಿ ಆ ಕೂಡಲೇ ದಕ್ಷಯಜ್ಞಶಾಲೆಗೆ ಹೊರಟನು.

ಶಿವೋಽಥ ಪ್ರೇಷಯಾಮಾಸ ಶೋಭಾರ್ಥಂ ಕೋಟಿಶೋ ಗಣಾನ್ ।
ತೇನ ಸಾರ್ಧಂ ಮಹಾವೀರಾನ್ ಪ್ರಲಯಾನಲಸನ್ನಿಭಾನ್ ॥ ೩ ॥

ಅಥ ತೇ ವೀರಭದ್ರಸ್ಯ ಪುರತಃ ಪ್ರಬಲಾ ಗಣಾಃ ।
ಪಶ್ಚಾದಪಿ ಯಯುರ್ವೀರಾಃ ಕುತೂಹಲಕರಾ ಗಣಾಃ ॥ ೪ ॥

ವೀರಭದ್ರಸಮೇತಾ ಯೇ ಗಣಾಶ್ಶತಸಹಸ್ರಶಃ ।
ಪಾರ್ಷದಾಃ ಕಾಲಕಾಲಸ್ಯ ಸರ್ವೇ ರುದ್ರಸ್ವರೂಪಿಣಃ ॥ ೫ ॥

ಗಣೈಸ್ಸಮೇತಃ ಕಿಲ ತೈರ್ಮಹಾತ್ಮಾ
ಸ ವೀರಭದ್ರೋ ಹರವೇಷಭೂಷಣಃ ।
ಸಹಸ್ರಬಾಹುರ್ಭುಜಗಾಧಿಪಾಢ್ಯೋ
ಯಯೌ ರಥಸ್ಥಃ ಪ್ರಬಲೋಽತಿಭೀಕರಃ ॥ ೬ ॥

ನಲ್ವಾನಂ ಚ ಸಹಸ್ರೇ ದ್ವೇ ಪ್ರಮಾಣಂ ಸ್ಯಂದನಸ್ಯ ಹಿ ।
ಅಯುತೇನೈವ ಸಿಂಹಾನಾಂ ವಾಹನಾನಾಂ ಪ್ರಯತ್ನತಃ ॥ ೭ ॥

---

೩. ಆ ವೀರಭದ್ರನೊಡನೆ ಸಹಾಯಕ್ಕಾಗಿ ಪ್ರಳಯಾಗ್ನಿಯಂತೆ ಭಯಂಕರರೂ ವೀರರೂ ಆದಂತಹ ಕೋಟಿ ಗಣಗಳನ್ನು ಕಳುಹಿದನು.

೪. ಬಲಶಾಲಿಗಳಾದ ಆ ಗಣಗಳು ವೀರಭದ್ರನ ಹಿಂದೂ ಮುಂದೂ ಸುತ್ತುವರಿದು ಅವನೊಡನೆ ಹೊರಟರು.

೫. ಆ ಗಣಗಳೆಲ್ಲವೂ ಪರಮೇಶ್ವರನ ಪರಿವಾರ ಗಣಗಳು, ಭಕ್ತರು. ಎಲ್ಲರೂ ರುದ್ರಸ್ವರೂಪಿಗಳು.

೬. ಆ ಗಣಗಳಿಂದ ಕೂಡಿ ಮಹಾತ್ಮನಾದ ವೀರಭದ್ರನು ರಥವನ್ನೇರಿ ಹೊರಟನು. ಅವನು ಮಹಾವೀರನು, ಸಾವಿರ ಭುಜಗಳುಳ್ಳವನು, ಸರ್ಪಗಳನ್ನು ಶರೀರದಲ್ಲಿ ಸುತ್ತಿಕೊಂಡಿದ್ದನು. ಹೀಗೆ ಮಹಾಭಯಂಕರನಾಗಿದ್ದನು.

೭. ಅವನ ರಥವು ಎರಡು ಸಾವಿರ ಗಜ ಪ್ರಮಾಣವುಳ್ಳದಾಗಿತ್ತು. ಅದಕ್ಕೆ ಹತ್ತು ಸಾವಿರ ಸಿಂಹಗಳನ್ನು ಕಟ್ಟಿದ್ದರು.

ತಥೈವ ಪ್ರಬಲಾಃ ಸಿಂಹಾ ಬಹವಃ ಪಾರ್ಶ್ವರಕ್ಷಕಾಃ ।
ಶಾರ್ದೂಲಾ ಮಕರಾ ಮತ್ಸ್ಯಾ ಗಜಾಸ್ತತ್ರ ಸಹಸ್ರಶಃ ॥ ೮ ॥

ವೀರಭದ್ರೇ ಪ್ರಚಲಿತೇ ದಕ್ಷನಾಶಾಯ ಸತ್ವರಂ ।
ಕಲ್ಪವೃಕ್ಷಸಮುತ್ಸೃಷ್ಟಾ ಪುಷ್ಪವೃಷ್ಟಿರಭೂತ್ತದಾ ॥ ೯ ॥

ತುಷ್ಟುವುಶ್ಚ ಗಣಾ ವೀರಂ ಶಿಪಿವಿಷ್ಟೇ ಪ್ರಚೇಷ್ಟಿತಂ ।
ಚಕ್ರುಃ ಕುತೂಹಲಂ ಸರ್ವೇ ತಸ್ಮಿಂಶ್ಚ ಗಮನೋತ್ಸವೈಃ ॥ ೧೦ ॥

ಕಾಲೀ ಕಾತ್ಯಾಯನೀಶಾನೀ ಚಾಮುಂಡಾ ಮುಂಡಮರ್ದಿನೀ ।
ಭದ್ರಕಾಲೀ ತಥಾ ಭದ್ರಾ ತ್ವರಿತಾ ವೈಷ್ಣವೀ ತಥಾ ॥ ೧೧ ॥

ಏತಾಭಿರ್ನವದುರ್ಗಾಭಿರ್ಮಹಾಕಾಲೀ ಸಮನ್ವಿತಾ ।
ಯಯೌ ದಕ್ಷವಿನಾಶಾಯ ಸರ್ವಭೂತಗಣೈಸ್ಸಹ ॥ ೧೨ ॥

ಡಾಕಿನೀ ಶಾಕಿನೀ ಚೈವ ಭೂತಪ್ರಮಥಗುಹ್ಯಕಾಃ ।
ಕೂಷ್ಮಾಂಡಾಃ ಪರ್ಪಟಾಶ್ಚೈವ ಚಟಕಾ ಬ್ರಹ್ಮರಾಕ್ಷಸಾಃ ॥ ೧೩ ॥

---

೮. ಆ ರಥದ ರಕ್ಷಣೆಗಾಗಿ ಪಕ್ಕಗಳಲ್ಲಿ ಆಯುಧಗಳನ್ನು ಧರಿಸಿ ಅನೇಕ ಸೈನಿಕರೂ, ಅನೇಕ ಸಿಂಹಗಳೂ, ಹುಲಿಗಳೂ, ಮೊಸಳೆಗಳೂ, ಮೀನುಗಳೂ, ಆನೆಗಳೂ, ಸಾವಿರಗಟ್ಟಲೆ ಸಿದ್ಧರಾಗಿದ್ದರು

೯. ಹೀಗೆ ದಕ್ಷನಾಶಕ್ಕಾಗಿ ವೀರಭದ್ರನು ಹೊರಡಲು ಆಗ ಕಲ್ಪವೃಕ್ಷವು ಹೂವಿನ ಮಳೆಯನ್ನು ಕರೆಯಿತು.

೧೦. ಶಿವಪ್ರಮಥಗಳು ವೀರಭದ್ರನನ್ನು ಹೊಗಳಿದುವು. ಶಿವನ ಮಹಿಮೆಯನ್ನು ಕೀರ್ತಿಸಿದುವು. ದೊಡ್ಡ ಮಹೋತ್ಸವವು ನಡೆಯಿತು.

೧೧-೧೨. ಕಾಲೀ, ಕಾತ್ಯಾಯನೀ, ಈಶಾನೀ, ಚಾಮುಂಡಾ, ಮುಂಡಮರ್ದಿನೀ ಭದ್ರಕಾಲೀ, ಭದ್ರಾ, ತ್ವರಿತಾ, ವೈಷ್ಣವೀ ಈ ಒಂಭತ್ತು ದುರ್ಗಾದೇವತೆಗಳೊಡನೆಯೂ ಎಲ್ಲಾ ಭೂತಗಳೊಡನೆಯೂ ಸಹಿತಳಾಗಿ ಮಹಾಕಾಲಿಯು ದಕ್ಷನ ವಿನಾಶಕ್ಕಾಗಿ ಹೊರಟಳು.

೧೩-೧೪. ಡಾಕಿನೀ, ಶಾಕಿನೀ, ಭೂತಗಳು, ಪ್ರಮಥಗಳು, ಗುಹ್ಯಕಗಳು, ಕೂಷ್ಮಾಂಡಗಳೆಂಬ ಗಣಗಳು, ಪರ್ಪಟಗಣಗಳು, ಚಟಕಗಣಗಳು, ಬ್ರಹ್ಮರಾಕ್ಷಸಗಳು

ಭೈರವಾಃ ಕ್ಷೇತ್ರಪಾಲಾಶ್ಚ ದಕ್ಷಯಜ್ಞವಿನಾಶಕಾಃ ।
ನಿರ್ಯಯುಸ್ತ್ವರಿತಂ ವೀರಾಶ್ಶಿವಾಜ್ಞಾಪ್ರತಿಪಾಲಕಾಃ ॥ ೧೪ ॥

ತಥೈವ ಯೋಗಿನೀಚಕ್ರಂ ಚತುಷ್ಷಷ್ಟಿಗಣಾನ್ವಿತಂ ।
ನಿರ್ಯಯೌ ಸಹಸಾ ಕ್ರುದ್ಧಂ ದಕ್ಷಯಜ್ಞಂ ವಿನಾಶಿತುಂ ॥ ೧೫ ॥

ತೇಷಾಂ ಗಣಾನಾಂ ಸರ್ವೇಷಾಂ ಸಂಖ್ಯಾನಂ ಶೃಣು ನಾರದ ।
ಮಹಾಬಲವತಾಂ ಸಂಘೋ ಮುಖ್ಯಾನಾಂ ಧೈರ್ಯಶಾಲಿನಾಂ ॥ ೧೬ ॥

ಅಭ್ಯಯಾಚ್ಛಂಕುಕರ್ಣಶ್ಚ ದಶಕೋಟ್ಯಾ ಗಣೇಶ್ವರಃ ।
ದಶಭಿಃ ಕೇಕರಾಕ್ಷಶ್ಚ ವಿಕೃತೋಽಷ್ಟಾಭಿರೇವ ಚ ॥ ೧೭ ॥

ಚತುಷ್ಷಷ್ಟ್ಯಾ ವಿಶಾಖಶ್ಚ ನವಭಿಃ ಪಾರಿಯಾತ್ರಿಕಃ ।
ಷಡ್ಭಿಸ್ಸರ್ವಾಂಕಕೋ ವೀರಸ್ತಥೈವ ವಿಕೃತಾಽಽನನಃ ॥ ೧೮ ॥

---

ಭೈರವರು, ಕ್ಷೇತ್ರಪಾಲಗಣಗಳು, ಇವೆಲ್ಲವೂ ಶಿವನ ಆಜ್ಞೆಯಂತೆ ದಕ್ಷಯಜ್ಞಧ್ವಂಸಕ್ಕಾಗಿ ತೆರಳಿದುವು.

೧೫. ಮತ್ತು ಯೋಗಿನೀಚಕ್ರವು (ಯೋಗಿನಿಗಳ ಸಮೂಹವು) ತನ್ನ ಅರವತ್ತನಾಲ್ಕು ಗಣಗಳೊಡನೆ ಕೂಡಿಕೊಂಡು ದಕ್ಷಯಜ್ಞನಾಶಕ್ಕೆ ತೆರಳಿತು.

೧೬. ಮಹಾಬಲಶಾಲಿಗಳೂ, ಧೈರ್ಯಶಾಲಿಗಳೂ, ಆದಂತಹ ಆ ಎಲ್ಲಾ ಗಣ ಸಂಖ್ಯೆಯನ್ನೂ ಹೇಳುವೆನು ಎಲೈ ನಾರದನೇ ಕೇಳು.

೧೭-೧೯. ಶಂಕುಕರ್ಣನೆಂಬ ಗಣನಾಯಕನು, ಹತ್ತುಕೋಟಿ ಗಣಗಳೊಡನೆ ದಕ್ಷಯಜ್ಞನಾಶಕ್ಕಾಗಿ ತೆರಳಿದನು. ಕೇಕರಾಕ್ಷನೆಂಬುವನು ಹತ್ತು ಕೋಟಿಗಣಗಳೊಡನೆಯೂ, ವಿಕೃತನೆಂಬುವವನು ಎಂಟುಕೋಟಿಗಣಗಳೊಡನೆಯೂ, ವಿಶಾಖನು ಅರವತ್ತನಾಲ್ಕುಕೋಟಿ ಗಣಗಳೊಡನೆಯೂ, ಪಾರಿಯಾತ್ರಿಕನು ಒಂಭತ್ತುಕೋಟಿ ಗಣಗಳೊಡನೆಯೂ, ಸರ್ವಾಂಕಕನೆಂಬ ವೀರನು ಆರುಕೋಟಿ ಗಣಗಳೊಡನೆಯೂ,

ಜ್ವಾಲಕೇಶೋ ದ್ವಾದಶಭಿಃ ಕೋಟಿಭಿರ್ಗಣಪುಂಗವಃ ।
ಸಪ್ತಭಿಸ್ಸಮುದಜ್ಞೀವರ್ಮಾ ದುದ್ರಭೋಽಷ್ಟಾಭಿರೇವ ಚ ॥ ೧೯ ॥

ಪಂಚಭಿಶ್ಚ ಕಪಾಲೀಶಃ ಷಡ್ಭಿಸ್ಸಂದಾರಕೋ ಗಣಃ ।
ಕೋಟಿಕೋಟಿಭಿರೇವೇಹ ಕೋಟಿಕುಂಡಸ್ತಥೈವ ಚ ॥ ೨೦ ॥

ವಿಷ್ಟಂಭೋಽಷ್ಟಾಷ್ಟಭಿರ್ವೀರೈಃ ಕೋಟಿಭಿರ್ಗಣಸತ್ತಮಃ ।
ಸಹಸ್ರಕೋಟಿಭಿಸ್ತಾತ ಶನ್ನಾದಃ ಪಿಪ್ಪಲಸ್ತಥಾ ॥ ೨೧ ॥

ಆವೇಶನಸ್ತಥಾಷ್ಟಾಭಿರಷ್ಟಾಭಿಶ್ಚಂದ್ರತಾಪನಃ ।
ಮಹಾವೇಶಸ್ಸಹಸ್ರೇಣ ಕೋಟಿನಾ ಗಣಪೋ ವೃತಃ ॥ ೨೨ ॥

ಕುಂಡೀ ದ್ವಾದಶಕೋಟೀಭಿಸ್ತಥಾ ಪರ್ವತಕೋ ಮುನೇ ।
ವಿನಾಶಿತುಂ ದಕ್ಷಯಜ್ಞಂ ನಿರ್ಯಯೌ ಗಣಸತ್ತಮಃ ॥ ೨೩ ॥

---

ಜ್ವಾಲಕೋಶನೆಂಬುವನು ಹನ್ನೆರಡುಕೋಟಿ ಗಣಗಳೊಡನೆಯೂ, ಜೀಮಂತನೆಂಬುವನು ಏಳುಕೋಟಿ ಗಣಗಳೊಡನೆಯೂ, ದುದ್ರಭನೆಂಬುವನು ಎಂಟುಕೋಟಿಗಳೊಡನೆಯೂ ದಕ್ಷಯಜ್ಞವಿಧ್ವಂಸನಕ್ಕಾಗಿ ಹೊರಟರು.

೨೦-೨೩. ಕಪಾಲೀ ಎಂಬುವನು ಐದುಕೋಟಿ ಗಣಗಳೊಡನೆಯೂ, ಸಂದಾರಕನೆಂಬುವನು ಆರುಕೋಟಿ ಗಣಗಳೊಡನೆಯೂ, ಕೋಟಿಕುಂಡನೆಂಬುವನು ಕೋಟಿಕೋಟಿ ಗಣಗಳೊಡನೆಯೂ, ವಿಷ್ಟಂಭನೆಂಬುವನು ಅರವತ್ತನಾಲ್ಕು ಕೋಟಿ ಗಣಗಳೊಡನೆಯೂ, ಶನ್ನಾದನೆಂಬುವನೂ, ಪಿಪ್ಪಲನೆಂಬುವನೂ ಸಾವಿರ ಕೋಟಿ ಗಣಗಳೊಡನೆಯೂ, ಆವೇಶನನೆಂಬುವನೂ ಚಂದ್ರತಾಪನನೆಂಬುವನೂ, ಎಂಟೆಂಟುಕೋಟಿ ಗಣಗಳೊಡನೆಯೂ, ಮಹಾವೇಶನೆಂಬುವನು ಸಾವಿರಕೋಟಿ ಗಣಗಳೊಡನೆಯೂ, ಕುಂಡೀಪರ್ವತರೆಂಬುವವರು ಹನ್ನೆರಡು ಹನ್ನೆರಡುಕೋಟಿ ಗಣಗಳೊಡನೆಯೂ ದಕ್ಷಯಜ್ಞವನ್ನು ನಾಶಮಾಡಲು ತೆರಳಿದರು.

ಕಾಲಶ್ಚ ಕಾಲಕಶ್ಚೈವ ಮಹಾಕಾಲಸ್ತಥೈವ ಚ ।
ಕೋಟಿನಾಂ ಶತಕೇನೈವ ದಕ್ಷಯಜ್ಞಂ ಯಯೌ ಪ್ರತಿ ॥ ೨೪ ॥

ಅಗ್ನಿಕೃಚ್ಛತಕೋಟ್ಯಾ ಚ ಕೋಟ್ಯಾಗ್ನಿಮುಖ ಏವ ಚ ।
ಆದಿತ್ಯಮೂರ್ಧಾ ಕೋಟ್ಯಾ ಚ ತಥಾ ಚೈವ ಘನಾವಹಃ ॥ ೨೫ ॥

ಸನ್ನಾಹಶ್ಶತಕೋಟ್ಯಾ ಚ ಕೋಟ್ಯಾ ಚ ಕುಮುದೋ ಗಣಃ ।
ಅಮೋಘಃ ಕೋಕಿಲಶ್ಚೈವ ಕೋಟಿಕೋಟ್ಯಾ ಗಣಾಧಿಪಃ ॥ ೨೬ ॥

ಕಾಷ್ಠಾಗೂಢಶ್ಚತುಷ್ಷಷ್ಟ್ಯಾ ಸುಕೇಶೀ ವೃಷಭಸ್ತಥಾ ।
ಸುಮಂತ್ರಕೋ ಗಣಾಧೀಶಸ್ತಥಾ ತಾತ ಸುನಿರ್ಯಯೌ ॥ ೨೭ ॥

ಕಾಕಪಾದೋದರಃ ಷಷ್ಟಿಕೋಟಿಭಿರ್ಗಣಸತ್ತಮಃ ।
ತಥಾ ಸಂತಾನಕಃ ಷಷ್ಟಿಕೋಟಿಭಿರ್ಗಣಪುಂಗವಃ ॥ ೨೮ ॥

---

೨೪-೨೬ ಕಾಲ, ಕಾಲಕ, ಮಹಾಕಾಲರೆಂಬ ಗಣನಾಯಕರು ನೂರು ಕೋಟಿ ಗಣಗಳೊಡನೆ ಹೊರಟರು. ಅಗ್ನಿಕೃತ್ತೆಂಬುವನು ನೂರುಕೋಟಿ ಗಣಗಳೊಡನೆಯೂ ಅಗ್ನಿಮುಖನು ಕೋಟಿ ಗಣಗಳೊಡನೆಯೂ, ಆದಿತ್ಯಮೂರ್ಧನೆಂಬುವವನೂ ಘನಾವಹನೆಂಬುವವನೂ ಕೋಟಿ ಗಣಗಳೊಡನೆಯೂ, ಸನ್ನಾಹನೆಂಬುವವನು ನೂರುಕೋಟಿ ಗಣಗಳೊಡನೆಯೂ, ಕುಮುದನೆಂಬುವವನು ಕೋಟಿ ಗಣಗಳೊಡನೆಯೂ, ಅಮೋಘನೆಂಬುವವನೂ, ಕೋಕಿಲನೆಂಬುವವನೂ ಕೋಟಿ ಕೋಟಿ ಗಣ ಗಣಗಳೊಡನೆಯೂ ದಕ್ಷಯಜ್ಞನಾಶಕ್ಕಾಗಿ ಹೊರಟರು.

೨೭-೩೩. ಕಾಷ್ಠಾಗೂಢ, ಸುಕೇಶಿ, ವೃಷಭ, ಸುಮಂತ್ರಕರೆಂಬುವವರು ಅರವತ್ತನಾಲ್ಕುಕೋಟಿ ಗಣಗಳೊಡನೆ ತೆರಳಿದರು. ಕಾಕಪಾದೋದರನೆಂಬುವವನೂ ಸಂತಾನಕನೆಂಬುವವನೂ ಅರವತ್ತುಕೋಟಿ ಗಣಗಳೊಡನೆಯೂ, ಮಹಾಬಲನೆಂಬುವವನೂ ಮಧುಪಿಂಗನೆಂಬುವವನೂ ಒಂಭತ್ತುಕೋಟಿ ಗಣಗಳೊಡನೆಯೂ ನೀಲನೆಂಬುವವನೂ, ಪೂರ್ಣಭದ್ರನೆಂಬುವವನೂ ತೊಂಭತ್ತುಕೋಟಿ ಗಣಗಳೊಡನೆಯೂ ಚತುರ್ವಕ್ತ್ರನೆಂಬುವವನು ನೂರುಕೋಟಿಗಳೊಡನೆಯೂ, ವಿರೂಪಾಕ್ಷನೆಂಬುವವನು

ಮಹಾಬಲಶ್ಚ ನವಭಿಃ ಕೋಟಿಭಿಃ ಪುಂಗವಸ್ತಥಾ ।
ಮಧುಪಿಂಗಸ್ತಥಾ ತಾತ ಗಣಾಧೀಶೋ ಹಿ ನಿರ್ಯಯೌ ॥ ೨೯ ॥

ನೀತೋ ನವತ್ಯಾ ಕೋಟಿನಾಂ ಪೂರ್ಣ್ರದಸ್ತಥೈವ ಚ ।
ನಿರ್ಯಯೌ ಶತಕೋಟೀಭಿಶ್ಚತುರ್ವಕ್ತ್ರೋ ಗಣಾಧಿಪಃ ॥ ೩೦ ॥

ವಿರೂಪಾಕ್ಷಶ್ಚ ಕೋಟಿನಾಂ ಚತುಷ್ಷಷ್ಟ್ಯಾ ಗಣೇಶ್ವರಃ ।
ತಾಲಕೇತುಃ ಷಡಾಸ್ಯಶ್ಚ ಪಂಚಾಸ್ಯಶ್ಚ ಗಣಾಧಿಪಃ ॥ ೩೧ ॥

ಸಂವರ್ತಕಸ್ತಥಾ ಚೈವ ಕುಲೀಶಶ್ಚ ಸ್ವಯಂಪ್ರಭಃ ।
ಲೋಕಾಂತಕಶ್ಚ ದೀಪ್ತಾತ್ಮಾ ತಥಾ ದೈತ್ಯಾಂತಕೋ ಮುನೇ ॥ ೩೨ ॥

ಗಣೋ ಭೃಂಗೀ ರಿಟಿಃ ಶ್ರೀಮಾನ್ ದೇವದೇವಪ್ರಿಯಸ್ತಥಾ ।
ಅಶನಿರ್ಭಾಲಕಶ್ಚೈವ ಚತುಷ್ಷಷ್ಟ್ಯಾಸ್ಸಹಸ್ರಕಃ ॥ ೩೩ ॥

ಕೋಟಿಕೋಟಿಸಹಸ್ರಾಣಾಂ ಶತೈರ್ವಿಂಶತಿಭಿರ್ವೃತಃ ।
ವೀರೇಶೋ ಹ್ಯಭ್ಯಯಾದ್ವೀರಃ ವೀರಭದ್ರಶ್ಶಿವಾಽಽಜ್ಞಯಾ ॥ ೩೪ ॥

ಭೂತಕೋಟಿಸಹಸ್ರೈಸ್ತು ಪ್ರಯಯೌ ಕೋಟಿಭಿಸ್ತ್ರಿಭಿಃ ।
ರೋಮಜೈಃ ಶ್ವಗಣೈಶ್ಚೈವ ತಥಾ ವೀರೋ ಯಯೌ ದ್ರುತಂ ॥ ೩೫ ॥

---

ಅರವತ್ತನಾಲ್ಕುಕೋಟಿ ಗಣಗಳೊಡನೆಯೂ, ತಾಲಕೇತು, ಷಡಾನನ, ಪಂಚಾಸ್ಯ, ಸಂವರ್ತ, ಕುಲೀಶ, ಸ್ವಯಂಪ್ರಭ ಲೋಕಾಂತಕ, ದೀಪ್ತಾತ್ಮಾ, ದೈತ್ಯಾಂತಕ, ಭೃಂಗಿ ರಿಟಿ, ಅಶನಿ, ಭಾಲಕರೆಂಬ ಗಣನಾಯಕರು ಅರವತ್ತರವತ್ತುಕೋಟಿ ಗಣಗಳೊಡನೆಯೂ, ದಕ್ಷಯಜ್ಞವನ್ನು ನಾಶಮಾಡಬೇಕೆಂದು ಸಿದ್ಧರಾಗಿ ಹೊರಟರು.

೩೪-೩೫. ಹೀಗೆ ವೀರನಾದ ವೀರಭದ್ರನು ಶಿವನ ಆಜ್ಞೆಯಂತೆ ಇಪ್ಪತ್ತು ಕೋಟಿ, ನೂರುಕೋಟಿ, ಸಾವಿರಕೋಟಿ ಗಣಗಳೊಡನೆಯೂ ಸಾವಿರಕೋಟಿ ಭೂತ ಗಣಗಳೊಡನೆಯೂ ಮೂರುಕೋಟಿ ಕಾಡುನಾಯಿಗಳಿಂದಲೂ ಕೂಡಿಕೊಂಡು ದಕ್ಷಯಜ್ಞನಾಶಕ್ಕಾಗಿ ತೆರಳಿದನು.

ತದಾ ಭೇರೀಮಹಾನಾದಃ ಶಂಖಾಶ್ಚ ವಿವಿಧಸ್ವನಾಃ ।
ಜಟಾಹರೋ ಮುಖಾಶ್ಚೈವ ಶೃಂಗಾಣಿ ವಿವಿಧಾನಿ ಚ ॥ ೩೬ ॥

ತೇ ತಾನಿ ವಿತತಾನ್ಯೇವ ಬಂಧನಾನಿ ಸುಖಾನಿ ಚ ।
ವಾದಿತ್ರಾಣಿ ವಿನೇದುಶ್ಚ ವಿವಿಧಾನಿ ಮಹೋತ್ಸವೇ ॥ ೩೭ ॥

ವೀರಭದ್ರಸ್ಯ ಯಾತ್ರಾಯಾಂ ಸಬಲಸ್ಯ ಮಹಾಮುನೇ ।
ಶಕುನಾನ್ಯಭವಂಸ್ತತ್ರ ಭೂರೀಣಿ ಸುಖದಾನಿ ಚ ॥ ೩೮ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಸತೀಖಂಡೇ
ತ್ರಯಸ್ತ್ರಿಂಶೋಽಧ್ಯಾಯಃ

---

೩೬-೩೮. ಆಗ ಭೇರಿ (ನಗಾರಿ) ಯನ್ನು ಬಾರಿಸಿದರು, ಶಂಖಗಳನ್ನೂದಿದರು. ಜಟೆ ಮುಂತಾದುವುಗಳಿಂದ ಅಲಂಕೃತರಾದ ಗಣಗಳು ಅನೇಕ ಬಗೆಯ ವಾದ್ಯಗಳನ್ನು ಬಾರಿಸಿದರು. ಹೀಗೆ ಮಹೋತ್ಸವವಾಯಿತು. ಎಲೈ ನಾರದ, ಹೀಗೆ ವೀರಭದ್ರನು ಮಹಾವಿಜೃಂಭಣೆಯಿಂದ ಹೊರಡಲು ಮಂಗಳಕರವಾದ ಅನೇಕ ಶಕುನಗಳು ಆದುವು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಮೂವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಚತುಸ್ತ್ರಿಂಶೋಽಧ್ಯಾಯಃ

॥ ಬ್ರಹ್ಮೋವಾಚ ॥

ಏವಂ ಪ್ರಚಲಿತೇ ಚಾಸ್ಮಿನ್ ವೀರಭದ್ರೇ ಗಣಾನ್ವಿತೇ ।
ದುಷ್ಟಚಿಹ್ನಾನಿ ದಕ್ಷೇಣ ದೃಷ್ಟಾನಿ ವಿಬುಧೈರಪಿ ॥ ೧ ॥

ಉತ್ಪಾತಾ ವಿವಿಧಾಶ್ಚಾಸನ್ ವೀರಭದ್ರೇ ಗಣಾನ್ವಿತೇ ।
ತ್ರಿವಿಧಾ ಅಪಿ ದೇವರ್ಷೇ ಯಜ್ಞವಿಧ್ವಂಸಸೂಚಕಾಃ ॥ ೨ ॥

ದಕ್ಷವಾಮಾಕ್ಷಿಬಾಹೂರುವಿಸ್ಪಂದಸ್ಸಮಜಾಯತ ।
ನಾನಾಕಷ್ಟಪ್ರದಸ್ತಾತ ಸರ್ವಥಾಽಶುಭಸೂಚಕಃ ॥ ೩ ॥

---

### ಮೂವತ್ತನಾಲ್ಕನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ವೀರಭದ್ರನು ಗಣಗಳೊಡನೆ ದಕ್ಷಯಜ್ಞನಾಶಕ್ಕೆ ಹೊರಡಲು, ಅತ್ತಲಾಗಿ ದಕ್ಷನಿಗೂ ದೇವತೆಗಳಿಗೂ ಕೆಟ್ಟ ಶಕುನಗಳು ಕಾಣಿಸಿದುವು.

೨. ಆಧಿದೈವಿಕ, ಆಧಿಭೌತಿಕ, ಆಧ್ಯಾತ್ಮಿಕರೂಪವಾಗಿ ಮೂರುವಿಧವಾದ ಉತ್ಪಾತಗಳೂ ಯಜ್ಞನಾಶವನ್ನು ಸೂಚಿಸಿದುವು.

೩. ದಕ್ಷಬ್ರಹ್ಮನ ಎಡಬಾಹು, ಕಣ್ಣು, ತೊಡೆ, ಇವುಗಳು ಅದುರಿದುವು. ಇದು ತುಂಬಾ ಅಶುಭವಾದುದು.

ಭೂಕಂಪಸ್ಸಮಭೂತ್ತತ್ರ ದಕ್ಷಯಾಗಸ್ಥಲೇ ತದಾ ।
ದಕ್ಷೋಽಪಶ್ಯಚ್ಚ ಮಧ್ಯಾಹ್ನೇ ನಕ್ಷತ್ರಾಣ್ಯದ್ಭುತಾನಿ ಚ ॥ ೪ ॥

ದಿಶಶ್ಚಾಸನ್ ಸುಮಲಿನಾಃ ಕರ್ಬುರೋಽಭೂದ್ದಿವಾಕರಃ ।
ಪರಿವೇಷಸಹಸ್ರೇಣ ಸಂಕ್ರಾಂತಶ್ಚ ಭಯಂಕರಃ ॥ ೫ ॥

ನಕ್ಷತ್ರಾಣಿ ಪತಂತಿ ಸ್ಮ ವಿದ್ಯುದಗ್ನಿಪ್ರಭಾಣಿ ಚ ।
ನಕ್ಷತ್ರಾಣಾಮಭೂದ್ವಕ್ರಾ ಗತಿಶ್ಚಾಧೋಮುಖೀ ತದಾ ॥ ೬ ॥

ಗೃಧ್ರಾ ದಕ್ಷಶಿರಃ ಸ್ಪೃಷ್ಟ್ವಾ ಸಮುದ್ಭೂತಾಸ್ಸಹಸ್ರಶಃ ।
ಆಸೀದ್ಗೃಧ್ರಪಕ್ಷಚ್ಛಾಯೈಸ್ಸಚ್ಛಾಯೋಽಯಾಗಮಂಟಪಃ ॥ ೭ ॥

ವವಾಶಿರೇ ಯಜ್ಞಭೂಮೌ ಕ್ರೋಷ್ಟಾರೋ ನೇತ್ರಕಸ್ತಥಾ ।
ಉಲ್ಕಾವೃಷ್ಟಿರಭೂತ್ತತ್ರ ಶ್ವೇತವೃಶ್ಚಿಕಸಂಭವಾ ॥ ೮ ॥

ಖರಾ ವಾತಾ ವವುಸ್ತತ್ರ ಪಾಂಸುವೃಷ್ಟಿಸಮನ್ವಿತಾಃ ।
ಶಲಭಾಶ್ಚ ಸಮುದ್ಭೂತಾ ವಿವರ್ತಾನಿಲಕಂಪಿತಾಃ ॥ ೯ ॥

---

೪. ದಕ್ಷಯಾಗಶಾಲೆಯು ಸ್ಥಳದಲ್ಲಿ ಭೂಕಂಪವಾಯಿತು ದಕ್ಷನು ಮಧ್ಯಾಹ್ನ ಕಾಲದಲ್ಲಿ ಅದ್ಭುತವಾದ ನಕ್ಷತ್ರಗಳನ್ನು ನೋಡಿದನು.

೫. ದಿಕ್ಕುಗಳು ಮಲಿನವಾದುವು. ಅನೇಕ ಪರಿವೇಷಗಳುಳ್ಳವನಾಗಿ ಸೂರ್ಯನು ವಿಚಿತ್ರವಾಗಿಯೂ, ಭಯಂಕರವಾಗಿಯೂ ತೋರಿದನು.

೬. ವಿದ್ಯುತ್ತಿನಂತೆ ಪ್ರಕಾಶಿಸುವ ನಕ್ಷತ್ರಗಳು ಕಳಚಿಬಿದ್ದುವು. ಮಿಕ್ಕ ಕೆಲವು ನಕ್ಷತ್ರಗಳು ವಕ್ರವಾಗಿಯೂ ಕೆಳಮುಖವಾಗಿಯೂ ಸಂಚರಿಸಿದುವು.

೭. ಅನೇಕ ಹದ್ದುಗಳು ದಕ್ಷನ ತಲೆಯ ಮೇಲೆ ಹಾರಿ ಸ್ಪರ್ಶಿಸಿ ತೆರಳಿದುವು. ಮತ್ತು ಯಜ್ಞಮಂಡಪವನ್ನು ಮುತ್ತಿದವು.

೮. ಯಜ್ಞಭೂಮಿಯಲ್ಲಿ ನರಿಗಳು ಬಂದು ಕೂಗಿದುವು. ಉಲ್ಕಾ ಎಂದರೆ ಕೆಂಡ, ಕೊಳ್ಳಿಗಳ ಸುರಿಮಳೆಯಾಯಿತು. ಬಿಳಿಯ ಚೇಳುಗಳು ಅಲ್ಲಲ್ಲಿ ಕಾಣಿಸಿದುವು.

೯. ಧೂಳು ಮತ್ತು ತುಂತುರುಗಳೊಡನೆ ಬಿರುಗಾಳಿಯು ರಭಸದಿಂದ ಬೀಸಿತು. ಶಲಭ (ಮಿಡತೆ) ಗಳು ಅಸಂಖ್ಯಾತವಾಗಿ ತಲೆದೋರಿದವು.

ಈತ್ಯೈಶ್ಚ ಪವನೈರೂರ್ಧ್ವಂ ಸ ದಕ್ಷಾಧ್ವರಮಂಡಪಃ ।
ದೇವಾನ್ವಿತೇನ ದಕ್ಷೇಣ ಯಃ ಕೃತೋ ನೂತನೋದ್ಧೃತಃ ॥ ೧೦ ॥

ವೇಮುರ್ದಕ್ಷಾದಯಸ್ಸರ್ವೇ ತದಾ ಶೋಣಿತಮುದ್ಭುತಂ ।
ವೇಮುಶ್ಚ ಮಾಂಸಖಂಡಾನಿ ಸಶಲ್ಯಾನಿ ಮುಹುರ್ಮುಹುಃ ॥ ೧೧ ॥

ಸಕಂಪಾಶ್ಚ ಬಭೂವುಸ್ತೇ ದೀಪಾ ವಾತಾಹತಾ ಇವ ।
ದುಃಖಿತಾಶ್ಚಾಭವನ್ ಸರ್ವೇ ಶಸ್ತ್ರಧಾರಾಹತಾ ಇವ ॥ ೧೨ ॥

ತದಾ ನಿನಾದಜಾತಾನಿ ಬಾಷ್ಪವರ್ಷಾಣಿ ತತ್ಕ್ಷಣೇ ।
ಪ್ರಾತಸ್ತುಷಾರವರ್ಷೀಣಿ ಪದ್ಮಾನೀವ ವನಾಂತರೇ ॥ ೧೩ ॥

ದಕ್ಷಾದ್ಯಕ್ಷೀಣಿ ಜಾತಾನಿ ಹ್ಯಕಸ್ಮಾದ್ವಿಶದಾನ್ಯಪಿ ।
ನಿಶಾಯಾಂ ಕಮಲಾಶ್ಚೈವ ಕುಮುದಾನೀವ ಸಂಗವೇ ॥ ೧೪ ॥

ಅಸೃಗ್ವವರ್ಷ ದೇವಶ್ಚ ತಿಮಿರೇಣಾಽಽವೃತಾ ದಿಶಃ ।
ದಿಗ್ದಾಹೋಽಭೂದ್ವಿಶೇಷೇಣ ತ್ರಾಸಯನ್ ಸಕಲಾನ್ ಜನಾನ್ ॥ ೧೫ ॥

೧೦. ಈತಿಬಾಧೆಯಿಂದಲೂ, ಬಿರುಗಾಳಿಯಿಂದಲೂ ದಕ್ಷನ ಆ ಯಾಗ ಮಂಡಪವು ಅಲ್ಲೋಲಕಲ್ಲೋಲವಾಯಿತು.

೧೧. ದಕ್ಷ ಮೊದಲಾದವರು ವಿಶೇಷವಾಗಿ ರಕ್ತವನ್ನೂ, ಶಲ್ಯದಿಂದ ಕೂಡಿದ ಮಾಂಸಖಂಡಗಳನ್ನೂ ಕಾರಿದರು.

೧೨. ಗಾಳಿಯಿಂದ ಹೊಡೆಯಲ್ಪಟ್ಟ ದೀಪದಂತೆ ಎಲ್ಲರೂ ನಡುಗಿದರು. ಆಯುಧಗಳ ಪ್ರಹಾರವನ್ನು ತಿಂದವರಂತೆ ದುಃಖಗೊಂಡವರಾದರು.

೧೩. ಕೆಟ್ಟಶಬ್ದಗಳು ಕೇಳಿಸಿದುವು. ಪ್ರಾತಃಕಾಲದಲ್ಲಿ ಕಮಲಗಳು ಹಿಮದ ತುಂತುರುಗಳನ್ನುದುರಿಸುವಂತೆ ಎಲ್ಲರ ಕಣ್ಣಿನಲ್ಲಿಯೂ ಕಣ್ಣೀರುದುರಿದುವು.

೧೪. ರಾತ್ರಿಯಲ್ಲಿ ಕಮಲಗಳೂ, ಬಿಳಿಯಕಮಲಗಳೂ ಅಕಸ್ಮಾತ್ತಾಗಿ ಅರಳುವಂತೆ ದಕ್ಷ ಮೊದಲಾದವರ ಕಣ್ಣುಗಳು ಅಕಸ್ಮಾತ್ತಾಗಿ ಅರಳಿದುವು.

೧೫ ರಕ್ತದಮಳೆಯು ಸುರಿಯಿತು. ದಿಕ್ಕುಗಳು ಕತ್ತಲೆಯಿಂದ ಮುಚ್ಚಿದುವು. ದಿಕ್ಕುಗಳಲ್ಲಿ ದಾವಾಗ್ನಿ (ಕಾಡುಕಿಚ್ಚು) ಯು ಹೆಚ್ಚಾಗಿ ಜ್ವಲಿಸಿತು.

ಏವಂ ವಿಧ್ಯಾನ್ಯರಿಷ್ಟಾನಿ ದದೃಶುರ್ವಿಬುಧಾದಯಃ ।
ಭಯಮಾಪೇದಿರೇsತ್ಯಂತಂ ಮುನೇ ವಿಷ್ಣ್ವಾದಿಕಾಸ್ತದಾ ॥ ೧೬ ॥

ಭುವಿ ತೇ ಮೂರ್ಛಿತಾಃ ಪೇತುರ್ಹಾ ಹತಾಃ ಸ್ಮ ಇತೀರಯನ್ ।
ತರವಸ್ತೀರಸಂಜಾತಾ ನದೀವೇಗಹತಾ ಇವ ॥ ೧೭ ॥

ಪತಿತ್ವಾ ತೇ ಸ್ಥಿತಾ ಭೂಮೌ ಕ್ರೂರಾಃ ಸರ್ಪಾ ಹತಾ ಇವ ।
ಕಂದುಕಾ ಇವ ತೇ ಭೂಯಃ ಪತಿತಾಃ ಪುನರುತ್ಥಿತಾಃ ॥ ೧೮ ॥

ತತಸ್ತೇ ತಾಪಸಂತಪ್ತಾ ರುರುದುಃ ಕುರರೀ ಇವ ।
ರೋದನಧ್ವನಿಸಂಕ್ರಾಂತೋಕ್ತಿಪ್ರತ್ಯುಕ್ತಿಕಾ ಇವ ॥ ೧೯ ॥

ಸನ್ನೈಕುಂಠಾಸ್ತತಃ ಸರ್ವೇ ತದಾ ಕುಂಠಿತಶಕ್ತಯಃ ।
ಸ್ವಸ್ವೋಪಕಂಠಮಾಕಂಠಂ ಲುಲುಠುಃ ಕಮಠಾ ಇವ ॥ ೨೦ ॥

---

೧೬. ಈರೀತಿಯಾಗಿ ಅನೇಕ ಅರಿಷ್ಟಗಳು ಕಾಣಿಸಿದುವು. ಅದರಿಂದ ವಿಷ್ಣು ಮುಂತಾದವರು ತುಂಬಾ ಭಯವನ್ನು ಹೊಂದಿದರು.

೧೭. ನದಿಯ ದಡದಲ್ಲಿರುವಂತಹ ಮರಗಳು ನದಿಯ ಪ್ರವಾಹದಿಂದ ಬೀಳುವಂತೆ ದಕ್ಷ ಮೊದಲಾದವರು ಅಯ್ಯೋ! ಕೆಟ್ಟೆನಲ್ಲಾ ಎಂದೆನ್ನುತ್ತಾ ಭೂಮಿಗೆ ಉರುಳಿದರು.

೧೮-೧೯. ಭೂಮಿಗೆ ಉರುಳಿಬಿದ್ದ ಆ ದಕ್ಷಾದಿಗಳು, ಹೊಡೆತದಿಂದ ಕ್ರೂರವಾದ ಸರ್ಪಗಳು ಮೇಲಕ್ಕೇಳುವಂತೆಯೂ, ಪುಟಹೊಡೆದ ಚಂಡು ಪುನಃ ಮೇಲಕ್ಕೇಳುವಂತೆಯೂ ಚೇತರಿಸಿಕೊಂಡೆದ್ದು, ಏಟುತಿಂದ ಹೆಣ್ಣುನಾಯಿಗಳಂತೆ ರೋದನ ಮಾಡಿದರು. ಮತ್ತು ಅಳುತ್ತಲೇ ಪರಸ್ಪರ ಮಾತನಾಡಿದರು.

೨೦. ವಿಷ್ಣು ಮೊದಲಾದವರೆಲ್ಲರೂ ಶಕ್ತಿಹೀನರಾಗಿ ತಮ್ಮ ಸಮೀಪದಲ್ಲಿಯೇ ಬಿದ್ದು ಆಮೆಗಳಂತೆ ಹೊರಳಾಡಿದರು.

ಏತಸ್ಮಿನ್ನಂತರೇ ತತ್ರ ಸಂಜಾತಾ ಚಾಶರೀರವಾಕ್ ।
ಶ್ರಾವಯತ್ಯಖಿಲಾನ್ ದೇವಾನ್ ದಕ್ಷಂ ಚೈವ ವಿಶೇಷತಃ ॥ ೨೧ ॥

॥ ಆಕಾಶವಾಣ್ಯುವಾಚ ॥

ಧಿಗ್ಜನ್ಮ ತವ ದಕ್ಷಾದ್ಯ ಮಹಾಮೂಢೋಽಸಿ ಪಾಪಧೀಃ ।
ಭವಿಷ್ಯತಿ ಮಹಾದುಃಖಮನಿವಾರ್ಯಂ ಹರೋದ್ಭವಂ ॥ ೨೨ ॥

ಹಾಹಾಪಿ ನೋತ್ರ ಯೇ ಮೂಢಾಸ್ತವ ದೇವಾದಯಃ ಸ್ಥಿತಾಃ ।
ತೇಷಾಮಪಿ ಮಹಾದುಃಖಂ ಭವಿಷ್ಯತಿ ನ ಸಂಶಯಃ ॥ ೨೩ ॥

॥ ಬ್ರಹ್ಮೋವಾಚ ॥

ತಚ್ಛ್ರುತ್ವಾಽಽಕಾಶವಚನಂ ದೃಷ್ಟ್ವಾಽರಿಷ್ಟಾನಿ ತಾನಿ ಚ ।
ದಕ್ಷಃ ಪ್ರಾಪದ್ಭಯಂ ಚಾಪಿ ಪರೇ ದೇವಾದಯೋಽಪಿ ಹ ॥ ೨೪ ॥

ವೇಪಮಾನಸ್ತದಾ ದಕ್ಷೋ ವಿಕಲಶ್ಚಾತಿ ಚೇತಸಿ ।
ಅಗಚ್ಛಚ್ಛರಣಂ ವಿಷ್ಣೋಃ ಸ್ವಪ್ರಭೋರಿಂದಿರಾಪತೇಃ ॥ ೨೫ ॥

---

೨೧. ಈ ಮಧ್ಯದಲ್ಲಿ ಎಲ್ಲಾ ದೇವತೆಗಳಿಗೂ ವಿಶೇಷವಾಗಿ ದಕ್ಷನಿಗೂ ಕೇಳಿಸುವಂತೆ ಅಶರೀರವಾಣಿಯು ಕೇಳಿಸಿತು.

೨೨. ಅಶರೀರವಾಣಿಯು ಹೇಳಿತು :—ಎಲೈ ದಕ್ಷನೇ, ನಿನ್ನ ಜನ್ಮಕ್ಕೆ ಧಿಕ್ಕಾರವಿರಲಿ. ನೀನು ಮಹಾಮೂಢನು, ಪಾಪಾತ್ಮನು. ನಿನಗೆ ಹರನಿಂದ ಮಹಾ ಅನರ್ಥವು ಪ್ರಾಪ್ತವಾಗುವುದು., ಅದನ್ನು ಯಾರೂ ತಡೆಯಲಾರರು.

೨೩. ಅಲ್ಲದೆ ಈ ಯಜ್ಞಶಾಲೆಯಲ್ಲಿರುವಂತಹ ಮೂಢರಾದ ದೇವತೆಗಳಿಗೂ. ಸಹ ಮಹಾದುಃಖವು ಬರುವುದು, ಸಂಶಯವಿಲ್ಲ.

೨೪. ಬ್ರಹ್ಮನು ಹೇಳಿದನು:—ಎಲೈ ನಾರದ, ಈ ರೀತಿಯಾದ ಆಕಾಶವಾಣಿ ಯನ್ನು ಕೇಳಿ ಮತ್ತು ಅಲ್ಲಿ ನಡೆದ ಅರಿಷ್ಟಗಳನ್ನು ನೋಡಿ ದಕ್ಷನೂ ದೇವತೆಗಳೂ ಸಹ ತುಂಬಾ ಭಯಗೊಂಡರು.

೨೫. ಆಗ ದಕ್ಷನು ಭಯದಿಂದ ನಡುಗುತ್ತಾ ಮನಸ್ಸಿನಲ್ಲಿ ಉದ್ವಿಗ್ನನಾಗಿ ತನ್ನ ಪ್ರಭುವಾದ ಹರಿಯನ್ನು ಶರಣುಹೊಕ್ಕನು.

**ಸ ಪ್ರಣಮ್ಯ ಭಯಾಽಽವಿಷ್ಟಃ ಸಂಸ್ತೂಯ ಚ ವಿಚೇತನಃ ।**
**ಅವ್ರೋಚದ್ದೇವದೇವಂ ತಂ ವಿಷ್ಣುಂ ಸ್ವಜನವತ್ಸಲಂ ॥ ೨೬ ॥**

**ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಸತೀಖಂಡೇ**
**ಚತುಸ್ತ್ರಿಂಶೋಽಧ್ಯಾಯಃ**



---

೨೬. ಆ ದಕ್ಷನು ಹರಿಯನ್ನು ನಮಸ್ಕರಿಸಿ, ಭಯದಿಂದ ಸ್ತುತಿಸಿ ಸ್ವಜನ ಪ್ರಿಯನಾದ ಆ ಹರಿಯನ್ನು ಕುರಿತು ಹೀಗೆ ಹೇಳಿದನು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಪಂಚತ್ರಿಂಶೋಽಧ್ಯಾಯಃ

---

॥ ದಕ್ಷ ಉವಾಚ ॥

ದೇವದೇವ ಹರೇ ವಿಷ್ಣೋ ದೀನಬಂಧೋ ಕೃಪಾನಿಧೇ ।
ಮಮ ರಕ್ಷಾ ವಿಧಾತವ್ಯಾ ಭವತಾ ಸಾಧ್ವರಸ್ಯ ಚ ॥ ೧ ॥

ರಕ್ಷಕಸ್ತ್ವಂ ಮಖಸ್ಯೈವ ಮಖಕರ್ಮಾ ಮಖಾತ್ಮಕಃ ।
ಕೃಪಾ ವಿಧೇಯಾ ಯಜ್ಞಸ್ಯ ಭಂಗೋ ಭವತು ನ ಪ್ರಭೋ ॥ ೨ ॥

---

### ಮೂವತ್ತೈದನೆಯ ಅಧ್ಯಾಯವು.

೧. ದಕ್ಷನು ಹೇಳಿದನು :—ದೇವದೇವನಾದ ಓ ಹರಿಯೇ, ನೀನು ದೀನ ವತ್ಸಲನು. ಕರುಣಾನಿಧಿಯು. ನೀನು ನನ್ನನ್ನೂ ಈ ಯಜ್ಞವನ್ನೂ ರಕ್ಷಿಸಬೇಕು.

೨. ನೀನು ಯಜ್ಞವನ್ನು ರಕ್ಷಿಸುವವನು, ಯಜ್ಞಸ್ವರೂಪನು. ಇಂತಹ ನೀನು ಯಜ್ಞವು ನಾಶವಾಗದಂತೆ ಕರುಣಿಸಬೇಕು ಎಂದು ಸ್ತುತಿಸಿದನು.

॥ ಬ್ರಹ್ಮೋವಾಚ ॥

ಇತ್ಥಂ ಬಹುವಿಧಾಂ ದಕ್ಷಃ ಕೃತ್ವಾ ವಿಜ್ಞಪ್ತಿಮಾದರಾತ್ ।
ಪಪಾತ ಪಾದಯೋಸ್ತಸ್ಯ ಭಯವ್ಯಾಕುಲಮಾನಸಃ ॥ ೩ ॥

ಉತ್ಥಾಪ್ಯ ತಂ ತತೋ ವಿಷ್ಣುರ್ದಕ್ಷಂ ವಿಕ್ಲಿನ್ನಮಾನಸಂ ।
ಶ್ರುತ್ವಾ ಚ ತಸ್ಯ ತದ್ವಾಕ್ಯಂ ಕುಮತೇರಸ್ಮರಚ್ಛಿವಂ ॥ ೪ ॥

ಸ್ಮೃತ್ವಾ ಶಿವಂ ಮಹೇಶಾನಂ ಸ್ವಪ್ರಭುಂ ಪರಮೇಶ್ವರಂ ।
ಅವದಚ್ಛಿವತತ್ತ್ವಜ್ಞೋ ದಕ್ಷಂ ಸಂಬೋಧಯನ್ ಹರಿಃ ॥ ೫ ॥

॥ ಹರಿರುವಾಚ ॥

ಶೃಣು ದಕ್ಷ ಪ್ರವಕ್ಷ್ಯಾಮಿ ತತ್ತ್ವತಃ ಶೃಣು ಮೇ ವಚಃ ।
ಸರ್ವಥಾ ತೇ ಹಿತಕರಂ ಮಹಾಮಂತ್ರಸುಖಪ್ರದಂ ॥ ೬ ॥

ಅವಜ್ಞಾ ಹಿ ಕೃತಾ ದಕ್ಷ ತ್ವಯಾ ತತ್ತ್ವಮಜಾನತಾ ।
ಸಕಲಾಧೀಶ್ವರಸ್ಯೈವ ಶಂಕರಸ್ಯ ಪರಾತ್ಮನಃ ॥ ೭ ॥

---

೩. ಬ್ರಹ್ಮನು ಹೇಳಿದನು :—ಹೀಗೆ ಬಹು ವಿಧವಾಗಿ ವಿಷ್ಣುವಿಗೆ ವಿಜ್ಞಪ್ತಿಯನ್ನು ಮಾಡಿಕೊಂಡು ಅವನ ಪಾದಗಳಿಗೆ ಬಿದ್ದನು.

೪. ಆಗ ವಿಷ್ಣುವು ಭಯದಿಂದ ಕಾಲಿಗೆ ಬಿದ್ದಿರುವ ದಕ್ಷನನ್ನು ಮೇಲಕ್ಕೆಬ್ಬಿಸಿ ಅವನಿಗೆ ಉಪದೇಶಿಸಲು ಶಿವನನ್ನು ಸ್ಮರಿಸಿದನು.

೫. ಶಿವತತ್ವವನ್ನು ಬಲ್ಲ ಹರಿಯು ತನ್ನ ಪ್ರಭುವೂ ಪರಮೇಶ್ವರನೂ ಆದಂತಹ ಶಿವನನ್ನು ಭಕ್ತಿಯಿಂದ ಸ್ಮರಿಸಿ ದಕ್ಷನನ್ನು ಕುರಿತು,

೬. ಹರಿಯು ಹೇಳಿದನು :—ಎಲೈ ದಕ್ಷನೆ, ನನ್ನ ಮಾತನ್ನು ಕೇಳು ನಿನಗೆ ಹಿತಕರವಾಗುವಂತಹ, ಮಹಾಮಂತ್ರದಂತೆ ಸುಖವನ್ನುಂಟುಮಾಡುವಂತಹ ಮಾತನ್ನು ಹೇಳುವೆನು.

೭. ತಿಳಿವಳಿಕೆಯಿಲ್ಲದೆ ನೀನು ಪರಮಾತ್ಮನೂ, ಪರಮೇಶ್ವರನೂ ಆದಂತಹ ಶಿವನನ್ನು ತಿರಸ್ಕರಿಸಿರುವೆ, ಅನಾದರಿಸಿರುವೆ.

ಈಶ್ವರಾವಜ್ಞಯಾ ಸರ್ವಂ ಕಾರ್ಯಂ ಭವತಿ ಸರ್ವಥಾ ।
ವಿಫಲಂ ಕೇವಲಂ ನೈವ ವಿಪತ್ತಿಶ್ಚ ಪದೇ ಪದೇ　　॥ ೮ ॥

ಅಪೂಜ್ಯಾ ಯತ್ರ ಪೂಜ್ಯಂತೇ ಪೂಜನೀಯೋ ನ ಪೂಜ್ಯತೇ ।
ತ್ರೀಣಿ ತತ್ರ ಭವಿಷ್ಯಂತಿ ದಾರಿದ್ರ್ಯಂ ಮರಣಂ ಭಯಂ　　॥ ೯ ॥

ತಸ್ಮಾತ್ಸರ್ವಪ್ರಯತ್ನೇನ ಮಾನನೀಯೋ ವೃಷಧ್ವಜಃ ।
ಅಮಾನಿತಾನ್ಮಹೇಶಾಚ್ಚ ಮಹದ್ಭಯಮುಪಸ್ಥಿತಂ　　॥ ೧೦ ॥

ಅದ್ಯಾಪಿ ನ ವಯಂ ಸರ್ವೇ ಪ್ರಭವಃ ಪ್ರಭವಾಮಹೇ ।
ಭವತೋ ದುರ್ನಯೇನೈವ ಮಯಾ ಸತ್ಯಮುದೀರ್ಯತೇ　　॥ ೧೧ ॥

॥ ಬ್ರಹ್ಮೋವಾಚ ॥

ವಿಷ್ಣೋಸ್ತದ್ವಚನಂ ಶ್ರುತ್ವಾ ದಕ್ಷಶ್ಚಿಂತಾಪರೋಽಭವತ್ ।
ವಿವರ್ಣವದನೋ ಭೂತ್ವಾ ತೂಷ್ಣೀಮಾಸೀದ್ಭುವಿ ಸ್ಥಿತಃ　　॥ ೧೨ ॥

---

೮. ಈಶ್ವರತಿರಸ್ಕಾರದಿಂದ ಮಾಡಿದ ಕಾರ್ಯವೆಲ್ಲವೂ ವ್ಯರ್ಥವಾಗುವುದು. ಪದೇ ಪದೇ ವಿಪತ್ತು ಬರುವುದು.

೯. ಪೂಜಿಸಲು ಯೋಗ್ಯರಾದವರನ್ನು ಪೂಜಿಸದಿರುವುದು, ಅಯೋಗ್ಯರನ್ನು ಪೂಜಿಸುವುದು ಎಲ್ಲಿ ನಡೆಯುವುದೋ ಅಲ್ಲಿ ದಾರಿದ್ರ್ಯ, ಮರಣ ಭಯ ಈ ಮೂರು ಖಂಡಿತ ಬರುವುವು.

೧೦. ಆದುದರಿಂದ ಸರ್ವಪ್ರಯತ್ನದಿಂದಲೂ ಶಿವನನ್ನು ಪೂಜಿಸಬೇಕು. ನೀನು ಶಿವನನ್ನು ಪೂಜಿಸದೇ ತಿರಸ್ಕಾರಮಾಡಿರುವುದರಿಂದ ಮಹಾಭಯವು ಪ್ರಾಪ್ತವಾಗಿರುವುದು.

೧೧. ಈಗಲೂ ಸಹ ನಾವಾರೂ ಈ ಭಯವನ್ನು ತಪ್ಪಿಸಲಾರೆವು. ನಮಗೆ ಶಕ್ತಿಯಿಲ್ಲ. ನಿನ್ನ ದುರ್ನೀತಿಯಿಂದ ಹೀಗಾಗಿರುವುದು. ನಿಜವಾದ ಮಾತನ್ನು ನಾನು ಹೇಳುತ್ತಲಿರುವೆನು ಎಂದನು.

೧೨. ಬ್ರಹ್ಮನು ಹೇಳಿದನು :—ವಿಷ್ಣುವಿನ ಮಾತನ್ನು ಕೇಳಿ ದಕ್ಷನು ತುಂಬಾ ಚಿಂತೆಗೊಳಗಾದನು. ದುಃಖದಿಂದ ಮಲಿನವಾದ ಮುಖವುಳ್ಳವನಾಗಿ ಸುಮ್ಮನೆ ಭೂಮಿಯಲ್ಲಿ ನಿಶ್ಚೇಷ್ಟಿತನಾಗಿ ಕುಳಿತನು.

ಏತಸ್ಮಿನ್ನಂತರೇ ವೀರಭದ್ರಃ ಸೈನ್ಯಸಮನ್ವಿತಃ ।
ಅಗಚ್ಛದಧ್ವರಂ ರುದ್ರಪ್ರೇರಿತೋ ಗಣನಾಯಕಃ ॥ ೧೩ ॥

ಪೃಷ್ಠೇ ಕೇಚಿತ್ಸಮಾಯಾತಾ ಗಗನೇ ಕೇಚಿದಾಗತಾಃ ।
ದಿಶಶ್ಚ ವಿದಿಶಸ್ಸರ್ವೇ ಸಮಾವೃತ್ಯ ತಥಾ ಪರೇ ॥ ೧೪ ॥

ಶರ್ವಾಜ್ಞಯಾ ಗಣಾಶ್ಶೂರಾ ನಿರ್ಭಯಾ ರುದ್ರವಿಕ್ರಮಾಃ ।
ಅಸಂಖ್ಯಾಃ ಸಿಹ್ಮನಾದಾನ್ವೈ ಕುರ್ವಂತೋ ವೀರಸತ್ತಮಾಃ ॥ ೧೫ ॥

ತೇನ ನಾದೇನ ಮಹತಾ ನಾದಿತಂ ಭುವನತ್ರಯಂ ।
ರಜಸಾ ಚಾವೃತಂ ವ್ಯೋಮ ತಮಸಾ ಚಾವೃತಾ ದಿಶಃ ॥ ೧೬ ॥

ಸಪ್ತದ್ವೀಪಾನ್ವಿತಾ ಪೃಥ್ವೀ ಚಚಾಲಾತಿಭಯಾಕುಲಾ ।
ಸಶೈಲಕಾನನಾ ತತ್ರ ಚುಕ್ಷುಭುಸ್ಸಕಲಾಬ್ಧಯಃ ॥ ೧೭ ॥

---

೧೩. ಈ ಮಧ್ಯದಲ್ಲಿ ರುದ್ರನಿಂದ ಕಳುಹಿಸಲ್ಪಟ್ಟ ವೀರಭದ್ರನು ಸೈನ್ಯ ಸಮೇತನಾಗಿ ದಕ್ಷಯಜ್ಞಶಾಲೆಗೆ ಬಂದನು.

೧೪. ಆ ವೀರಭದ್ರನನ್ನನುಸರಿಸಿ ಕೆಲವು ಗಣಗಳು ನಡೆದುಬಂದವು. ಕೆಲವು ಆಕಾಶದಿಂದ ಹಾರಿಬಂದುವು. ದಿಕ್ಕುವಿದಿಕ್ಕುಗಳಿಂದ ಮತ್ತೆ ಕೆಲವು ಗಣಗಳು ಬಂದವು.

೧೫. ಶೂರರೂ ಧೈರ್ಯಶಾಲಿಗಳೂ ರುದ್ರನಂತೆ ಪರಾಕ್ರಮಿಗಳೂ ಆದಂತಹ ಆ ರುದ್ರಗಣಗಳು ಶಿವನ ಆಜ್ಞೆಯಂತೆ ಸಿಹ್ಮನಾದಗಳನ್ನು ಮಾಡುತ್ತಾ ಯಜ್ಞಶಾಲೆಗೆ ಬಂದರು.

೧೬. ಗಣಗಳ ಆ ಸಿಂಹನಾದದಿಂದ ಜಗತ್ತೆಲ್ಲವೂ ಪ್ರತಿಧ್ವನಿತವಾಯಿತು. ಆಕಾಶವನ್ನೆಲ್ಲಾ ಧೂಳು ವ್ಯಾಪಿಸಿತು. ದಿಕ್ಕುಗಳಲ್ಲಿ ತಮಸ್ಸು ವ್ಯಾಪಿಸಿ ಕತ್ತಲೆಯಾಯಿತು.

೧೭. ಸಪ್ತದ್ವೀಪಗಳೊಡನೆ ಭೂಮಿಯು ಅದುರಿತು. ಸಮುದ್ರಗಳೆಲ್ಲವೂ ಕ್ಷೋಭೆಗೊಂಡವು.

ಏವಂಭೂತಂ ಚ ತತ್ಸೈನ್ಯಂ ಲೋಕಕ್ಷಯಕರಂ ಮಹತ್ ।
ದೃಷ್ಟ್ವಾ ಚ ವಿಸ್ಮಿತಾಸ್ಸರ್ವೇ ಬಭೂವುರಮರಾದಯಃ ॥ ೧೮ ॥

ಸೈನ್ಯೋದ್ಯೋಗಮಥಾಽಽಲೋಕ್ಯ ದಕ್ಷಶ್ಚಾಸೃಙ್ಮುಖಾಕುಲಃ ।
ದಂಡವತ್ಪತಿತೋ ವಿಷ್ಣುಂ ಸಕಲತ್ರೋಽಭ್ಯಭಾಷತ ॥ ೧೯ ॥

॥ ದಕ್ಷ ಉವಾಚ ॥

ಭವದ್ಬಲೇನೈವ ಮಯಾ ಯಜ್ಞಃ ಪ್ರಾರಂಭಿತೋ ಮಹಾನ್ ।
ಸತ್ಕರ್ಮಸಿದ್ಧಯೇ ವಿಷ್ಣೋ ಪ್ರಮಾಣಂ ತ್ವಂ ಮಹಾಪ್ರಭೋ ॥ ೨೦ ॥

ವಿಷ್ಣೋ ತ್ವಂ ಕರ್ಮಣಾಂ ಸಾಕ್ಷೀ ಯಜ್ಞಾನಾಂ ಪ್ರತಿಪಾಲಕಃ ।
ಧರ್ಮಸ್ಯ ವೇದಗರ್ಭಸ್ಯ ಬ್ರಹ್ಮಣಸ್ತ್ವಂ ಮಹಾಪ್ರಭೋ ॥ ೨೧ ॥

ತಸ್ಮಾದ್ರಕ್ಷಾ ವಿಧಾತವ್ಯಾ ಯಜ್ಞಸ್ಯಾಸ್ಯ ಮಮ ಪ್ರಭೋ ।
ತ್ವದನ್ಯಃ ಕಸ್ಸಮರ್ಥೋಽಪಿ ಯತಸ್ತ್ವಂ ಸಕಲಪ್ರಭುಃ ॥ ೨೨ ॥

---

೧೮. ಈರೀತಿಯಾಗಿ ಲೋಕನಾಶವನ್ನು ಮಾಡುವಂತಹ ವೀರಭದ್ರನ ಮಹಾ ಸೈನ್ಯವು ಯಜ್ಞಶಾಲೆಯ ಬಳಿಗೆ ಬಂದಿತು. ಅದನ್ನು ನೋಡಿ ದೇವತೆಗಳು ಮುಂತಾದವರು ತುಂಬಾ ಭಯಗೊಂಡರು.

೧೯. ಆರೀತಿಯಾಗಿ ಶಿವಸೈನ್ಯಗಳ ಸಂಭ್ರಮವನ್ನು ನೋಡಿ ದಕ್ಷನು ಮುಖದಿಂದ ರಕ್ತವನ್ನು ಕಾರುತ್ತಾ ಪರಿವಾರದೊಡನೆ ದಂಡದಂತೆ ವಿಷ್ಣುವಿನ ಕಾಲಿಗೆ ಬಿದ್ದು ಹೀಗೆ ಹೇಳಿದನು.

೨೦. ದಕ್ಷನು ಹೇಳಿದನು :—ಓ ವಿಷ್ಣುವೆ, ನಿನ್ನ ಬಲದಿಂದಲೇ ನಾನು ಈ ಮಹಾಯಜ್ಞವನ್ನು ಪ್ರಾರಂಭಿಸಿರುವೆನು. ಈ ಕರ್ಮವನ್ನು ನೀನೇ ಸಿದ್ಧಿಸುವಂತೆ ರಕ್ಷಿಸಬೇಕು. ಇದಕ್ಕೆ ನೀನೇ ಪ್ರಮಾಣವು.

೨೧. ಓ ವಿಷ್ಣು, ನೀನು ಕರ್ಮಗಳಿಗೆ ಸಾಕ್ಷಿಯು. ಯಜ್ಞಗಳನ್ನು ಕಾಪಾಡುವವನು. ಧರ್ಮವನ್ನೂ ವೇದಮೂರ್ತಿಯಾದ ಬ್ರಹ್ಮನನ್ನೂ ನೀನೇ ರಕ್ಷಿಸುವವನು.

೨೨. ಆದುದರಿಂದ ಓ ಸ್ವಾಮಿ, ನೀನು ಯಜ್ಞವನ್ನು ರಕ್ಷಿಸಬೇಕು. ನಿನ್ನ ಹೊರತು ಇನ್ನಾರೂ ರಕ್ಷಿಸಲಾರರು, ನೀನು ಪರಮೇಶ್ವರನು.

॥ ಬ್ರಹ್ಮೋವಾಚ ॥

ದಕ್ಷಸ್ಯ ವಚನಂ ಶ್ರುತ್ವಾ ವಿಷ್ಣುರ್ದೀನತರಂ ತದಾ ।
ಅವೋಚದ್ಬೋಧಯಂಸ್ತಂ ವೈ ಶಿವತತ್ತ್ವಪರಾಙ್ಮುಖಂ ॥ ೨೩ ॥

॥ ವಿಷ್ಣುರುವಾಚ ॥

ಮಯಾ ರಕ್ಷಾ ವಿಧಾತವ್ಯಾ ತವ ಯಜ್ಞಸ್ಯ ದಕ್ಷ ವೈ ।
ಖ್ಯಾತೋ ಮಮ ಪಣಸ್ಸತ್ಯೋ ಧರ್ಮಸ್ಯ ಪ್ರತಿಪಾಲನಂ ॥ ೨೪ ॥

ತತ್ಸತ್ಯಂ ತು ತ್ವಯೋಕ್ತಂ ಹಿ ಕಿಂ ತತ್ತಸ್ಯ ವ್ಯತಿಕ್ರಮಃ ।
ಶೃಣು ತ್ವಂ ವಚ್ಮ್ಯಹಂ ದಕ್ಷ ಕ್ರೂರಬುದ್ಧಿಂ ತ್ಯಜಾಧುನಾ ॥ ೨೫ ॥

ನೈಮಿಷೇಽನಿಮಿಷಕ್ಷೇತ್ರೇ ಯಜ್ಜಾತಂ ವೃತ್ತಮದ್ಭುತಂ ।
ತತ್ಕಿಂ ನ ಸ್ಮರ್ಯತೇ ದಕ್ಷ ವಿಸ್ಮೃತಂ ಕಿಂ ಕುಬುದ್ಧಿನಾ ॥ ೨೬ ॥

ರುದ್ರಕೋಪಾಚ್ಚ ಕೋ ಹ್ಯತ್ರ ಸಮರ್ಥೋ ರಕ್ಷಣೇ ತವ ।
ನ ಯಸ್ಯಾಭಿಮತಂ ದಕ್ಷ ಯಸ್ತ್ವಾಂ ರಕ್ಷತಿ ದುರ್ಮತಿಃ ॥ ೨೭ ॥

---

೨೩. ಬ್ರಹ್ಮನು ಹೇಳಿದನು:—ದಕ್ಷನ ದೀನವಾದ ಮಾತನ್ನು ಕೇಳಿ ಹರಿಯು ಶಿವತತ್ವವನ್ನು ತಿಳಿಯದೇ ಮೂಢನಾದ ಆ ದಕ್ಷನನ್ನು ಕುರಿತು ಹೀಗೆ ಉಪದೇಶಿಸಿದನು.

೨೪. ವಿಷ್ಣುವು ಹೇಳಿದನು:—ಎಲೈ ದಕ್ಷನೆ, ನಿನ್ನ ಯಜ್ಞವನ್ನು ನಾನು ರಕ್ಷಿಸಬೇಕಾದುದು ನ್ಯಾಯವು. ಧರ್ಮವನ್ನು ರಕ್ಷಿಸುವೆನೆಂದು ಮಾಡಿದ ನನ್ನ ಪ್ರತಿಜ್ಞೆಯು ಸತ್ಯವಾದುದು.

೨೫. ನೀನು ಹೇಳಿದ ಮಾತೂ ಸತ್ಯವಾದುದು. ಆದರೆ ಪ್ರಕೃತ ಆ ಕಾಲವು ಮೀರಿಹೋಗಿರುವುದು. ಎಲೈ ದಕ್ಷನೆ, ಈಗ ನಿನ್ನ ಕ್ರೂರಬುದ್ಧಿಯನ್ನು ಬಿಟ್ಟು ನಾನು ಹೇಳುವುದನ್ನು ಗಮನವಿಟ್ಟು ಕೇಳು.

೨೬. ದೇವಕ್ಷೇತ್ರವಾದ ನೈಮಿಷಾರಣ್ಯದಲ್ಲಿ ನಡೆದ ವೃತ್ತಾಂತವನ್ನು ಸ್ಮರಿಸು. ದುರ್ಬುದ್ಧಿಯಿಂದ ಆ ವೃತ್ತಾಂತವನ್ನು ಮರೆತುಬಿಟ್ಟಿರುವಿಯೇನು ?

೨೭. ರುದ್ರನ ಕೋಪದಿಂದ ನಿನ್ನನ್ನು ರಕ್ಷಿಸುವವರು ಯಾರು? ಯಾರೂ ಇಲ್ಲ. ದುಷ್ಟನಾದ ನಿನ್ನನ್ನು ರಕ್ಷಿಸಬೇಕೆಂದು ಯಾವನಿಗೂ ಅಭಿಪ್ರಾಯವಿಲ್ಲ.

ಕಿಂ ಕರ್ಮ ಕಿಮಕರ್ಮೇತಿ ತನ್ನ ಪಶ್ಯಸಿ ದುರ್ಮತೇ ।
ಸಮರ್ಥಂ ಕೇವಲಂ ಕರ್ಮ ನ ಭವಿಷ್ಯತಿ ಸರ್ವದಾ ॥ ೨೮ ॥

ಸುಕರ್ಮ ವಿದ್ಧಿ ತದ್ಯೇನ ಸಮರ್ಥತ್ವೇನ ಜಾಯತೇ ।
ನ ತ್ವನ್ಯಃ ಕರ್ಮಣೋ ದಾತಾ ಶಂ ಭವೇದೀಶ್ವರಂ ವಿನಾ ॥ ೨೯ ॥

ಈಶ್ವರಸ್ಯ ಚ ಯೋ ಭಕ್ತ್ಯಾ ಶಾಂತಸ್ತದ್ಗತಮಾನಸಃ ।
ಕರ್ಮಣೋ ಹಿ ಫಲಂ ತಸ್ಯ ಪ್ರಯಚ್ಛತಿ ಸದಾಶಿವಃ ॥ ೩೦ ॥

ಕೇವಲಂ ಜ್ಞಾನಮಾಶ್ರಿತ್ಯ ನಿರೀಶ್ವರಪರಾ ಜನಾಃ ।
ನಿರಯಂ ತೇ ಚ ಗಚ್ಛಂತಿ ಕಲ್ಪಕೋಟಿಶತಾನಿ ಚ ॥ ೩೧ ॥

ಪುನಃ ಕರ್ಮಮಯೈಃ ಪಾಶೈರ್ಬದ್ಧ್ವಾ ಜನ್ಮನಿ ಜನ್ಮನಿ ।
ನಿರಯೇಷು ಪ್ರಪಚ್ಯಂತೇ ಕೇವಲಂ ಕರ್ಮರೂಪಿಣಃ ॥ ೩೨ ॥

---

೨೮. ಸತ್ಕರ್ಮವಾವುದು, ದುಷ್ಕರ್ಮವಾವುದು ಎಂದು ನೀನು ವಿಮರ್ಶಿಸಲಿಲ್ಲ. ಬರಿಯ ಕರ್ಮವು ಅಮಂಗಳವನ್ನು ಹೋಗಲಾಡಿಸಲಾರದು.

೨೯. ಯಾವ ಕರ್ಮವು ಸಮರ್ಥವಾಗಿ ಮಂಗಳವನ್ನುಂಟುಮಾಡುವುದೋ ಅದು ಸುಕರ್ಮವು, ಒಳ್ಳೆಯದು, ಶಂಕರನೊಬ್ಬನೇ ಕರ್ಮಕ್ಕೆ ಫಲವನ್ನು ಕೊಡುವವನು ಅವನನ್ನು ನಿರ್ಲಕ್ಷಿಸಿದರೆ ಮಂಗಳವೆಂದಿಗೂ ಆಗಲಾರದು. ಇನ್ನೊಬ್ಬನು ಕೊಡುವುದಿಲ್ಲ.

೩೦. ಆ ಶಂಕರನನ್ನು ಭಕ್ತಿಯಿಂದಲೂ ಶಾಂತಿಯಿಂದಲೂ ಯಾವನು ಅರ್ಚಿಸುವನೋ ಅವನಿಗೆ ಮಂಗಳರೂಪನಾದ ಶಂಕರನು ಕರ್ಮಫಲವನ್ನು ಕೊಡುವನು.

೩೧. ಕೇವಲ ಜ್ಞಾನವನ್ನೇ ಆಶ್ರಯಿಸಿ ಕರ್ಮವನ್ನಾಶ್ರಯಿಸದೇ ಈಶ್ವರನೇ ಇಲ್ಲವೆಂದು ಹೇಳುವ ಜನಗಳು ನರಕವನ್ನು ಪಡೆಯುವರು. ಕಲ್ಪಕೋಟಿಗಳಾದರೂ ಅವರಿಗೆ ಮುಕ್ತಿಯಿಲ್ಲ.

೩೨. ಅವರು ತಿರುಗಿ ಪ್ರತಿ ಜನ್ಮಗಳಲ್ಲಿಯೂ ಕರ್ಮರೂಪವಾದ ಪಾಶದಿಂದ ಬಂಧಿಸಲ್ಪಟ್ಟವರಾಗಿ ಪುನಃ ಪುನಃ ನರಕದಲ್ಲಿ ದುಃಖವನ್ನು ಅನುಭವಿಸುವರು.

ಅಯಂ ರುದ್ರಗಣಾಧೀಶೋ ವೀರಭದ್ರೋऽರಿಮರ್ದನಃ ।
ರುದ್ರಕೋಪಾಗ್ನಿಸಂಭೂತಃ ಸಮಾಯಾತೋऽಧ್ವರಾಂಗಣೇ ॥ ೩೩ ॥

ಅಯಮಸ್ಮದ್ವಿನಾಶಾರ್ಥಮಾಗತೋऽಸ್ತಿ ನ ಸಂಶಯಃ ।
ಅಶಕ್ಯಮಸ್ಯ ನಾಸ್ತ್ಯೇವ ಕಿಮಪ್ಯಸ್ತು ತು ವಸ್ತುತಃ ॥ ೩೪ ॥

ಪ್ರಜ್ವಾಲ್ಯಾಸ್ಮಾನಯಂ ಸರ್ವಾನ್ ಧ್ರುವಮೇವ ಮಹಾಪ್ರಭುಃ ।
ತತಃ ಪ್ರಶಾಂತಹೃದಯೋ ಭವಿಷ್ಯತಿ ನ ಸಂಶಯಃ ॥ ೩೫ ॥

ಶ್ರೀಮಹಾದೇವಶಪಥಂ ಸಮುಲ್ಲಂಘ್ಯ ಭ್ರಮಾನ್ಮಯಾ ।
ಯತಃ ಸ್ಥಿತಂ ತತಃ ಪ್ರಾಪ್ಯಂ ಮಯಾ ದುಃಖಂ ತ್ವಯಾ ಸಹ ॥ ೩೬

ಶಕ್ತಿರ್ಮಮತು ನಾಸ್ತ್ಯೇವ ದಕ್ಷಾದ್ಯೈತನ್ನಿವಾರಣೇ ।
ಶಪಥೋಲ್ಲಂಘನಾದೇವ ಶಿವದ್ರೋಹೀ ಯತೋऽಸ್ಮ್ಯಹಂ ॥ ೩೭ ॥

---

೩೩. ಈ ಶಿವಗಣಗಳಿಗೆ ನಾಯಕನಾಗಿ ಬಂದಿರುವ ವೀರಭದ್ರನು ಶಿವನ ಕೋಪಾಗ್ನಿಯಿಂದ ಜನಿಸಿರುವನು. ಇವನು ಶತ್ರುಗಳನ್ನೆಲ್ಲಾ ನಾಶಮಾಡುವನು. ನಿನ್ನ ಯಜ್ಞನಾಶಕ್ಕಾಗಿ ಇಲ್ಲಿಗೆ ಬಂದಿರುವನು.

೩೪. ಈ ವೀರಭದ್ರನು ನಮ್ಮ ನಾಶಕ್ಕಾಗಿಯೇ ಬಂದಿರುವನು. ಇದರಲ್ಲಿ ಸಂಶಯವಿಲ್ಲ. ಇವನಿಗೆ ಅಸಾಧ್ಯವಾದ ಕಾರ್ಯವಾವುದೂ ಇಲ್ಲ.

೩೫. ಮಹಾಪ್ರಭುವಾದ ರುದ್ರನು ಈ ವೀರಭದ್ರನ ಮೂಲಕ ನಮ್ಮನ್ನೆಲ್ಲಾ ದಹಿಸಿ ಆಮೇಲೆ ಶಾಂತನಾಗುವನು.

೩೬. ಮಹಾದೇವನ ಪ್ರತಿಜ್ಞೆಯನ್ನು ಮೀರಿ ನಾನೂ ಸಹ ಭ್ರಾಂತಿಯಿಂದ ನಿನ್ನ ಯಜ್ಞದಲ್ಲಿದ್ದೆನು. ಆದಕಾರಣ ನಾನೂ ನಿನ್ನೊಡನೆ ದುಃಖವನ್ನು ಅನುಭವಿಸಬೇಕಾಗಿ ಬಂದಿರುವುದು.

೩೭, ಎಲೈ ದಕ್ಷನೆ, ಈ ವೀರಭದ್ರನನ್ನು ತಡೆಯಲು ನನಗೆ ಶಕ್ತಿಯೇ ಇಲ್ಲ. ಶಿವಪ್ರತಿಜ್ಞೆಯನ್ನು ಮೀರಿದಕಾರಣ ನಾನು ಶಿವದ್ವೇಷಿಯಾಗಿರುವೆನು.

ಕಾಲತ್ರಯೇಽಪಿ ನ ಯತೋ ಮಹೇಶದ್ರೋಹಿಣಾಂ ಸುಖಂ ।
ತತೋಽವಶ್ಯಂ ಮಯಾ ಪ್ರಾಪ್ತಂ ದುಃಖಮದ್ಯ ತ್ವಯಾ ಸಹ ॥ ೩೮ ॥

ಸುದರ್ಶನಾಭಿಧಂ ಚಕ್ರಮೇತಸ್ಮಿನ್ ನ ಲಗಿಷ್ಯತಿ ।
ಶೈವಚಕ್ರಮಿದಂ ಯಸ್ಮಾದಶೈವಲಯಕಾರಣಂ ॥ ೩೯ ॥

ವಿನಾಪಿ ವೀರಭದ್ರೇಣ ನಾಸ್ಮ್ಯೈತಚ್ಚಕ್ರಮೈಶ್ವರಂ ।
ಹತ್ವಾ ಗಮಿಷ್ಯತ್ಯಧುನಾ ಸತ್ವರಂ ಹರಸನ್ನಿಧೌ ॥ ೪೦ ॥

ಶೈವಂ ಶಪಥಮುಲ್ಲಂಘ್ಯ ಸ್ಥಿತಂ ಮಾಂ ಚಕ್ರಮೀದೃಶಂ ।
ಅಸಂಹತ್ಯೈವ ಸಹಸಾ ಕೃಪಯೈವ ಸ್ಥಿರಂ ಪರಂ ॥ ೪೧ ॥

ಅತಃ ಪರಮಿದಂ ಚಕ್ರಮಪಿ ಸ್ಥಾಸ್ಯತಿ ನ ಧ್ರುವಂ ।
ಗಮಿಷ್ಯತ್ಯಧುನಾ ಶೀಘ್ರಂ ಜ್ವಾಲಾಮಾಲಾಸಮಾಕುಲಂ ॥ ೪೨ ॥

ವೀರಭದ್ರಃ ಪೂಜಿತೋಽಪಿ ಶೀಘ್ರಮಸ್ಮಾಭಿರಾದರಾತ್ ।
ಮಹಾಕ್ರೋಧಸಮಾಕ್ರಾಂತೋ ನಾಸ್ಮಾನ್ ಸಂರಕ್ಷಯಿಷ್ಯತಿ ॥ ೪೩ ॥

---

೩೮. ಶಿವದ್ರೋಹಿಗಳಿಗೆ ಮೂರು ಕಾಲದಲ್ಲಿಯೂ ಸುಖವಿಲ್ಲ. ಆದ ಕಾರಣವೇ ನಿನ್ನೊಡನೆ ನನಗೂ ಮಹಾದುಃಖವು ಬಂದಿರುವುದು.

೩೯. ನನ್ನ ಸುದರ್ಶನಚಕ್ರವು ಈ ಶಿವಗಣಗಳ ಮೇಲೆ ನಡೆಯಲಾರದು. ಇಲ್ಲಿಗೆ ಶೈವಚಕ್ರವು ಬಂದಿರುವುದು. ಶಿವದ್ವೇಷಿಗಳನ್ನು ಮಾತ್ರ ಸಂಹರಿಸುವುದು, ಶೈವರನ್ನು ಈ ಚಕ್ರವು ಸಂಹರಿಸಲಾರದು.

೪೦. ವೀರಭದ್ರನಿಲ್ಲದಿದ್ದರೂ ಈ ಶೈವಚಕ್ರವು ನಮ್ಮನ್ನೆಲ್ಲಾ ಸಂಹರಿಸಿ ಶಿವನ ಬಳಿಗೆ ತೆರಳುವುದು.

೪೧. ಶಿವಪ್ರತಿಜ್ಞೆಯನ್ನು ಮೀರಿ ನಿಂತಿರುವ ನನ್ನನ್ನು ಈ ಶೈವಚಕ್ರವು ಶಿಕ್ಷಿಸದೆ ಕೃಪೆಯಿಂದ ಬಿಟ್ಟುಹೋಗುವುದಿಲ್ಲ. ಶಿಕ್ಷಿಸಿಯೇ ಬಿಡುವುದು.

೪೨. ಮುಂದೆಯೂ ಸಹ ಈ ಚಕ್ರವು ಇಲ್ಲಿ ನಿಲ್ಲುವುದಿಲ್ಲ. ಜ್ವಾಲೆಯಿಂದ ಜ್ವಲಿಸುತ್ತಲಿರುವ ಈ ಚಕ್ರವು ಸ್ವಲ್ಪ ಕಾಲದಲ್ಲಿಯೇ ಶಿವನ ಬಳಿಗೆ ತೆರಳುವುದು.

೪೩. ಈ ವೀರಭದ್ರನನ್ನು ನಾವು ಭಕ್ತಿಯಿಂದ ಅರ್ಚಿಸಿದರೂ ಮಹಾಕೋಪವುಳ್ಳ ಆವನು ನಮ್ಮನ್ನು ರಕ್ಷಿಸುವುದಿಲ್ಲ.

ಅಕಾಂಡಪ್ರಳಯೋಽಸ್ಮಾಕಮಾಗತೋಽದ್ಯ ಹಿ ಹಾ ಹಹಾ ।
ಹಾಹಾ ಬತ ತವೇದಾನೀಂ ನಾಶೋಽಸ್ಮಾಕಮುಪಸ್ಥಿತಃ ॥ ೪೪ ॥

ಶರಣ್ಯೋಽಸ್ಮಾಕಮಧುನಾ ನಾಸ್ತ್ಯೇವ ಹಿ ಜಗತ್ತ್ರಯೇ ।
ಶಂಕರದ್ರೋಹಿಣೋ ಲೋಕೇ ಈಶ್ಯರಣ್ಯೋ ಭವಿಷ್ಯತಿ ॥ ೪೫ ॥

ತನುನಾಶೇಽಪಿ ಸಂಪ್ರಾಪ್ಯಾಸ್ತ್ವೈಶ್ಚಾಪಿ ಯಮಯಾತನಾಃ ।
ಸ ನೈವ ಶಕ್ಯತೇ ಸೋಢುಂ ಬಹುದುಃಖಪ್ರದಾಯಿನೀಃ ॥ ೪೬ ॥

ಶಿವದ್ರೋಹಿಣಮಾಲೋಕ್ಯ ದೃಷ್ಟವಂತೋ ಯಮಃ ಸ್ವಯಂ ।
ತಪ್ತತೈಲಕಟಾಹೇಷು ಪಾತಯತ್ಯೇವ ನಾನ್ಯಥಾ ॥ ೪೭ ॥

ಗಂತುಮೇವಾಹಮುದ್ಯುಕ್ತಂ ಸರ್ವಥಾ ಶಪಥೋತ್ತರಂ ।
ತಥಾಪಿ ನ ಗತಶ್ಶೀಘ್ರಂ ದುಷ್ಟಸಂಸರ್ಗಪಾಪತಃ ॥ ೪೮ ॥

---

೪೪. ಅಯ್ಯೋ! ಕಷ್ಟ ಕಷ್ಟ! ನಮಗೀಗ ಅಕಾಲದಲ್ಲಿ ಪ್ರಳಯವು ಬಂದಿರುವುದು. ನಮಗೂ ನಿನಗೂ ನಾಶವು ಬಂದೊದಗಿರುವುದು.

೪೫. ಮೂರು ಲೋಕಗಳಲ್ಲಿ ನಮ್ಮನ್ನು ರಕ್ಷಿಸುವವರು ಯಾರೂ ಇಲ್ಲವಲ್ಲಾ? ಶಂಕರದ್ರೋಹಿಯನ್ನು ಯಾರೂ ರಕ್ಷಿಸಲಾರರು.

೪೬. ಮರಣವನ್ನು ಹೊಂದಿದ ಮೇಲೂ ಶಿವದ್ರೋಹಿಗಳು ಮಹಾ ನರಕ ಯಾತನೆಗಳನ್ನು ಅನುಭವಿಸಬೇಕು. ಆ ಯಾತನೆಗಳು ತುಂಬಾ ದುಃಖವನ್ನುಂಟು ಮಾಡುವುವು. ಅವುಗಳನ್ನು ಸಹಿಸುವುದಸಾಧ್ಯವು.

೪೭. ತಿಳಿವಳಿಕೆಯಿದ್ದೂ ಶಿವದ್ರೋಹಿಗಳಾದಂತಹ ಜನರನ್ನು ಯಮನು, ತಾನೇ ಕಾಸಿದ ಎಣ್ಣೆಯ ಕೊಪ್ಪರಿಗೆಯಲ್ಲಿ ಹಾಕುವನು.

೪೮. ಈಶ್ವರನ ಶಪಥವ (ಆಕಾಶವಾಣಿಯು) ನ್ನು ಕೇಳಿದೊಡನೇ ನಾನು ಇಲ್ಲಿಂದ ಹೊರಡಲುದ್ಯುಕ್ತನಾಗಿದ್ದೆನು. ಹಾಗಿದ್ದರೂ ದುಷ್ಟರ ಸಹವಾಸದೋಷದಿಂದ ತಿರುಗಿ ಇಲ್ಲಿಯೇ ಇರಲು ಮನಸ್ಸು ಹುಟ್ಟಿತು.

ಯದದ್ಯ ಕ್ರಿಯತೇಽಸ್ಮಾಭಿಃ ಪಲಾಯನಮಿತಸ್ತದಾ ।
ಶಾರ್ವೋಣೇ ನಾಕರ್ಷಕಶ್ಶಸ್ತ್ರೈರಸ್ಮಾನಾಕರ್ಷಯಿಷ್ಯತಿ ॥ ೪೯ ॥

ಸ್ವರ್ಗೇ ವಾ ಭುವಿ ಪಾತಾಲೇ ಯತ್ರ ಕುತ್ರಾಪಿ ವಾ ಯತಃ ।
ಶ್ರೀವೀರಭದ್ರಶಸ್ತ್ರಾಣಾಂ ಗಮನಂ ನ ಹಿ ದುರ್ಲಭಂ ॥ ೫೦ ॥

ಯಾವಂತಶ್ಚ ಗಣಾಸ್ಸಂತಿ ಶ್ರೀರುದ್ರಸ್ಯ ತ್ರಿಶೂಲಿನಃ ।
ತಾವತಾಮಪಿ ಸರ್ವೇಷಾಂ ಶಕ್ತಿರೇತಾದೃಶೀ ಧ್ರುವಂ ॥ ೫೧ ॥

ಶ್ರೀಕಾಲಭೈರವಃ ಕಾಶ್ಯಾಂ ನಖಾಗ್ರೇಣೈವ ಲೀಲಯಾ ।
ಪುರಾ ಶಿರಶ್ಚ ಚಿಚ್ಛೇದ ಪಂಚಮಂ ಬ್ರಹ್ಮಣೋ ಧ್ರುವಂ ॥ ೫೨ ॥

ಏತದುಕ್ತ್ವಾ ಸ್ಥಿತೋ ವಿಷ್ಣುರತಿತ್ರಸ್ತಮುಖಾಂಬುಜಃ ।
ವೀರಭದ್ರೋಽಪಿ ಸಂಪ್ರಾಪ ತದೈವಾಧ್ವರಮಂಟಪಂ ॥ ೫೩ ॥

---

೪೯. ಈಗ ನಾವು ಇಲ್ಲಿಂದ ಓಡಿದರೂ ಕಷ್ಟ. ವೀರಭದ್ರನು ನಮ್ಮನ್ನು ಶಸ್ತ್ರಗಳಿಂದ ಹಿಂದೆಳೆಯುವನು.

೫೦. ಸ್ವರ್ಗದಲ್ಲಿಯಾಗಲೀ ಭೂಪಾತಾಳಗಳಲ್ಲಾಗಲೀ ಎಲ್ಲಿಯೂ ವೀರಭದ್ರನ ಶಸ್ತ್ರಗಳಿಗೆ ತಡೆಯಿಲ್ಲವೇ ಇಲ್ಲ.

೫೧. ರುದ್ರನ ಎಲ್ಲಾ ಗಣಗಳಿಗೂ ವೀರಭದ್ರನಿಗಿರುವಂತೆಯೇ ಶಕ್ತಿಯು ಇರುವುದು.

೫೨. ಶ್ರೀಕಾಲಭೈರವನು ಹಿಂದೆ ಕಾಶಿಯಲ್ಲಿ ಉಗುರಿನ ತುದಿಯಿಂದ ಬ್ರಹ್ಮನ ಐದನೆಯ ತಲೆಯನ್ನು ಅನಾಯಾಸವಾಗಿ ಕತ್ತರಿಸಿದನು. ಇದು ಎಲ್ಲರಿಗೂ ತಿಳಿದ ವಿಷಯ.

೫೩. ಇಷ್ಟನ್ನು ಹೇಳಿ ವಿಷ್ಣುವು ಭಯದಿಂದ ಮಲಿನವಾದ ಮುಖವುಳ್ಳವನಾಗಿ ಸುಮ್ಮನೆ ನಿಂತನು. ಅಷ್ಟರಲ್ಲಿ ವೀರಭದ್ರನೂ ಸಹ ಯಜ್ಞಶಾಲೆಯನ್ನು ಪ್ರವೇಶಿಸಿದನು.

**ಏವಂ ಬ್ರುವತಿ ಗೋವಿಂದ ಆಗತಂ ಸೈನ್ಯಸಾಗರಂ ।**
**ವೀರಭದ್ರೇಣ ಸಹಿತಂ ದದೃಶುಶ್ಚ ಸುರಾದಯಃ ॥ ೫೪ ॥**

**ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಸತೀಖಂಡೇ**
**ಪಂಚತ್ರಿಂಶೋಽಧ್ಯಾಯಃ**



---

೫೪.. ಆ ವೀರಭದ್ರನೊಡನೆ ಶಿವಗಣಗಳ ಸೈನ್ಯಸಾಗರವೇ ಬಂದಿತು. ಅದನ್ನು ದೇವತೆಗಳು ವಿಸ್ಮಯದಿಂದ ನೋಡಿದರು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಮೂವತ್ತೈದನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಷಟ್ತ್ರಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಇಂದ್ರೋಽಪಿ ಪ್ರಹಸರ್ ವಿಷ್ಣುಮಾತ್ಮವಾದರತಂ ತದಾ ।
ವಜ್ರಪಾಣಿಸ್ಸುರೈಸ್ಸಾರ್ಧಂ ಯೋದ್ಧುಕಾಮೋಽಭವತ್ತದಾ ॥ ೧ ॥

ತದೇಂದ್ರೋ ಗಜಮಾರೂಢೋ ಬಸ್ತಾರೂಢೋಽನಲಸ್ತದಾ ।
ಯಮೋ ಮಹಿಷಮಾರೂಢೋ ನಿರ್ಋತಿಃ ಪ್ರೇತಮೇವ ಚ ॥ ೨ ॥

---

## ಮೂವತ್ತಾರನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು :—ಎಲೈ ನಾರದ, ಹೀಗೆ ಹರಿಯು ಪರಮಾತ್ಮ ತತ್ವವನ್ನು ಹೇಳಲು ಇಂದ್ರನು ಅವನನ್ನು ಹಾಸ್ಯಮಾಡಿ ವಜ್ರವನ್ನು ಹಿಡಿದು ದೇವತೆಗಳೊಂದಿಗೆ ಕೂಡಿ ಯುದ್ಧಮಾಡಲುದ್ಯುಕ್ತನಾದನು.

೨-೩. ಆಗ ಇಂದ್ರನು ಐರಾವತವನ್ನೇರಿದನು. ಅಗ್ನಿಯು ಆಡನ್ನೂ, ಯಮನು ಕೋಣವನ್ನೂ, ನಿರ್ಋತಿಯು ಪ್ರೇತವನ್ನೂ, ವರುಣನು ಮೊಸಳೆಯನ್ನೂ,

ಪಾಶೀ ಚ ಮಕರಾರೂಢೋ ಮೃಗಾರೂಢಸ್ಸದಾಗತಿಃ ।
ಕುಬೇರಃ ಪುಷ್ಪಕಾರೂಢಸ್ಸನ್ನದ್ಧೋಽಭೂದತಂದ್ರಿತಃ ॥ ೩ ॥

ತಥಾನ್ಯೇ ಸುರಸಂಘಾಶ್ಚ ಯಕ್ಷಚಾರಣಗುಹ್ಯಕಾಃ ।
ಆರುಹ್ಯ ವಾಹನಾನ್ಯೇವ ಸ್ವಾನಿ ಸ್ವಾನಿ ಪ್ರತಾಪಿನಃ ॥ ४ ॥

ತೇಷಾಮುದ್ಯೋಗಮಾಲೋಕ್ಯ ದಕ್ಷಶ್ಚಾಸೃಙ್ಮುಖಸ್ತದಾ ।
ತದಂತಿಕಂ ಸಮಾಗಮ್ಯ ಸಕಲತ್ರೋಽಭ್ಯಭಾಷತ ॥ ೫ ॥

॥ ದಕ್ಷ ಉವಾಚ ॥

ಯುಷ್ಮದ್ಬಲೇನೈವ ಮಯಾ ಯಜ್ಞಃ ಪ್ರಾರಂಭಿತೋ ಮಹಾನ್ ।
ತತ್ಕರ್ಮಸಿದ್ಧಯೇ ಯೂಯಂ ಪ್ರಮಾಣಾಃ ಸ್ಯುರ್ಮಹಾಪ್ರಭಾಃ ॥ ೬ ॥

॥ ಬ್ರಹ್ಮೋವಾಚ ॥

ತಚ್ಛ್ರುತ್ವಾ ದಕ್ಷವಚನಂ ಸರ್ವೇ ದೇವಾಸ್ಸವಾಸವಾಃ ।
ನಿರ್ಯಯುಸ್ತ್ವರಿತಂ ತತ್ರ ಯುದ್ಧಂ ಕರ್ತುಂ ಸಮುದ್ಯತಾಃ ॥ ೭ ॥

---

ವಾಯುವು ಮೃಗವನ್ನೂ, ಕುಬೇರನು ಪುಷ್ಪಕವಿಮಾನವನ್ನು ಹೀಗೆ ಎಲ್ಲರೂ ತಮ್ಮ ತಮ್ಮ ವಾಹನವನ್ನೇರಿ ಯುದ್ಧಕ್ಕೆ ಸಿದ್ಧರಾದರು.

४. ಮತ್ತು ಇನ್ನೂ ಕೆಲವರು ದೇವತೆಗಳು, ಚಾರಣರು ಗುಹ್ಯಕರು, ಇವರೆಲ್ಲರೂ ತಮ್ಮ ತಮ್ಮ ವಾಹನವೇರಿ ಯುದ್ಧಕ್ಕೆ ಸಿದ್ಧರಾದರು.

೫. ಇಂದ್ರನೇ ಮೊದಲಾದವರ ಆ ಉದ್ಯೋಗವನ್ನು ನೋಡಿ ದಕ್ಷನು ಆಗ ತನ್ನ ಪತ್ನಿಯೊಡನೆ ಅವರ ಬಳಿಗೆ ಬಂದು ಹೀಗೆ ಹೇಳಿದನು.

೬. ದಕ್ಷನು ಹೇಳಿದನು :—ಎಲೈ ದೇವತೆಗಳೇ, ನಿಮ್ಮೆಲ್ಲರ ಬಲದಿಂದಲೇ ನಾನು ಈ ಯಜ್ಞವನ್ನು ಪ್ರಾರಂಭಿಸಿರುವೆನು. ಆ ಕರ್ಮವು ವಿಘ್ನವಿಲ್ಲದೆ ಸಿದ್ಧಿಸುವುದರಲ್ಲಿ ವೀರರಾದ ನೀವೇ ಪ್ರಮಾಣವು, ಎಲ್ಲವೂ ನಿಮ್ಮ ಕೈಯಲ್ಲಿರುವುದು ಎಂದನು.

೭. ಬ್ರಹ್ಮನು ಹೇಳಿದನು :—ಈರೀತಿಯಾಗಿ ದಕ್ಷನ ಮಾತನ್ನು ಕೇಳಿ ಇಂದ್ರನೇ ಮೊದಲಾದ ದೇವತೆಗಳು ಆ ಕೂಡಲೇ ಯುದ್ಧಮಾಡಲು ಹೊರಟರು.

ಅಥ ದೇವಗಣಾಸ್ಸರ್ವೇ ಯುಯುಧುಸ್ತೇ ಬಲಾನ್ವಿತಾಃ ।
ಶಕ್ರಾದಯೋ ಲೋಕಪಾಲಾ ಮೋಹಿತಾಃ ಶಿವಮಾಯಯಾ ॥ ೮ ॥

ದೇವಾನಾಂ ಚ ಗಣಾನಾಂ ಚ ತದಾಸೀತ್ಸಮರೋ ಮಹಾನ್ ।
ತೀಕ್ಷ್ಣತೋಮರನಾರಾಚೈರ್ಯುಯುಧುಸ್ತೇ ಪರಸ್ಪರಂ ॥ ೯ ॥

ನೇದುಶ್ಶಂಖಾಶ್ಚ ಭೇರ್ಯಶ್ಚ ತಸ್ಮಿನ್ ರಣಮಹೋತ್ಸವೇ ।
ಮಹಾದುಂದುಭಯೋ ನೇದುಃ ಪಟಹಾ ಡಿಂಡಿಮಾದಯಃ ॥ ೧೦ ॥

ತೇನ ಶಬ್ದೇನ ಮಹತಾ ಶ್ಲಾಘ್ಯಮಾನಾಸ್ತದಾ ಸುರಾಃ ।
ಲೋಕಪಾಲೈಶ್ಚ ಸಹಿತಾ ಜಘ್ನುಸ್ತಾನ್ ಶಿವಕಿಂಕರಾನ್ ॥ ೧೧ ॥

ಇಂದ್ರಾದ್ಯೈರ್ಲೋಕಪಾಲೈಶ್ಚ ಗಣಾಶ್ಶಂಭೋಃ ಪರಾಙ್ಮುಖಾಃ ।
ಕೃತಾಶ್ಚ ಮುನಿಶಾರ್ದೂಲ ಭೃಗೋರ್ಮಂತ್ರಬಲೇನ ಚ ॥ ೧೨ ॥

---

೮. ಇಂದ್ರನೇ ಮೊದಲಾದ ಲೋಕಪಾಲಕರೂ ವೀರರಾದ ದೇವಗಣಗಳೂ ಇವರೆಲ್ಲರೂ ಶಿವಮಾಯೆಯಿಂದ ಮೋಹಿತರಾಗಿ ಯುದ್ಧಮಾಡಿದರು.

೯. ದೇವತೆಗಳಿಗೂ ಶಿವಗಣಗಳಿಗೂ ಆಗ ಮಹಾಯುದ್ಧವು ನಡೆಯಿತು. ಹರಿತವಾದ ಬಾಣಗಳು, ತೋಮರ ಮುಂತಾದ ಆಯುಧಗಳು ಇವುಗಳಿಂದ ಅವರು ಪರಸ್ಪರ ಯುದ್ಧಮಾಡಿದರು.

೧೦. ಆ ರಣಮಹೋತ್ಸವದಲ್ಲಿ ಶಂಖಗಳು, ಭೇರಿ(ನಗಾರಿ) ಗಳು, ಪಟಗಳು, ಕಹಳೆಗಳು, ಡಿಂಡಿಮ ಮುಂತಾದ ಎಲ್ಲ ವಾದ್ಯಗಳ ಘೋಷವಾಗುತ್ತಿತ್ತು.

೧೧. ಆ ಮಹಾಶಬ್ದದಿಂದ ಲೋಕಪಾಲಕರು ಮುಂತಾದ ದೇವತೆಗಳು ತುಂಬಾ ಉತ್ಸಾಹವುಳ್ಳವರಾಗಿ ಶಿವಗಣಗಳನ್ನು ಎದುರಿಸಿದರು.

೧೨. ಇಂದ್ರಾದಿ ದೇವತೆಗಳಿಂದಲೂ ಭೃಗುಮುನಿಯ ಮಂತ್ರಬಲದಿಂದಲೂ ಶಿವಗಣಗಳಲ್ಲಿ ಕೆಲವರು ನಾಶಹೊಂದಿದರು. ಕೆಲವರು ಪರಾಙ್ಮುಖರಾದರು. ಪರಾಜಯುವನ್ನು ಹೊಂದಿದರು.

ಉಚ್ಚಾಟನಂ ಕೃತಂ ತೇಷಾಂ ಭೃಗುಣಾ ಯಜ್ವನಾ ತದಾ ।
ಯಜನಾರ್ಥಂ ಚ ದೇವಾನಾಂ ತುಷ್ಟ್ಯರ್ಥಂ ದೀಕ್ಷಿತಸ್ಯ ಚ ॥ ೧೩ ॥

ಪರಾಜಿತಾನ್ ಸ್ವಕಾನ್ ದೃಷ್ಟ್ವಾ ವೀರಭದ್ರೋ ರುಷಾನ್ವಿತಃ ।
ಭೂತಪ್ರೇತಪಿಶಾಚಾಂಶ್ಚ ಕೃತ್ವಾ ತಾನೇವ ಪೃಷ್ಠತಃ ॥ ೧೪ ॥

ವೃಷಭಸ್ಥಾನ್ ಪುರಸ್ಕೃತ್ಯ ಸ್ವಯಂ ಚೈವ ಮಹಾಬಲಃ ।
ಮಹಾತ್ರಿಶೂಲಮಾದಾಯ ಪಾತಯಾಮಾಸ ನಿರ್ಜರಾನ್ ॥ ೧೫ ॥

ದೇವಾನ್ ಯಕ್ಷಾನ್ ಸಾಧ್ಯಗಣಾನ್ ಗುಹ್ಯಕಾಂಶ್ಚಾರಣಾನಪಿ ।
ಶೂಲಘಾತೈಶ್ಚ ತೇ ಸರ್ವೇ ಗಣಾ ವೇಗಾತ್ ಪ್ರಜಘ್ನಿರೇ ॥ ೧೬ ॥

ಕೇಚಿದ್ದ್ವಿಧಾಕೃತಾಃ ಖಡ್ಗೈರ್ಮುದ್ಗರೈಶ್ಚ ವಿಪೋಥಿತಾಃ ।
ಅನ್ಯೈಶ್ಶಸ್ತ್ರೈರಪಿ ಸುರಾ ಗಣೈರ್ಭಿನ್ನಾಸ್ತದಾಭವನ್ ॥ ೧೭ ॥

---

೧೩. ಅಧ್ವರ್ಯುವಾದ ಭೃಗುಮುನಿಯು ಮಂತ್ರಬಲದಿಂದ ಶಿವಗಣಗಳನ್ನು ಉಚ್ಚಾಟನಮಾಡಿದನು. ದೇವತೆಗಳಿಗೆ ಹವಿರ್ಭಾಗ ಲಭಿಸುವುದಕ್ಕಾಗಿಯೂ, ಯಜಮಾನನಾದ ದಕ್ಷನಿಗೆ ಯಜ್ಞಫಲ ಲಭಿಸುವುದಕ್ಕಾಗಿಯೂ ಭೃಗುಮುನಿಯು ಹಾಗೆ ಮಾಡಿದನು.

೧೪. ತನ್ನ ಗಣಗಳೆಲ್ಲವೂ ಪರಾಜಯಹೊಂದಿದುದನ್ನು ನೋಡಿ ವೀರಭದ್ರನು ಕೋಪಗೊಂಡು ಭೂತ, ಪ್ರೇತ ಮತ್ತು ಪಿಶಾಚಿಗಳು ಇವುಗಳೊಡನೆ ಮುಂದೆ ಬಂದನು.

೧೫. ವೃಷಭವನ್ನೇರಿರುವ ಕೆಲವು ಗಣಗಳನ್ನು ಮುಂದೆ ಮಾಡಿಕೊಂಡು ಆ ವೀರಭದ್ರನು ತ್ರಿಶೂಲವನ್ನು ಧರಿಸಿ ಎಲ್ಲಾ ದೇವತೆಗಳನ್ನೂ ಪ್ರಹರಿಸಿದನು.

೧೬. ದೇವತೆಗಳು, ಯಕ್ಷರು, ಸಾಧ್ಯರು, ಗುಹ್ಯಕರು, ಚಾರಣರು, ಇವರೆಲ್ಲರನ್ನೂ, ಶಿವಗಣಗಳು ಶೂಲಾಯುಧಗಳಿಂದ ಹೊಡೆದರು.

೧೭. ದೇವತೆಗಳಲ್ಲಿ ಕೆಲವರು ಶಿವಗಣಗಳ ಖಡ್ಗಗಳಿಂದ ಕತ್ತರಿಸಲ್ಪಟ್ಟರು. ಕೆಲವರು ಮುದ್ಗರಗಳಿಂದ ಚೂರುಮಾಡಲ್ಪಟ್ಟರು. ಇನ್ನು ಕೆಲವರು ಶಸ್ತ್ರಗಳಿಂದ ಏಟುಗಳನ್ನು ತಿಂದು ಮೂರ್ಛಿತರಾದರು.

ಏವಂ ಪರಾಜಿತಾಸ್ಸರ್ವೇ ಪಲಾಯನಪರಾಯಣಾಃ ।
ಪರಸ್ಪರಂ ಪರಿತ್ಯಜ್ಯ ಗತಾದೇವಾಸ್ತ್ರಿವಿಷ್ಟಪಂ ॥ ೧೮ ॥

ಕೇವಲಂ ಲೋಕಪಾಲಾಸ್ತೇ ಶಕ್ರಾದ್ಯಾಸ್ತತ್ಸಮುತ್ಸುಕಾಃ ।
ಸಂಗ್ರಾಮೇ ದಾರುಣೇ ತಸ್ಮಿನ್ ಧೃತ್ವಾ ಧೈರ್ಯಂ ಮಹಾಬಲಾಃ ॥ ೧೯ ॥

ಸರ್ವೇ ಮಿಲಿತ್ವಾ ಶಕ್ರಾದ್ಯಾ ದೇವಾಸ್ತತ್ರ ರಣಾಜಿರೇ ।
ಬೃಹಸ್ಪತಿಂ ಚ ಪಪ್ರಚ್ಛುರ್ವಿನಯಾಽಽನತಾಸ್ತದಾ ॥ ೨೦ ॥

॥ ಲೋಕಪಾಲಾ ಊಚುಃ ॥

ಬೃಹಸ್ಪತೇ ಗುರೋ ತಾತ ಮಹಾಪ್ರಾಜ್ಞ ದಯಾನಿಧೇ ।
ಶೀಘ್ರಂ ವದ ಪೃಚ್ಛತೋ ನಃ ಕುತೋಽಸ್ಮಾಕಂ ಜಯೋ ಭವೇತ್ ॥೨೧॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತೇಷಾಂ ಸ್ಮೃತ್ವಾ ಶಂಭುಂ ಪ್ರಯತ್ನವಾನ್ ।
ಬೃಹಸ್ಪತಿರುವಾಚೇದಂ ಮಹೇಂದ್ರಂ ಜ್ಞಾನದುರ್ಬಲಂ ॥ ೨೨ ॥

---

೧೮. ಹೀಗೆ ಶಿವಗಣಗಳಿಂದ ಪರಾಜಿತರಾಗಿ ದೇವತೆಗಳೆಲ್ಲರೂ ಯಾಗಶಾಲೆಯಿಂದ ಪಲಾಯನಮಾಡಿ ತಮ್ಮ ಸ್ಥಾನವಾದ ಸ್ವರ್ಗವನ್ನು ಸೇರಿದರು.

೧೯. ಆ ಮಹಾಯುದ್ಧದಲ್ಲಿ ಇಂದ್ರನೇ ಮೊದಲಾದ ಮಹಾವೀರರಾದ ಲೋಕಪಾಲಕರು ಮಾತ್ರ ಧೈರ್ಯದಿಂದ ಶಿವಗಣಗಳನ್ನು ಎದುರಿಸಿ ನಿಂತರು.

೨೦. ಆಗ ಆ ಲೋಕಪಾಲಕರೆಲ್ಲರೂ ಸೇರಿ ದೇವಾಚಾರ್ಯನಾದ ಬೃಹಸ್ಪತಿಯ ಬಳಿಗೆ ಹೋಗಿ ವಿನಯದಿಂದ ಅವನನ್ನು ಕುರಿತು,

೨೧. ಲೋಕಪಾಲರು ಹೇಳಿದರು:—ದೇವಗುರುವಾದ ಓ ಬೃಹಸ್ಪತಿಯೇ ನೀನು ದಯಾನಿಧಿಯು. ಎಲ್ಲವನ್ನೂ ಬಲ್ಲವನು. ನಮಗೆ ಜಯವು ಹೇಗೆ ಲಭಿಸುವುದೆಂಬುದನ್ನು ಹೇಳಿ ನಮ್ಮನ್ನು ರಕ್ಷಿಸು ಎಂದರು.

೨೨. ಬ್ರಹ್ಮನು ಹೇಳಿದನು;—ಲೋಕಪಾಲಕರ ಮಾತನ್ನು ಕೇಳಿ ಬೃಹಸ್ಪತಿಯು ಶಂಕರನನ್ನು ಮನಸ್ಸಿನಲ್ಲಿ ಸ್ಮರಿಸಿ ಅಜ್ಞಾನಿಯಾದ ಇಂದ್ರನನ್ನು ಕುರಿತು ಹೀಗೆ ಹೇಳಿದನು.

॥ ಬೃಹಸ್ಪತಿರುವಾಚ ॥

ಯದುಕ್ತಂ ವಿಷ್ಣುನಾ ಪೂರ್ವಂ ತತ್ಸರ್ವಂ ಜಾತಮದ್ಯ ವೈ ।
ತದೇವ ವಿವೃಣೋಮೀಂದ್ರ ಸಾವಧಾನತಯಾ ಶೃಣು ॥ ೨೩ ॥

ಅಸ್ತಿ ಯಶ್ಚೇಶ್ವರಃ ಕಶ್ಚಿತ್ಫಲದಃ ಸರ್ವಕರ್ಮಣಾಂ ।
ಕರ್ತಾರಂ ಭಜತೇ ಸೋಽಪಿ ನ ಸ್ವಕರ್ತುಃ ಪ್ರಭುರ್ಹಿ ಸಃ ॥ ೨೪ ॥

ನ ಮಂತ್ರೌಷಧಯಸ್ಸರ್ವೇ ನಾಭಿಚಾರಾ ನ ಲೌಕಿಕಾಃ ।
ನ ಕರ್ಮಾಣಿ ನ ವೇದಾಶ್ಚ ನ ಮೀಮಾಂಸಾದ್ವಯಂ ತಥಾ ॥ ೨೫ ॥

ಅನ್ಯಾನ್ಯಪಿ ಚ ಶಾಸ್ತ್ರಾಣಿ ನಾನಾವೇದಯುತಾನಿ ಚ ।
ಜ್ಞಾತುಂ ನೇಶಂ ಸಂಭವಂತಿ ವದಂತ್ಯೇವಂ ಪುರಾತನಾಃ ॥ ೨೬ ॥

ನ ಸ್ವಜ್ಞೇಯೋ ಮಹೇಶಾನಃ ಸರ್ವವೇದಾಯುತೇನ ಚ ।
ಭಕ್ತೈರನನ್ಯಶರಣೈರ್ನಾನ್ಯಥೇತಿ ಮಹಾಶ್ರುತಿಃ ॥ ೨೭ ॥

---

೨೩. ಬೃಹಸ್ಪತಿಯು ಹೇಳಿದನು :—ಎಲೈ ಇಂದ್ರನೆ, ಹಿಂದೆ ವಿಷ್ಣುವು ಹೇಳಿದಂತೆಯೇ ಆಗಿರುವುದು. ಅದನ್ನೇ ವಿವರಿಸಿ ಹೇಳುವೆನು ಸಾವಧಾನವಾಗಿ ಕೇಳು.

೨೪. ಸರ್ವಕರ್ಮಗಳಿಗೂ ಫಲವನ್ನು ಕೊಡುವಂತಹ ಈಶ್ವರನೋರ್ವನಿರುವನು. ಅವನೂ ಸಹ ಜನ್ಮವುಳ್ಳವನು, ತನ್ನನ್ನು ಸೃಷ್ಟಿಸಿದ ಪರಮೇಶ್ವರನ ಮಹಿಮೆಯನ್ನು ಅವನೂ ತಿಳಿಯಲಾರನು.

೨೫-೨೬. ಮಂತ್ರಗಳು, ಓಷಧಿಗಳು, ಅಭಿಚಾರಕರ್ಮಗಳು, ಲೌಕಿಕ ಕರ್ಮಗಳು, ವೇದಗಳು, ಶಾಸ್ತ್ರಗಳು, ವೇದಾಂತ ಇವೆಲ್ಲವೂ ಸಹ ಆ ಪರಮೇಶ್ವರನನ್ನು ಸಾಕ್ಷಾತ್ ತಿಳಿಸಲಾರವು. ಹೀಗೆಂದು ಪುರಾತನರಾದ ಮುನಿಗಳು ಹೇಳುವರು.

೨೭. ಮಹೇಶ್ವರನನ್ನು ಯಾವ ವೇದಗಳೂ ತಿಳಿಸಲಾರವು. ಅವನನ್ನೇ ಭಕ್ತಿಯಿಂದ “ ನೀನೇ ಶರಣು ” ಎಂದು ಭಜಿಸುವ ಶಿವಭಕ್ತರು ಮಾತ್ರ ಆ ಶಿವನನ್ನು ತಿಳಿಯಬಲ್ಲರು. ಇನ್ನಾವರೀತಿಯಿಂದಲೂ ತಿಳಿಯಲಸಾಧ್ಯವು. ಹೀಗೆಂದು ಮಹಾಶ್ರುತಿಯೇ (ವೇದವೇ) ಹೇಳುವುದು.

ಶಾಂತ್ಯಾ ಚ ಪರಯಾ ದೃಷ್ಟ್ಯಾ ಸರ್ವಥಾ ನಿರ್ವಿಕಾರಯಾ ।
ತದನುಗ್ರಹತೋ ನೂನಂ ಜ್ಞಾತವ್ಯೋ ಹಿ ಸದಾಶಿವಃ　　　॥ ೨೮ ॥

ಪರಂ ತು ಸಂವದಿಷ್ಯಾಮಿ ಕಾರ್ಯಾಕಾರ್ಯವಿವಕ್ಷಿತೌ ।
ಸಿದ್ಧ್ಯಂಶಂ ಚ ಸುರೇಶಾನ ತಂ ಶೃಣು ತ್ವಂ ಹಿತಾಯ ವೈ　　　॥ ೨೯ ॥

ತ್ವಮಿಂದ್ರ ಬಾಲಿಶೋ ಭೂತ್ವಾ ಲೋಕಪಾಲೈಸ್ಸಹಾದ್ಯವೈ ।
ಆಗತೋ ದಕ್ಷಯಜ್ಞಂ ಹಿ ಕಿಂ ಕರಿಷ್ಯಸಿ ವಿಕ್ರಮಂ　　　॥ ೩೦ ॥

ಏತೇ ರುದ್ರಸಹಾಯಾಶ್ಚ ಗಣಾಃ ಪರಮಕೋಪನಾಃ ।
ಆಗತಾ ಯಜ್ಞವಿಘ್ನಾರ್ಥಂ ತಂ ಕರಿಷ್ಯಂತ್ಯಸಂಶಯಂ　　　॥ ೩೧ ॥

ಸರ್ವಥಾ ನ ಹ್ಯುಪಾಯೋಽತ್ರ ಕೇಷಾಂಚಿದಪಿ ತತ್ತ್ವತಃ ।
ಯಜ್ಞವಿಘ್ನವಿನಾಶಾರ್ಥಂ ಸತ್ಯಂ ಸತ್ಯಂ ಬ್ರವೀಮ್ಯಹಂ　　　॥ ೩೨ ॥

---

೨೮. ಶಾಂತಿಯಿಂದಲೂ, ಉಪಾಸನೆಯಿಂದಲೂ, ಯಾವ ವಿಕಾರವೂ ಇಲ್ಲದ ದೃಷ್ಟಿಯಿಂದಲೂ, ಆ ಶಿವನ ಅನುಗ್ರಹದಿಂದಲೂ ಅವನನ್ನು ತಿಳಿಯಬಹುದು.

೨೯. ಆದರೆ ಎಲೈ ಇಂದ್ರನೇ, ಪ್ರಕೃತ ಯಾವುದನ್ನು ಮಾಡಬೇಕು ? ಯಾವುದನ್ನು ಮಾಡಬಾರದು ? ಎಂಬ ನಿರ್ಣಯವನ್ನು ನಿನ್ನ ಹಿತಕ್ಕಾಗಿಯೇ ಹೇಳುವೆನು ಕೇಳು.

೩೦. ತಿಳಿವಳಿಕೆಯಿಲ್ಲದೆ ನೀನು ಈ ಯಜ್ಞಕ್ಕೆ ಬಂದಿರುವೆ. ಇಲ್ಲಿ ನೀನೇನು ಪರಾಕ್ರಮವನ್ನು ತೋರಿಸಿರುವೆ ?

೩೧. ರುದ್ರಸಹಾಯಕರಾದ ಈ ಗಣಗಳು ಮಹಾಕೋಪದಿಂದ ಯಜ್ಞನಾಶಕ್ಕಾಗಿ ಬಂದಿರುವುವು. ಯಜ್ಞನಾಶವನ್ನು ಖಂಡಿತವಾಗಿ ಮಾಡುವುವು.

೩೨. ಈ ಯಜ್ಞನಾಶವನ್ನು ತಡೆಯಲು ಯಾವ ಉಪಾಯವೂ ಇಲ್ಲ. ನಿಜವಾದ ಮಾತನ್ನು ನಿನಗೆ ಹೇಳುತ್ತಲಿರುವೆನು ಎಂದನು.

॥ ಬ್ರಹ್ಮೋವಾಚ ॥

ಏವಂ ಬೃಹಸ್ಪತೇರ್ವಾಕ್ಯಂ ಶ್ರುತ್ವಾ ತೇ ಹಿ ದಿವೌಕಸಃ ।
ಚಿಂತಾಮಾಪೇದಿರೇ ಸರ್ವೇ ಲೋಕಪಾಲಾಸ್ಸವಾಸವಾಃ ॥ ೩೩ ॥

ತತೋಽಬ್ರವೀದ್ವೀರಭದ್ರೋ ಮಹಾವೀರಗಣೈರ್ವೃತಃ ।
ಇಂದ್ರಾದೀನ್ ಲೋಕಪಾಲಾಂಸ್ತಾನ್ ಸ್ಮೃತ್ವಾ ಮನಸಿ ಶಂಕರಂ ॥ ೩೪ ॥

॥ ವೀರಭದ್ರ ಉವಾಚ ॥

ಸರ್ವೇ ಯೂಯಂ ಬಾಲಿಶತ್ವಾದವದಾನಾರ್ಥಮಾಗತಾಃ ।
ಅವದಾನಂ ಪ್ರಯಚ್ಛಾಮಿ ಆಗಚ್ಛತ ಮಮಾಂತಿಕಂ ॥ ೩೫ ॥

ಹೇ ಶುಕ್ರ ಹೇ ಶುಚೇ ಭಾನೋ ಹೇ ಶಶಿನ್ ಹೇ ಧನಾಧಿಪ ।
ಹೇ ಪಾಶಪಾಣೇ ಹೇ ವಾಯೋ ನಿರ್ಋತೇ ಯಮ ಶೇಷ ವೈ ॥ ೩೬ ॥

ಹೇ ಸುರಾಸುರಸಂಘಾಶ್ಚ ಯೂಯಂ ಚ ವಿಚಕ್ಷಣಾಃ ।
ಅವದಾನಾನಿ ದಾಸ್ಯಾಮಿ ಆತೃಪ್ತ್ಯಾದ್ಯಾಸತಾಂ ವರಾನ್ ॥ ೩೭ ॥

---

೩೩. ಬ್ರಹ್ಮನು ಹೇಳಿದನು:—ಹೀಗೆ ಬೃಹಸ್ಪತಿಯು ಹೇಳಿದ ವಾಕ್ಯವನ್ನು ಕೇಳಿ ದೇವತೆಗಳೂ, ಲೋಕಪಾಲರೂ ತುಂಬಾ ಚಿಂತೆಗೊಳಗಾದರು.

೩೪. ಆಗ ವೀರರಾದ ಶಿವಗಣಗಳೊಡನೆ ವೀರಭದ್ರನು ಬಂದು ಶಿವನನ್ನು ಮನಸ್ಸಿನಲ್ಲಿ ಸ್ಮರಿಸುತ್ತಾ ಇಂದ್ರನೇ ಮೊದಲಾದ ಲೋಕಪಾಲರನ್ನು ಕುರಿತು ಹೀಗೆ ಹೇಳಿದನು.

೩೫. ವೀರಭದ್ರನು ಹೇಳಿದನು:—ಎಲೈ ದೇವತೆಗಳಿರಾ, ನೀವೆಲ್ಲರೂ ಯಜ್ಞದ ಹವಿರ್ಭಾಗವನ್ನು ತೆಗೆದುಕೊಳ್ಳಲು ಬಂದಿರುವಿರಷ್ಟೆ? ನನ್ನ ಬಳಿಗೆ ಬನ್ನಿರಿ. ನಾನು ನಿಮಗೆ ಯಜ್ಞಭಾಗವನ್ನು ಕೊಡುವೆನು.

೩೬-೩೭. ಎಲೈ ಶುಕ್ರ, ಎಲೈ ಅಗ್ನಿ, ಎಲೈ ಸೂರ್ಯ, ಎಲೈ ಚಂದ್ರ, ಕುಬೇರ, ವರುಣ, ವಾಯು, ನಿರ್ಋತಿ, ಯಮ ಮೊದಲಾದ ಮಿಕ್ಕ ದೇವತೆಗಳಿರಾ, ಎಲ್ಲರೂ ನನ್ನ ಬಳಿಗೆ ಬನ್ನಿರಿ. ನಿಮಗೆ ಯಜ್ಞಭಾಗವನ್ನು ತೃಪ್ತಿಯಾಗುವಷ್ಟು ಕೊಡುವೆನು.

॥ ಬ್ರಹ್ಮೋವಾಚ ॥

ಏವಮುಕ್ತ್ವಾ ಶಿತೈರ್ಬಾಣೈರ್ಜಘಾನಾಥ ರುಷಾನ್ವಿತಃ ।
ನಿಖಿಲಾಂಸ್ತಾನ್ ಸುರಾನ್ ಸದ್ಯೋ ವೀರಭದ್ರೋ ಗಣಾಗ್ರಣೀಃ ॥ ೩೮ ॥

ತೈರ್ಬಾಣೈರ್ನಿಹತಾಸ್ಸರ್ವೇ ವಾಸವಾದ್ಯಾಃ ಸುರೇಶ್ವರಾಃ ।
ಪಲಾಯನಪರಾ ಭೂತ್ವಾ ಜಗ್ಮುಸ್ತೇ ಹಿ ದಿಶೋ ದಶ ॥ ೩೯ ॥

ಗತೇಷು ಲೋಕಪಾಲೇಷು ವಿದ್ರುತೇಷು ಸುರೇಷು ಚ ।
ಯಜ್ಞವಾಟೋಪಕಂಠಂ ಹಿ ವೀರಭದ್ರೋಽಗಮದ್ಗಣೈಃ ॥ ೪೦ ॥

ತದಾ ತೇ ಋಷಯಸ್ಸರ್ವೇ ಸುಭೀತಾ ಹಿ ಮಹೇಶ್ವರಂ ।
ವಿಜ್ಞಪ್ತುಕಾಮಾಸ್ಸಹಸಾ ಶೀಘ್ರಮೂಚುರ್ನತಾ ಭೃಶಂ ॥ ೪೧ ॥

॥ ಋಷಯ ಊಚುಃ ॥

ದೇವದೇವ ರಮಾನಾಥ ಸರ್ವೇಶ್ವರ ಮಹಾಪ್ರಭೋ ।
ರಕ್ಷ ಯಜ್ಞಂ ಹಿ ದಕ್ಷಸ್ಯ ಯಜ್ಞೋಽಸಿ ತ್ವಾಂ ನ ಸಂಶಯಃ ॥ ೪೨ ॥

---

೩೮. ಬ್ರಹ್ಮನು ಹೇಳಿದನು :—ಹೀಗೆ ವ್ಯಂಗವಾಗಿ ಹೇಳಿ ವೀರಭದ್ರನು ಕೋಪಗೊಂಡು ಹರಿತವಾದ ಬಾಣಗಳಿಂದ ದೇವತೆಗಳನ್ನೆಲ್ಲಾ ಪ್ರಹರಿಸಿದನು.

೩೯. ಹೀಗೆ ವೀರಭದ್ರನ ಬಾಣಗಳಿಂದ ಏಟುತಿಂದು ಇಂದ್ರನೇ ಮೊದಲಾದ ದೇವನಾಯಕರು ದಶದಿಕ್ಕುಗಳಿಗೆ ಓಡಿಹೋದರು.

೪೦. ಹೀಗೆ ಲೋಕಪಾಲಕರು ಮತ್ತು ಮಿಕ್ಕ ದೇವತೆಗಳು ಓಡಿಹೋಗಲು ವೀರಭದ್ರನು ಗಣಗಳೊಡನೆ ಯಜ್ಞಮಂಟಪದ ಸಮೀಪಕ್ಕೆ ಬಂದನು.

೪೧. ಆಗ ಋಷಿಗಳೆಲ್ಲರೂ ತುಂಬಾ ಭಯಗೊಂಡು ವಿಷ್ಣುವಿನ ಬಳಿಗೆ ಬಂದು ಅವನಿಗೆ ನಮಸ್ಕರಿಸಿ,

೪೨. ಋಷಿಗಳು ಹೇಳಿದರು :—ದೇವದೇವನಾದ ಓ ಹರಿಯೇ, ನೀನು ಮಹಾಪ್ರಭುವು, ಎಲ್ಲರಿಗೂ ಸ್ವಾಮಿಯು, ಮತ್ತು ಯಜ್ಞಸ್ವರೂಪನು. ಇಂತಹ ನೀನು ದಕ್ಷನ ಯಜ್ಞವನ್ನು ರಕ್ಷಿಸುವವನಾಗು.

ಯಜ್ಞಕರ್ಮಾ ಯಜ್ಞರೂಪೋ ಯಜ್ಞಾಂಗೋ ಯಜ್ಞರಕ್ಷಕಃ ।
ದಕ್ಷಯಜ್ಞಮತೋ ರಕ್ಷ ತ್ವತ್ತೋಽನ್ಯೋ ನ ಹಿ ರಕ್ಷಕಃ ॥ ೪೩ ॥

॥ ಬ್ರಹ್ಮೋವಾಚ ॥

ಮಹಾಬಲೋಽಮರಗಣೈರ್ಯಜ್ಞವಾಟಾತ್ಸ ನಿರ್ಯಯೌ ।
ಚತುರ್ಭುಜಸ್ಸುಸನ್ನದ್ಧೋ ಚಕ್ರಾಯುಧಧರಃ ಕರೈಃ ॥ ೪೪ ॥

ವೀರಭದ್ರಶ್ಶೂಲಪಾಣಿರ್ನಾನಾಗಣಸಮನ್ವಿತಃ ।
ದದರ್ಶ ವಿಷ್ಣುಂ ಸನ್ನದ್ಧಂ ಯೋದ್ಧುಕಾಮಂ ಮಹಾಬಲಂ ॥ ೪೫ ॥

ತಂ ದೃಷ್ಟ್ವಾ ವೀರಭದ್ರೋಽಭೂದ್ಭ್ರುಕುಟೀಕುಟಿಲಾನನಃ ।
ಕೃತಾಂತ ಇವ ಪಾಪಿಷ್ಠಂ ಮೃಗೇಂದ್ರ ಇವ ವಾರಣಂ ॥ ೪೬ ॥

ತಥಾವಿಧಂ ಹರಿಂ ದೃಷ್ಟ್ವಾ ವೀರಭದ್ರೋಽರಿಮರ್ದನಃ ।
ಅವದತ್ತ್ವರಿತಃ ಕ್ರುದ್ಧೋ ಗಣೈರ್ವೀರೈಸ್ಸಮಾವೃತಃ ॥ ೪೭ ॥

---

೪೩. ನೀನು ಯಜ್ಞಕರ್ಮರೂಪನು, ಯಜ್ಞವೂ ನೀನೇ. ಯಜ್ಞದ ಅಂಗಗಳೂ ನೀನೇ. ಯಜ್ಞವನ್ನು ನೀನೇ ರಕ್ಷಿಸುವವನು, ಆದಕಾರಣ ನೀನು ಯಜ್ಞವನ್ನು ರಕ್ಷಿಸು. ನೀನು ಹೊರತು ಇನ್ನಾರೂ ರಕ್ಷಿಸಲಾರರು ಎಂದರು.

೪೪. ಬ್ರಹ್ಮನು ಹೇಳಿದನು :—ಆಗ ಬಲಶಾಲಿಯಾದ ಹರಿಯು ಚಕ್ರವನ್ನು ಹಿಡಿದು ದೇವಗಣಗಳೊಡನೆ ಯಜ್ಞಶಾಲೆಯಿಂದ ಯುದ್ಧಕ್ಕಾಗಿ ಹೊರಹೊರಟನು.

೪೫. ಹೀಗೆ ಯುದ್ಧೋದ್ಯುಕ್ತನಾಗಿ ಬಂದಿರುವ ವೀರನಾದ ವಿಷ್ಣುವನ್ನು ನೋಡಿ ವೀರಭದ್ರನು ಶೂಲವನ್ನು ಧರಿಸಿ ಗಣಗಳೊಡನೆ ಸಿದ್ಧನಾದನು

೪೬. ಯುದ್ಧಸಿದ್ಧನಾದ ವಿಷ್ಣುವನ್ನು ನೋಡಿ ವೀರಭದ್ರನು ಪಾಪಿಯನ್ನು ನೋಡಿದ ಯಮನಂತೆಯೂ, ಆನೆಯನ್ನು ನೋಡಿದ ಸಿಹ್ಮದಂತೆಯೂ ಕೋಪಗೊಂಡನು.

೪೭. ಆರೀತಿಯಾಗಿ ಯುದ್ಧಸಿದ್ಧನಾದ ಹರಿಯನ್ನು ನೋಡಿ ಶತ್ರುನಾಶಕನಾದ ವೀರಭದ್ರನು ಕೋಪಗೊಂಡು ಅವನನ್ನು ಕುರಿತು ಹೀಗೆ ಹೇಳಿದನು.

॥ ವೀರಭದ್ರ ಉವಾಚ ॥

ರೇ ರೇ ಹರೇ ಮಹಾದೇವ ಶಪಥೋಲ್ಲಂಘನಂ ತ್ವಯಾ ।
ಕಥಮದ್ಯ ಕೃತಂ ಚಿತ್ತೇ ಗರ್ವಃ ಕಿಮಭವತ್ತವ ॥ ೪೮ ॥

ತವ ಶ್ರೀರುದ್ರಶಪಥೋಲ್ಲಂಘನೇ ಶಕ್ತಿರಸ್ತಿ ಕಿಂ ।
ಕೋ ವಾ ತ್ವಮಸಿ ಕೋ ವಾ ತೇ ರಕ್ಷಕೋಽಸ್ತಿ ಜಗತ್ತ್ರಯೇ ॥ ೪೯ ॥

ಅತ್ರ ತ್ವಮಾಗತಃ ಕಸ್ಮಾದ್ವಯಂ ತನ್ನೈವ ವಿದ್ಮಹೇ ।
ದಕ್ಷಸ್ಯ ಯಜ್ಞಪಾತಾ ತ್ವಂ ಕಥಂ ಜಾತೋಽಸಿ ತದ್ವದ ॥ ೫೦ ॥

ದಾಕ್ಷಾಯಣ್ಯಾ ಕೃತಂ ಯಚ್ಚ ತನ್ನ ದೃಷ್ಟಂ ಕಿಮು ತ್ವಯಾ ।
ಪ್ರೋಕ್ತಂ ಯಚ್ಚ ದಧೀಚೇನ ಶ್ರುತಂ ತನ್ನ ಕಿಮು ತ್ವಯಾ ॥ ೫೧ ॥

ತ್ವಂ ಚಾಪಿ ದಕ್ಷಯಜ್ಞೇಽಸ್ಮಿನ್ನವದಾನಾರ್ಥಮಾಗತಃ ।
ಅವದಾನಂ ಪ್ರಯಚ್ಛಾಮಿ ತವ ಚಾಪಿ ಮಹಾಭುಜ ॥ ೫೨ ॥

---

೪೮. ವೀರಭದ್ರನು ಹೇಳಿದನು ;—ದೇವದೇವನಾದ ಎಲೈ ಹರಿಯೆ, ಶಿವನ ಪ್ರತಿಜ್ಞೆಯನ್ನು ಏಕೆ ಮೀರಿ ನಡೆದಿರುವೆ? ನಿನ್ನ ಮೊದಲಿನ ಗರ್ವವು ಏನಾಯಿತು ?

೪೯. ಶ್ರೀರುದ್ರನ ಶಪಥವನ್ನು ಮೀರಲು ನಿನಗೆ ಶಕ್ತಿಯಿರುವುದೆ ? ಹಾಗೆ ಮೀರಲು ನೀನಾರು ? ಮೀರಲು ನಿನಗೆ ಶಕ್ತಿಯಿಲ್ಲ. ಈಗ ನನ್ನಿಂದ ನಿನ್ನನ್ನು ರಕ್ಷಣೆಮಾಡುವವರು ಇಲ್ಲಿ ಯಾರಿರುವರು ?

೫೦. ಎಲೈ ಹರಿ, ನೀನು ಯಜ್ಞಕ್ಕೆ ಏಕೆ ಬಂದಿರುವೆ ಎಂಬುದು ನನಗೆ ತಿಳಿಯದಾಗಿದೆ. ಶಿವಭಕ್ತನಾದ ನೀನು ಶಿವದ್ವೇಷಿಯಾದ ದಕ್ಷನ ಯಜ್ಞವನ್ನು ರಕ್ಷಿಸಲು ಹೇಗೆ ಸಿದ್ಧನಾಗಿ ನಿಂತಿರುವೆ ?

೫೧. ಸತೀದೇವಿಯು ಶಿವಾಪಮಾನಕ್ಕಾಗಿ ಪ್ರಾಣತ್ಯಾಗಮಾಡಿದುದನ್ನು ನೀನು ನೋಡಲಿಲ್ಲವೆ ? ದಧೀಚಮುನಿಯು ಹೇಳಿದುದನ್ನೂ ನೀನು ಕೇಳಲಿಲ್ಲವೇ ?

೫೨-೫೩. ನೀನೂ ಸಹ ಯಜ್ಞಭಾಗವನ್ನು ತೆಗೆದುಕೊಳ್ಳಲು ಇಲ್ಲಿಗೆ ಬಂದಿ

ವಕ್ಷೋ ವಿದಾರಯಿಷ್ಯಾಮಿ ತ್ರಿಶೂಲೇನ ಹರೇ ತವ ।
ಕಸ್ತವಾಸ್ತಿ ಸಮಾಯಾತೋ ರಕ್ಷಕೋऽದ್ಯ ಮಮಾಂತಿಕಂ ॥ ೫೩ ॥

ಪಾತಯಿಷ್ಯಾಮಿ ಭೂಪೃಷ್ಠೇ ಜ್ವಾಲಯಿಷ್ಯಾಮಿ ವಹ್ನಿನಾ ।
ದಗ್ಧಂ ಭವಂತಮಧುನಾ ಪೇಷಯಿಷ್ಯಾಮಿ ಸತ್ವರಂ ॥ ೫೪ ॥

ರೇ ರೇ ಹರೇ ದುರಾಚಾರ ಮಹೇಶವಿಮುಖಾಧಮ ।
ಶ್ರೀಮಹಾರುದ್ರಮಾಹಾತ್ಮ್ಯಂ ಕಿನ್ನ ಜಾನಾಸಿ ಪಾವನಂ ॥ ೫೫ ॥

ಅಥಾಪಿ ತ್ವಂ ಮಹಾಬಾಹೋ ಯೋದ್ಧುಕಾಮೋऽಗ್ರತಃ ಸ್ಥಿತಃ ।
ನೇಷ್ಯಾಮಿ ಪುನರಾವೃತ್ತಿಂ ಯದಿ ತಿಷ್ಠೇಸ್ತ್ವಮಾತ್ಮನಾ ॥ ೫೬ ॥

॥ ಬ್ರಹ್ಮೋವಾಚ ॥

ತಸ್ಯ ತದ್ವಚನಂ ಶ್ರುತ್ವಾ ವೀರಭದ್ರಸ್ಯ ಬುದ್ಧಿಮಾನ್ ।
ಉವಾಚ ವಿಹಸನ್ ಪ್ರೀತ್ಯಾ ವಿಷ್ಣುಸ್ತತ್ರ ಸುರೇಶ್ವರಃ ॥ ೫೭ ॥

---

ರುವೆ. ನನ್ನ ಬಳಿಗೆ ಬಾ. ನಾನು ಯಜ್ಞಭಾಗವನ್ನು ಕೊಡುವೆನು. ತ್ರಿಶೂಲದಿಂದ ನಿನ್ನ ಎದೆಯನ್ನು ಸೀಳುವೆನು. ನಿನ್ನನ್ನು ರಕ್ಷಿಸುವವರು ಇಲ್ಲಿ ಯಾರೂ ಇಲ್ಲ.

೫೪. ಭೂಮಿಯಲ್ಲಿ ನಿನ್ನನ್ನು ರುಳಿಸುವೆನು. ಬೆಂಕಿಯಿಂದ ಸುಡುವೆನು. ಮುಂದೆ ನಿನ್ನನ್ನು ತಿಕ್ಕಿಹಾಕುವೆನು. ಚೂರುಚೂರುಮಾಡುವೆನು.

೫೫. ದುರಾಚಾರಿಯೂ ಶಿವನಲ್ಲಿ ಭಕ್ತಿಯಿಲ್ಲದವನೂ ಆದಂತಹ ಎಲೈ ಹರಿಯೇ, ಶ್ರೀ ಮಹಾರುದ್ರನ ಪವಿತ್ರವಾದ ಮಹಿಮೆಯನ್ನು ನೀನು ತಿಳಿದಿಲ್ಲವೆ?

೫೬. ಹೀಗಿದ್ದರೂ ನೀನು ಶಿವನಿಗೆ ವಿರುದ್ಧನಾಗಿ ನಿಂತಿರುವೆ, ಇಂತಹ ನಿನ್ನನ್ನು ಈಗಲೇ ನಾಶಗೊಳಿಸುವೆನು ಎಂದನು.

೫೭. ಬ್ರಹ್ಮನು ಹೇಳಿದನು :—ಹೀಗೆ ವೀರಭದ್ರನ ಮಾತನ್ನು ಕೇಳಿ ಬುದ್ಧಿಶಾಲಿಯಾದ ವಿಷ್ಣುವು ನಗುತ್ತಾ ಪ್ರೀತಿಯಿಂದ ಅವನನ್ನು ಕುರಿತು,

॥ ವಿಷ್ಣುರುವಾಚ ॥

ಶೃಣು ತ್ವಂ ವೀರಭದ್ರಾದ್ಯ ಪ್ರವಕ್ಷ್ಯಾಮಿ ತವಾಗ್ರತಃ ।
ನ ರುದ್ರವಿಮುಖಂ ಮಾಂ ತ್ವಂ ವದ ಶಂಕರಸೇವಕಂ ॥ ೫೮ ॥

ಅನೇನ ಪ್ರಾರ್ಥಿತಃ ಪೂರ್ವಂ ಯಜ್ಞಾರ್ಥಂ ಚ ಪುನಃ ಪುನಃ ।
ದಕ್ಷೇಣಾವಿದಿತಾರ್ಥೇನ ಕರ್ಮನಿಷ್ಠೇನ ಮೌಢ್ಯತಃ ॥ ೫೯ ॥

ಅಹಂ ಭಕ್ತಪರಾಧೀನಸ್ತಥಾ ಸೋಽಪಿ ಮಹೇಶ್ವರಃ ।
ದಕ್ಷೋ ಭಕ್ತೋ ಹಿ ಮೇ ತಾತ ತಸ್ಮಾದತ್ರಾಗತೋ ಮಖೇ ॥ ೬೦ ॥

ಶೃಣು ಪ್ರತಿಜ್ಞಾಂ ಮೇ ವೀರ ರುದ್ರಕೋಪಸಮುದ್ಭವ ।
ರುದ್ರತೇಜಸ್ಸ್ವರೂಪೋ ಹಿ ಸುಪ್ರತಾಪಾಲಯ ಪ್ರಭೋ ॥ ೬೧ ॥

ಅಹಂ ನಿವಾರಯಾಮಿ ತ್ವಾಂ ತ್ವಂ ಚ ಮಾಂ ವಿನಿವಾರಯ ।
ತದ್ಭವಿಷ್ಯತಿ ಯದ್ಭಾವಿ ಕರಿಷ್ಯೇಽಹಂ ಪರಾಕ್ರಮಂ ॥ ೬೨ ॥

---

೫೮. ವಿಷ್ಣುವು ಹೇಳಿದನು ;—ಎಲೈ ವೀರಭದ್ರನೇ, ನಾನು ಹೇಳುವುದನ್ನು ಕೇಳು. ಶಂಕರನ ಭಕ್ತನಾದ ನನ್ನನ್ನು ರುದ್ರದ್ವೇಷಿಯೆಂದು ಹೇಳಬೇಡ.

೫೯. ಮೂಢನೂ ಕರ್ಮನಿಷ್ಠನೂ ಆದ ಈ ದಕ್ಷನು ನನ್ನನ್ನು ಯಜ್ಞಕ್ಕಾಗಿ ಒರುವಂತೆ ಪುನಃ ಪುನಃ ಪ್ರಾರ್ಥಿಸಿದನು.

೬೦. ನಾನು ಪರಮೇಶ್ವರನಂತೆ ಭಕ್ತಪರಾಧೀನನು, ದಕ್ಷನು ನನ್ನ ಭಕ್ತನು. ಆದುದರಿಂದ ನಾನು ಈ ಯಜ್ಞಕ್ಕೆ ಬಂದಿರುವೆನು.

೬೧. ಎಲೈ ರುದ್ರನ ಕೋಪದಿಂದ ಜನಿಸಿದ ವೀರಭದ್ರನೇ, ರುದ್ರನ ತೇಜಸ್ಸು ತುಂಬಾ ಪ್ರತಾಪವುಳ್ಳದ್ದು. ನಿವಾರಿಸಲಸಾಧ್ಯವಾದುದು.

೬೨. ಆದರೂ ನಾನು ನಿನ್ನನ್ನು ತಡೆಯುವೆನು. ನೀನೂ ನನ್ನನ್ನು ನಿವಾರಿಸು. ಏನಾಗಬೇಕಾಗಿರುವುದೋ ಅದಾಗಿಯೇ ಆಗುವುದು ಅಂತು ನಾನು ನನ್ನ ಭಕ್ತನಿಗಾಗಿ ಯುದ್ಧವನ್ನು ಮಾಡುವೆನು ಎಂದನು.

॥ ಬ್ರಹ್ಮೋವಾಚ ॥
ಇತ್ಯುಕ್ತವತಿ ಗೋವಿಂದೇ ಪ್ರಹಸ್ಯ ಸ ಮಹಾಭುಜಃ ।
ಅವದತ್ಸುಪ್ರಸನ್ನೋಽಸ್ಮಿ ತ್ವಾಂ ಜ್ಞಾತ್ವಾಸ್ಮತ್ಪ್ರಭೋಃ ಪ್ರಿಯಂ ॥ ೬೩ ॥

ತತೋ ವಿಹಸ್ಯ ಸುಪ್ರೀತೋ ವೀರಭದ್ರೋ ಗಣಾಗ್ರಣೀಃ ।
ಪ್ರಶ್ರಯಾವನತೋಽವಾದೀದ್ವಿಷ್ಣುಂ ದೇವಂ ಹಿ ತತ್ತ್ವತಃ ॥ ೬೪ ॥

॥ ವೀರಭದ್ರ ಉವಾಚ ॥
ತವ ಭಾವಪರೀಕ್ಷಾರ್ಥಮಿತ್ಯುಕ್ತಂ ಹೇ ಮಹಾಪ್ರಭೋ ।
ಇದಾನೀಂ ತತ್ತ್ವತೋ ವಚ್ಮಿ ಶೃಣು ತ್ವಂ ಸಾವಧಾನತಃ ॥ ೬೫ ॥

ಯಥಾ ಶಿವಸ್ತಥಾ ತ್ವಂ ಹಿ ಯಥಾ ತ್ವಂ ಚ ತಥಾ ಶಿವಃ ।
ಇತಿ ವೇದಾ ವರ್ಣಯಂತಿ ಶಿವಶಾಸನತೋ ಹರೇ ॥ ೬೬ ॥

ಶಿವಾಜ್ಞಯಾ ವಯಂ ಸರ್ವೇ ಸೇವಕಾಃ ಶಂಕರಸ್ಯ ವೈ ।
ತಥಾಪಿ ಚ ರಮಾನಾಥ ಪ್ರವಾದೋಚಿತಮಾದರಾತ್ ॥ ೬೭ ॥

---

೬೩. ಬ್ರಹ್ಮನು ಹೇಳಿದನು ;—ಹೀಗೆ ವಿಷ್ಣುವು ಹೇಳಲು ವೀರಭದ್ರನು ಅವನನ್ನು ಕುರಿತು ಎಲೈ ವಿಷ್ಣು, ನೀನು ನಮ್ಮ ಪ್ರಭು ಶಿವನಿಗೆ ಭಕ್ತನಾಗಿರುವುದನ್ನು ತಿಳಿದು ನಾನು ತುಂಬಾ ಪ್ರಸನ್ನನಾಗಿರುವೆನು ಎಂದು ಹೇಳಿದನು.

೬೪. ಬಳಿಕ ಆ ವೀರಭದ್ರನು ವಿನಯದಿಂದ ಬಗ್ಗಿದವನಾಗಿ ವಿಷ್ಣುವನ್ನು ಕುರಿತು ಪ್ರಸನ್ನತೆಯಿಂದ ಹೀಗೆ ಹೇಳಿದನು.

೬೫. ವೀರಭದ್ರನು ಹೇಳಿದನು ;—ಮಹಾಪ್ರಭುವಾದ ಎಲೈ ವಿಷ್ಣುವೇ, ನಿನ್ನ ಸ್ವಭಾವವನ್ನು ಪರೀಕ್ಷೆಮಾಡಲು ನಾನು ಆ ರೀತಿ ಹೇಳಿದೆನು. ಈಗ ನಿಜ ವಾದುದನ್ನು ಹೇಳುವೆನು, ಸಾವಧಾನತೆಯಿಂದ ಕೇಳು.

೬೬. ಶಿವನಂತೆಯೇ ವಿಷ್ಣುವೂ ಮಹಿಮೆಯುಳ್ಳವನು. ವಿಷ್ಣುವಿನಂತೆ ಶಿವನೂ ಮಹಿಮೆಯುಳ್ಳವನೆಂದು ವೇದಗಳು ವರ್ಣಿಸುವುವು. ಆ ವೇದಗಳು ಶಿವನ ಶಾಸನ (ಆಜ್ಞಾ) ರೂಪಗಳು.

೬೭. ಶಂಕರ ಸೇವಕರಾದ ನಾವೆಲ್ಲರೂ ಅವನ ಆಜ್ಞೆಯಂತೆ ನಡೆಯುತ್ತೇವೆ. ಅದರಂತೆ ಈಗಲೂ ನಡೆಯುತ್ತಲಿರುವೆವು. ಆದುದರಿಂದ ಎಲೈ ಹರಿ, ಈಗ ನಿನಗೆ ಯಾವುದು ಯೋಗ್ಯವೆಂದು ತೋರುವುದೋ ಅದನ್ನು ಮಾಡು ಎಂದನು.

॥ ಬ್ರಹ್ಮೋವಾಚ ॥

ತಚ್ಛ್ರುತ್ವಾ ವಚನಂ ತಸ್ಯ ವೀರಭದ್ರಸ್ಯ ಸೋಽಚ್ಯುತಃ ।
ಪ್ರಹಸ್ಯ ಚೇದಂ ಪ್ರೋವಾಚ ವೀರಭದ್ರಹಿತಂ ವಚಃ ॥ ೬೮ ॥

॥ ವಿಷ್ಣುರುವಾಚ ॥

ಯುದ್ಧಂ ಕುರು ಮಹಾವೀರ ಮಯಾ ಸಾರ್ಧಮಶಂಕಿತಃ ।
ತವಾಸ್ತ್ರೈಃ ಪೂರ್ಯಮಾಣೋಽಹಂ ಗಮಿಷ್ಯಾಮಿ ಸ್ವಮಾಲಯಂ ॥ ೬೯ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾಹಿ ವಿರಮ್ಯಾಸೌ ಸನ್ನದ್ಧೋಽಭೂದ್ರಣಾಯ ಚ ।
ಸ್ವಗಣೈರ್ವೀರಭದ್ರೋಽಪಿ ಸನ್ನದ್ಧೋಽಭೂನ್ಮಹಾಬಲಃ ॥ ೭೦ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಸತೀಖಂಡೇ
ಷಟ್ತ್ರಿಂಶೋಽಧ್ಯಾಯಃ

---

೬೮. ಬ್ರಹ್ಮನು ಹೇಳಿದನು ;—ಈ ರೀತಿಯಾದ ವೀರಭದ್ರನ ಮಾತನ್ನು ಕೇಳಿ ಹರಿಯು ನಕ್ಕು. ತಿರುಗಿ ಅವನನ್ನು ಕುರಿತು ಹಿತವಾದಂತಹ ಮಾತನ್ನು ಹೀಗೆ ಹೇಳಿದನು.

೬೯. ವಿಷ್ಣುವು ಹೇಳಿದನು ;—ಎಲೈ ವೀರನಾದ ವೀರಭದ್ರನೆ, ನನ್ನೊಡನೆ ಧೈರ್ಯದಿಂದ ಯುದ್ಧವನ್ನು ಮಾಡು, ನಿನ್ನ ಅಸ್ತ್ರಗಳಿಂದ ಹೊಡೆಯಲ್ಪಟ್ಟು ನಾನು ನನ್ನ ಸ್ಥಾನಕ್ಕೆ ತೆರಳುವೆನು.

೭೦. ಬ್ರಹ್ಮನು ಹೇಳಿದನು :—ಹೀಗೆ ಹೇಳಿ ವಿಷ್ಣುವು ಯುದ್ಧಕ್ಕೆ ಸಿದ್ಧನಾದನು. ವೀರಭದ್ರನೂ ಸಹ ತನ್ನ ಗಣಗಳೊಡನೆ ಯುದ್ಧಕ್ಕೆ ಸಿದ್ಧನಾದನು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಮೂವತ್ತಾರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಸಪ್ತತ್ರಿಂಶೋಽಧ್ಯಾಯಃ

|| ಬ್ರಹ್ಮೋವಾಚ ||

ವೀರಭದ್ರೋಽಥ ಯುದ್ಧೇ ವೈ ವಿಷ್ಣುನಾ ಸ ಮಹಾಬಲಃ |
ಸಂಸ್ಮೃತ್ಯ ಶಂಕರಂ ಚಿತ್ತೇ ಸರ್ವಾಪದ್ವಿನಿವಾರಣಂ || ೧ ||

ಆರುಹ್ಯ ಸ್ಯಂದನಂ ದಿವ್ಯಂ ಸರ್ವವೈರಿವಿಮರ್ದನಃ |
ಗೃಹೀತ್ವಾ ಪರಮಾಸ್ತ್ರಾಣಿ ಸಿಂಹನಾದಂ ಜಗರ್ಜ ಹ || ೨ ||

ವಿಷ್ಣುಶ್ಚಾಪಿ ಮಹಾಘೋಷಂ ಪಾಂಚಜನ್ಯಾಭಿಧಂ ನಿಜಂ |
ದಧ್ಮೌ ಬಲೀ ಮಹಾಶಂಖಂ ಸ್ವಕೀಯಾನ್ ಹರ್ಷಯನ್ನಿವ || ೩ ||

---

### ಮೂವತ್ತೇಳನೆಯ ಅಧ್ಯಾಯವು.

೧-೨. ಬ್ರಹ್ಮನು ಹೇಳಿದನು :—ಎಲೈ ನಾರದ, ಮುಂದೆ ಆ ವೀರಭದ್ರನು ಆಪತ್ತುಗಳನ್ನು ನಿವಾರಿಸುವ ಶಂಕರರನ್ನುಭಕ್ತಿಯಿಂದ ಧ್ಯಾನಿಸಿ. ಉತ್ತಮವಾದ ಅಸ್ತ್ರಗಳನ್ನು ಧರಿಸಿ, ದಿವ್ಯರಥವನ್ನೇರಿ ಮಹಾಸಿಂಹನಾದವನ್ನು ಮಾಡಿದನು.

೩. ವಿಷ್ಣುವೂ ಸಹ ಆಗ ಮಹಾಶಬ್ದವನ್ನುಂಟುಮಾಡುವ ತನ್ನ ಪಾಂಚಜನ್ಯವೆಂಬ ಮಹಾಶಂಖವನ್ನು ಊದಿದನು. ಆದರಿಂದ ಆವನಕಡೆಯುವರು (ದೇವತೆಗಳು) ತುಂಬಾ ಹರ್ಷಗೊಂಡರು.

ತಚ್ಛ್ರುತ್ವಾ ಶಂಖನಿರ್ಹ್ರಾದಂ ದೇವಾ ಯೇ ಚ ಪಲಾಯಿತಾಃ ।
ರಣಂ ಹಿತ್ವಾ ಗತಾಃ ಪೂರ್ವಂ ತೇ ದ್ರುತಂ ಪುನರಾಯಯುಃ ॥ ೪ ॥

ವೀರಭದ್ರಗಣೈಸ್ತೇಷಾಂ ಲೋಕಪಾಲಾಸ್ಸವಾಸವಾಃ ।
ಯುದ್ಧಂ ಚಕ್ರುಸ್ತಥಾ ಸಿಹ್ಮನಾದಂ ಕೃತ್ವಾ ಬಲಾನ್ವಿತಾಃ ॥ ೫ ॥

ಗಣಾನಾಂ ಲೋಕಪಾಲಾನಾಂ ದ್ವಂದ್ವಯುದ್ಧಂ ಭಯಾವಹಂ ।
ಅಭವತ್ತತ್ರ ತುಮುಲಂ ಗರ್ಜತಾಂ ಸಿಹ್ಮನಾದತಃ ॥ ೬ ॥

ನಂದಿನಾ ಯುಯುಧೇ ಶಕ್ರೋಽನಲೋ ವೈ ವೈಷ್ಣವಾಸ್ತಥಾ ।
ಕುಬೇರೋಽಪಿ ಹಿ ಕೂಷ್ಮಾಂಡಪತಿನಾ ಯುಯುಧೇ ಬಲೀ ॥ ೭ ॥

ತದೇಂದ್ರೇಣ ಹತೋ ನಂದೀ ವಜ್ರೇಣ ಶತಪರ್ವಣಾ ।
ನಂದಿನಾ ಚ ಹತಶ್ಶಕ್ರಸ್ತ್ರಿಶೂಲೇನ ಸ್ತನಾಂತರೇ ॥ ೮ ॥

---

೪. ಆ ಶಂಖಧ್ವನಿಯನ್ನು ಕೇಳಿ ಹಿಂದೆ ಯುದ್ಧವನ್ನು ಬಿಟ್ಟು ಓಡಿಹೋದಂತಹ ದೇವತೆಗಳು ಜಾಗ್ರತೆ ಹಿಂತಿರುಗಿಬಂದು ವಿಷ್ಣುವನ್ನು ಸೇರಿಕೊಂಡರು.

೫. ಬಳಿಕ ಆ ದೇವತೆಗಳು, ಲೋಕಪಾಲಕರು, ಇಂದ್ರ ಮುಂತಾದವರು ಸಿಂಹ್ಮನಾದವನ್ನು ಮಾಡುತ್ತಾ ವೀರಭದ್ರಗಣಗಳೊಡನೆ ಯುದ್ಧಮಾಡಿದರು.

೬. ಆಗ ಗಣಗಳೂ ಲೋಕಪಾಲಕರೂ ಸಹ ಭಯಂಕರವಾಗಿ ದ್ವಂದ್ವಯುದ್ಧವನ್ನಾಚರಿಸಿದರು. ಸಿಂಹ್ಮನಾದವನ್ನು ಮಾಡಿದರು. ಹೀಗೆ ಮಹಾಯುದ್ಧವಾಯಿತು.

೭. ನಂದಿಕೇಶ್ವರನೊಡನೆ ಇಂದ್ರ, ಅಗ್ನಿ, ಕುಬೇರ, ನಿರ್ಋತಿ ಮತ್ತು ವಿಷ್ಣುಭಕ್ತರಾದ ದೇವತೆಗಳು ಯುದ್ಧಮಾಡಿದರು. ಬಲಿಷ್ಠನಾದ ಕುಬೇರನೂ ಕೂಷ್ಮಾಂಡಪತಿಯೊಡನೆ ಯುದ್ಧಮಾಡಿದನು.

೮. ಆಗ ಇಂದ್ರನು ನಂದಿಯನ್ನು ಹರಿತವಾದ ನೂರು ಅಲಗುಗಳುಳ್ಳ ವಜ್ರದಿಂದ ಹೊಡೆದನು. ನಂದಿಯೂ ಸಹ ತ್ರಿಶೂಲದಿಂದ ಇಂದ್ರನ ಎದೆಯಲ್ಲಿ ಪ್ರಹರಿಸಿದನು

ಬಲಿನೌ ದ್ವಾವಪಿ ಪ್ರೀತ್ಯಾ ಯುಯುಧಾತೇ ಪರಸ್ಪರಂ ।
ನಾನಾಘಾತಾನಿ ಕುರ್ವಂತೌ ನಂದಿಶಕ್ರೌ ಜಿಗೀಷಯಾ ॥ ೯ ॥

ಶಕ್ತ್ಯಾ ಜಘಾನ ಚಾಶ್ಮಾನಂ ಶುಚಿಃ ಪರಮಕೋಪನಃ ।
ಸೋಽಪಿ ಶೂಲೇನ ತಂ ವೇಗಾಚ್ಛಿತಧಾರೇಣ ಪಾವಕಂ ॥ ೧೦ ॥

ಯಮೇನ ಸಹ ಸಂಗ್ರಾಮಂ ಮಹಾಲೋಕೋ ಗಣಾಗ್ರಣೀಃ ।
ಚಕಾರ ತುಮುಲಂ ವೀರೋ ಮಹಾದೇವಂ ಸ್ಮರನ್ ಮುದಾ ॥ ೧೧ ॥

ನೈರ್ಋತೇನ ಸಮಾಗಮ್ಯ ಚಂಡಶ್ಚ ಬಲವತ್ತರಃ ।
ಯುಯುಧೇ ಪರಮಾಸ್ತ್ರೈಶ್ಚ ನೈರ್ಋತಂ ನಿವಿಡಂಬಯನ್ ॥ ೧೨ ॥

ವರುಣೇನ ಸಮಂ ವೀರೋ ಮುಂಡಶ್ಚೈವ ಮಹಾಬಲಃ ।
ಯುಯುಧೇ ಪರಯಾ ಶಕ್ತ್ಯಾ ತ್ರಿಲೋಕೀಂ ವಿಸ್ಮಯನ್ನಿವ ॥ ೧೩ ॥

---

೯. ಬಲಶಾಲಿಗಳಾದ ಆ ನಂದಿ ಮತ್ತು ಇಂದ್ರ ಇವರೀರ್ವರೂ ಸಹ ಒಬ್ಬರನೊಬ್ಬರು ಜಯಿಸಬೇಕೆಂಬ ಇಚ್ಛೆಯಿಂದ ನಾನಾವರಸೆಗಳಿಂದ ಒಬ್ಬರನೊಬ್ಬರು ಹೊಡೆಯುತ್ತಲೂ ತಪ್ಪಿಸಿಕೊಳ್ಳುತ್ತಲೂ ಮಹಾಯುದ್ಧವನ್ನು ಮಾಡಿದರು.

೧೦. ಅಗ್ನಿಯು ಕೋಪಗೊಂಡು ಶಕ್ತ್ಯಾಯುಧದಿಂದ ಅಶ್ಮನೆಂಬ ಶಿವಗಣನನ್ನು ಹೊಡೆದನು. ಆ ಅಶ್ಮನೂ ಸಹ ಹರಿತವಾದ ಧಾರೆಯುಳ್ಳ ಶೂಲದಿಂದ ಅಗ್ನಿಯನ್ನು ಇರಿದನು.

೧೧. ಮಹಾಲೋಕನೆಂಬ ಗಣೇಶ್ವರನು ಶಿವನನ್ನು ಧ್ಯಾನಿಸುತ್ತಾ ಯಮನೊಡನೆ ತುಮುಲಯುದ್ಧವನ್ನು ಮಾಡಿದರು.

೧೨. ಬಲಶಾಲಿಯಾದ ಚಂಡನೆಂಬುವನು ನಿರ್ಋತಿಯಮೇಲೆ ಮಹಾಸ್ತ್ರಗಳನ್ನು ಪ್ರಯೋಗಿಸುತ್ತಾ ಅವನೊಡನೆ ಯುದ್ಧಮಾಡಿದನು.

೧೩. ಮಹಾಬಲಶಾಲಿಯಾದ ಮುಂಡನೆಂಬ ಶಿವಗಣನು ಜಗತ್ತೇ ವಿಸ್ಮಯಗೊಳ್ಳುವಂತೆ ವರುಣನೊಡನೆ ಯುದ್ಧಮಾಡಿದನು.

ವಾಯುನಾ ಚ ಹತೋ ಭೃಂಗೀ ಸ್ವಾಸ್ತ್ರೇಣ ಪರಮೌಜಸಾ ।
ಭೃಂಗಿಣಾ ಚ ಹತೋ ವಾಯುಸ್ತ್ರಿಶೂಲೇನ ಪ್ರತಾಪಿನಾ ॥ ೧೪ ॥

ಕುಬೇರೇಣೈವ ಸಂಗಮ್ಯ ಕುಷ್ಮಾಂಡಪತಿರಾದರಾತ್ ।
ಯುಯುಧೇ ಬಲವಾನ್ ವೀರೋ ಧ್ಯಾತ್ವಾ ಹೃದಿ ಮಹೇಶ್ವರಂ ॥ ೧೫ ॥

ಯೋಗಿನೀಚಕ್ರಸಂಯುಕ್ತೋ ಭೈರವೀನಾಯಕೋ ಮಹಾನ್ ।
ವಿದಾರ್ಯ ದೇವಾನಖಿಲಾನ್ ಪಪೌ ಶೋಣಿತಮುದ್ಭುತಂ ॥ ೧೬ ॥

ಕ್ಷೇತ್ರಪಾಲಾಸ್ತಥಾ ತತ್ರ ಬುಭುಕ್ಷುಸ್ಸುರಪುಂಗವಾನ್ ।
ಕಾಲೀ ಚಾಪಿ ವಿದಾರ್ಯೈವ ತಾನ್ ಪಪೌ ರುಧಿರಂ ಬಹು ॥ ೧೭ ॥

ಅಥ ವಿಷ್ಣುರ್ಮಹಾತೇಜಾ ಯುಯುಧೇ ತೈಶ್ಚ ಶತ್ರುಹಾ ।
ಚಕ್ರಂ ಚಿಕ್ಷೇಪ ವೇಗೇನ ದಹನ್ನಿವ ದಿಶೋ ದಶ ॥ ೧೮ ॥

---

೧೪. ವಾಯುವು ತನ್ನ ಮಹಾಸ್ತ್ರದಿಂದ ಭೃಂಗಿಯನ್ನು ಪ್ರಹರಿಸಿದನು. ಭೃಂಗಿಯೂ ಸಹ ತ್ರಿಶೂಲದಿಂದ ವಾಯುವನ್ನು ಹೊಡೆದನು.

೧೫. ಕೂಷ್ಮಾಂಡಪತಿಯೆಂಬ ವೀರನಾದ ಶಿವಗಣನು ಶಿವನನ್ನು ಭಕ್ತಿಯಿಂದ ಸ್ಮರಿಸಿ ಕುಬೇರನೊಡನೆ ಯುದ್ಧಮಾಡಿದನು.

೧೬. ಭೈರವೀನಾಯಕನು (ಕಾಲಭೈರವನು) ಯೋಗಿಗಳೊಡನೆ ಕೂಡಿಕೊಂಡು ದೇವತೆಗಳನ್ನು ಸೀಳಿ ಅವರ ರಕ್ತವನ್ನು ಪಾನಮಾಡಿದನು.

೧೭. ಕ್ಷೇತ್ರಪಾಲಕರೂ ಸಹ ದೇವತೆಗಳನ್ನು ಭಕ್ಷಿಸಿದರು. ಕಾಲಿಯು ದೇವತೆಗಳನ್ನು ಸೀಳಿ ಅವರ ರಕ್ತವನ್ನು ಪಾನಮಾಡಿದಳು.

೧೮. ಬಳಿಕ ಮಹಾತೇಜಸ್ವಿಯಾದ ಹರಿಯು ಆ ಗಣಗಳೊಡನೆ ಯುದ್ಧ ಮಾಡಿದನು. ದಶದಿಕ್ಕುಗಳನ್ನೂ ಸುಡುವಂತೆ ವೇಗದಿಂದ ತನ್ನ ಚಕ್ರವನ್ನು ಪ್ರಯೋಗಿಸಿದನು.

ಕ್ಷೇತ್ರಪಾಲಾಸ್ಸಮಾಯಾಂತಂ ಚಕ್ರಮಾಲೋಕ್ಯ ವೇಗತಃ ।
ತತ್ರಾಗತ್ಯಾಗತೋ ವೀರಶ್ಚಾಗ್ರಸತ್ಸಹಸಾ ಬಲೀ ॥ ೧೯ ॥

ಚಕ್ರಂ ಗ್ರಸಿತಮಾಲೋಕ್ಯ ವಿಷ್ಣುಃ ಪರಪುರಂಜಯಃ ।
ಮುಖಂ ತಸ್ಯ ಪರಾಮೃಜ್ಯ ತಮುದ್ಗಾಲಿತವಾನರಿಂ ॥ ೨೦ ॥

ಸ್ವಚಕ್ರಮಾದಾಯ ಮಹಾನುಭಾವ-
ಶ್ಚುಕೋಪ ಚಾತೀವ ಭವೈಕಭರ್ತಾ ।
ಮಹಾಬಲೀ ತೈರ್ಯುಯುಧೇ ಪ್ರವೀರೈಃ
ಸಂಕ್ರುದ್ಧನಾನಾಯುಧಧಾರಕೋಽಸ್ತ್ರೈಃ ॥ ೨೧ ॥

ಚಕ್ರೇ ಮಹಾರಣಂ ವಿಷ್ಣುಸ್ತೈಸ್ಸಾರ್ಧಂ ಯುಯುಧೇ ತದಾ ।
ನಾನಾಯುಧಾನಿ ಸಂಕ್ಷಿಪ್ಯ ತುಮುಲಂ ಭೀಮವಿಕ್ರಮಂ ॥ ೨೨ ॥

ಅಥ ತೇ ಭೈರವಾದ್ಯಾಶ್ಚ ಯುಯುಧುಸ್ತೇನ ವೈ ಭೃಶಂ ।
ನಾನಾಸ್ತ್ರಾಣಿ ವಿಮುಂಚಂತಃ ಸಂಕ್ರುದ್ಧಾಃ ಪರಮೌಜಸಾ ॥ ೨೩ ॥

---

೧೯. ಕ್ಷೇತ್ರಪಾಲನು ವೇಗದಿಂದ ಬರುತ್ತಿರುವ ವಿಷ್ಣುಚಕ್ರವನ್ನು ನೋಡಿ ಎದುರಿಗೆಬಂದು ಆ ಚಕ್ರವನ್ನು ಹಿಡಿದು ನುಂಗಿದನು.

೨೦. ಹೀಗೆ ಕ್ಷೇತ್ರಪಾಲನು ಚಕ್ರವನ್ನು ನುಂಗಿದುದನ್ನು ನೋಡಿ ವೀರನಾದ ಹರಿಯು ಆ ಕ್ಷೇತ್ರಪಾಲನ ಬಳಿಗೆ ಬಂದು ಅವನ ಮುಖವನ್ನದುಮಿ ಚಕ್ರವನ್ನು ಹೊರತೆಗೆದನು.

೨೧. ಹೀಗೆ ಮಹಾನುಭಾವನಾದ ಹರಿಯು ತನ್ನ ಚಕ್ರವನ್ನು ತೆಗೆದುಕೊಂಡು ಕೋಪದಿಂದ ಮಹಾಸ್ತ್ರಗಳನ್ನು ಪ್ರಯೋಗಿಸುತ್ತಾ ಆ ಗಣಗಳೊಡನೆ ಯುದ್ಧ ಮಾಡಿದನು.

೨೨. ಮತ್ತು ಆ ಹರಿಯು ಅನೇಕ ಮಹಾಯುಧಗಳನ್ನು ಪರಾಕ್ರಮದಿಂದ ಪ್ರಯೋಗಿಸುತ್ತಾ ತುಮುಲಯುದ್ಧವನ್ನು ಮಾಡಿ ಆ ಗಣಗಳಲ್ಲಿ ಅನೇಕರಿಗೆ ಮರಣ ವನ್ನುಂಟುಮಾಡಿದನು.

೨೩. ಆಗ ಭೈರವನೇ ಮೊದಲಾದ ಗಣಗಳೂ ಸಹ ಕೋಪಗೊಂಡು ಪರಾ ಕ್ರಮದಿಂದ ಅನೇಕ ಆಯುಧಗಳನ್ನು ಪ್ರಯೋಗಿಸಿ ಹರಿಯೊಡನೆ ಯುದ್ಧ ಮಾಡಿದರು.

ಇತ್ಥಂ ತೇಷಾಂ ರಣಂ ದೃಷ್ಟ್ವಾ ಹರಿಣಾತುಲತೇಜಸಾ ।
ವಿನಿವೃತ್ಯ ಸಮಾಗಮ್ಯ ತಾನ್ ಸ್ವಯಂ ಯುಯುಧೇ ಬಲೀ ॥ ೨೪ ॥

ಅಥ ವಿಷ್ಣುರ್ಮಹಾತೇಜಾಶ್ಚಕ್ರಮುದ್ಯಮ್ಯ ಮೂರ್ಛಿತಃ ।
ಯುಯುಧೇ ಭಗವಾಂಸ್ತೇನ ವೀರಭದ್ರೇಣ ಮಾಧವಃ ॥ ೨೫ ॥

ತಯೋಸ್ಸಮಭವದ್ಯುದ್ಧಂ ಸುಘೋರಂ ರೋಮಹರ್ಷಣಂ ।
ಮಹಾವೀರಾಬ್ಧಿಪತ್ಯೋಸ್ತು ನಾನಾಸ್ತ್ರಧರಯೋರ್ಮುನೇ ॥ ೨೬ ॥

ವಿಷ್ಣೋರ್ಯೋಗಬಲಾತ್ತಸ್ಯ ದೇಹಾದೇವ ಸುದಾರುಣಾಃ ।
ಶಂಖಚಕ್ರಗದಾಹಸ್ತಾ ಅಸಂಖ್ಯಾತಾಶ್ಚ ಜಜ್ಞಿರೇ ॥ ೨೭ ॥

ತೇ ಚಾಪಿ ಯುಯುಧುಸ್ತೇನ ವೀರಭದ್ರೇಣ ಭೀಷಣಂ ।
ವಿಷ್ಣುವದ್ಬಲವಂತೋ ಹಿ ನಾನಾಯುಧಧರಾ ಗಣಾಃ ॥ ೨೮ ॥

---

೨೪. ಹೀಗೆ ಭೈರವಾದಿಗಳು ಪರಾಕ್ರಮಿಯಾದ ವಿಷ್ಣುವಿನೊಡನೆ ಯುದ್ಧ ಮಾಡುತ್ತಿರುವುದನ್ನು ನೋಡಿ ಬಲಿಷ್ಠನಾದ ವೀರಭದ್ರನು ತಾನೂ ಆ ಗಣಗಳೊಡನೆ ಸೇರಿಕೊಂಡು ಯುದ್ಧಮಾಡಿದನು.

೨೫. ಆಗ ಮಹಾತೇಜಸ್ವಿಯಾದ ಹರಿಯು ಕೋಪಗೊಂಡು ಚಕ್ರವನ್ನು ಹಿಡಿದು ಆ ವೀರಭದ್ರನೊಡನೆ ಯುದ್ಧಮಾಡಿದನು.

೨೬. ಎಲೈ ನಾರದ, ಹೀಗೆ ನಾನಾ ಅಸ್ತ್ರಗಳನ್ನೂ ಆಯುಧಗಳನ್ನೂ ಪ್ರಯೋಗಿಸಿ ಯುದ್ಧಮಾಡುತ್ತಲಿರಲು ಆ ವೀರಭದ್ರ ಮತ್ತು ಹರಿ ಇವರುಗಳಿಗೆ ಘೋರವಾದ ಮತ್ತು ರೋಮಾಂಚಕರವಾದ ಯುದ್ಧವಾಯಿತು.

೨೭. ಆಗ ವಿಷ್ಣುವು ಯೋಗಬಲದಿಂದ ಭಯಂಕರರೂ ಶಂಖಚಕ್ರಗಳನ್ನು ಧರಿಸುವಂತಹವರೂ ಆದಂತಹ ಅನೇಕ ವೀರರನ್ನು ತನ್ನ ಶರೀರದಿಂದ ಸೃಷ್ಟಿಸಿದನು.

೨೮. ವಿಷ್ಣುವಿನಂತೆ ಬಲಿಷ್ಠರಾದ ಆ ವಿಷ್ಣುಗಣಗಳೂ ಸಹ ವೀರಭದ್ರನೊಡನೆ ಅನೇಕ ಆಯುಧಗಳನ್ನು ಹಿಡಿದು ಯುದ್ಧಮಾಡಿದರು.

ತಾನ್ ಸರ್ವಾನಪಿ ವೀರೋಽಸೌ ನಾರಾಯಣಸಮಪ್ರಭಾನ್ ।
ಭಸ್ಮೀಚಕಾರ ಶೂಲೇನ ಹತ್ವಾ ಸ್ಮೃತ್ವಾ ಶಿವಂ ಪ್ರಭುಂ ॥ ೨೯ ॥

ತತಶ್ಚೋರಸಿ ತಂ ವಿಷ್ಣುಂ ಲೀಲಯೈವ ರಣಾಜಿರೇ ।
ಜಘಾನ ವೀರಭದ್ರೋ ಹಿ ತ್ರಿಶೂಲೇನ ಮಹಾಬಲೀ ॥ ೩೦ ॥

ತೇನ ಘಾತೇನ ಸಹಸಾ ವಿಹತಃ ಪುರುಷೋತ್ತಮಃ ।
ಪಪಾತ ಚ ತದಾ ಭೂಮೌ ವಿಸಂಜ್ಞೋಽಭೂನ್ಮುನೇ ಹರಿಃ ॥ ೩೧ ॥

ತತೋ ಯಜ್ಞೋಽದ್ಭುತಂ ತೇಜಃ ಪ್ರಲಯಾನಲಸನ್ನಿಭಂ ।
ತ್ರೈಲೋಕ್ಯದಾಹಕಂ ತೀವ್ರಂ ವೀರಾಣಾಮಪಿ ಭೀಕರಂ ॥ ೩೨ ॥

ಕ್ರೋಧರಕ್ತೇಕ್ಷಣಃ ಶ್ರೀಮಾನ್ಪುನರುತ್ಥಾಯ ಸ ಪ್ರಭುಃ ।
ಪ್ರಹರ್ತುಂ ಚಕ್ರಮುದ್ಯಮ್ಯ ಹ್ಯತಿಷ್ಠತ್ಪುರುಷರ್ಷಭಃ ॥ ೩೩ ॥

ತಸ್ಯ ಚಕ್ರಂ ಮಹಾರೌದ್ರಂ ಕಾಲಾದಿತ್ಯಸಮಪ್ರಭಂ ।
ವ್ಯಷ್ಟಂಭಯದದೀನಾತ್ಮಾ ವೀರಭದ್ರಶ್ಶಿವಪ್ರಭುಃ ॥ ೩೪ ॥

---

೨೯. ನಾರಾಯಣನಂತೆ ವೀರರಾದ ಆ ಗಣಗಳನ್ನೆಲ್ಲಾ ವೀರಭದ್ರನು ಶಿವನನ್ನು ಸ್ಮರಿಸಿ ಶೂಲದಿಂದ ಪ್ರಹರಿಸಿ ಭಸ್ಮಮಾಡಿದನು.

೩೦. ಬಳಿಕ ಆ ಮಹಾಪರಾಕ್ರಮಿಯಾದ ವೀರಭದ್ರನು ವಿಷ್ಣುವಿನ ಎದೆಯಲ್ಲಿ ಆಟವಾಡುವಂತೆ ಅನಾಯಾಸದಿಂದ ತ್ರಿಶೂಲದಿಂದ ಪ್ರಹರಿಸಿದನು.

೩೧. ಆ ಶೂಲದ ಏಟಿನಿಂದ ಪುರುಷೋತ್ತಮನಾದ ಹರಿಯು ತುಂಬಾ ವಿಹ್ವಲನಾಗಿ ಭೂಮಿಯಲ್ಲಿ ಬಿದ್ದು ಮೂರ್ಛಿತನಾದನು.

೩೨-೩೩. ಬಳಿಕ ಹರಿಯು ಸ್ವಲ್ಪಹೊತ್ತಿನಂತರ ಮೂರ್ಛೆಯನ್ನು ಕಳೆದೆದ್ದು ಕ್ರೋಧದಿಂದ ಪ್ರಳಯಕಾಲದ ಅಗ್ನಿಯಂತೆ ಭಯಂಕರವೂ ಮೂರು ಲೋಕಗಳನ್ನು ಸುಡುವ ಶಕ್ತಿಯುಳ್ಳದುದೂ ಆದಂತಹ ತನ್ನ ಚಕ್ರವನ್ನು ಮೇಲಕ್ಕೆತ್ತಿ ವೀರಭದ್ರನಮೇಲೆ ಪ್ರಹರಿಸಲುದ್ಯುಕ್ತನಾದನು.

೩೪. ಆಗ ಶಿವಸ್ವರೂಪನಾದ ವೀರಭದ್ರನು ಪ್ರಳಯಕಾಲದ ಸೂರ್ಯನಂತೆ ಭಯಂಕರವಾದ ಆ ವಿಷ್ಣುಚಕ್ರವನ್ನು ಸ್ತಂಭಿಸಿದನು.

ಮುನೇ ಶಂಭೋಃ ಪ್ರಭಾವಾತ್ತು ಮಾಯೇಶಸ್ಯ ಮಹಾಪ್ರಭೋಃ ।
ನ ಚಚಾಲ ಹರೇಶ್ಚಕ್ರಂ ಕರಸ್ಥಂ ಸ್ತಂಭಿತಂ ಧ್ರುವಂ ॥ ೩೫ ॥

ಅಥ ವಿಷ್ಣುರ್ಗಣೇಶೇನ ವೀರಭದ್ರೇಣ ಭಾಷತಾ ।
ಅತಿಷ್ಠತ್ತ್ಸಂಭಿತಸ್ತೇನ ಶೃಂಗವಾನಿವ ನಿಶ್ಚಲಃ ॥ ೩೬ ॥

ತತೋ ವಿಷ್ಣುಸ್ಸ್ತಂಭಿತೋ ಹಿ ವೀರಭದ್ರೇಣ ನಾರದ ।
ಯಜ್ಞೋಪಮಂತ್ರಣಮುನಾ ನೀರಸ್ತಂಭನಕಾರಕಂ ॥ ೩೭ ॥

ತತಃ ಸ್ತಂಭನನಿರ್ಮುಕ್ತಃ ಶಾರ್ಙ್ಗಧನ್ವಾ ರಮೇಶ್ವರಃ ।
ಶಾರ್ಙ್ಗಂ ಜಗ್ರಾಹ ಸಂಕ್ರುದ್ಧಃ ಸ್ವಧನುಃ ಸಶರಂ ಮುನೇ ॥ ೩೮ ॥

ತ್ರಿಭಿಶ್ಚ ಧರ್ಷಿತಂ ಬಾಣೈಸ್ತೇನ ಶಾರ್ಙ್ಗಧನುರ್ಹರೇಃ ।
ವೀರಭದ್ರೇಣ ತತ್ರಾತ ತ್ರಿಧಾಭೂತ್ತತ್ಕ್ಷಣಾನ್ಮುನೇ ॥ ೩೯ ॥

---

೩೫. ಎಲೈ ನಾರದ, ಮಾಯಾಮಯನೂ ಮಹಾಪ್ರಭುವೂ ಆದ ಶಂಕರನ ಪ್ರಭಾವದಿಂದ ವಿಷ್ಣುಚಕ್ರವು ಸ್ತಂಭಿಸಲ್ಪಟ್ಟುದಾಗಿ ವಿಷ್ಣು ಪ್ರಹರಿಸಿದರೂ ಅಲುಗಾಡಲಿಲ್ಲ.

೩೬. ಅಲ್ಲದೆ ಶಿವಗಣನಾಯಕನಾದ ವೀರಭದ್ರನು ವಿಷ್ಣುವನ್ನೂ ಸ್ತಂಭಿಸಿದನು. ಆಗ ವಿಷ್ಣುವು ಅಚಲವಾದ ಪರ್ವತದಂತೆ ಅಲುಗಾಡದೆ ನಿಂತನು.

೩೭. ಆಗ ಭೃಗುಮುನಿಯು ಸ್ತಂಭನವನ್ನು ಹೋಗಲಾಡಿಸುವ ಮಂತ್ರವನ್ನು ಜಪಿಸಿ ಹರಿಯನ್ನು ಸ್ತಂಭನದಿಂದ ಬಿಡಿಸಿದನು.

೩೮. ಬಳಿಕ ವಿಷ್ಣುವು ಕೋಪದಿಂದ ವೀರಭದ್ರನಮೇಲೆ ಬಾಣವನ್ನು ಪ್ರಹರಿಸಲು ತನ್ನ ಶಾರ್ಙ್ಗವೆಂಬ ಮಹಾಧನುಸ್ಸನ್ನು ತೆಗೆದುಕೊಂಡನು.

೩೯. ಎಲೈ ನಾರದ, ಆಗ ವೀರಭದ್ರನು ಮೂರು ಬಾಣಗಳನ್ನು ಪ್ರಯೋಗಿಸಿ ವಿಷ್ಣುವಿನ ಶಾರ್ಙ್ಗಧನುಸ್ಸನ್ನು ಮೂರು ಚೂರಾಗಿ ಕತ್ತರಿಸಿದನು.

ಅಥ ವಿಷ್ಣುರ್ಮಹಾವಾಣ್ಯಾ ಬೋಧಿತಸ್ತಂ ಮಹಾಗಣಂ ।
ಅಸಹ್ಯವರ್ಚಸಂ ಜ್ಞಾತ್ವಾ ಹ್ಯಂತರ್ಧಾತುಂ ಮನೋ ದಧೇ ॥ ೪೦ ॥

ಜ್ಞಾತ್ವಾ ಚ ತತ್ಸರ್ವಮಿದಂ ಭವಿಷ್ಯಂ
ಸತೀಕೃತಂ ದುಷ್ಪ್ರಸಹಂ ಪರೇಷಾಂ ।
ಗತಾಃ ಸ್ವಲೋಕಂ ಸ್ವಗಣಾನ್ವಿತಾಸ್ತು
ಸ್ಮೃತ್ವಾ ಶಿವಂ ಸರ್ವಪತಿಂ ಸ್ವತಂತ್ರಂ ॥ ೪೧ ॥

ಸತ್ಯಲೋಕಗತಶ್ಚಾಹಂ ಪುತ್ರಶೋಕೇನ ಪೀಡಿತಃ ।
ಅಚಿಂತಯಂ ಸುದುಃಖಾರ್ತೋ ಮಯಾ ಕಿಂ ಕಾರ್ಯಮದ್ಯ ವೈ ॥ ೪೨ ॥

ವಿಷ್ಣೌ ಮಯಿ ಗತೇ ಚೈವ ದೇವಾಶ್ಚ ಮುನಿಭಿಸ್ಸಹ ।
ವಿನಿರ್ಜಿತಾ ಗಣೈಸ್ಸರ್ವೇ ಯೇ ತೇ ಯಜ್ಞೋಪಜೀವಿನಃ ॥ ೪೩ ॥

೪೦. ಬಳಿಕ ನಾನು ಹರಿಗೆ ವೀರಭದ್ರನನ್ನು ಜಯಿಸುವುದಸಾಧ್ಯ ವೆಂದು ತಿಳಿಯಹೇಳಿದೆನು. ಆಗ ಅವನೂ ಅವನ್ನು ತಿಳಿದು ಅಂತರ್ಧಾನನಾಗ ಬೇಕೆಂದು ಮನಸ್ಸುಮಾಡಿದನು.

೪೧. ಈಗ ನಡೆಯುತ್ತಿರುವ ಅನರ್ಥವೆಲ್ಲವೂ ಸತೀದೇವಿಯು ಅಪಮಾನದಿಂದ ಆದುದು. ಇದನ್ನು ತಡೆಯಲು ಯಾರಿಂದಲೂ ಸಾಧ್ಯವಿಲ್ಲ. ಶಿವನ ಮಹಿಮೆಯೇ ಅಂತಹುದು. ಅವನು ಸರ್ವೇಶ್ವರನು. ಏನುಬೇಕಾದರೂ ಮಾಡುವ ಸ್ವಾತಂತ್ರ್ಯ ವುಳ್ಳವನು. ನಾವು ಅವನ ಅಧೀನರು ಎಂದು ತಿಳಿದವರಾಗಿ ವಿಷ್ಣು ಮೊದಲಾದ ಕೆಲವರು ದೇವತೆಗಳು ತಮ್ಮ ಪರಿವಾರದೊಡನೆ ತಮ್ಮ ಸ್ಥಾನಗಳಿಗೆ ತೆರಳಿದರು.

೪೨. ನಾನೂ ಸಹ ನನ್ನ ಸತ್ಯಲೋಕಕ್ಕೆ ಹೋಗಿ ಅಲ್ಲಿ ಪುತ್ರ (ದಕ್ಷ) ದುಃಖ ದಿಂದ ವ್ಯಾಕುಲಗೊಂಡು ಈಗ ನಾನೇನುಮಾಡಲಿ ಎಂದು ತುಂಬಾ ಚಿಂತಿಸಿದೆನು.

೪೩. ನಾನೂ ಹರಿಯೂ ಹೊರಟುಹೋಗಲು ಯಜ್ಞಭಾಗಕ್ಕಾಗಿ ಬಂದಿರುವ ಮಿಕ್ಕ ದೇವತೆಗಳನ್ನೂ ಮುನಿಗಳನ್ನೂ ಆ ವೀರಭದ್ರನು ಜಯಿಸಿದನು.

ತಮುಪದ್ರವಮಾಲಕ್ಷ್ಯ ವಿಧ್ವಸ್ತಂ ಚ ಮಹಾಮಖಂ ।
ಮೃಗಸ್ವರೂಪೋ ಯಜ್ಞೋ ಹಿ ಮಹಾಭೀತೋಽಪಿ ದುದ್ರವೇ ॥ ೪೪ ॥

ತಂ ತದಾ ಮೃಗರೂಪೇಣ ಧಾವಂತಂ ಗಗನಂ ಪ್ರತಿ ।
ವೀರಭದ್ರಸ್ಸಮಾದಾಯ ವಿಶಿರಸ್ಕಮಥಾಕರೋತ್ ॥ ೪೫ ॥

ತತಃ ಪ್ರಜಾಪತಿಂ ಧರ್ಮಂ ಕಶ್ಯಪಂ ಚ ಪ್ರಗೃಹ್ಯ ಸಃ ।
ಅರಿಷ್ಟನೇಮಿನಂ ವೀರೋ ಬಹುಪುತ್ರಂ ಮುನೀಶ್ವರಂ ॥ ೪೬ ॥

ಮುನಿಮಂಗಿರಸಂ ಚೈವ ಕೃಶಾಶ್ವಂ ಚ ಮಹಾಗಣಃ ।
ಜಘಾನ ಮೂರ್ಧ್ನಿ ಪಾದೇನ ದತ್ತಂ ಚ ಮುನಿಪುಂಗವಂ ॥ ೪೭ ॥

ಸರಸ್ವತ್ಯಾಶ್ಚ ನಾಸಾಗ್ರಂ ದೇವಮಾತುಸ್ತಥೈವ ಚ ।
ಚಿಚ್ಛೇದ ಕರಜಾಗ್ರೇಣ ವೀರಭದ್ರಃ ಪ್ರತಾಪವಾನ್ ॥ ೪೮ ॥

ತತೋಽನ್ಯಾನಪಿ ದೇವಾದೀನ್ವಿದಾರ್ಯ ಪೃಥಿವೀತಲೇ ।
ಪಾತಯಾಮಾಸ ಸೋಽಯಂ ವೈ ಕ್ರೋಧಾಕ್ರಾಂತಾತಿಲೋಚನಃ ॥

---

೪೪. ಹೀಗೆ ಅಪಜಯವಾದುದನ್ನೂ, ಯಜ್ಞವು ನಾಶವಾದುದನ್ನೂ ನೋಡಿ ಯಜ್ಞಪುರುಷನು ತುಂಬಾ ಹೆದರಿ ಮೃಗರೂಪವನ್ನು ಧರಿಸಿ ಯಜ್ಞಶಾಲೆಯಿಂದ ಓಡಿ ಹೋದನು.

೪೫. ಮೃಗರೂಪದಿಂದ ಆಕಾಶದಕಡೆಗೆ ಓಡುತ್ತಲಿರುವ ಯಜ್ಞಪುರುಷನನ್ನು ನೋಡಿ ವೀರಭದ್ರನು ಅವನನ್ನು ಹಿಡಿದು ಕತ್ತನ್ನು ಕತ್ತರಿಸಿದನು.

೪೬-೪೭. ಮತ್ತು ಮರೀಚಿಬ್ರಹ್ಮ, ಯಮಧರ್ಮ, ಕಶ್ಯಪಮುನಿ, ಅರಿಷ್ಟನೇಮಿ, ಅಂಗಿರಸ್ಸುಮುನಿ, ಕೃಶಾಶ್ವಮುನಿ, ದತ್ತಮುನಿ ಇವರುಗಳ ಶಿರಸ್ಸಿನಮೇಲೆ ತನ್ನ ಕಾಲಿನಿಂದ ಚೆನ್ನಾಗಿ ಒದ್ದನು.

೪೮. ಸರಸ್ವತಿ ಮತ್ತು ದೇವಮಾತೆಯಾದ ಅದಿತಿದೇವಿ, ಇವರ ಮೂಗಿನ ತುದಿಯನ್ನು ವೀರಭದ್ರನು ಉಗುರಿನಿಂದ ಚಿವುಟಿ ಕತ್ತರಿಸಿದನು.

೪೯. ಮತ್ತು ಕೆಲವುಮಂದಿ ದೇವತೆಗಳನ್ನು ಕ್ರೋಧದಿಂದ ಸೀಳಿ ಭೂಮಿಯಲ್ಲಿ ಕೆಡಹಿದನು.

ವೀರಭದ್ರೋ ವಿದ್ರಾರ್ಯಾಪಿ ದೇವಾನ್ ಮುಖ್ಯಾನ್ಮುನೀನಪಿ ।
ನಾಭೂಚ್ಛಾಂತೋ ದ್ರುತಕ್ರೋಧಃ ಫಣಿರಾಡಿವ ಮಂಡಿತಃ ॥ ೫೦ ॥

ವೀರಭದ್ರೋದ್ಧೃತಾರಾತಿಃ ಕೇಸರೀವ ವನದ್ವಿಪಾನ್ ।
ದಿಶೋ ವಿಲೋಕಯಾಮಾಸ ಕಃ ಕುತ್ರಾಸ್ತೀತ್ಯನುಕ್ಷಣಂ ॥ ೫೧ ॥

ವ್ಯಪೋಥಯದ್ಭೃಗುಂ ಯಾವನ್ಮಣಿಭದ್ರಃ ಪ್ರತಾಪವಾನ್ ।
ಪದಾಕ್ರಮ್ಯೋರಸಿ ತದಾ ಕಾರ್ಷೀತ್ತಚ್ಛ್ಮಶ್ರುಲುಂಛನಂ ॥ ೫೨ ॥

ಚಂಡಶ್ಚೋತ್ಪಾಟಯಾಮಾಸ ಪೂಷ್ಣೋ ದಂತಾನ್ ಪ್ರವೇಗತಃ ।
ಶಪ್ಯಮಾನೇ ಹರೇ ಪೂರ್ವಂ ಯೋಽಹಸದ್ದರ್ಶಯನ್ ದತಃ ॥ ೫೩ ॥

ನಂದೀ ಭಗಸ್ಯ ನೇತ್ರೇ ಹಿ ಪಾತಿತಸ್ಯ ರುಷಾ ಭುವಿ ।
ಉಜ್ಜಹಾರ ದಕ್ಷಮುಕ್ತ್ವಾ ಯಶ್ಚಕ್ಷುಷಾ ಸಮಸೂಸುಚತ್ ॥ ೫೪ ॥

---

೫೦. ಇಷ್ಟುಮಂದಿ ದೇವತೆಗಳನ್ನೂ ಮುನಿಗಳನ್ನೂ ಸೀಳಿದರೂ ವೀರಭದ್ರನು ಶಾಂತನಾಗಲಿಲ್ಲ. ಸಿಟ್ಟಿಗೆಬ್ಬಿಸಿದ ಸರ್ಪರಾಜನಂತೆ ಇನ್ನೂ ಕೋಪವುಳ್ಳವನಾಗಿಯೇ ಇದ್ದನು.

೫೧. ಸಿಂಹವು ಕಾಡಾನೆಗಳನ್ನು ನಾಶಮಾಡುವಂತೆ ವೀರಭದ್ರನು ಎಲ್ಲ ಶಿವ ದ್ವೇಷಿಗಳನ್ನೂ ನಾಶಮಾಡಿ ಇನ್ನಾರು ಉಳಿದಿರುವರು ಎಂದು ಅತ್ತಿತ್ತ ನೋಡಿದನು.

೫೨. ವೀರನಾದ ಮಣಿಭದ್ರನೆಂಬುವನು ಭೃಗುಮುನಿಯನ್ನು ಕಾಲಿನಿಂದ ಎದೆಯಲ್ಲಿ ಅದುಮಿಕೊಂಡು ಅವನ ಗಡ್ಡವನ್ನೆಲ್ಲಾ ಬೋಳಿಸಿ ವಿಕಾರಮಾಡಿದನು.

೫೩. ಚಂಡನೆಂಬ ಶಿವಗಣವು ಸೂರ್ಯನ ಹಲ್ಲುಗಳನ್ನು ಮುರಿದನು. ಹಿಂದೆ ದಕ್ಷನು ಶಿವನನ್ನು ಶಪಿಸುವಾಗ ಆ ಸೂರ್ಯನು ತನ್ನ ಹಲ್ಲುಗಳನ್ನೆಲ್ಲಾ ಬಿಟ್ಟು ನಕ್ಕಿದ್ದನು. ಹಾಸ್ಯಮಾಡಿದ್ದನು.

೫೪. ನಂದಿಯು ಭಗನೆಂಬ ಸೂರ್ಯನನ್ನು ಕೆಳಗೆ ಕೆಡುಹಿ ಅವನ ಕಣ್ಣು ಗಳನ್ನು ಕಿತ್ತನು. ಹಿಂದೆ ದಕ್ಷನು ಶಪಿಸುವಾಗ ಆ ಭಗನು ಕಣ್ಣಿನಿಂದ ಸೂಚಿಸಿ ಸಲಹೆಯನ್ನು ಕೊಟ್ಟಿದ್ದನು.

ವಿಡಂಬಿತಾ ಸ್ವಧಾ ತತ್ರ ಸಾ ಸ್ವಾಹಾ ದಕ್ಷಿಣಾ ತಥಾ ।
ಮಂತ್ರಾಸ್ತಂತ್ರಾಸ್ತಥಾ ಚಾನ್ಯೇ ತತ್ರಸ್ಥಾ ಗಣನಾಯಕೈಃ ॥ ೫೫ ॥

ವವೃಷುಸ್ತೇ ಪುರೀಷಾಣಿ ವಿತಾನಾಗ್ನೌ ರುಷಾ ಗಣಾಃ ।
ಅನಿರ್ವಾಚ್ಯಂ ತದಾ ಚಕ್ರುರ್ಗಣಾ ವೀರಾಸ್ತಮಧ್ವರಂ ॥ ೫೬ ॥

ಅಂತರ್ವೇದ್ಯಂತರಗತಂ ನಿಲೀನಂ ತದ್ಭಯಾದ್ಬಲಾತ್ ।
ಆನಿನಾಯ ಸಮಾಜ್ಞಾಯ ವೀರಭದ್ರಶ್ಚ ಭೂಸುತಂ ॥ ೫೭ ॥

ಕಪೋಲೇಽಸ್ಯ ಗೃಹೀತ್ವಾ ತಂ ಖಡ್ಗೇನೋಪಹೃತಂ ಶಿರಃ ।
ಅಭೇದ್ಯಮಭವತ್ತಸ್ಯ ತಚ್ಚ ಯೋಗಪ್ರಭಾವತಃ ॥ ೫೮ ॥

ಅಭೇದ್ಯಂ ತಚ್ಛಿರೋ ಮತ್ವಾ ಶಸ್ತ್ರಾಸ್ತ್ರೈಸ್ತು ಚ ಸರ್ವಶಃ ।
ಕರೇಣ ತ್ರೋಟಯಾಮಾಸ ಪದ್ಭ್ಯಾಮಾಕ್ರಮ್ಯ ಚೋರಸಿ ॥ ೫೯ ॥

ತಚ್ಛಿರಸ್ತಸ್ಯ ದುಷ್ಟಸ್ಯ ದಕ್ಷಸ್ಯ ಹರವೈರಿಣಃ ।
ಅಗ್ನಿಕುಂಡೇ ಪ್ರಚಿಕ್ಷೇಪ ವೀರಭದ್ರೋ ಗಣಾಗ್ರಣೀಃ ॥ ೬೦ ॥

---

೫೫. ಸ್ವಧಾದೇವಿ, ಸ್ವಾಹಾದೇವಿ, ಮಂತ್ರಗಳು, ತಂತ್ರಗಳು ಇವುಗಳನ್ನೆಲ್ಲಾ ಶಿವಗಣಗಳು ನಾನಾವಿಧವಾಗಿ ಹಿಂಸಿಸಿದುವು.

೫೬. ಪವಿತ್ರವಾದ ಆ ಯಜ್ಞಾಗ್ನಿಯಲ್ಲಿ ಗಣಗಳು ಅಮೇಧ್ಯಗಳನ್ನು ಹಾಕಿ ಆ ಯಜ್ಞವನ್ನು ಅಪವಿತ್ರವನ್ನಾಗಿ ಮಾಡಿ ಕೆಡಿಸಿದರು.

೫೭-೫೮. ಆಗ ದಕ್ಷನು ಭಯದಿಂದ ಅಂತರ್ವೇದಿಯ ಮಧ್ಯಭಾಗದಲ್ಲಿ ಅಡಗಿ ಕುಳಿತನು. ವೀರಭದ್ರನು ಅವನನ್ನು ಮೇಲಕ್ಕೆಳತಂದು ಕಪೋಲಗಳನ್ನು ಹಿಡಿದು ಶಿರಸ್ಸನ್ನು ಕತ್ತಿಯಿಂದ ಹೊಡೆದನು. ಆದರೂ ಯೋಗಪ್ರಭಾವದಿಂದ ದಕ್ಷನ ಶಿರಸ್ಸು ಕತ್ತರಿಸಲೇ ಇಲ್ಲ.

೫೯. ದಕ್ಷನ ಶಿರಸ್ಸು ಶಸ್ತ್ರ, ಮತ್ತು ಅಸ್ತ್ರಗಳಿಗೆ ಅಭೇಧ್ಯವಾದುದೆಂದು ತಿಳಿದು ವೀರಭದ್ರನು ಆ ದಕ್ಷನನ್ನು ಕಾಲಿನಿಂದ ಎದೆಯಲ್ಲಿ ಅದುಮಿ ಕೈನಿಂದ ಅವನ ಶಿರಸ್ಸನ್ನು ಮುರಿದುಹಾಕಿದನು.

೬೦. ಶಿವದ್ವೇಷಿಯಾದ ದುಷ್ಟ ದಕ್ಷನ ಆ ಶಿರಸ್ಸನ್ನು ವೀರಭದ್ರನು ಉರಿಯುತ್ತಿರುವ ಅಗ್ನಿಕುಂಡದಲ್ಲಿ ಹಾಕಿದನು.

ರೇಜೇ ತಥಾ ವೀರಭದ್ರಸ್ತ್ರಿಶೂಲಂ ಭ್ರಾಮಯನ್ ಕರೇ ।
ಕ್ರುದ್ಧಾ ರಣಾಕ್ಷಸಂವರ್ತಾಃ ಪ್ರಜ್ವಾಲ್ಯ ಪರ್ವತೋಪಮಾಃ ॥ ೬೧ ॥

ಅನಾಯಾಸೇನ ಹತ್ವೈತಾನ್ ವೀರಭದ್ರಸ್ತತೋಽಗ್ನಿನಾ ।
ಜ್ವಾಲಯಾಮಾಸ ಸಕ್ರೋಧೋ ದೀಪ್ತಾಗ್ನಿಶ್ಶಲಭಾನಿವ ॥ ೬೨ ॥

ವೀರಭದ್ರಸ್ತತೋ ದೃಷ್ಟ್ವಾ ದಗ್ಧಾನ್ ದಕ್ಷಪುರೋಗಮಾನ್ ।
ಅಟ್ಟಾಟ್ಟಹಾಸಮಕರೋತ್ಪೂರಯಂಶ್ಚ ಜಗತ್ತ್ರಯಂ ॥ ೬೩ ॥

ವೀರಶ್ರಿಯಾ ಯುತಸ್ತತ್ರ ತತೋ ನಂದನಸಂಭವಾ ।
ಪುಷ್ಪವೃಷ್ಟಿರಭೂದ್ದಿವ್ಯಾ ವೀರಭದ್ರೇ ಗಣಾನ್ವಿತೇ ॥ ೬೪ ॥

ವವುರ್ಗಂಧವಹಾಶ್ಶೀತಾಸ್ಸುಗಂಧಾಸ್ಸುಖದಾಃ ಶನೈಃ ।
ದೇವದುಂದುಭಯೋ ನೇದುಸ್ಸಮನೇವ ತತಃ ಪರಂ ॥ ೬೫ ॥

---

೬೧. ಹೀಗೆ ವೀರಭದ್ರನು ಶತ್ರುಗಳನ್ನು ನಿಗ್ರಹಿಸಿ ತ್ರಿಶೂಲವನ್ನು ತಿರುಗಿಸುತ್ತಾ ರಾರಾಜಿಸಿದನು. ಮಿಕ್ಕ ಗಣಗಳು ಮೃತರಾದ ಶಿವಶತ್ರುಗಳನ್ನೆಲ್ಲಾ ಅಗ್ನಿಯಲ್ಲಿ ಹಾಕಿ ಭಸ್ಮಮಾಡಿದರು.

೬೨. ವೀರಭದ್ರನು ಆಯಾಸವಿಲ್ಲದೇ ಕ್ಷಣದಲ್ಲಿಯೇ ಎಲ್ಲ ಶಿವದ್ವೇಷಿಗಳನ್ನೂ ನಾಶಮಾಡಿ ಪತಂಗವನ್ನು ಬೆಂಕಿಯು ಸುಡುವಂತೆ ಎಲ್ಲರನ್ನೂ ಅಗ್ನಿಗೆ ಹಾಕಿ ಭಸ್ಮಮಾಡಿದನು.

೬೩. ದಕ್ಷ ಮೊದಲಾದವರೆಲ್ಲರೂ ದಗ್ಧರಾದುದನ್ನು ನೋಡಿ ವೀರಭದ್ರನು ಜಗತ್ತೆಲ್ಲವೂ ತುಂಬಿಹೋಗುವಂತೆ ಅಟ್ಟಹಾಸವನ್ನು ಮಾಡಿದನು.

೬೪. ಆಗ ನಂದನವನದಿಂದ ಜಯಶಾಲಿಯಾದ ವೀರಭದ್ರನಮೇಲೆ ದಿವ್ಯವಾದ ಪುಷ್ಪವೃಷ್ಟಿಯಾಯಿತು.

೬೫. ಗಾಳಿಯು ತಂಪಾಗಿ ಸುವಾಸನೆಯನ್ನು ಬೀರುತ್ತಾ ಬೀಸಿತು. ದೇವದುಂದುಭಿಗಳು ಮೊಳಗಿದುವು.

ಕೈಲಾಸಂ ಸ ಯಯೌ ವೀರಃ ಕೃತಕಾರ್ಯಸ್ತತಃ ಪರಂ ।
ವಿನಾಶಿತದ್ವೃಢಧ್ವಾಂತೋ ಭಾನುಮಾನಿವ ಸತ್ವರಂ ॥ ೬೬ ॥

ಕೃತಕಾರ್ಯಂ ವೀರಭದ್ರಂ ದೃಷ್ಟ್ವಾ ಸಂತುಷ್ಟಮಾನಸಃ ।
ಶಂಭುರ್ವೀರಗಣಾಧ್ಯಕ್ಷಂ ಚಕಾರ ಪರಮೇಶ್ವರಃ ॥ ೬೭ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಸತೀಖಂಡೇ
ಸಪ್ತತ್ರಿಂಶೋಽಧ್ಯಾಯಃ



೬೬-೬೭. ಸೂರ್ಯನು ಅಂಧಕಾರವನ್ನು ನಾಶಮಾಡುವಂತೆ ವೀರಭದ್ರನು ಶಿವದ್ವೇಷಿಗಳನ್ನು ನಾಶಮಾಡಿ ಕೃತಕೃತ್ಯನಾಗಿ ಕೈಲಾಸಕ್ಕೆ ಹಿಂತಿರುಗಿ ಬಂದಿರುವುದನ್ನು ನೋಡಿ ಪರಮೇಶ್ವರನು ಸಂತುಷ್ಟನಾಗಿ ಅವನನ್ನು ಎಲ್ಲಾ ಗಣಗಳಿಗೂ ನಾಯಕನನ್ನಾಗಿ ಮಾಡಿದನು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಮೂವತ್ತೇಳನೆಯ
ಅಧ್ಯಾಯವು ಮುಗಿದುದು.



|| ಶ್ರೀಃ ||

---

|| ಓಂ ನಮಃ ಶಿವಾಯ ||

# ಅಥ ಶ್ರೀಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಅಷ್ಟತ್ರಿಂಶೋಽಧ್ಯಾಯಃ

---

|| ಸೂತ ಉವಾಚ ||

ಇತ್ಯಾಽಽಕರ್ಣ್ಯ ವಚಸ್ತಸ್ಯ ವಿಧೇರಮಿತಧೀಮತಃ ।
ಪಪ್ರಚ್ಛ ನಾರದಃ ಪ್ರೀತ್ಯಾ ವಿಸ್ಮಿತಸ್ತಂ ದ್ವಿಜೋತ್ತಮಃ || ೧ ||

|| ನಾರದ ಉವಾಚ ||

ಶಿವಂ ವಿಹಾಯ ದಕ್ಷಸ್ಯ ಸುರೈರ್ಯಜ್ಞಂ ಹರಿರ್ಗತಃ ।
ಹೇತುನಾ ಕೇನ ತದ್ಬ್ರೂಹಿ ಯತ್ರಾವಜ್ಞಾಭವತ್ತತಃ || ೨ ||

---

### ಮೂವತ್ತೆಂಟನೆಯ ಅಧ್ಯಾಯವು.

೧. ಸೂತನು ಹೇಳಿದನು ;—ಹೀಗೆ ಸಕಲವನ್ನೂ ತಿಳಿದ ಬ್ರಹ್ಮನಿಂದ ಶಿವ ಕಥೆಯನ್ನು ಕೇಳಿ ನಾರದನು ಆಶ್ಚರ್ಯಗೊಂಡು ತಿರುಗಿ ಪ್ರೀತಿಯಿಂದ ಹೀಗೆ ಪ್ರಶ್ನಿಸಿದನು.

೨. ನಾರದನು ಪ್ರಶ್ನಿಸಿದನು ;—ಓ ವಿಧಿಯೇ, ವಿಷ್ಣುವು ಶಿವನನ್ನು ಬಿಟ್ಟು ದೇವತೆಗಳೊಡನೆ ದಕ್ಷಯಜ್ಞಕ್ಕೆ ಹೋಗಲು ಕಾರಣವೇನು ? ಆದರಿಂದಲೇ ಆ ಹರಿಗೆ ಯಜ್ಞದಲ್ಲಿ ಅವಮಾನವಾಯಿತಲ್ಲವೆ ?

ಜಾನಾತಿ ಕಿಂ ಸ ಶಂಭುಂ ನೋ ಹರಿಂ ಪ್ರಲಯವಿಕ್ರಮಂ ।
ರಣಂ ಕಥಂ ಚ ಕೃತವಾಂಸ್ತದ್ಗಣೈರಬುಧೋ ಯಥಾ ॥ ೩ ॥

ಏಷ ಮೇ ಸಂಶಯೋ ಭೂಯಾಂಸ್ತಂ ಛಿಂಧಿ ಕರುಣಾನಿಧೇ ।
ಚರಿತಂ ಬ್ರೂಹಿ ಶಂಭೋಸ್ತು ಚಿತ್ತೋತ್ಸಾಹಕರಂ ವಿಭೋ ॥ ೪ ॥

॥ ಬ್ರಹ್ಮೋವಾಚ ॥

ದ್ವಿಜವರ್ಯ ಶೃಣು ಪ್ರೀತ್ಯಾ ಚರಿತಂ ಶಶಿಮೌಲಿನಃ ।
ಯತ್ಪೃಚ್ಛತೇ ಕುರ್ವತಶ್ಚ ಸರ್ವಸಂಶಯಹಾರಕಂ ॥ ೫ ॥

ದಧೀಚಸ್ಯ ಮುನೇಶ್ಶಾಪಾದ್ಭ್ರಷ್ಟಜ್ಞಾನೋ ಹರಿಃ ಪುರಾ ।
ಸಾನುರೋ ದಕ್ಷಯಜ್ಞಂ ವೈ ಗತಃ ಕ್ಷುವಸಹಾಯಕೃತ್ ॥ ೬ ॥

---

೩. ಜಗತ್ತನ್ನೇ ಪ್ರಲಯಮಾಡುವಂತಹ ಮಹಿಮೆಯುಳ್ಳ ಶಿವನನ್ನು ಹರಿಯು ತಿಳಿದಿರಲಿಲ್ಲವೆ? ತಿಳಿದಿದ್ದರೂ ಮೂಢನಂತೆ ಆ ಶಿವಗಣಗಳೊಂದಿಗೆ ಹರಿಯು ಯುದ್ಧಮಾಡಿದುದೇಕೆ?

೪. ಹೀಗೆ ನನಗೆ ಮಹಾಸಂಶಯವು ಉಂಟಾಗಿರುವುದು. ಕರುಣಾಶಾಲಿಯಾದ ಓ ಬ್ರಹ್ಮನೇ, ಆ ನನ್ನ ಸಂಶಯವನ್ನು ಹೋಗಲಾಡಿಸಿ ಮನಸ್ಸಿನ ಉತ್ಸಾಹವನ್ನುಂಟುಮಾಡುವಂತ ಶಿವಕಥೆಯನ್ನು ಮುಂದಕ್ಕೆ ಹೇಳು ಎಂದನು.

೫. ಬ್ರಹ್ಮನು ಹೇಳಿದನು:—ಬ್ರಾಹ್ಮಣೋತ್ತಮನಾದ ಎಲೈ ನಾರದನೆ, ಚಂದ್ರಶೇಖರನ ಚರಿತ್ರೆಯನ್ನು ಹೇಳುವೆನು. ಆದರದಿಂದ ಕೇಳು. ಅದರಿಂದ ನಿನ್ನ ಸಂಶಯವೂ ಪರಿಹಾರವಾಗುವುದು.

೬. ಪೂರ್ವದಲ್ಲಿ ದಧೀಚಿ ಎಂಬ ಮುನಿಗೆ ಶತ್ರುವಾದ ಕ್ಷುವನೆಂಬ ರಾಜನಿಗೆ ವಿಷ್ಣುವು ಸಹಾಯಮಾಡಿದನೆಂದು ದಧೀಚಿಯು ಕೋಪಗೊಂಡು ವಿಷ್ಣುವಿಗೆ ಶಾಪವನ್ನಿತ್ತಿದ್ದನು. ಆ ಶಾಪದ ಫಲವಾಗಿ ಈಗ ವಿಷ್ಣುವು ಯುಕ್ತಾಯುಕ್ತಜ್ಞಾನವಿಹೀನನಾಗಿ ಮೂಢನಂತೆ ಆಚರಿಸಿದನು.

॥ ನಾರದ ಉವಾಚ ॥

**ಕಿಮರ್ಥಂ ಶಪ್ತವಾನ್ ವಿಷ್ಣುಂ ದಧೀಚೋ ಮುನಿಸತ್ತಮಃ ।**
**ಕೋಪಾಕಾರಃ ಕೃತಸ್ತಸ್ಯ ಹರಿಣಾ ತತ್ಸಹಾಯಿನಾ ॥ ೭ ॥**

॥ ಬ್ರಹ್ಮೋವಾಚ ॥

**ಸಮುತ್ಪನ್ನೋ ಮಹಾತೇಜಾ ರಾಜಾ ಕ್ಷುವ ಇತಿ ಸ್ಮೃತಃ ।**
**ಅಭೂನ್ಮಿತ್ರಂ ದಧೀಚಸ್ಯ ಮುನೀಂದ್ರಸ್ಯ ಮಹಾಪ್ರಭೋಃ ॥ ೮ ॥**

**ಚಿರಾತ್ತಪಃ ಪ್ರಸಂಗಾದ್ವೈ ವಾದಃ ಕ್ಷುವದಧೀಚಯೋಃ ।**
**ಮಹಾನರ್ಥಕರಃ ಖ್ಯಾತಸ್ತ್ರಿಲೋಕೇಷ್ವಭವತ್ಪುರಾ ॥ ೯ ॥**

**ತತ್ರ ತ್ರಿವರ್ಣತಃ ಶ್ರೇಷ್ಠೋ ವಿಪ್ರ ಏವ ನ ಸಂಶಯಃ ।**
**ಇತಿ ಪ್ರಾಹ ದಧೀಚೋ ಹಿ ಶಿವಭಕ್ತಸ್ತು ವೇದವಿತ್ ॥ ೧೦ ॥**

**ತಚ್ಛ್ರುತ್ವಾ ವಚನಂ ತಸ್ಯ ದಧೀಚಸ್ಯ ಮಹಾಮುನೇಃ ।**
**ಕ್ಷುವಃ ಪ್ರಾಹೇತಿ ನೃಪತಿಃ ಶ್ರೀಮದೇನ ವಿಮೋಹಿತಃ ॥ ೧೧ ॥**

---

೭. ನಾರದಮುನಿಯು ಹೇಳಿದನು :—ಓ ವಿಧಿ, ದಧೀಚಿಮುನಿಶ್ರೇಷ್ಠನು ಹರಿಯನ್ನು ಏಕೆ ಶಪಿಸಿದನು ? ಆ ಮುನಿಗೆ ಕೋಪಬರುವಂತೆ ಹರಿಯು ಅದೆಂತಹ ಕಾರ್ಯವನ್ನು ಮಾಡಿದನು ಎನ್ನಲು,

೮. ಬ್ರಹ್ಮನು ಹೇಳಿದನು ;—ಹಿಂದೆ ಕ್ಷುವನೆಂಬ ಮಹಾತೇಜಸ್ವಿಯಾದ ರಾಜನಿದ್ದನು. ಆ ರಾಜನು ದಧೀಚಿಮುನಿಗೆ ಮಿತ್ರನಾಗಿದ್ದನು.

೯. ಹೀಗಿರಲು ಒಮ್ಮೆ ತಪಸ್ಸಿನ ವಿಷಯದಲ್ಲಿ ದಧೀಚಿ ಮತ್ತು ಕ್ಷುವರಾಜ ಇವರಿಗೆ ಮಹಾವಾಕ್ಯಾರ್ಥವು ನಡೆಯಿತು. ಅದು ಬಹಳ ಕಾಲ ನಡೆದದ್ದಲ್ಲದೆ ಲೋಕಕ್ಕೆ ಮಹಾ ಅನರ್ಥವನ್ನುಂಟುಮಾಡುವಂತಹುದೂ ಆಯಿತು.

೧೦. ಶಿವಭಕ್ತನೂ, ವೇದವಿತ್ತೂ ಆದಂತಹ ದಧೀಚಿಮುನಿಯು ಆ ವ್ಯಾಕ್ಯಾರ್ಥವಲ್ಲಿ ಕ್ಷತ್ರಿಯ ವೈಶ್ಯ, ಶೂದ್ರರಿಗಿಂತಲೂ ಬ್ರಾಹ್ಮಣನೇ ಶ್ರೇಷ್ಠನೆಂದು ಹೇಳಿದನು.

೧೧. ದಧೀಚಿಮಹಾಮುನಿಯ ಆ ಮಾತನ್ನು ಕೇಳಿ ಧನಮದದಿಂದ ಕೊಬ್ಬಿದ ಕ್ಷುವರಾಜನು ಈ ರೀತಿಯಾಗಿ ಹೇಳಿದನು.

॥ ಕ್ಷುವ ಉವಾಚ ॥

ಅಷ್ಟಾನಾಂ ಲೋಕಪಾಲಾನಾಂ ವಪುರ್ಧಾರಯತೇ ನೃಪಃ ।
ತಸ್ಮಾನ್ನೃಪೋ ವರಿಷ್ಠೋ ಹಿ ವರ್ಣಾಶ್ರಮಪತಿಃ ಪ್ರಭುಃ ॥ ೧೨ ॥

ಸರ್ವದೇವಮಯೋ ರಾಜಾ ಶ್ರುತಿಃ ಪ್ರಾಹೇತಿ ತತ್ಪರಾ ।
ಮಹತೀ ದೇವತಾ ಯಾ ಸಾ ಸೋಽಹಮೇವ ತತೋ ಮುನೇ ॥ ೧೩ ॥

ತಸ್ಮಾದ್ವಿಪ್ರಾದ್ವರೋ ರಾಜಾ ಚ್ಯವನೇಯ ವಿಚಾರ್ಯತಾಂ ।
ನಾಮಮಂತವ್ಯ ಏವಾತ ಪೂಜ್ಯೋಽಹಂ ಸರ್ವಥಾ ತ್ವಯಾ ॥ ೧೪ ॥

॥ ಬ್ರಹ್ಮೋವಾಚ ॥

ಶ್ರುತ್ವಾ ತಥಾ ಮತಂ ತಸ್ಯ ಕ್ಷುವಸ್ಯ ಮುನಿಸತ್ತಮಃ ।
ಶ್ರುತಿಸ್ಮೃತಿವಿರುದ್ಧಂ ತಚ್ಚುಕೋಪಾತೀವ ಭಾರ್ಗವಃ ॥ ೧೫ ॥

ಅಥ ಕ್ರುದ್ಧೋ ಮಹಾತೇಜಾ ಗೌರವಾಚ್ಚಾತ್ಮನೋ ಮುನೇ ।
ಅತಾಡಯತ್ಕ್ಷುವಂ ಮೂರ್ಧ್ನಿ ದಧೀಚೋ ವಾಮಮುಷ್ಟಿತಃ ॥ ೧೬ ॥

---

೧೨. ಕ್ಷುವರಾಜನು ಹೇಳಿದನು ;—ರಾಜನು ಅಷ್ಟದಿಕ್ಪಾಲಕರ ಅಂಶ ಸ್ವರೂಪನು. ಅವನು ವರ್ಣಾಶ್ರಮಗಳನ್ನು ಪಾಲಿಸತಕ್ಕವನು. ಆದುದರಿಂದ ರಾಜನೇ ಶ್ರೇಷ್ಠನು.

೧೩. ರಾಜನು ಎಲ್ಲಾ ದೇವತೆಗಳ ಸ್ವರೂಪನು ಎಂದು ಶ್ರುತಿಯು ಹೇಳುವುದು. ಶ್ರುತಿಯು ಮಹಾಪ್ರಮಾಣವು. ಅದು ಎಂದಿಗೂ ಸುಳ್ಳನ್ನು ಹೇಳುವುದಿಲ್ಲ. ಅಂತಹ ದೇವತಾರೂಪನಾದ ರಾಜನು ನಾನಾಗಿರುವೆನು

೧೪. ಆದುದರಿಂದ ರಾಜನು ಬ್ರಾಹ್ಮಣನಿಗಿಂತಲೂ ಶ್ರೇಷ್ಠನು. ಎಲೈ ದಧೀಚಿ ಮುನಿಯೇ, ಚೆನ್ನಾಗಿ ವಿಚಾರಮಾಡಿ ನೋಡು. ನನ್ನನ್ನು ಅವಮಾನಗೊಳಿಸದೆ ಪೂಜಿಸಬೇಕು.

೧೫. ಬ್ರಹ್ಮನು ಹೇಳಿದನು :—ಕ್ಷುವನು ಹೇಳಿದ ಶ್ರುತಿಸ್ಮೃತಿಗಳಿಗೆ ವಿರುದ್ಧವಾದ ಈ ಮಾತನ್ನು ಕೇಳಿ ದಧೀಚಿಮುನಿಯು ತುಂಬಾ ಕೋಪಗೊಂಡನು.

೧೬. ಹೀಗೆ ತನಗೆ ಕ್ಷುವನು ಅಪಮಾನಮಾಡಿದುದರಿಂದಲೂ ಸಹ ಕೋಪಗೊಂಡು ದಧೀಚಿಮುನಿಯು ಆ ರಾಜನ ತಲೆಯಲ್ಲಿ ಎಡಮುಷ್ಟಿಯಿಂದ ಪ್ರಹರಿಸಿದನು.

ವಜ್ರೇಣ ತಂ ಚ ಚಿಚ್ಛೇದ ದಧೀಚಂ ತಾಡಿತಃ ಕ್ಷುವಃ ।
ಜಗರ್ಜಾತೀವ ಸಂಕ್ರುದ್ಧೋ ಬ್ರಹ್ಮಾಂಡಾಧಿಪತಿಃ ಕುಧೀಃ ॥ ೧೭ ॥

ಪಪಾತ ಭೂಮೌ ನಿಹತೋ ತೇನ ವಜ್ರೇಣ ಭಾರ್ಗವಃ ।
ಶುಕ್ರಂ ಸಸ್ಮಾರ ಕ್ಷುವಕೃದ್ಭಾರ್ಗವಸ್ಯ ಕುಲಂಧರಃ ॥ ೧೮ ॥

ಶುಕ್ರೋಽಥ ಸಂಧಯಾಮಾಸ ತಾಡಿತಂ ಚ ಕ್ಷುವೇನ ತು ।
ಯೋಗೀ ದಧೀಚಸ್ಯ ತದಾ ದೇಹಮಾಗತ್ಯ ಸ ದ್ರುತಂ ॥ ೧೯ ॥

ಸಂಧಾಯ ಪೂರ್ವವದ್ದೇಹಂ ದಧೀಚಸ್ಯಾಪ ಭಾರ್ಗವಃ ।
ಶಿವಭಕ್ತಾಗ್ರಣೀರ್ಮೃತ್ಯುಂಜಯವಿದ್ಯಾಪ್ರವರ್ತಕಃ ॥ ೨೦ ॥

॥ ಶುಕ್ರ ಉವಾಚ ॥

ದಧೀಚ ತಾತ ಸಂಪೂಜ್ಯ ಶಿವಂ ಸರ್ವೇಶ್ವರಂ ಪ್ರಭುಂ ।
ಮಹಾಮೃತ್ಯುಂಜಯಂ ಮಂತ್ರಂ ಶ್ರೌತಮುಗ್ರ್ಯಂ ವದಾಮಿ ತೇ ॥ ೨೧ ॥

---

೧೭. ದಧೀಚಿಯಿಂದ ಏಟುತಿಂದ ಕ್ಷುವರಾಜನು ಅದಕ್ಕೆ ಪ್ರತಿಯಾಗಿ ವಜ್ರದಿಂದ ದಧೀಚಿಮುನಿಯನ್ನು ಗಾಯಪಡಿಸಿದನು. ಆ ರಾಜನು ಬ್ರಹ್ಮಾಂಡಾಧಿಪತಿಯಾಗಿದ್ದರೂ ಮೂರ್ಖನಾಗಿದ್ದನು.

೧೮. ಕ್ಷುವನ ವಜ್ರದಿಂದ ಹೊಡೆಯಲ್ಪಟ್ಟ ದಧೀಚಿಮುನಿಯು ಭೂಮಿಯಲ್ಲಿ ಉರುಳಿದನು. ಆಗಲವನು ತನ್ನ ವಂಶದ ಮೂಲಪುರುಷನಾದ ಶುಕ್ರಾಚಾರ್ಯನನ್ನು ಸ್ಮರಿಸಿದನು.

೧೯. ಕೂಡಲೇ ಯೋಗಿಯಾದ ಶುಕ್ರಾಚಾರ್ಯನು ಬಂದು ಕ್ಷುವನಿಂದ ಹೊಡೆಯಲ್ಪಟ್ಟ ದಧೀಚಿಯ ಶರೀರವನ್ನು ಯೋಗಬಲದಿಂದ ಪ್ರಾಣದೊಂದಿಗೆ ತಿರುಗಿ ಸೇರಿಸಿದನು.

೨೦. ಶಿವಭಕ್ತರಲ್ಲಿ ಉತ್ತಮನೂ ಮೃತ್ಯುಂಜಯ ವಿದ್ಯೆಗೆ ಪ್ರವರ್ತಕನೂ ಆದಂತಹ ಆ ಶುಕ್ರಾಚಾರ್ಯನು ಹಿಂದಿನಂತೆ ದಧೀಚಿಮುನಿಯ ಶರೀರವನ್ನು ಸೇರಿಸಿ,

೨೧. ಶುಕ್ರಾಚಾರ್ಯನು ಹೇಳಿದನು :—ವತ್ಸನಾದ ಎಲೈ ದಧೀಚನೆ, ಸರ್ವೇಶ್ವರನಾದ ಶಿವನನ್ನು ಮನಸ್ಸಿನಲ್ಲಿ ಅರ್ಚಿಸಿ ಮಹಾಮೃತ್ಯುಂಜಯಮಂತ್ರವನ್ನು ನಿನಗೆ ಹೇಳುವೆನು. ಶ್ರೇಷ್ಠವಾದ ಆ ಮಂತ್ರವು ಶ್ರುತಿಯಲ್ಲಿ ಹೇಳಲ್ಪಟ್ಟಿರುವುದು.

ತ್ರ್ಯಂಬಕಂ ಯಜಾಮಹೇ ತ್ರೈಲೋಕ್ಯಪಿತರಂ ಪ್ರಭುಂ ।
ತ್ರಿಮಂಡಲಸ್ಯ ಪಿತರಂ ತ್ರಿಗುಣಸ್ಯ ಮಹೇಶ್ವರಂ　　　॥ ೨೨ ॥

ತ್ರಿತತ್ತ್ವಸ್ಯ ತ್ರಿವಹ್ನೇಶ್ಚ ತ್ರಿಧಾಭೂತಸ್ಯ ಸರ್ವತಃ ।
ತ್ರಿದಿವಸ್ಯ ತ್ರಿಬಾಹೋಶ್ಚ ತ್ರಿಧಾಭೂತಸ್ಯ ಸರ್ವತಃ　　　॥ ೨೩ ॥

ತ್ರಿವೇದಸ್ಯ ಮಹಾದೇವಸ್ಸುಗಂಧಿಂ ಪುಷ್ಟಿವರ್ಧನಂ ।
ಸರ್ವಭೂತೇಷು ಸರ್ವತ್ರ ತ್ರಿಗುಣೇಷು ಕೃತೌ ಯಥಾ　　　॥ ೨೪ ॥

ಇಂದ್ರಿಯೇಷು ತಥಾನ್ಯೇಷು ದೇವೇಷು ಚ ಗಣೇಷು ಚ ।
ಪುಷ್ಪೇ ಸುಗಂಧಿವತ್ಸೂರಸ್ಸುಗಂಧಿರಮರೇಶ್ವರಃ　　　॥ ೨೫ ॥

ಪುಷ್ಟಿಶ್ಚ ಪ್ರಕೃತೇರ್ಯಸ್ಮಾತ್ಪುರುಷಾದ್ವೈ ದ್ವಿಜೋತ್ತಮ ।
ಮಹದಾದಿವಿಶೇಷಾಂತವಿಕಲ್ಪಶ್ಚಾಪಿ ಸುವ್ರತ　　　॥ ೨೬ ॥

---

೨೨ ಮೃತ್ಯುಂಜಯ ಮಹಾಮಂತ್ರವು-ಪರಮೇಶ್ವರನು, ಮೂರು ಕಣ್ಣುಳ್ಳವನು, ಮೂರು ಜಗತ್ತಿಗೆ ತಂದೆಯೂ, ಮತ್ತು ಒಡೆಯನು, ಸೂರ್ಯ, ಚಂದ್ರ, ಅಗ್ನಿ ಈ ರೂಪವಾದ ಮೂರು ಮಂಡಲಗಳಿಗೂ ಸತ್ವರಜಸ್ತಮೋಗುಣಗಳಿಗೂ ಒಡೆಯನು· ಸರ್ವೇಶ್ವರನು, ಇಂತಹ ಪರಮೇಶ್ವರನನ್ನು ಪೂಜಿಸುವೆವು ಎಂದರೆ ಹವಿರ್ಭಾಗವನ್ನು ಅರ್ಪಿಸಿ ಸಂತೋಷಗೊಳಿಸುವೆವು.

೨೩. ಮತ್ತು ಆ ಶಿವನು ಪ್ರಕೃತಿ, ಪುರುಷ, ಜಗತ್ತು ಈ ಮೂರು ತತ್ವಗಳಿಗೂ, ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ ಈ ಮೂರು ಅಗ್ನಿಗಳಿಗೂ ಸ್ವರ್ಗ, ಲೋಕಕ್ಕೂ ಒಡೆಯನು, ಬ್ರಹ್ಮ, ವಿಷ್ಣು, ರುದ್ರ ಎಂಬ ತ್ರಿಮೂರ್ತಿಸ್ವರೂಪನು ಋಗ್ಯಜುಸ್ಸಾಮವೇದಸ್ವರೂಪನು, ಮಹಾದೇವನು, ಪುಣ್ಯಗಂಧಸ್ವರೂಪನು. ಜಗತ್ತನ್ನು ಪೋಷಿಸುವನು. ಇಂತಹ ಪರಮೇಶ್ವರನನ್ನು ಪೂಜಿಸುವೆವು.

೨೪-೨೫. ಆ ಪರಮೇಶ್ವರನು ಎಲ್ಲ ಭೂತಗಳು ಸತ್ವ, ರಜಸ್ಸು, ತಮಸ್ಸು ಈ ಗುಣಗಳು, ಕ್ರಿಯೆಗಳು, ಇಂದ್ರಿಯಗಳು, ದೇವತೆಗಳು, ಗಣಗಳು ಸುವಾಸನೆಯುಳ್ಳ ಹೂವುಗಳು ಇವುಗಳಲ್ಲಿಯೂ, ಇತರ ಎಲ್ಲ ವಸ್ತುಗಳಲ್ಲಿಯೂ ಅಂತರ್ಯಾಮಿಯಾಗಿ ಇರುವನು.

೨೬-೨೭. ಪ್ರಕೃತಿ, ಪುರುಷ, ಮಹತತ್ತ್ವವೇ ಮೊದಲಾದ ಮಿಕ್ಕ ಜಗತ್ತು ವಿಷ್ಣು, ಬ್ರಹ್ಮ, ಮುನಿಗಳು, ಇಂದ್ರಿಯಗಳು, ದೇವತೆಗಳು ಇವರೆಲ್ಲರನ್ನೂ ಪೋಷಿಸು

ವಿಷ್ಣೋಃ ಪಿತಾಮಹಸ್ಯಾಪಿ ಮುನೀನಾಂ ಚ ಮಹಾಮುನೇ ।
ಇಂದ್ರಿಯಶ್ಚೈವ ದೇವಾನಾಂ ತಸ್ಮಾದ್ವೈ ಪುಷ್ಟಿವರ್ಧನಃ ॥ ೨೭ ॥

ತಂ ದೇವಮಮೃತ್ವಂ ರುದ್ರಂ ಕರ್ಮಣಾ ತಪಸಾಪಿ ವಾ ।
ಸ್ವಾಧ್ಯಾಯೇನ ಚ ಯೋಗೇನ ಧ್ಯಾನೇನ ಚ ಪ್ರಜಾಯತೇ ॥ ೨೮ ॥

ಸತ್ಯೇನಾನ್ಯೇನ ಸೂಕ್ಷ್ಮಾಚ್ಚ ಮೃತ್ಯುಪಾಶಾದ್ಭವಃ ಸ್ವಯಂ ।
ಬಂಧಮೋಕ್ಷಕರೋ ಯಸ್ಮಾದುರ್ವಾರುಕಮಿವ ಪ್ರಭುಃ ॥ ೨೯ ॥

ಮೃತಸಂಜೀವಿನೀ ಮಂತ್ರೋ ಮಮ ಸರ್ವೋತ್ತಮಃ ಸ್ಮೃತಃ ।
ಏವಂ ಜಪಪರಃ ಪ್ರೀತ್ಯಾ ನಿಯಮೇನ ಶಿವಂ ಸ್ಮರ ॥ ೩೦ ॥

ಜಪ್ತ್ವಾ ಹುತ್ವಾಭಿಮಂತ್ರ್ಯೈವಂ ಜಲಂ ಪಿಬ ದಿವಾನಿಶಂ ।
ಶಿವಸ್ಯ ಸನಿಧೌ ಧ್ಯಾತ್ವಾ ನಾಸ್ತಿ ಮೃತ್ಯುಭಯಂ ಕ್ವಚಿತ್ ॥ ೩೧ ॥

---

ವನು, ಪುಷ್ಟಿಯನ್ನುಂಟುಮಾಡುವವನು, ಎಂದರೆ ಪಾಲಕನು. ಎಲೈ ದಧೀಚಮುನಿ, ಆದುದರಿಂದಲೇ ಶ್ರುತಿಯು ಪರಮೇಶ್ವರನನ್ನು "ಪುಷ್ಟಿವರ್ಧನ" ನೆಂದು ಕರೆದಿರುವುದು.

೨೮. ಇಂತಹ ಮಹಿಮೆಯುಳ್ಳ, ಎಂದೆಂದಿಗೂ ನಾಶವಿಲ್ಲದ ಮಹಾರುದ್ರನನ್ನು, ಕರ್ಮ, ತಪಸ್ಸು, ವೇದಾಧ್ಯಯನ, ಯೋಗ, ಧ್ಯಾನ, ಇವುಗಳಿಂದ ಅರ್ಚಿಸಬೇಕು. ಹಾಗೆ ಅರ್ಚಿಸಿದವನು ಆ ದೇವನಸ್ವರೂಪವನ್ನೇ ಹೊಂದುವನು.

೨೯. ಸತ್ಯದಿಂದಲೂ, ಮಿಕ್ಕ ಯಾವುದಾದರೂ ಸೂಕ್ಷ್ಮವಾದ ಅನುಷ್ಠಾನದಿಂದಲೂ ಆ ರುದ್ರನನ್ನರ್ಚಿಸಬೇಕು. ಹಾಗೆ ಅರ್ಚಿಸಿದರೆ ಆ ಪರಮೇಶ್ವರನು ತಾನೇ ಪ್ರಸನ್ನನಾಗಿ ಮೃತ್ಯುಪಾಶದಿಂದ, ತೊಟ್ಟಿನಿಂದ ಸೌತೇಕಾಯನ್ನು ಬಿಡಿಸುವಂತೆ ಬಿಡಿಸುವನು. ಹೀಗೆಂದು ಶ್ರುತಿಯೂ ಹೇಳುವುದು.

೩೦-೩೧. ಈ ಮಹಾಮೃತ್ಯುಂಜಯ ಮಂತ್ರವು ಸತ್ತವರನ್ನು ಬದುಕಿಸುವುದು. ಆದುದರಿಂದ ಈ ಮಂತ್ರವು ಮಂತ್ರಗಳಲ್ಲೆಲ್ಲಾ ಉತ್ತಮವಾದುದು. ಎಲೈ ದಧೀಚಮುನಿ, ಹಿಂದೆ ಹೇಳಿದಂತೆ ಮೃತ್ಯುಂಜಯಮಂತ್ರವನ್ನು ಶಿವನನ್ನು ಸ್ಮರಿಸುತ್ತಾ ನಿತ್ಯವೂ ನಿಯಮದಿಂದ ಜಪಿಸಬೇಕು. ಜಪಿಸಿ ಆಮೇಲೆ ಹೋಮಮಾಡಬೇಕು. ಬರಿಯ ಜಲವನ್ನೇ ಆಹಾರವಾಗಿ ಸೇವಿಸಬೇಕು. ಶಿವಲಿಂಗದ ಸನ್ನಿಧಿಯಲ್ಲಿ ಹಾಗೆ ಧ್ಯಾನಮಾಡಿದರೆ ಅವನಿಗೆ ಮೃತ್ಯುಭಯವೇ ಬರುವುದಿಲ್ಲ.

ಕೃತ್ವಾ ನ್ಯಾಸಾದಿಕಂ ಸರ್ವಂ ಸಂಪೂಜ್ಯ ವಿಧಿವಚ್ಛಿವಂ ।
ಸಂವಿಧಾಯೇದಂ ನಿರ್ವ್ಯಗ್ರಶ್ಶಂಕರಂ ಭಕ್ತವತ್ಸಲಂ　　　॥ ೩೨ ॥

ಧ್ಯಾನಮಸ್ಯ ಪ್ರವಕ್ಷ್ಯಾಮಿ ಯಥಾ ಧ್ಯಾತ್ವಾ ಜಪೇನ್ಮನುಂ ।
ಸಿದ್ಧಮಂತ್ರೋ ಭವೇದ್ಧೀಮಾ ಯಾವಚ್ಛಂಭುಪ್ರಭಾವತಃ　　　॥ ೩೩ ॥

॥ ಧ್ಯಾನಶ್ಲೋಕಃ ॥

ಹಸ್ತಾಂಭೋಜಯುಗಸ್ಥಕುಂಭಯುಗಲಾದುದ್ಧೃತ್ಯ ತೋಯಂ ಶಿರಃ
ಸಿಂಚತಂ ಕರಯೋರ್ಯುಗೇನ ದಧತಂ ಸ್ವಾಂಕೇ ಸಕುಂಭೌ ಕರೌ ।
ಅಕ್ಷಸ್ರಙ್ಮೃಗಹಸ್ತಮಂಬುಜಗತಂ ಮೂರ್ಧಸ್ಥಚಂದ್ರಸ್ರವ
ತ್ಪೀಯೂಷಾರ್ದ್ರತನುಂ ಭಜೇ ಸಗಿರಿಜಂ ತ್ರ್ಯಕ್ಷಂ ಚ ಮೃತ್ಯುಂಜಯಂ ॥

॥ ಬ್ರಹ್ಮೋವಾಚ ॥

ಉಪದಿಶ್ಯೇತಿ ಶುಕ್ರಸ್ತಂ ದಧೀಚಿಂ ಮುನಿಸತ್ತಮಂ ।
ಸ್ವಸ್ಥಾನಮಗಮತ್ತಾತ ಸಂಸ್ಮರನ್ ಶಂಕರಂ ಪ್ರಭುಂ　　　॥ ೩೪ ॥

---

೩೨. ಅಂಗನ್ಯಾಸ ಕರನ್ಯಾಸಗಳನ್ನು ಮಾಡಿ ಭಕ್ತವತ್ಸಲನಾದ ಶಿವನನ್ನು ವಿಧಿವತ್ತಾಗಿ ಸಾವಧಾನತೆಯಿಂದ ಅರ್ಚಿಸಬೇಕು.

೩೩. ಆ ಶಿವನ ಧ್ಯಾನಸ್ವರೂಪವನ್ನು ಹೇಳುವೆನು. ಹಾಗೆ ಧ್ಯಾನಮಾಡಿ ಆಮೇಲೆ ಶಿವಪ್ರಸಾದದಿಂದ ಸಿದ್ಧಿಯಾಗುವವರೆಗೆ ಮಂತ್ರವನ್ನು ಜಪಿಸಬೇಕು.

೩೪. ಆ ಮೃತ್ಯುಂಜಯನು ಎರಡು ಕೈಗಳಲ್ಲಿ ನೀರಿನಿಂದ ತುಂಬಿದ ಕಲಶಗಳೆರಡನ್ನು ಹಿಡಿದಿರುವನು. ಆ ಕಲಶಗಳಲ್ಲಿನ ಶೀತಲಜಲವನ್ನು ಕೈನಿಂದ ತೆಗೆದುಕೊಂಡು ಶಿರಸ್ಸಿನಲ್ಲಿ ಪ್ರೋಕ್ಷಿಸುತ್ತಲಿರುವನು. ಕಮಲದಲ್ಲಿ ಕುಳಿತಿರುವನು. ಬಲಗೆನಲ್ಲಿ ಜಪಸರವನ್ನು ಧರಿಸಿರುವನು. ಎಡಗೈನಲ್ಲಿ ಜಿಂಕೆಯನ್ನು ಹಿಡಿದಿರುವನು. ಶಿರಸ್ಸಿನಲ್ಲಿ ಚಂದ್ರನು ರಾರಾಜಿಸುತ್ತಲಿರುವನು, ಆ ಚಂದ್ರನಿಂದ ಅಮೃತವು ಸುರಿಯುತ್ತಲಿದ್ದು ಶಿವನ ಶರೀರದ ಮೇಲೆ ಬೀಳುತ್ತಲಿರುವದು. ಪಾರ್ವತಿಯೊಡನೆ ಮಂಡಿಸಿರುವನು, ಮೂರು ಕಣ್ಣುಗಳುಳ್ಳವನು. ಇಂತಹ ಮೃತ್ಯುಂಜಯನನ್ನು ಭಜಿಸುವೆನು ಹೀಗೆಂದು ಧ್ಯಾನಮಾಡಬೇಕು.

೩೫. ಬ್ರಹ್ಮನು ಹೇಳಿದನು :—ಎಲೈ ನಾರದ, ಹೀಗೆ ದಧೀಚಿಮುನಿಗೆ ಉಪದೇಶಿಸಿ ಶುಕ್ರಾಚಾರ್ಯನು ಶಂಕರನನ್ನು ಸ್ಮರಿಸುತ್ತಾ ತನ್ನ ಸ್ಥಾನಕ್ಕೆ ತೆರಳಿದನು.

ತಸ್ಯ ತದ್ವಚನಂ ಶ್ರುತ್ವಾ ದಧೀಚೋ ಹಿ ಮಹಾಮುನಿಃ ।
ವನಂ ಜಗಾಮ ತಪಸೇ ಮಹಾಪ್ರೀತ್ಯಾ ಶಿವಂ ಸ್ಮರ್ ॥ ೩೬ ॥

ತತ್ರ ಗತ್ವಾ ವಿಧಾನೇನ ಮಹಾಮೃತ್ಯುಂಜಯಾಭಿಧಂ ।
ತಂ ಮನುಂ ಪ್ರಜಪರ್ ಪ್ರೀತ್ಯಾ ತಪಸ್ತೇಪೇ ಶಿವಂ ಸ್ಮರ್ ॥ ೩೭ ॥

ತಂ ಮನುಂ ಸುಚಿರಂ ಜಪ್ತ್ವಾ ತಪಸಾಽಽರಾಧ್ಯ ಶಂಕರಂ ।
ಶಿವಂ ಸಂತೋಷಯಾಮಾಸ ಮಹಾಮೃತ್ಯುಂಜಯಂ ಹಿ ಸಃ ॥ ೩೮ ॥

ಅಥ ಶಂಭುಃ ಪ್ರಸನ್ನಾತ್ಮಾ ತಜ್ಜಪಾದ್ಭಕ್ತವತ್ಸಲಃ ।
ಆವಿರ್ಬಭೂವ ಪುರತಸ್ತಸ್ಯ ಪ್ರೀತ್ಯಾ ಮಹಾಮುನೇ ॥ ೩೯ ॥

ತಂ ದೃಷ್ಟ್ವಾ ಸ್ವಪ್ರಭುಂ ಶಂಭುಂ ಸ ಮುಮೋದ ಮುನೀಶ್ವರಃ ।
ಪ್ರಣಮ್ಯ ವಿಧಿವದ್ಭಕ್ತ್ಯಾ ತುಷ್ಟಾವ ಸುಕೃತಾಂಜಲಿಃ ॥ ೪೦ ॥

೩೬-೩೭. ಶುಕ್ರಾಚಾರ್ಯನಿಂದ ಉಪದೇಶವನ್ನು ಹೊಂದಿ ದಧೀಚಿಮಹಾಮುನಿಯು ಶಿವನನ್ನು ಸ್ಮರಿಸುತ್ತಾ ತಪಸ್ಸಿಗಾಗಿ ಕಾಡಿಗೆ ಹೋಗಿ ಮಹಾಮೃತ್ಯುಂಜಯ ಮಂತ್ರವನ್ನು ವಿಧಿವತ್ತಾಗಿ ಜಪಿಸುತ್ತಾ ಭಕ್ತಿಯಿಂದ ಶಿವನನ್ನು ಕುರಿತು ತಪಸ್ಸು ಮಾಡಿದನು

೩೮. ಆ ಮಂತ್ರವನ್ನು ಬಹುಕಾಲ ಜಪಿಸಿ ತಪಸ್ಸಿನಿಂದ ಶಿವನನ್ನು ಆರಾಧಿಸಿ ಮಹಾಮೃತ್ಯುಂಜಯ (ಶಿವ) ನನ್ನು ಸಂತೋಷಗೊಳಿಸಿದನು.

೩೯. ಹೀಗೆ ಭಕ್ತಿಯಿಂದ ದಧೀಚಿಮುನಿಯು ಮಹಾಮೃತ್ಯುಂಜಯ ಮಂತ್ರವನ್ನು ಜಪಿಸಲು ಭಕ್ತವತ್ಸಲನಾದ ಶಂಕರನು ಪ್ರಸನ್ನನಾಗಿ ದಧೀಚಿಮುನಿಯ ಎದುರಿನಲ್ಲಿ ಪ್ರತ್ಯಕ್ಷನಾಗಿ ಬಂದು ನಿಂತನು.

೪೦. ಹೀಗೆ ತನ್ನೆದುರಿನಲ್ಲಿ ಪ್ರತ್ಯಕ್ಷನಾದ ಪರಮೇಶ್ವರನನ್ನು ನೋಡಿ ದಧೀಚಿಮುನಿಯು ಆ ಶಿವನನ್ನು ವಿಧಿವತ್ತಾಗಿ ನಮಸ್ಕರಿಸಿ ಕೈಗಳನ್ನು ಜೋಡಿಸಿ ಭಕ್ತಿಯಿಂದ ಸ್ತುತಿಸಿದನು.

ಅಥ ಪ್ರೀತ್ಯಾ ಶಿವಸ್ತಾತ ಪ್ರಸನ್ನಶ್ಚ್ಯಾವನಿಂ ಮುನೇ ।
ವರಂ ಬ್ರೂಹೀತಿ ಸ ಪ್ರಾಹ ಸುಪ್ರಸನ್ನೇನ ಚೇತಸಾ ॥ ೪೧ ॥

ತಚ್ಛ್ರುತ್ವಾ ಶಂಭುವಚನಂ ದಧೀಚೋ ಭಕ್ತಸತ್ತಮಃ ।
ಸಾಂಜಲಿರ್ನತಕಃ ಪ್ರಾಹ ಶಂಕರಂ ಭಕ್ತವತ್ಸಲಂ ॥ ೪೨ ॥

॥ ದಧೀಚ ಉವಾಚ ॥

ದೇವದೇವ ಮಹಾದೇವ ಮಹ್ಯಂ ದೇಹಿ ವರತ್ರಯಂ ।
ವಜ್ರಾಸ್ಥಿತ್ವಮವಧ್ಯತ್ವಮದೀನತ್ವಂ ಚ ಸರ್ವತಃ ॥ ೪೩ ॥

॥ ಬ್ರಹ್ಮೋವಾಚ ॥

ತದುಕ್ತವಚನಂ ಶ್ರುತ್ವಾ ಪ್ರಸನ್ನಃ ಪರಮೇಶ್ವರಃ ।
ವರತ್ರಯಂ ದದೌ ತಸ್ಮೈ ದಧೀಚಾಯ ತಥಾಸ್ತ್ವಿತಿ ॥ ೪೪ ॥

ವರತ್ರಯಂ ಶಿವಾತ್ಪ್ರಾಪ್ಯ ಸಾನಂದಶ್ಚ ಮಹಾಮುನಿಃ ।
ಕ್ಷುವಸ್ಥಾನಂ ಜಗಾಮಾಽಽಶು ವೇದಮಾರ್ಗೇ ಪ್ರತಿಷ್ಠಿತಃ ॥ ೪೫ ॥

---

೪೧. ಬಳಿಕ ಶಿವನು ಪ್ರಸನ್ನನಾಗಿ ದಧೀಚಿಮುನಿಯನ್ನು ಕುರಿತು ಎಲೈ ಮುನಿ, ಬೇಕಾದ ವರಗಳನ್ನು ಕೇಳಿಕೋ ಎಂದು ಹೇಳಲು,

೪೨. ಶಿವನ ಮಾತನ್ನು ಕೇಳಿ ಶಿವಭಕ್ತೋತ್ತಮನಾದ ದಧೀಚಿಮುನಿಯು ಭಕ್ತವತ್ಸಲನಾದ ಶಿವನನ್ನು ಭಕ್ತಿಯಿಂದ ನಮಸ್ಕರಿಸಿ ವಿನಯದಿಂದ ಹೀಗೆ ಹೇಳಿದನು.

೪೩. ದಧೀಚಿಮುನಿಯು ಹೇಳಿದನು :—ದೇವದೇವನಾದ ಓ ಮಹಾದೇವನೆ, ನನ್ನ ಮೂಳೆಯು ವಜ್ರದಂತೆ ಬಲವಾದುದಾಗಬೇಕು, ನಾನು ಅವಧ್ಯನಾಗಬೇಕು. ಎಂದರೆ ನನ್ನನ್ನು ಯಾರೂ ಕೊಲ್ಲಬಾರದು. ನನಗೆ ಯಾವ ರೀತಿಯಿಂದಲೂ ದೀನತೆಯುಂಟಾಗಬಾರದು. ಈ ಮೂರು ವರಗಳನ್ನು ಕೊಡು ಎಂದು ಪ್ರಾರ್ಥಿಸಿದನು

೪೪-೪೫. ದಧೀಚಿಮುನಿಯ ಮಾತುಗಳನ್ನು ಕೇಳಿ ಪರಮೇಶ್ವರನು ಹಾಗೆಯೇ ಆಗಲೆಂದು ಆ ಮುನಿಗೆ ಮೂರು ವರಗಳನ್ನು ಕರುಣಿಸಿದನು. ಶಿವನಿಂದ ವರಗಳನ್ನು ಪಡೆದ ದಧೀಚಿಮುನಿಯು ಆನಂದಗೊಂಡು ಕ್ಷುವರಾಜನ ಬಳಿಗೆ ಜಾಗ್ರತೆ ತೆರಳಿದನು.

॥ ಬ್ರಹ್ಮೋವಾಚ ॥

ಪ್ರಾಪ್ಯಾವಧ್ಯತ್ವಮುಗ್ರಾತ್ಸ ವಜ್ರಾಸ್ಥಿತ್ವಮದೀನತಾಂ ।
ಅತಾಡಯಚ್ಚ ರಾಜೇಂದ್ರಂ ಪಾದಮೂಲೇನ ಮೂರ್ಧನಿ ॥ ೪೬ ॥

ಕ್ಷುವೋ ದಧೀಚಂ ವಜ್ರೇಣ ಜಘಾನೋರಸ್ಯಥೋ ನೃಪಃ ।
ಕ್ರೋಧಂ ಕೃತ್ವಾ ವಿಶೇಷೇಣ ವಿಷ್ಣುಗೌರವಗರ್ವಿತಃ ॥ ೪೭ ॥

ನಾಭೂನ್ನಾಶಾಯ ತದ್ವಜ್ರಂ ದಧೀಚಸ್ಯ ಮಹಾತ್ಮನಃ ।
ಪ್ರಭಾವಾತ್ಪರಮೇಶಸ್ಯ ಧಾತೃಪುತ್ರೋ ವಿಸಿಸ್ಮಿಯೇ ॥ ೪೮ ॥

ದೃಷ್ಟ್ವಾಸ್ಯವಧ್ಯತ್ವಮದೀನತಾಂ ಚ
ವಜ್ರಸ್ಯ ಚಾತ್ಯಂತಪರಪ್ರಭಾವಂ ।
ಕ್ಷುವೋ ದಧೀಚಸ್ಯ ಮುನೀಶ್ವರಸ್ಯ
ವಿಸಿಸ್ಮಿಯೇ ಚೇತಸಿ ಧಾತೃಪುತ್ರಃ ॥ ೪೯ ॥

ಆರಾಧಯಾಮಾಸ ಹರಿಂ ಮುಕುಂದ-
ಮಿಂದ್ರಾನುಜಂ ಕಾನನಮಾಶು ಗತ್ವಾ ।

---

೪೬-೪೭. ಬ್ರಹ್ಮನು ಹೇಳಿದನು ;—ಎಲೈ ನಾರದ, ಅವಧ್ಯತ್ವ, ವಜ್ರಾಸ್ಥಿತ್ವ ಮತ್ತು ಅದೀನತೆ ಈ ಮೂರು ವರಗಳನ್ನು ಶಿವನಿಂದ ಪಡೆದ ದಧೀಚಿಮುನಿಯು ಕ್ಷುವರಾಜನ ಬಳಿಗೆ ಬಂದು ಕಾಲಿನಿಂದ ಆ ರಾಜನ ಶಿರಸ್ಸನ್ನು ಒದ್ದನು. ಆ ಕ್ಷುವರಾಜನು ಅದರಿಂದ ಕೋಪಗೊಂಡು ತಾನು ವಿಷ್ಣುಭಕ್ತನೆಂಬ ಗರ್ವದಿಂದ ದಧೀಚಿಮುನಿಯ ಎದೆಯಲ್ಲಿ ವಜ್ರದಿಂದ ಬಲವಾಗಿ ಪ್ರಹರಿಸಿದನು

೪೮. ಆದರೆ ಆ ವಜ್ರದಿಂದ ದಧೀಚಿಮುನಿಗೆ ಯಾವ ತೊಂದರೆಯೂ ಆಗ ಲಿಲ್ಲ. ಪರಮೇಶ್ವರನ ಮಹಿಮೆಯೇ ಅಂತಹದು. ಅದನ್ನು ನೋಡಿ ಕ್ಷುವರಾಜನು ತುಂಬಾ ಆಶ್ಚರ್ಯಗೊಂಡನು.

೪೯. ವಜ್ರಕ್ಕೂ ವಧ್ಯನಲ್ಲದ ದಧೀಚಿಮುನಿಯ ಮಹಿಮೆಯನ್ನೂ ಅದೀನತೆಯನ್ನೂ (ನಿರ್ಭಯ) ನೋಡಿ ಕ್ಷುವರಾಜನು ಮನಸ್ಸಿನಲ್ಲಿ ತುಂಬಾ ಆಶ್ಚರ್ಯ ಗೊಂಡನು.

೫೦. ಶಿವಭಕ್ತನಾದ ದಧೀಚಿಮುನಿಯಿಂದ ಪರಾಜಿತನಾದ ಮೇಲೆ ಆ

ಪ್ರಸನ್ನಭಾಲಶ್ಚ ಪರಾಜಿತೋ ಹಿ
ದಧೀಚಮೃತ್ಯುಂಜಯಸೇವಕೇನ ॥ ೩೦ ॥

ಪೂಜಯಾ ತಸ್ಯ ಸಂತುಷ್ಟೋ ಭಗವಾನ್ ಮಧುಸೂದನಃ ।
ಪ್ರದದೌ ದರ್ಶನಂ ತಸ್ಮೈ ದಿವ್ಯಂ ವೈ ಗರುಡಧ್ವಜಃ ॥ ೩೧ ॥

ದಿವ್ಯೇನ ದರ್ಶನೇನೈವ ದೃಷ್ಟ್ವಾ ದೇವಂ ಜನಾರ್ದನಂ ।
ತುಷ್ಟಾವ ವಾಗ್ಭಿರಿಷ್ಟಾಭಿಃ ಪ್ರಣಮ್ಯ ಗರುಡಧ್ವಜಂ ॥ ೩೨ ॥

ಸಂಪೂಜ್ಯ ಚೈವಂ ತ್ರಿದಶೇಶ್ವರಾದ್ಯೈಃ
ಸ್ತುತ್ವಾ ಸ್ತುತಂ ದೇವಮಜೇಯಮೀಶಂ ।
ವಿಜ್ಞಾಪಯಾಮಾಸ ನಿರೀಕ್ಷ್ಯ ಭಕ್ತ್ಯಾ
ಜನಾರ್ದನಾಯ ಪ್ರಣಿಪತ್ಯ ಮೂರ್ಧ್ನಾ ॥ ೩೩ ॥

॥ ರಾಜೋವಾಚ ॥

ಭಗವಾನ್ ಬ್ರಾಹ್ಮಣಃ ಕಶ್ಚಿದ್ದಧೀಚ ಇತಿ ವಿಶ್ರುತಃ ।
ಧರ್ಮವೇತ್ತಾ ವಿನೀತಾತ್ಮಾ ಸಖಾ ಮಮ ಪುರಾಭವತ್ ॥ ೩೪ ॥

---

ಕ್ಷುವರಾಜನು ಅರಣ್ಯಕ್ಕೆ ತೆರಳಿ ಅಲ್ಲಿ ಭಕ್ತವತ್ಸಲನಾದ ಹರಿಯನ್ನು ಭಕ್ತಿಯಿಂದ ಆರಾಧಿಸಿದನು.

೩೧. ಆಗ ಕ್ಷುವರಾಜನ ಪೂಜೆಯಿಂದ ಪ್ರಸನ್ನನಾಗಿ ಭಗವಂತನಾದ ಮಧುಸೂದನನು ಆ ರಾಜನಿಗೆ ದಿವ್ಯದೃಷ್ಟಿಯನ್ನು ಕೊಡಲು,

೩೨. ಆ ದಿವ್ಯದೃಷ್ಟಿಯಿಂದ ದೇವನಾದ ಜನಾರ್ದನನನ್ನು ಪ್ರತ್ಯಕ್ಷವಾಗಿ ನೋಡಿ ಕ್ಷುವರಾಜನು ಹರ್ಷಗೊಂಡು ಪ್ರಿಯವಾಕ್ಯಗಳಿಂದ ಆ ಹರಿಯನ್ನು ಸ್ತುತಿಸಿದನು.

೩೩. ಹೀಗೆ ದೇವತೆಗಳಿಂದಲೂ ಸ್ತುತಿಸಲ್ಪಡುವ ದೇವದೇವನಾದ ನಾರಾಯಣನನ್ನು ವಿಧಿವತ್ತಾಗಿ ಪೂಜಿಸಿ, ಭಕ್ತಿಯಿಂದ ಸ್ತುತಿಸಿ, ಶಿರಸ್ಸಿನಿಂದ ನಮಸ್ಕರಿಸಿ ಹೀಗೆ ವಿಜ್ಞಾಪಿಸಿಕೊಂಡನು.

೩೪. ರಾಜನು ಹೇಳಿದನು :—ಓ ಭಗವಂತನಾದ ಹರಿಯೇ, ದಧೀಚನೆಂಬ ಓರ್ವಬ್ರಾಹ್ಮಣನು ಇರುವನು. ಅವನು ಧರ್ಮವನ್ನು ಬಲ್ಲವನೂ ವಿನೀತನೂ ಆಗಿದ್ದು ಹಿಂದೆ ನನ್ನ ಪ್ರಿಯಮಿತ್ರನಾಗಿದ್ದನು.

ಅವಧ್ಯಸ್ಸರ್ವದಾ ಸರ್ವೈಃ ಶಂಕರಸ್ಯ ಪ್ರಭಾವತಃ ।
ತಮಾರಾಧ್ಯ ಮಹಾದೇವಂ ಮೃತ್ಯುಂಜಯಮನಾಮಯಂ ॥ ೫೫ ॥

ಸಾವಜ್ಞಂ ವಾಮಪಾದೇನ ಮಮ ಮೂರ್ಧ್ನಿ ಸದಸ್ಯಪಿ ।
ತಾಡಯಾಮಾಸ ವೇಗೇನ ಸ ದಧೀಚೋ ಮಹಾತಪಾಃ ॥ ೫೬ ॥

ಉವಾಚ ಮಾಂ ಚ ಗರ್ವೇಣ ನ ಬಿಭೇಮೀತಿ ಸರ್ವತಃ ।
ಮೃತ್ಯುಂಜಯಾಪ್ತಸುವರೋ ಗರ್ವಿತೋ ಹ್ಯತುಲಂ ಹರೇ ॥ ೫೭ ॥

॥ ಬ್ರಹ್ಮೋವಾಚ ॥

ಅಥ ಜ್ಞಾತ್ವಾ ದಧೀಚಸ್ಯ ಹ್ಯವಧ್ಯತ್ವಂ ಮಹಾತ್ಮನಃ ।
ಸಸ್ಮಾರಾಸ್ಯ ಮಹೇಶಸ್ಯ ಪ್ರಭಾವಮತುಲಂ ಹರಿಃ ॥ ೫೮ ॥

ಏವಂ ಸ್ಮೃತ್ವಾ ಹರಿಃ ಪ್ರಾಹ ಕ್ಷುವಂ ವಿಧಿಸುತಂ ದ್ರುತಂ ।
ವಿಪ್ರಾಣಾಂ ನಾಸ್ತಿ ರಾಜೇಂದ್ರ ಭಯಮಣ್ವಪಿ ಕುತ್ರಚಿತ್ ॥ ೫೯ ॥

ವಿಶೇಷಾದ್ರುದ್ರಭಕ್ತಾನಾಂ ಭಯಂ ನಾಸ್ತಿ ಚ ಭೂಪತೇ ।
ದುಃಖಂ ಕರೋತಿ ವಿಪ್ರಸ್ಯ ಶಾಪಾರ್ಥಂ ಸಸುರಸ್ಯ ಮೇ ॥ ೬೦ ॥

---

೫೫-೫೬. ಆ ಮುನಿಯು ಮೃತ್ಯುಂಜಯನಾದ ಮಹಾದೇವನನ್ನು ಭಕ್ತಿಯಿಂದ ಆರಾಧಿಸಿ ಎಲ್ಲರಿಗೂ ಅವಧ್ಯನಾಗಿರುವನು. ಯಾರೂ ಅವನನ್ನು ಕೊಲ್ಲಲಾಗದಂತಹ ವರವನ್ನು ಪಡೆದಿರುವನು. ಇಂತಹ ಆ ಮುನಿಯು ನನ್ನನ್ನು ಎಲ್ಲರೆದುರಿನಲ್ಲಿ ಕಾಲಿನಿಂದ ನನ್ನ ತಲೆಯ ಮೇಲೆ ಒದ್ದನು.

೫೭. ಓ ಹರಿ, ಮೃತ್ಯುಂಜಯನ ವರದಿಂದ ಕೊಬ್ಬಿದ ಆ ಮುನಿಯು ನನಗೆ ಯಾವನಿಂದಲೂ ಭಯವಿಲ್ಲ ಎಂದು ಗರ್ವದಿಂದ ನುಡಿಯುತ್ತಿರುವನು ಎಂದನು.

೫೮-೬೦. ಬ್ರಹ್ಮನು ಹೇಳಿದನು:—ಎಲೈ ನಾರದ, ಮಹಾತ್ಮನಾದ ದಧೀಚಿ ಮುನಿಯು ಶಿವನ ವರದಿಂದ ಅವಧ್ಯನಾದುದನ್ನು ಕೇಳಿ ಹರಿಯು ಶಿವನ ಮಹಾಮಹಿಮೆಯನ್ನು ಸ್ಮರಿಸಿ ಕ್ಷುವರಾಜನನ್ನು ಕುರಿತು ಹೀಗೆ ಹೇಳಿದನು—ಎಲೈ ಕ್ಷುವರಾಜೇಂದ್ರನೇ, ಬ್ರಾಹ್ಮಣರಿಗೆ ಎಲ್ಲಿಯೂ ಭಯವಿಲ್ಲ. ಅದರಲ್ಲಿಯೂ ರುದ್ರಭಕ್ತರಾದ ಬ್ರಾಹ್ಮಣರಿಗೆ ಭಯವಿಲ್ಲವೇ ಇಲ್ಲ. ಈಗ ನಾನು ದಧೀಚಿಮುನಿಗೆ ವಿರುದ್ಧವಾಗಿ ನಿನಗೆ ಸಹಾಯವನ್ನು ಮಾಡಿದರೆ ಆ ಮುನಿಯು ನನಗೂ ನನ್ನನ್ನಾಶ್ರಯಿಸಿರುವ ದೇವತೆಗಳಿಗೂ ಶಾಪವನ್ನು ಕೊಡುವನು.

ಭವಿತಾ ತಸ್ಯ ಶಾಪೇನ ದಕ್ಷಯಜ್ಞೇ ಸುರೇಶ್ವರಾತ್ ।
ವಿನಾಶೋ ಮಮ ರಾಜೇಂದ್ರ ಪುನರುತ್ಥಾನಮೇವ ಚ ॥ ೬೧ ॥

ತಸ್ಮಾತ್ಸಮೇತ್ಯ ರಾಜೇಂದ್ರ ಸರ್ವಯಜ್ಞೋ ನ ಭೂಯತೇ ।
ಕರೋಮಿ ಯತ್ನಂ ರಾಜೇಂದ್ರ ದಧೀಚವಿಜಯಾಯ ತೇ ॥ ೬೨ ॥

ಶ್ರುತ್ವಾ ವಾಕ್ಯಂ ಕ್ಷುವಃ ಪ್ರಾಹ ತಥಾಸ್ತ್ವಿತಿ ಹರೇರ್ನೃಪಃ ।
ತಸ್ಥೌ ತತ್ರೈವ ತತ್ಪ್ರೀತ್ಯಾ ತತ್ಕಾಮೋತ್ಸುಕಮಾನಸಃ ॥ ೬೩ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಸತೀಖಂಡೇ
ಅಷ್ಟತ್ರಿಂಶೋಽಧ್ಯಾಯಃ

---

೬೧. ಆ ಮುನಿಯ ಶಾಪದಿಂದ ಮುಂದೆ ನನಗೆ ದಕ್ಷಯಜ್ಞದಲ್ಲಿ ಪರಮೇಶ್ವರನಿಂದ ಕೆಡಕುಂಟಾಗುವುದು. ಮತ್ತು ಅವನ ಅನುಗ್ರಹದಿಂದ ತಿರುಗಿ ಆ ಕೇಡು ನಿವೃತ್ತಿಯನ್ನು ಹೊಂದುವುದು.

೬೨. ಆಗ ನಾವೆಲ್ಲ ದೇವತೆಗಳೂ ಸೇರಿ ಪ್ರಯತ್ನಪಟ್ಟರೂ ದಕ್ಷಯಜ್ಞವನ್ನು ರಕ್ಷಿಸಲಾಗುವುದಿಲ್ಲ. ಆದರೂ ಓ ರಾಜೇಂದ್ರ, ನೀನು ದಧೀಚಿಮುನಿಯನ್ನು ಜಯಿಸುವಂತೆ ಯತ್ನವನ್ನು ಮಾಡುವೆನು.

೬೩. ಹರಿಯು ಹೀಗೆ ಹೇಳಲು ಆ ಮಾತನ್ನು ಕೇಳಿ ಕ್ಷುವರಾಜನು ಹಾಗೆಯೇ ಆಗಲಿ ಎಂದು ಹೇಳಿದನು. ಹರಿಯೂ ಸಹ ಕ್ಷುವನ ಸಹಾಯಕ್ಕಾಗಿ ಅಲ್ಲಿಯೇ ನಿಂತನು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಮೂವತ್ತೆಂಟನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಏಕೋನಚತ್ವಾರಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಕ್ಷುವಸ್ಯ ಹಿತಕೃತ್ಯೇನ ದಧೀಚಸ್ಯಾಶ್ರಮಂ ಯಯೌ ।
ವಿಪ್ರರೂಪಮಥಾಸ್ಥಾಯ ಭಗವಾನ್ ಭಕ್ತವತ್ಸಲಃ ॥ ೧ ॥

ದಧೀಚಿಂ ಪ್ರಾಹ ವಿಪ್ರರ್ಷಿಮಭಿವಂದ್ಯ ಜಗದ್ಗುರುಃ ।
ಕ್ಷುವಕಾರ್ಯಾರ್ಥಮುದ್ಯುಕ್ತಶ್ಶೈವೇಂದ್ರಂ ಛಲಮಾಶ್ರಿತಃ ॥ ೨ ॥

॥ ವಿಷ್ಣುರುವಾಚ ॥

ಭೋ ಭೋ ದಧೀಚ ವಿಪ್ರರ್ಷೇ ಭವಾರ್ಚನರತಾವ್ಯಯ ।
ವರಮೇಕಂ ವೃಣೇ ತ್ವತ್ತಸ್ತದ್ಭವಾನ್ ದಾತುಮರ್ಹತಿ ॥ ೩ ॥

---

### ಮೂವತ್ತೊಂಭತ್ತನೆಯ ಅಧ್ಯಾಯವು.

೧-೨. ಬ್ರಹ್ಮನು ಹೇಳಿದನು :—ಎಲೈ ನಾರದ, ಕ್ಷುವರಾಜನಿಗೆ ಸಹಾಯ ಮಾಡಲು ಭಕ್ತವತ್ಸಲನೂ ಜಗದ್ಗುರುವೂ ಆದ ಹರಿಯು ಬ್ರಾಹ್ಮಣರೂಪವನ್ನು ಧರಿಸಿ ಕ್ಷುವರಾಜನ ಕಾರ್ಯಕ್ಕಾಗಿ ಕಪಟವನ್ನಾಶ್ರಯಿಸಿ, ದಧೀಚಿಮುನಿಯ ಬಳಿಗೆ ಹೋಗಿ ಅವನನ್ನು ನಮಸ್ಕರಿಸಿ ಹೀಗೆ ಹೇಳಿದನು.

೩. ವಿಷ್ಣುವು ಹೇಳಿದನು :—ಬ್ರಹ್ಮರ್ಷಿಯಾದ ಎಲೈ ದಧೀಚಿಮುನಿ, ನೀನು ಸದಾಶಿವನನ್ನು ಆರಾಧಿಸುವವನು. ನಾನು ನಿನ್ನಿಂದ ವರವೊಂದನ್ನು ಯಾಚಿಸಬೇಕೆಂದಿರುವೆನು, ಅದನ್ನು ನೀನು ದಯವಿಟ್ಟು ಕೊಡಬೇಕು ಎಂದನು.

॥ ಬ್ರಹ್ಮೋವಾಚ ॥

ಯಾಚಿತೋ ದೇವದೇವೇನ ದಧೀಚಃ ಶೈವಸತ್ತಮಃ ।
ಕ್ಷುವಕಾರ್ಯಾರ್ಥಿನಾ ಶೀಘ್ರಂ ಜಗಾದ ವಚನಂ ಹರಿಂ ॥ ೪ ॥

॥ ದಧೀಚ ಉವಾಚ ॥

ಜ್ಞಾತಂ ತವೇಪ್ಸಿತಂ ವಿಪ್ರ ಕ್ಷುವಕಾರ್ಯಾರ್ಥಮಾಗತಃ ।
ಭಗವಾನ್ ವಿಪ್ರರೂಪೇಣ ಮಾಯಯಾ ತ್ವಮಸಿ ನೈ ಹರಿಃ ॥ ೫ ॥

ಭೂತಂ ಭವಿಷ್ಯಂ ದೇವೇಶ ವರ್ತಮಾನಂ ಜನಾರ್ದನ ।
ಜ್ಞಾನಂ ಪ್ರಸಾದಾದ್ರುದ್ರಸ್ಯ ಸದಾ ತ್ರೈಕಾಲಿಕಂ ಮಮ ॥ ೬ ॥

ತ್ವಾಂ ಜಾನೇಽಹಂ ಹರಿಂ ವಿಷ್ಣುಂ ದ್ವಿಜತ್ವಂ ತ್ಯಜ ಸುವ್ರತ ।
ಆರಾಧಿತೋಽಸಿ ಭೂಪೇನ ಕ್ಷುವೇಣ ಖಲಬುದ್ಧಿನಾ ॥ ೭ ॥

---

೪. ಬ್ರಹ್ಮನು ಹೇಳಿದನು.—ಎಲೈ ನಾರದ, ಹೀಗೆ ಕ್ಷುವರಾಜನ ಸಹಾಯಕ್ಕಾಗಿ ದೇವದೇವನಾದ ಹರಿಯು ದಧೀಚಿಮುನಿಯನ್ನು ಕೇಳಲು ಕೂಡಲೇ.

೫ ದಧೀಚಿಮುನಿಯು ಹೇಳಿದನು ;--ಎಲೈ ಬ್ರಾಹ್ಮಣ, ನಿನ್ನ ಅಭಿಪ್ರಾಯವು ತಿಳಿಯಿತು. ನೀನು ನಿಜವಾದ ಬ್ರಾಹ್ಮಣನಲ್ಲ. ಕ್ಷುವರಾಜನ ಕಾರ್ಯಕ್ಕಾಗಿ ಮಾಯಾಮಯವಾದ ಬ್ರಾಹ್ಮಣರೂಪವನ್ನು ಧರಿಸಿ ಬಂದಿರುವ ನಾರಾಯಣನೇ ನೀನು.

೬. ಎಲೈ ಜನಾರ್ದನನೆ, ಪರಮೇಶ್ವರನ ಅನುಗ್ರಹದಿಂದ ನನಗೆ ಭೂತ ಭವಿಷ್ಯದ್ವರ್ತಮಾನಗಳೆಂಬ ಮೂರುಕಾಲಗಳಲ್ಲಿನ ಜ್ಞಾನವೂ ಇರುವುದು.

೭. ಆದಕಾರಣ ನೀನು ಹರಿಯೆಂಬುವನ್ನು ನಾನು ತಿಳಿದಿರುವೆನು. ಎಲೈ ಹರಿ, ನಿನ್ನ ಈ ಕಪಟಬ್ರಾಹ್ಮಣರೂಪವನ್ನು ತ್ಯಜಿಸು. ದುಷ್ಟಬುದ್ಧಿಯಾದ ಕ್ಷುವರಾಜನು ನಿನ್ನನ್ನು ಆರಾಧಿಸಿರುವನು. ಅವನ ಸಹಾಯಕ್ಕಾಗಿ ಈಗ ನೀನು ನನ್ನ ಬಳಿಗೆ ಬ್ರಾಹ್ಮಣರೂಪದಿಂದ ಬಂದಿರುವೆ.

ಜಾನೇ ತನ್ವೈವ ಭಗವರ್ನ್ ಭಕ್ತವತ್ಸಲತಾಂ ಹರೇ ।
ಛಲಂ ತ್ಯಜ ಸ್ವರೂಪಂ ಹಿ ಸ್ವೀಕುರು ಸ್ಮರ ಶಂಕರಂ ॥ ೮ ॥

ಅಸ್ತಿ ಚೇತ್ಕಸ್ಯಚಿದ್ಭೀತಿರ್ಭವಾರ್ಚನರತಸ್ಯ ಮೇ ।
ವಕ್ತುಮರ್ಹಸಿ ಯತ್ನೇನ ಸತ್ಯಧಾರಣಪೂರ್ವಕಂ ॥ ೯ ॥

ವದಾಮಿ ನ ಮೃಷಾ ಕ್ವಾಪಿ ಶಿವಸ್ಮರಣಸಕ್ತಧೀಃ ।
ನ ಬಿಭೇಮಿ ಜಗತ್ಯಸ್ಮಿರ್ನ್ ದೇವದೈತ್ಯಾದಿಕಾದಪಿ ॥ ೧೦ ॥

॥ ವಿಷ್ಣುರುವಾಚ ॥

ಭಯಂ ದಧೀಚ ಸರ್ವತ್ರ ನಷ್ಟಂ ಚ ತವ ಸುವ್ರತ ।
ಭವಾರ್ಚನರತೋ ಯಸ್ಮಾದ್ಭವಾರ್ನ್ ಸರ್ವಜ್ಞ ಏವ ಚ ।೧೧ ॥

ಬಿಭೇಮೀತಿ ಸಕೃದ್ವಕ್ತುಮರ್ಹಸಿ ತ್ವಂ ನಮಸ್ತವ ।
ನಿಯೋಗಾನ್ಮಮ ರಾಜೇಂದ್ರ ಕ್ಷುವಾತ್ಪ್ರತಿಸಹಸ್ಯ ಚ ॥ ೧೨ ॥

---

೮. ಭಗವಂತನಾದ ಓ ಹರಿ, ನೀನು ಭಕ್ತಪರಾಧೀನನೆಂಬುದನ್ನು ನಾನು ಬಲ್ಲೆನು. ಆದರೆ ನಿನ್ನ ಕಪಟರೂಪವನ್ನು ತ್ಯಜಿಸು. ನಿಜರೂಪವನ್ನು ಧರಿಸು. ಶಂಕರನನ್ನು ಸ್ಮರಿಸು.

೯. ಶಿವನನ್ನು ಆರಾಧಿಸುವ ನನಗೆ ಯಾವನ ಭಯವೂ ಇಲ್ಲ. ಹಾಗೆ ಇರುವುದಾದರೆ ಅದನ್ನು ಸತ್ಯವಾಗಿ ತಿಳಿಸು.

೧೦. ಸದಾ ಶಿವನನ್ನೇ ಧ್ಯಾನಿಸುವ ನಾನು ಯಾವಾಗಲೂ ಸುಳ್ಳನ್ನು ಹೇಳುವುದಿಲ್ಲ. ಆ ಶಿವನನುಗ್ರಹದಿಂದ ಈ ಜಗತ್ತಿನಲ್ಲಿ ದೇವತೆಗಳು ರಾಕ್ಷಸರು ಮೊದಲಾದವರಿಂದಲೂ ನನಗೆ ಭಯವಿಲ್ಲ ಎಂದನು.

೧೧-೧೨. ವಿಷ್ಣುವು ಹೇಳಿದನು ;—ಎಲೈ ದಧೀಚಿಮುನಿ, ಶಿವನನ್ನಾರಾಧಿಸುವ ನಿನಗೆ ಯಾರಿಂದಲೂ ಭಯವಿಲ್ಲ. ಮತ್ತು ನೀನು ಸರ್ವಜ್ಞನು. ನಿನ್ನನ್ನು ನಮಸ್ಕರಿಸಿ ನಿನ್ನನ್ನು ಕೇಳಿಕೊಳ್ಳುವೆನು. ನೀನು ಕ್ಷುವರಾಜನಿಗೆ ಹೆದರುತ್ತೇನೆ ಎಂದೊಮ್ಮೆ ನನಗಾಗಿ ಹೇಳುವವನಾಗು ಎಂದನು.

॥ ಬ್ರಹ್ಮೋವಾಚ ॥

ಏವಂ ಶ್ರುತ್ವಾಪಿ ತದ್ವಾಕ್ಯಂ ವಿಷ್ಣೋಸ್ಸ ತು ಮಹಾಮುನಿಃ ।
ವಿಹಸ್ಯ ನಿರ್ಭಯಃ ಪ್ರಾಹ ದಧೀಚಶ್ಶೈವಸತ್ತಮಃ ॥ ೧೩ ॥

॥ ದಧೀಚ ಉವಾಚ ॥

ನ ಬಿಭೇಮಿ ಸದಾ ಕ್ವಾಪಿ ಕುತಶ್ಚಿದಪಿ ಕಿಂಚನ ।
ಪ್ರಭಾವಾದ್ದೇವದೇವಸ್ಯ ಶಂಭೋಸ್ಸಾಕ್ಷಾತ್ಪಿನಾಕಿನಃ ॥ ೧೪ ॥

॥ ಬ್ರಹ್ಮೋವಾಚ ॥

ತತಸ್ತಸ್ಯ ಮುನೇಃ ಶ್ರುತ್ವಾ ವಚನಂ ಕುಪಿತೋ ಹರಿಃ ।
ಚಕ್ರಮುದ್ಯಮ್ಯ ಸಂತಸ್ಥೌ ದಿಧಕ್ಷುರ್ಮುನಿಪುಂಗವಂ ॥ ೧೫ ॥

ಅಭವತ್ಕುಂಠಿತಂ ತತ್ರ ವಿಪ್ರೇ ಚಕ್ರಂ ಸುದಾರುಣಂ ।
ಪ್ರಭಾವಾಚ್ಚ ತದೀಶಸ್ಯ ನೃಪತೇಸ್ಸನ್ನಿಧಾವಪಿ ॥ ೧೬ ॥

ದೃಷ್ಟ್ವಾ ತಂ ಕುಂಠಿತಾಸ್ಯಂ ತಚ್ಚಕ್ರಂ ವಿಷ್ಣುಂ ಜಗಾದ ಹ ।
ದಧೀಚಸ್ಸಸ್ಮಿತಂ ಸಾಕ್ಷಾತ್ಸದಸದ್ವ್ಯಕ್ತಿಕಾರಣಂ ॥ ೧೭ ॥

---

೧೩. ಬ್ರಹ್ಮನು ಹೇಳಿದನು ;—ಎಲೈ ನಾರದ, ಹೀಗೆ ಹರಿಯು ಹೇಳಿದ ಮಾತುಗಳನ್ನು ಕೇಳಿ ಶಿವಭಕ್ತೋತ್ತಮನಾದ ದಧೀಚಿಮುನಿಯು ನಕ್ಕು, ಯಾವ ಭಯವೂ ಇಲ್ಲದೆ ಹೀಗೆ ಹೇಳಿದನು.

೧೪. ದಧೀಚಿಮುನಿಯು ಹೇಳಿದನು :—ಎಲೈ ವಿಷ್ಣುವೆ, ದೇವದೇವನಾದ ಶಂಕರನ ಪ್ರಭಾವದಿಂದ ನಾನು ಎಲ್ಲಿಯೂ ಯಾರಿಗೂ ಹೆದರುವುದಿಲ್ಲ ಎಂದು ನುಡಿದನು.

೧೫-೧೬. ಬ್ರಹ್ಮನು ಹೇಳಿದನು ;—ಬಳಿಕ ಹರಿಯು ದಧೀಚಿಮುನಿಯ ಮಾತನ್ನು ಕೇಳಿ ಕೋಪಗೊಂಡು ಆ ಮುನಿಯನ್ನು ಸಂಹರಿಸಲು ತನ್ನ ಚಕ್ರವನ್ನು ಮೇಲಕ್ಕೆತ್ತಿದನು. ಆದರಾಚಕ್ರವು ಈಶ್ವರನ ಮಹಿಮೆಯಿಂದ ದಧೀಚಿಮುನಿಯನ್ನು ಸಂಹರಿಸಲಶಕ್ತವಾಯಿತು.

೧೭. ವಿಷ್ಣುಚಕ್ರವು ಶಕ್ತಿರಹಿತವಾದುದನ್ನು ನೋಡಿ ದಧೀಚಿಮುನಿಯು ಮಂದಹಾಸದಿಂದ ನಗುತ್ತಾ ಜಗತ್ಕಾರಣನಾದ ನಾರಾಯಣನನ್ನು ಕುರಿತು,

॥ ದಧೀಚ ಉವಾಚ ॥

ಭಗವನ್ ಭವತಾ ಲಬ್ಧಂ ಪುರಾತೀವ ಸುದಾರಣಂ ।
ಸುದರ್ಶನಮಿತಿ ಖ್ಯಾತಂ ಚಕ್ರಂ ವಿಷ್ಣೋಃ ಪ್ರಯತ್ನತಃ ॥ ೧೮ ॥

ಭವಸ್ಯ ತಚ್ಛುಭಂ ಚಕ್ರಂ ನ ಜಿಘಾಂಸತಿ ಮಾಮಿಹ ।
ಭಗವಾನಥ ಕ್ರುದ್ಧೋಽಸ್ಮೈ ಸರ್ವಾಸ್ತ್ರಾಣಿ ಕ್ರಮಾದ್ಧರಿಃ ॥ ೧೯ ॥

ಚಕ್ರುರ್ದೇವಾಸ್ತತಸ್ತಸ್ಯ ವಿಷ್ಣೋಸ್ಸಾಹಾಯ್ಯಮಾದರಾತ್ ।
ದ್ವಿಜೇನೈಕೇನ ಸಂಯೋದ್ಧುಂ ಪ್ರಸ್ತೃತಸ್ಯ ವಿಬುದ್ಧಯಃ ॥ ೨

ಸ ತಸ್ಯ ವಚನಂ ಶ್ರುತ್ವಾ ದೃಷ್ಟ್ವಾ ನಿರ್ವೀರ್ಯಮಾನುಷಂ ।
ಬ್ರಹ್ಮಾಸ್ತ್ರಾದ್ಯೈಃ ಶರೈಶ್ಚಾಸ್ತ್ರೈಃ ಪ್ರಯತ್ನಂ ಕರ್ತುಮುದ್ಯತಃ ॥ ೨೦ ॥

ಚಿಕ್ಷಿಪುಃ ಸ್ವಾನಿ ಸ್ವಾನ್ಯಾಶು ಶಸ್ತ್ರಾಣ್ಯಸ್ತ್ರಾಣಿ ಸರ್ವತಃ ।
ದಧೀಚೋಪರಿ ವೇಗೇನ ಶಕ್ರಾದ್ಯಾ ಹರಿಪಾಕ್ಷಿಕಾಃ ॥ ೨೨ ॥

---

೧೮. ಭಗವಂತನಾದ ಓ ನಾರಾಯಣನೆ, ಮಹಾದಾರುಣವಾದ ಈ ಚಕ್ರವನ್ನು ನೀನು ಶಿವನ ಅನುಗ್ರಹದಿಂದಲೇ ಪಡೆದಿರುವೆ. ಆದಕಾರಣ ಈ ಚಕ್ರವು ಶಿವಭಕ್ತನಾದ ನನ್ನನ್ನು ಹಿಂಸಿಸಲಾರದು ಎನ್ನಲು,

೧೯-೨೦. ಹರಿಯು ಕೋಪಗೊಂಡು ದಧೀಚಿಮುನಿಯ ಮೇಲೆ ಅನೇಕ ಮಹಾಸ್ತ್ರಗಳನ್ನು ಪ್ರಯೋಗಿಸಿದನು. ಆಗ ಒಬ್ಬ ಬ್ರಾಹ್ಮಣನೊಡನೆ ಯುದ್ಧ ಮಾಡಲು ಸಿದ್ಧನಾದ ವಿಷ್ಣುವಿಗೆ ದೇವತೆಗಳು ತಿಳಿವಳಿಕೆಯಿಲ್ಲದೆ ಸಹಾಯ ಮಾಡಿದರು.

೨೧. ದಧೀಚಿಮುನಿಯ ವಾಕ್ಯದಿಂದ ಕುಪಿತನಾದ ಹರಿಯು ಆ ಮುನಿಯ ಮೇಲೆ ಬ್ರಹ್ಮಾಸ್ತ್ರ ಮುಂತಾದ ಮಹಾಸ್ತ್ರಗಳನ್ನೂ ಬಾಣಗಳನ್ನೂ ಪ್ರಯೋಗಿಸಿದನು.

೨೨. ಹರಿಯ ಪಕ್ಷದವರಾದ ಇಂದ್ರನೇ ಮೊದಲಾದವರು ತಮ್ಮ ತಮ್ಮ ಮಹಾಸ್ತ್ರಗಳನ್ನೂ ಮಹಾಯುಧಗಳನ್ನೂ ಪ್ರಯೋಗಿಸಿದರು.

ಕುಶಮುಷ್ಟಿಮಥಾದಾಯ ದಧೀಚಸ್ಸಂಸ್ಮರ್ಶ ಶಿವಂ ।
ಸಸರ್ಜ ಸರ್ವದೇವೇಭ್ಯೋ ವಜ್ರಾಸ್ಥಿಃಸರ್ವತೋ ವಶೀ ॥ ೨೩ ॥

ಶಂಕರಸ್ಯ ಪ್ರಭಾವಾತ್ತು ಕುಶಮುಷ್ಟಿರ್ಮುನೇರ್ಹಿ ಸಾ ।
ದಿವ್ಯಂ ತ್ರಿಶೂಲಮಭವತ್ಕಾಲಾಗ್ನಿಸದೃಶಂ ಮುನೇ ॥ ೨೪ ॥

ದಗ್ಧುಂ ದೇವಾನ್ಮತಿಂ ಚಕ್ರೇ ಸಾಯುಧಾನ್ ಸಶಿಖಂ ಚ ತತ್ ।
ಪ್ರಜ್ವಲತ್ಸರ್ವತಶ್ಚೈವಂ ಯುಗಾಂತಾಗ್ನ್ಯಧಿಕಪ್ರಭಂ ॥ ೨೫ ॥

ನಾರಾಯಣೇಂದ್ರಮುಖ್ಯೈಸ್ತು ದೇವೈಃ ಕ್ಷಿಪ್ತಾನಿ ಯಾನಿ ಚ ।
ಆಯುಧಾನಿ ಸಮಸ್ತಾನಿ ಪ್ರಣೇಮುಸ್ತ್ರಿಶಿಖಂ ಚ ತತ್ ॥ ೨೬ ॥

ದೇವಾಶ್ಚ ದುದ್ರುವುಸ್ಸರ್ವೇ ಧ್ವಸ್ತವೀರ್ಯಾ ದಿವೌಕಸಃ ।
ತಸ್ಥೌ ತತ್ರ ಹರಿರ್ಭೀತಃ ಕೇವಲಂ ಮಾಯಿನಾಂ ವರಃ ॥ ೨೭ ॥

---

೨೩. ಆಗ ವಜ್ರಮಯವಾದ ಅಸ್ಥಿ (ಮೂಳೆ) ಗಳುಳ್ಳ ಅಂದರೆ ವಜ್ರದಂತೆ ಅಭೇದ್ಯವಾದ ದೇಹವುಳ್ಳ ದಧೀಚಿಮುನಿಯು ಒಂದು ಹಿಡಿ ದರ್ಭೆಯನ್ನು ತೆಗೆದುಕೊಂಡು, ಅದನ್ನಭಿಮಂತ್ರಿಸಿ ಶಿವನನ್ನು ಸ್ಮರಿಸುತ್ತಾ ದೇವತೆಗಳ ಮೇಲೆ ಪ್ರಯೋಗಿಸಿದನು.

೨೪. ಎಲೈ ನಾರದ, ದಧೀಚಿಮುನಿಯು ಪ್ರಯೋಗಿಸಿದ ಆ ದರ್ಭೆಮುಷ್ಟಿಯು ಶಂಕರನ ಮಹಿಮೆಯಿಂದ ಪ್ರಳಯಾಗ್ನಿಯಂತೆ ಭಯಂಕರವಾದ ತ್ರಿಶೂಲವಾಯಿತು.

೨೫. ಆ ತ್ರಿಶೂಲವು ಕಾಲಾಗ್ನಿಯಂತೆ ಭಯಂಕರವಾದ ಬೆಂಕಿಯ ಜ್ವಾಲೆಗಳನ್ನುಗುಳುತ್ತಾ ದೇವತೆಗಳನ್ನೆಲ್ಲಾ ದಹಿಸಲುದ್ಯುಕ್ತವಾಯಿತು.

೨೬. ವಿಷ್ಣು ಇಂದ್ರ ಮೊದಲಾದವರಿಂದ ಪ್ರಯೋಗಿಸಲ್ಪಟ್ಟ ಆಯುಧಗಳೆಲ್ಲವೂ ಆ ತ್ರಿಶೂಲವನ್ನು ನಮಸ್ಕರಿಸಿದುವು.

೨೭. ಆಗ ಆ ತ್ರಿಶೂಲಕ್ಕೆ ಹೆದರಿ ಶಕ್ತಿಯಿಲ್ಲದವರಾಗಿ ದೇವತೆಗಳೆಲ್ಲರೂ ಓಡಿಹೋದರು. ಮಹಾಮಾಯಿಯಾದ ಹರಿಯೂ ಸಹ ಭಯಗೊಂಡು ಸುಮ್ಮನೆ ನಿಲ್ಲಬೇಕಾಯಿತು.

ಸಸರ್ಜ ಭಗವಾನ್ ವಿಷ್ಣುಃ ಸ್ವದೇಹಾತ್ಪುರುಷೋತ್ತಮಃ ।
ಆತ್ಮನಃ ಸದೃಶಾನ್ ದಿವ್ಯಾನ್ ಲಕ್ಷಲಕ್ಷಾಯುತಾನ್ ಗಣಾನ್ ॥ ೨೮ ॥

ತೇ ಚಾಪಿ ಯುಯುಧುಸ್ತತ್ರ ವೀರಾ ವಿಷ್ಣುಗಣಾಸ್ತತಃ ।
ಮುನಿನೈಕೇನ ದೇವರ್ಷೇ ದಧೀಚೇನ ಶಿವಾತ್ಮನಾ ॥ ೨೯ ॥

ತತೋ ವಿಷ್ಣುಗಣಾಂಸ್ತಾನ್ ವೈ ನಿಯುಧ್ಯ ಬಹುಶೋ ರಣೇ ।
ದದಾಹ ಸಹಸಾ ಸರ್ವಾನ್ ದಧೀಚಶ್ಶೈವಸತ್ತಮಃ ॥ ೩೦ ॥

ತತಸ್ತದ್ವಿಸ್ಮಯಾರ್ಥಾಯ ದಧೀಚಸ್ಯ ಮುನೇರ್ಹರಿಃ ।
ವಿಶ್ವಮೂರ್ತಿರಭೂಚ್ಛೀಘ್ರಂ ಮಹಾಮಾಯಾವಿಶಾರದಃ ॥ ೩೧ ॥

ತಸ್ಯ ದೇಹೇ ಹರೇಸ್ಸಾಕ್ಷಾದಪಶ್ಯದ್ದ್ವಿಜಸತ್ತಮಃ ।
ದಧೀಚೋ ದೇವತಾದೀನಾಂ ಜೀವಾನಾಂ ಚ ಸಹಸ್ರಕಂ ॥ ೩೨ ॥

---

೨೮-೨೯. ಬಳಿಕ ಹರಿಯು ತನ್ನಂತೆ ಸ್ವರೂಪವುಳ್ಳವುಗಳೂ ಪರಾಕ್ರಮಿಗಳೂ ಆದಂತಹ ವಿಷ್ಣುಗಣಗಳನ್ನು ಲಕ್ಷಗಟ್ಟಲೆಯಾಗಿ ತನ್ನ ದೇಹದಿಂದ ಸೃಜಿಸಿದನು. ಆ ಗಣಗಳೂ ಸಹ ಪರಾಕ್ರಮದಿಂದ ದಧೀಚಿಮುನಿಯೊಂದಿಗೆ ಭಯಂಕರವಾಗಿ ಯುದ್ಧ ಮಾಡಿದರು.

೩೦. ಆದರೆ ಶಿವಭಕ್ತನಾದ ದಧೀಚಿಮುನಿಯು ಆ ವಿಷ್ಣುಗಣಗಳೊಡನೆ ಯುದ್ಧಮಾಡಿ ಅವುಗಳನ್ನು ತನ್ನ ತೇಜಸ್ಸಿನಿಂದ ಭಸ್ಮಮಾಡಿದನು.

೩೧. ಇದನ್ನು ನೋಡಿ ಮಹಾಮಾಯಾವಿಯಾದ ಹರಿಯು ದಧೀಚಿಮುನಿಯನ್ನು ಆಶ್ಚರ್ಯಗೊಳಿಸಲೋಸುಗ ತನ್ನ ಮಾಯೆಯಿಂದ ವಿರಾಟ್ ಸ್ವರೂಪವನ್ನು ಧರಿಸಿದನು.

೩೨. ಹರಿಯ ವಿಶ್ವರೂಪಶರೀರದಲ್ಲಿ ಸಾವಿರಾರು ದೇವತೆಗಳನ್ನೂ ರಾಕ್ಷಸರನ್ನೂ ಮಿಕ್ಕ ಜೀವರುಗಳನ್ನೂ ದಧೀಚಿಮುನಿಯು ನೋಡಿದನು.

ಭೂತಾನಾಂ ಕೋಟಿಯಶ್ಚೈವ ಗಣಾನಾಂ ಕೋಟಯಸ್ತಥಾ ।
ಅಂಡಾನಾಂ ಕೋಟಿಯಶ್ಚೈವ ವಿಶ್ವಮೂರ್ತೇಸ್ತನೌ ತದಾ ॥ ೩೩ ॥

ದೃಷ್ಟ್ವೈತದಖಿಲಂ ತತ್ರ ಚ್ಯಾವನಿಸ್ಸತತಂ ತದಾ ।
ವಿಷ್ಣುಮಾಹ ಜಗನ್ನಾಥಂ ಜಗತ್ಸ್ತವಮಜಂ ವಿಭುಂ ॥ ೩೪ ॥

॥ ದಧೀಚ ಉವಾಚ ॥

ಮಾಯಾಂ ತ್ಯಜ ಮಹಾಬಾಹೋ ಪ್ರತಿಭಾಸೋ ವಿಚಾರತಃ ।
ವಿಜ್ಞಾತಾನಿ ಸಹಸ್ರಾಣಿ ದುರ್ವಿಜ್ಞೇಯಾನಿ ಮಾಧವ ॥ ೩೫ ॥

ಮಯಿ ಪಶ್ಯ ಜಗತ್ಸರ್ವಂ ತ್ವಯಾ ಯುಕ್ತಮತಂದ್ರಿತಃ ।
ಬ್ರಹ್ಮಾಣಂ ಚ ತಥಾ ರುದ್ರಂ ದಿವ್ಯಾಂ ದೃಷ್ಟಿಂ ದದಾಮಿ ತೇ ॥ ೩೬ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ದರ್ಶಯಾಮಾಸ ಸ್ವತನೌ ನಿಖಿಲಂ ಮುನಿಃ ।
ಬ್ರಹ್ಮಾಂಡಂ ಚ್ಯಾವನಿಃ ಶಂಭುತೇಜಸಾ ಪೂರ್ಣದೇಹಕಃ ॥ ೩೭ ॥

---

೩೩. ಅಲ್ಲದೆ ಆ ಶರೀರದಲ್ಲಿ ಭೂತಕೋಟಿಗಳನ್ನೂ ಕೋಟಿ ಕೋಟಿ ಸಂಖ್ಯಾತರಾದ ಗಣಗಳನ್ನೂ ಅನೇಕ ಕೋಟಿ ಬ್ರಹ್ಮಾಂಡಗಳನ್ನೂ ನೋಡಿದನು.

೩೪. ಹೀಗೆ ತುಂಬಾ ಆಶ್ಚರ್ಯಕರವಾದ ವಿಶ್ವರೂಪವನ್ನು ನೋಡಿ ದಧೀಚಿ ಮುನಿಯು ಸಕಲ ಜಗತ್ತಿನಿಂದ ಸ್ತುತಿಸಲ್ಪಡುವ ಜಗದೊಡೆಯನಾದ ಹರಿಯನ್ನು ಕುರಿತು ಹೀಗೆ ಹೇಳಿದನು.

೩೫-೩೬. ದಧೀಚಿಮುನಿಯು ಹೇಳಿದನು ;—ಎಲೈ ಹರಿಯೇ, ಈ ನಿನ್ನ ಮಾಯೆಯನ್ನು ತ್ಯಜಿಸು. ವಿಚಾರಮಾಡಿದರೆ ಇವೆಲ್ಲವೂ ಸುಳ್ಳು. ಇಂತಹ ಸಹಸ್ರಾರು ಮಾಯೆಗಳು ನನಗೆ ತಿಳಿದಿರುವುವು. ನನ್ನಲ್ಲಿಯೂ ಸಹ ಜಗತ್ತೆಲ್ಲವೂ ಇರುವುದು ನೋಡು. ನೀನೂ ರುದ್ರನೂ, ಬ್ರಹ್ಮನೂ ಎಲ್ಲರೂ ನನ್ನಲ್ಲಿ ಇರುವಿರಿ. ನಿನಗೆ ದಿವ್ಯ ದೃಷ್ಟಿಯನ್ನು ಕೊಡುವೆನು ನೋಡು ಎಂದನು.

೩೭-೩೮. ಬ್ರಹ್ಮನು ಹೇಳಿದನು :—ಹೀಗೆ ಹೇಳಿ ದಧೀಚಿಮುನಿಯು ಶಿವನ ತೇಜಸ್ಸಿನಿಂದ ತನ್ನ ಶರೀರದಲ್ಲಿ ಬ್ರಹ್ಮಾಂಡವೆಲ್ಲವನ್ನೂ ಹರಿಗೆ ತೋರಿಸಿ ತಾನೂ ವಿಶ್ವ

ತದಾಹ ವಿಷ್ಣುಂ ದೇವೇಶಂ ದಧೀಚಶ್ಚೈವಸತ್ತಮಃ ।
ಸಂಸ್ಮರ್ಞ ಶಂಕರಂ ಚಿತ್ತೇ ವಿಹಸರ್ಞ ನಿರ್ಭಯಸ್ಸುಧೀಃ ॥ ೩೮ ॥

॥ ದಧೀಚ ಉವಾಚ ॥

ಮಾಯಯಾ ತ್ವನಯಾ ಕಿಂ ವಾ ಮಂತ್ರಶಕ್ತ್ಯಾಥವಾ ಹರೇ ।
ಸತ್ಯಾಮಾಯಾಮಿಮಾಂ ತಸ್ಮಾದ್ಯೋದ್ಧುಮರ್ಹಸಿ ಯತ್ನತಃ ॥ ೩೯ ॥

॥ ಬ್ರಹ್ಮೋವಾಚ ॥

ಏತಚ್ಛ್ರುತ್ವಾ ಮುನೇಸ್ತಸ್ಯ ವಚನಂ ನಿರ್ಭಯಸ್ತದಾ ।
ಶಂಭುತೇಜೋಮಯಂ ವಿಷ್ಣುಶ್ಚುಕೋಪಾತೀವ ತಂ ಮುನಿಂ ॥ ೪೦ ॥

ದೇವಾಶ್ಚ ದುದ್ರುವುರ್ಭರ್ಯೋ ದೇವಂ ನಾರಾಯಣಂ ವಿಭುಂ ।
ಯೋದ್ಧುಕಾಮಾಶ್ಚ ಮುನಿನಾ ದಧೀಚೇನ ಪ್ರತಾಪಿನಾ ॥ ೪೧ ॥

ಏತಸ್ಮಿನ್ನಂತರೇ ತತ್ರಾಗಮತ್ಸ ನೃಪಃ ಕ್ಷುವಃ ।
ಅವಾರಯತ ನಿಶ್ಚೇಷ್ಟಂ ಪದ್ಮಯೋನಿಂ ಹರಿಂ ಸುರಾರ್ಞ ॥ ೪೨ ॥

ನಿಶಮ್ಯ ವಚನಂ ಮೇ ಹಿ ಬ್ರಹ್ಮಣಾ ನ ಹಿ ನಿರ್ಜಿತಃ ।
ಜಗಾಮ ನಿಕಟಂ ತಸ್ಯ ಪ್ರಣನಾಮ ಮುನಿಂ ಹರಿಃ ॥ ೪೩ ॥

---

ರೂಪವನ್ನು ಪ್ರಕಟಮಾಡಿದನು. ಮತ್ತು ದೇವೇಶನಾದ ಹರಿಯನ್ನು ಕುರಿತು ನಿರ್ಭಯನಾಗಿ ಮಂದಹಾಸಯುಕ್ತನಾಗಿ ಶಿವನನ್ನು ಸ್ಮರಿಸಿ,

೩೯. ದಧೀಚಿಮುನಿಯು ಹೇಳಿದನು :—ಎಲೈ ಹರಿ, ಈ ಮಾಯೆಯಿಂದ ಲಾಗಲೀ ಮಂತ್ರಶಕ್ತಿಯಿಂದಲಾಗಲೀ ಏನೂ ಪ್ರಯೋಜನವಿಲ್ಲ. ಇದೆಲ್ಲವೂ ಸುಳ್ಳು. ಸತ್ಯಾಮನೆಯಿಂದ ನನ್ನೊಡನೆ ಯುದ್ಧಮಾಡು ಎಂದನು.

೪೦. ಬ್ರಹ್ಮನು ಹೇಳಿದನು :—ಎಲೈ ನಾರದ, ಹೀಗೆ ದಧೀಚಿಮುನಿಯ ಮಾತನ್ನು ಕೇಳಿ ಹರಿಯು ಶಂಕರ ತೇಜಸ್ಸಿನ ಸ್ವರೂಪನಾದ ಆ ಮುನಿಯಮೇಲೆ ತುಂಬಾ ಕೋಪಗೊಂಡು ಯುದ್ಧಸನ್ನದ್ಧನಾದನು.

೪೧. ಆಗ ದೇವತೆಗಳೆಲ್ಲರೂ ಸಹ ದಧೀಚಿಮುನಿಯೊಡನೆ ಯುದ್ಧಮಾಡಲು ಹರಿಗೆ ಸಹಾಯಕರಾಗಿ ಬಂದು ಕೂಡಿಕೊಂಡರು.

೪೨-೪೩. ಈ ಮಧ್ಯದಲ್ಲಿ ನನ್ನ ಮಾತನ್ನು ಕೇಳಿ ಕ್ಷುವರಾಜನು ಹರಿಯ ಬಳಿಗೆ ಬಂದು ಅವನನ್ನು ನಮಸ್ಕರಿಸಿ ಮುನಿಯೊಡನೆ ಯುದ್ಧಮಾಡಬೇಡವೆಂದು ತಡೆದನು.

ಕ್ಷುವೋ ದೀನತರೋ ಭೂತ್ವಾ ಗತ್ವಾ ತತ್ರ ಮುನೀಶ್ವರಂ ।
ದಧೀಚಮಭಿವಾದ್ಯೈವ ಪ್ರಾರ್ಥಯಾಮಾಸ ವಿಕ್ಲವಃ ॥ ೪೪ ॥

॥ ಕ್ಷುವ ಉವಾಚ ॥

ಪ್ರಸೀದ ಮುನಿಶಾರ್ದೂಲ ಶಿವಭಕ್ತಶಿರೋಮಣೇ ।
ಪ್ರಸೀದ ಪರಮೇಶಾನ ದುರ್ಲಕ್ಷ್ಯೋ ದುರ್ಜನೈಸ್ಸಹ ॥ ೪೫ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ರಾಜ್ಞಸ್ಸುರಗಣೈಸ್ಸಹ ।
ಅನುಜಗ್ರಾಹ ತಂ ವಿಪ್ರೋ ದಧೀಚಸ್ತಪಸಾಂ ನಿಧಿಃ ॥ ೪೬ ॥

ಅಥ ದೃಷ್ಟ್ವಾ ರಮೇಶಾದೀನ್ ಕ್ರೋಧವಿಸ್ಫಾಲಿತೋ ಮುನಿಃ ।
ಹೃದಿ ಸ್ಮೃತ್ವಾ ಶಿವಂ ವಿಷ್ಣುಂ ಶಶಾಪ ಚ ಸುರಾನಪಿ ॥ ೪೭ ॥

॥ ದಧೀಚ ಉವಾಚ ॥

ರುದ್ರಕೋಪಾಗ್ನಿನಾ ದೇವಾಃ ಸದೇವೇಂದ್ರಾ ಮುನೀಶ್ವರಾಃ ।
ಧ್ವಸ್ತಾ ಭವಂತು ದೇವೇನ ವಿಷ್ಣುನಾ ಚ ಸಮಂ ಗಣೈಃ ॥ ೪೮ ॥

---

೪೪. ಮತ್ತು ಆ ಕ್ಷುವರಾಜನು ದಧೀಚಿಮುನಿಯ ಬಳಿಗೆ ತೆರಳಿ ಅವನನ್ನು ನಮಸ್ಕರಿಸಿ ದೀನತೆಯಿಂದ,

೪೫. ಕ್ಷುವರಾಜನು ಹೇಳಿದನು :—ಓ ಮುನಿಶ್ರೇಷ್ಠನೇ, ಪ್ರಸನ್ನನಾಗು ನೀನು ಶಿವಭಕ್ತಶಿಖಾಮಣಿಯು, ಪರಮೇಶ್ವರಸ್ವರೂಪನು. ದುರ್ಜನರಿಗೆ ನಿನ್ನ ಸ್ವರೂಪವು ತಿಳಿಯದು. ಕೋಪವನ್ನು ಬಿಡು ಎಂದು ಪ್ರಾರ್ಥಿಸಿದನು.

೪೬ ಬ್ರಹ್ಮನು ಹೇಳಿದನು :-ಹೀಗೆ ಕ್ಷುವರಾಜನು ಹೇಳಿದ ಮಾತುಗಳನ್ನು ಕೇಳಿ ತಪಸ್ವಿಯಾದ ದಧೀಚಿಮುನಿಯು ಕರುಣೆಯಿಂದ ಆ ರಾಜನನ್ನು ಅನುಗ್ರಹಿಸಿದನು.

೪೭. ಬಳಿಕ ತನ್ನೊಡನೆ ಯುದ್ಧಮಾಡಿದಂತಹ ವಿಷ್ಣುವೇ ಮೊದಲಾದ ದೇವತೆಗಳನ್ನು ನೋಡಿ ದಧೀಚಿಮುನಿಯು ತುಂಬಾ ಕೋಪಗೊಂಡು ಶಿವನನ್ನು ಧ್ಯಾನಿಸಿ ಅವರೆಲ್ಲರನ್ನೂ ಹೀಗೆ ಶಪಿಸಿದನು.

೪೮. ದಧೀಚಿಮುನಿಯು ಹೇಳಿದನು ;—ಎಲೈ ವಿಷ್ಣು, ಮತ್ತು ದೇವತೆಗಳಿರಾ ? ನೀವು ಮುಂದೊಮ್ಮೆ ರುದ್ರನ ಕೋಪಕ್ಕೆ ಪಾತ್ರರಾಗಿ ನಿಮ್ಮ ಪರಿವಾರಗಳೊಡನೆ ನಾಶವನ್ನು ಹೊಂದಿರಿ ಎಂದನು.

॥ ಬ್ರಹ್ಮೋವಾಚ ॥

ಏವಂ ಶಪ್ತ್ವಾ ಸುರಾನ್ ಪ್ರೇಕ್ಷ್ಯ ಕ್ಷುವಮಾಹ ತತೋ ಮುನಿಃ ।
ದೇವೈಶ್ಚ ಪೂಜ್ಯೋ ರಾಜೇಂದ್ರ ನೃಪೈಶ್ಚೈವ ದ್ವಿಜೋತ್ತಮಃ ॥ ೪೯ ॥

ಬ್ರಾಹ್ಮಣಾ ಏವ ರಾಜೇಂದ್ರ ಬಲಿನಃ ಪ್ರಭವಿಷ್ಣವಃ ।
ಇತ್ಯುಕ್ತ್ವಾ ಸಸ್ಫುಟಂ ವಿಪ್ರಃ ಪ್ರವಿವೇಶ ನಿಜಾಽಽಶ್ರಮಂ ॥ ೫೦ ॥

ದಧೀಚಮಭಿವಾದ್ಯೈವ ಕ್ಷುವೋ ನಿಜಗೃಹಂ ಗತಃ ।
ವಿಷ್ಣುರ್ಜಗಾಮ ಸ್ವಂ ಲೋಕಂ ಸುರೈಸ್ಸಹ ಯಥಾಗತಂ ॥ ೫೧ ॥

ತದೇವಂ ತೀರ್ಥಮಭವತ್ಸ್ಥಾನೇಶ್ವರ ಇತಿ ಸ್ಮೃತಂ ।
ಸ್ಥಾನೇಶ್ವರಮನುಪ್ರಾಪ್ಯ ಶಿವಸಾಯುಜ್ಯಮಾಪ್ನುಯಾತ್ ॥ ೫೨ ॥

ಕಥಿತಸ್ತವ ಸಂಕ್ಷೇಪಾದ್ವಾದಃ ಕ್ಷುವದಧೀಚಯೋಃ ।
ನೃಪಾಪ್ತಶಾಪಯೋಸ್ತಾತ ಬ್ರಹ್ಮವಿಷ್ಣ್ವೋಃ ಶಿವಂ ವಿನಾ ॥ ೫೩ ॥

---

೪೯-೫೦. ಬ್ರಹ್ಮನು ಹೇಳಿದನು ;—ಹೀಗೆ ದೇವತೆಗಳನ್ನೂ ಹರಿಯನ್ನೂ ಶಪಿಸಿ ದಧೀಚಿಮುನಿಯು ಮುಂದೆ ನಿಂತಿರುವ ಕ್ಷುವರಾಜನನ್ನು ಕುರಿತು ಎಲೈ ರಾಜೇಂದ್ರನೆ, ಬ್ರಾಹ್ಮಣನು ದೇವತೆಗಳಿಂದಲೂ ರಾಜರುಗಳಿಂದಲೂ ಪೂಜಿಸಲರ್ಹನು. ಬ್ರಾಹ್ಮಣರು ನಾಲ್ಕು ವರ್ಣಗಳಲ್ಲಿಯೂ ಶ್ರೇಷ್ಠರು, ಸರ್ವಸಮರ್ಥರು ಎಂದು ಹೇಳಿ ದಧೀಚಿಮುನಿಯು ತನ್ನಾಶ್ರಮಕ್ಕೆ ತೆರಳಿದನು.

೫೧. ಹಾಗೆಯೇ ಕ್ಷುವರಾಜನೂ ದಧೀಚಿಮುನಿಯನ್ನು ನಮಸ್ಕರಿಸಿ ತನ ಅರಮನೆಗೆ ಹೋದನು. ವಿಷ್ಣುವೂ ದೇವತೆಗಳೂ ತಮ್ಮತಮ್ಮ ಸ್ಥಾನಗಳಿಗೆ ಹೊರಟು ಹೋದರು.

೫೨. ಹೀಗೆ ದಧೀಚಿಮುನಿ ಮತ್ತು ವಿಷ್ಣು ಇವರು ಯುದ್ಧಮಾಡಿದ ಸ್ಥಾನವು "ಸ್ಥಾನೇಶ್ವರ" ವೆಂಬ ತೀರ್ಥಕ್ಷೇತ್ರವಾಯಿತು. ಈ ಸ್ಥಾನೇಶ್ವರ ತೀರ್ಥಕ್ಷೇತ್ರದರ್ಶನ ವನ್ನು, ಮಾಡಿದರೆ ಶಿವಸಾಯುಜ್ಯವು ಲಭಿಸುವುದು.

೫೩. ಎಲೈ ನಾರದ, ಹೀಗೆ ಕ್ಷುವರಾಜ ಮತ್ತು ದಧೀಚಿಮುನಿ ಇವರ ವಾದ ವನ್ನೂ ವಿಷ್ಣು ಮೊದಲಾದವರನ್ನು ದಧೀಚಿಮುನಿಯು ಶಪಿಸಿದುದನ್ನೂ ನಿನಗೆ ಸಂಕ್ಷೇಪವಾಗಿ ಹೇಳಿರುವೆನು.

ಯ ಇದಂ ಕೀರ್ತಯೇನ್ನಿತ್ಯಂ ವಾದಂ ಕ್ಷುವದಧೀಚಯೋಃ ।
ಜಿತ್ವಾಪಮೃತ್ಯುಂ ದೇಹಾಂತೇ ಬ್ರಹ್ಮಲೋಕಂ ಪ್ರಯಾತಿ ಸಃ ॥ ೫೪ ॥

ರಣೇ ಯಃ ಕೀರ್ತಯಿತ್ವೇದಂ ಪ್ರವಿಶೇತ್ತಸ್ಯ ಸರ್ವದಾ ।
ಮೃತ್ಯುಭೀತಿರ್ಭವೇನ್ನೈವ ವಿಜಯೀ ಚ ಭವಿಷ್ಯತಿ ॥ ೫೫ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಸತೀಖಂಡೇ
ಏಕೋನಚತ್ವಾರಿಂಶೋಽಧ್ಯಾಯಃ

---

೫೪. ಕ್ಷುವರಾಜ ಮತ್ತು ದಧೀಚಿಮುನಿ ಇವರ ಈ ವಾದವನ್ನು ಯಾರು ಶ್ರದ್ಧೆಯಿಂದ ಕೇಳುವರೋ ಅವರು ಅಪಮೃತ್ಯುವನ್ನು ಜಯಿಸಿ ಬ್ರಹ್ಮಲೋಕವನ್ನು ಪಡೆಯುವರು.

೫೫. ಈ ಇತಿಹಾಸವನ್ನು ಕೇಳಿ ರಣರಂಗಕ್ಕೆ ಪ್ರವೇಶಿಸಿದ ಯೋಧನಿಗೆ ಮರಣಭಯವೇ ಇರವುದಿಲ್ಲ. ಯುದ್ಧದಲ್ಲಿ ವಿಜಯವೂ ಲಭಿಸುವುದು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ಮೂವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಚತ್ವಾರಿಂಶೋಽಧ್ಯಾಯಃ

---

॥ ನಾರದ ಉವಾಚ ॥

**ವಿಧೇ ವಿಧೇ ಮಹಾಪ್ರಾಜ್ಞ ಶೈವತತ್ತ್ವಪ್ರದರ್ಶಕ ।**
**ಶ್ರಾವಿತಾ ರಮಣೀ ಪ್ರಾಯಃ ಶಿವಲೀಲಾ ಮಹಾದ್ಭುತಾ ॥ ೧ ॥**

**ವೀರೇಣ ವೀರಭದ್ರೇಣ ದಕ್ಷಯಜ್ಞಂ ವಿನಾಶ್ಯ ವೈ ।**
**ಕೈಲಾಸಾದ್ರೌ ಗತೇ ತಾತ ಕಿಮಭೂತ್ತದ್ವದಾಧುನಾ ॥ ೨ ॥**

---

## ನಲವತ್ತನೆಯ ಅಧ್ಯಾಯವು.

೧-೨. ನಾರದಮುನಿಯು ಕೇಳಿದನು :—ಓ ವಿಧಿ, ಮಹಾಪ್ರಾಜ್ಞನಾದ ನೀನು ಶಿವತತ್ತ್ವವನ್ನು ನನಗೆ ಪ್ರದರ್ಶಿಸಿರುವೆ. ಮನೋಹರವೂ ಮಹಾದ್ಭುತವೂ ಆದಂತಹ ಶಿವಲೀಲೆಯನ್ನು ಪ್ರಾಯಃ (ಸಾಮಾನ್ಯವಾಗಿ) ನನಗೆ ಹೇಳಿರುವೆ. ಮುಂದೆ ದಕ್ಷಯಜ್ಞವನ್ನು ಧ್ವಂಸಮಾಡಿ ವೀರಭದ್ರನು ಕೈಲಾಸಕ್ಕೆ ತೆರಳಿದಮೇಲೆ ಮುಂದೇ ನಾಯಿತು ಎಂಬುವನ್ನು ಹೇಳು ಎಂದನು.

॥ ಬ್ರಹ್ಮೋವಾಚ ॥

ಅಥ ದೇವಗಣಾಸ್ಸರ್ವೇ ಮುನಯಶ್ಚ ಪರಾಜಿತಾಃ ।
ರುದ್ರಾನೀಕೈರ್ವಿಭಿನ್ನಾಂಗಾ ಮಮ ಲೋಕಂ ಯಯುಸ್ತದಾ ॥ ೩ ॥

ಸ್ವಯಂಭುವೇ ನಮಸ್ಕೃತ್ಯ ಮಹ್ಯಂ ಸಂಸ್ತೂಯ ಭೂರಿಶಃ ।
ತತ್ಸ್ವಕ್ಲೇಶಂ ವಿಶೇಷೇಣ ಕಾರ್ತ್ಸ್ನ್ಯೇನೈವ ಚ ವೇದಯನ್ ॥ ೪ ॥

ತದಾಕರ್ಣ್ಯ ತತೋಽಹಂ ವೈ ಪುತ್ರಶೋಕೇನ ಪೀಡಿತಃ ।
ಅಚಿಂತ್ಯಮತಿಸುವ್ಯಗ್ರೋ ದೂಯಮಾನೇನ ಚೇತಸಾ ॥ ೫ ॥

ಕಿಂ ಕಾರ್ಯಂ ಕಾರ್ಯಮದ್ಯಾಶು ಮಯಾ ದೇವಸುಖಾವಹಂ ।
ಯೇನ ಜೀವತು ದಕ್ಷೋಽಸೌ ಮಖಃ ಪೂರ್ಣೋ ಭವೇತ್ತಥಾ ॥ ೬ ॥

ಏವಂ ವಿಚಾರ್ಯ ಬಹುಧಾ ನಾಲಭಂ ಶಮಹಂ ಮುನೇ ।
ವಿಷ್ಣುಂ ತದಾಸ್ಮರನ್ ಭಕ್ತ್ಯಾ ಜ್ಞಾನಮಾಪ ತದೋಚಿತಂ ॥ ೭ ॥

ಅಥ ದೇವೈಶ್ಚ ಮುನಿಭಿರ್ವಿಷ್ಣೋರ್ಲೋಕಮಹಂ ಗತಃ ।
ನತ್ವಾ ನುತ್ವಾ ಚ ವಿವಿಧೈಃಸ್ತವೈರ್ದುಃಖಂ ನ್ಯವೇದಯಂ ॥ ೮ ॥

---

೩-೪. ಬ್ರಹ್ಮನು ಹೇಳಿದನು :—ರುದ್ರಗಣಗಳಿಂದ ಪ್ರಹರಿಸಲ್ಪಟ್ಟ ಪರಾಜಿತರಾದ ದೇವತೆಗಳು, ಮುನಿಗಳು ಎಲ್ಲರೂ ಸಹ ನನ್ನ ಲೋಕಕ್ಕೆ ಬಂದು, ಅಲ್ಲಿ ನನ್ನನ್ನು ನಮಸ್ಕರಿಸಿ ಅನೇಕವಿಧವಾಗಿ ಸ್ತುತಿಸಿ, ರುದ್ರಗಣಗಳಿಂದ ತಮಗಾದ ಕ್ಲೇಶವನ್ನು ನನ್ನಲ್ಲಿ ನಿವೇದಿಸಿಕೊಂಡರು.

೫-೭ ದೇವತೆಗಳ ವಿಜ್ಞಾಪನೆಯನ್ನು ಕೇಳಿ ನಾನು ನನ್ನ ಪುತ್ರನಾದ ದಕ್ಷನಿಗುಂಟಾದ ಶೋಕದಿಂದ ಪೀಡಿತನಾಗಿ ವ್ಯಥೆಯಿಂದ ಹೀಗೆ ಆಲೋಚಿಸಿದೆನು. ದೇವತೆಗಳಿಗೆ ಅನುಕೂಲವಾಗುವಂತೆ ಈಗ ನಾನು ಯಾವ ಕಾರ್ಯವನ್ನು ಮಾಡಿದರೆ ನನ್ನ ಪುತ್ರನಾದ ದಕ್ಷನು ಬದುಕಬಹುದು? ಯಜ್ಞವು ಪೂರ್ತಿಯಾದೀತು? ಎಂದು ಮೊದಲಾಗಿ ಬಹಳ ಚಿಂತಿಸಿ ಕೊನೆಗೆ ಹರಿಯೇ ಈಗ ರಕ್ಷಕನೆಂದು ತಿಳಿದು ನಾನು ಅವನನ್ನು ಮರೆಹೊಂದಲುದ್ಯುಕ್ತನಾದೆನು.

೮. ಬಳಿಕ ನಾನು ದೇವತೆಗಳು ಮತ್ತು ಮುನಿಗಳು ಇವರೊಡನೆ ವಿಷ್ಣು ಲೋಕಕ್ಕೆ ಹೋಗಿ ಅಲ್ಲಿ ಹರಿಯನ್ನು ನಮಸ್ಕರಿಸಿ, ಭಕ್ತಿಯಿಂದ ಸ್ತುತಿಸಿ ದೇವತೆಗಳಿಗೆ ಬಂದಿರುವ ಕಷ್ಟವನ್ನು ಅವನಿಗೆ ತಿಳಿಸಿದೆನು.

ಯಥಾಧ್ವರಃ ಪ್ರಪೂರ್ಣಃ ಸ್ಯಾದ್ದೇವಯಜ್ಞಕರಶ್ಚ ಸಃ ।
ಸುಖಿನಃ ಸ್ಯುಸ್ಸುರಾಸ್ಸರ್ವೇ ಮುನಯಶ್ಚ ತಥಾ ಕುರು ॥ ೯ ॥

ದೇವದೇವ ರಮಾನಾಥ ವಿಷ್ಣೋ ದೇವಸುಖಾವಹ ।
ವಯಂ ತ್ವಚ್ಛರಣಂ ಪ್ರಾಪ್ತಾಃ ಸದೇವಮುನಯೋ ಧ್ರುವಂ ॥ ೧೦ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚೋ ಮೇ ಹಿ ಬ್ರಹ್ಮಣಸ್ಸ ರಮೇಶ್ವರಃ ।
ಪ್ರತ್ಯುವಾಚ ಶಿವಂ ಸ್ಮೃತ್ವಾ ಶಿವಾತ್ಮಾ ದೀನಮಾನಸಃ ॥ ೧೧ ॥

॥ ವಿಷ್ಣುರುವಾಚ ॥

ತೇಜೀಯಸಿ ನ ಸಾ ಭೂತಾ ಕೃತಾಗಸಿ ಬುಭೂಷತಾಂ ।
ತತ್ರ ಕ್ಷೇಮಾಯ ಬಹುಧಾ ಬುಭೂಷಾ ಹಿ ಕೃತಾಗಸಾಂ ॥ ೧೨ ॥

ಕೃತಪಾಪಾಸ್ಸುರಾಸ್ಸರ್ವೇ ಶಿವೇ ಹಿ ಪರಮೇಶ್ವರೇ ।
ಪರಾದದುರ್ಯಜ್ಞಭಾಗಂ ತಸ್ಯ ಶಂಭೋರ್ವಿಧೇ ಯತಃ ॥ ೧೩ ॥

ಪ್ರಸಾದಯಧ್ವಂ ಸರ್ವೇ ಹಿ ಯೂಯಂ ಶುದ್ಧೇನ ಚೇತಸಾ ।
ಅಥಾಪರಪ್ರಸಾದಂ ತಂ ಗೃಹೀತಾಂಘ್ರಿಯುಗಂ ಶಿವಂ ॥ ೧೪ ॥

---

೯-೧೦. ದೇವದೇವನಾದ ಓ ಲಕ್ಷ್ಮೀಪತಿಯೇ, ನೀನೇ ದೇವತೆಗಳನ್ನು ರಕ್ಷಿಸುವವನು. ಈಗ ದಕ್ಷಯಜ್ಞವು ಪೂರ್ತಿಯಾಗಬೇಕು. ದಕ್ಷನೂ ದೇವತೆಗಳೂ ಸುಖಿಗಳಾಗಬೇಕು. ಹಾಗಾಗುವಂತೆ ನೀನು ಮಾಡಬೇಕು. ಆದಕ್ಕಾಗಿ ನಾವೆಲ್ಲರೂ ನಿನ್ನನ್ನು ಮರೆಹೊಕ್ಕಿರುವೆವು.

೧೧. ಬ್ರಹ್ಮನು ಹೇಳಿದನು :—ನನ್ನ ಮಾತುಗಳನ್ನು ಕೇಳಿ ಶಿವಭಕ್ತನಾದ ವಿಷ್ಣುವು ಶಿವನನ್ನು ಧ್ಯಾನಿಸಿ ದೈನ್ಯದಿಂದ ಹೀಗೆ ಹೇಳಿದನು.

೧೨-೧೪. ವಿಷ್ಣುವು ಹೇಳಿದನು :—ತೇಜಸ್ವಿಗಳಾದ ಮಹಾತ್ಮರಲ್ಲಿ ಅಪರಾಧವನ್ನು ಆಚರಿಸಬಾರದು. ಆಚರಿಸಿದರೆ ಕ್ಷೇಮವಾಗಲಾರದು. ಹೀಗಿರುವಲ್ಲಿ ಎಲೈ ಬ್ರಹ್ಮನೆ, ದೇವತೆಗಳೆಲ್ಲರೂ ಮಹಾತ್ಮನಾದ ಪರಮೇಶ್ವರನಲ್ಲಿ ಅಪರಾಧವನ್ನೆಸಗಿರುವರು. ಅವನಿಗೆ ಯಜ್ಞಭಾಗವನ್ನು ಕೊಡಲಿಲ್ಲ. ಆದಕಾರಣ ನೀವೆಲ್ಲರೂ ಶುದ್ಧವಾದ ಮನಸ್ಸಿನಿಂದ ಶಿವನನ್ನು ಸ್ತುತಿಸಿ ಪ್ರಸಾದಗೊಳಿಸಿರಿ. ಅವನ ಪಾದಕಮಲವನ್ನೇ ಶರಣವನ್ನಾಗಿ ಆಶ್ರಯಿಸುವವರಾಗಿರಿ.

ಯಸ್ಮಿನ್ ಪ್ರಕುಪಿತೇ ದೇವೇ ವಿನಶ್ಯತ್ಯಖಿಲಂ ಜಗತ್ ।
ಸಲೋಕಪಾಲಯಜ್ಞಸ್ಯ ಶಾಸನಾಜ್ಜೀವಿತಂ ದ್ರುತಂ　　॥ ೧೫ ॥

ತಮಾಶು ದೇವಂ ಪ್ರಿಯಯಾ ವಿಹೀನಂ ಚ ದುರುಕ್ತಿಭಿಃ ।
ಕ್ಷಮಾಪಯಧ್ವಂ ಹೃದ್ವಿದ್ಧಂ ದಕ್ಷೇಣ ಸುದುರಾತ್ಮನಾ　　॥ ೧೬ ॥

ಅಯಮೇವ ಮಹೋಪಾಯಸ್ತಚ್ಛಾಂತ್ಯೈ ಕೇವಲಂ ವಿಧೇ ।
ಶಂಭೋಸ್ಸಂತುಷ್ಟಯೇ ಮನ್ಯೇ ಸತ್ಯಮೇವೋದಿತಂ ಮಯಾ　　॥ ೧೭ ॥

ನಾಹಂ ನ ತ್ವಂ ಸುರಾಶ್ಚಾನ್ಯೇ ಮುನಯೋಽಪಿ ತನೂಭೃತಃ ।
ಯಸ್ಯ ತತ್ತ್ವಂ ಪ್ರಮಾಣಂ ಚ ನ ವಿದುರ್ಬಲವೀರ್ಯಯೋಃ　　॥ ೧೮ ॥

ಆತ್ಮತಂತ್ರಸ್ಯ ತಸ್ಯಾಪಿ ಪರಸ್ಯ ಪರಮಾತ್ಮನಃ ।
ಕ ಉಪಾಯಂ ವಿಧಿತ್ಸೇದ್ವೈ ಪರಂ ಮೂಢಂ ವಿರೋಧಿನಂ　　॥ ೧೯ ॥

ಚಲಿಷ್ಯೇಽಹಮಪಿ ಬ್ರಹ್ಮನ್ ಸರ್ವೈಸ್ಸಾರ್ಧಂ ಶಿವಾಲಯಂ ।
ಕ್ಷಮಾಪಯಾಮಿ ಗಿರಿಶಂ ಕೃತಾಗಶ್ಚ ಶಿವೇ ದ್ರುತಂ　　॥ ೨೦ ॥

---

೧೫. ಆ ಪರಮೇಶ್ವರನು ಕೋಪಗೊಂಡರೆ ಜಗತ್ತೆಲ್ಲವೂ ನಾಶವಾಗುವುದು. ಲೋಕಪಾಲಕರು ಮೊದಲಾದ ಮಹಾಮಹಾ ಪರಾಕ್ರಮಿಗಳೂ ನಾಶವಾಗುವರು.

೧೬-೧೭. ಪ್ರಿಯಪತ್ನಿಯ ವಿರಹದಿಂದ ಆ ಪರಮೇಶ್ವರನು ದುಃಖಿತನಾಗಿರುವನು. ಇಂತಹ ದೇವನನ್ನು ನೀವು ಕೆಟ್ಟಮಾತುಗಳಿಂದ ಕೋಪಗೊಳಿಸಿರುವಿರಿ. ಈಗ ನೀವು ದಕ್ಷನೊಂದಿಗೆ ಆ ದೇವನನ್ನು ಪ್ರಿಯವಾಕ್ಯಗಳಿಂದ ಸ್ತುತಿಸಿ ಅವನ ಕ್ಷಮೆಯನ್ನು ಬೇಡಿರಿ. ಶಂಭುವನ್ನು ಸಂತೋಷಗೊಳಿಸಲು ಇದೇ ಸರಿಯಾದ ಉಪಾಯವು.

೧೮-೨೦. ನಾನಾಗಲೀ, ನೀನಾಗಲೀ, ಮಿಕ್ಕ ದೇವತೆಗಳು, ಮುನಿಗಳು ಇವರಾಗಲೀ, ಪರಮೇಶ್ವರನ ಬಲವೀರ್ಯಗಳ ತತ್ತ್ವವನ್ನೂ ಅವುಗಳ ಪ್ರಮಾಣವನ್ನೂ ತಿಳಿಯಲಾರೆವು. ಸ್ವತಂತ್ರನೂ ಪರಮಾತ್ಮನೂ ಆದ ಆ ಪರಮೇಶ್ವರನನ್ನು ವಿರೋಧಿಸುವವನಿಗೆ ಶ್ರೇಯಸ್ಸಾಗುವ ಉಪಾಯವನ್ನು ಯಾವನು ಹೇಳಿಯಾನು? ಅಂತಹ ಯಾವ ಉಪಾಯವೂ ಇಲ್ಲ. ನಡೆಯಿರಿ. ಪರಮೇಶ್ವರನ ಮನೆಗೆ ನಾನೂ ನಿಮ್ಮೊಡನೆ ಬರುವೆನು. ಅಪರಾಧಿಯಾದ ನಾನೂ ಸಹ ಅವನ ಕ್ಷಮೆಯನ್ನು ಬೇಡುವೆನು ಎಂದನು.

॥ ಬ್ರಹ್ಮೋವಾಚ ॥

ಇತ್ಥಮಾದಿಶ್ಯ ವಿಷ್ಣುರ್ಮಾಂ ಬ್ರಹ್ಮಾಣಂ ಸಾಮರಾದಿಕಂ ।
ಸಾರ್ಧಂ ದೇವೈರ್ಮತಿಂ ಚಕ್ರೇ ತದ್ಗಿರೌ ಗಮನಾಯ ಸಃ ॥ ೨೧ ॥

ಯಯೌ ಸ್ವಧಿಷ್ಣ್ಯನಿಲಯಂ ಶಿವಸ್ಯಾದ್ರಿವರಂ ಶುಭಂ ।
ಕೈಲಾಸಂ ಸಾಮರಮುನಿಪ್ರಜೇಶಾದಿಮಯೋ ಹರಿಃ ॥ ೨೨ ॥

ಅತಿಪ್ರಿಯಂ ಪ್ರಭೋರ್ನಿತ್ಯಂ ಸುಜುಷ್ಟಂ ಕಿನ್ನರಾದಿಭಿಃ ।
ನರೇತರೈರಪ್ಸರೋಭಿರ್ಯೋಗಸಿದ್ಧೈರ್ಮಹೋನ್ನತಂ ॥ ೨೩ ॥

ನಾನಾಮಣಿಮಯೈಃ ಶೃಂಗೈಃ ಶೋಭಮಾನಂ ಸಮಂತತಃ ।
ನಾನಾಧಾತುವಿಚಿತ್ರಂ ವೈ ನಾನಾದ್ರುಮಲತಾಯುತಂ ॥ ೨೪ ॥

ನಾನಾಮೃಗಗಣಾಕೀರ್ಣಂ ನಾನಾಪಕ್ಷಿಸಮನ್ವಿತಂ ।
ವ್ಯಾಘ್ರಾದಿಭಿರ್ಮಹಾಸತ್ವೈರ್ನಿರ್ಘುಷ್ಟಂ ಕ್ರೂರತೋಜ್ಝಿತಂ ॥ ೨೫ ॥

ದ್ರುಮಜಾತಿಭಿರನ್ಯಾಭೀ ರಾಜಿತಂ ರಾಜತಪ್ರಭಂ
ನಾನಾಜಲಪ್ರಸ್ರವಣೈಸಮರ್ಸೈಸ್ಸಿದ್ಧಯೋಷಿತಾಂ ॥ ೨೬ ॥

---

೨೧-೨೫ ಬ್ರಹ್ಮನು ಹೇಳಿದನು :—ವಿಷ್ಣುವು ಹೀಗೆ ನನಗೆ ಅಪ್ಪಣೆಮಾಡಿ ದೇವತೆಗಳೊಡನೆ ಶಂಕರನಿಗೆ ಅತಿಪ್ರಿಯವಾದ ಕೈಲಾಸಕ್ಕೆ ತೆರಳಿದನು. ಆ ಕೈಲಾಸದಲ್ಲಿ ಕಿನ್ನರರು, ಅಪ್ಸರೆಯರು, ಯೋಗಿಗಳು, ಸಿದ್ಧರು ಮೊದಲಾದವರು ಪರಮೇಶ್ವರನನ್ನಾರಾಧಿಸುತ್ತಾ ವಾಸವಾಗಿದ್ದರು. ಮಣಿಮಯವಾದ ಮಹಾಶಿಖರಗಳಿಂದ ಆ ಗಿರಿಯು ಶೋಭಿಸುತ್ತಲಿದ್ದಿತು. ಗೈರಿಕಾದಿಧಾತುಗಳಿಂದ ವಿಚಿತ್ರವಾಗಿತ್ತು. ವಿಧವಿಧವಾದ ವೃಕ್ಷಗಳು, ಲತೆಗಳು, ಅಲ್ಲಿ ಫಲಪುಷ್ಪಭರಿತಗಳಾಗಿ ಶೋಭಿಸುತ್ತಲಿದ್ದುವು. ಅನೇಕ ಮೃಗಗಳು ವಾಸವಾಗಿರುವುವು. ಆ ಗಿರಿಯು ಬೆಳ್ಳಿಯಂತೆ ಬಿಳಿಯವರ್ಣವುಳ್ಳದುದು. ಹುಲಿ, ಸಿಂಹ ಮೊದಲಾದ ಕ್ರೂರಪ್ರಾಣಿಗಳೂ ಸಹ ಅಲ್ಲಿ ತಮ್ಮ ಕ್ರೂರತೆಯನ್ನು ಬಿಟ್ಟು ಶಾಂತಿಯಿಂದ ಇರುವವು

೨೬-೨೮. ಮತ್ತು ಆ ಕೈಲಾಸಗಿರಿಯಲ್ಲಿ ಮನೋಹರವಾದ ಬಗೆಬಗೆಯ ಪಕ್ಷಿಗಳು ವಾಸವಾಗಿದ್ದುವು. ಅನೇಕ ಜಾತಿಯ ಸುಂದರ ವೃಕ್ಷಗಳು ಅಲ್ಲಿ ಶೋಭಿಸುತ್ತ

ರಮಣೈರ್ವಿಹರಂತೀನಾಂ ನಾನಾಕಂದರಸಾನುಭಿಃ ।
ಸರ್ವಶೋಭಾನ್ವಿತಂ ದಿವ್ಯಂ ಮಹಾವಿಸ್ಮಯಕಾರಕಂ ॥ ೨೭ ॥

ಪರ್ಯಸ್ತಂ ಗಂಗಯಾ ಸತ್ಯಾ ಸ್ಥಾನುಪುಣ್ಯತರೋದಯಾ ।
ಸರ್ವಪಾವನಸಂಕರ್ತ್ರ್ಯಾ ವಿಷ್ಣುಪದ್ಯಾ ಸುನಿರ್ಮಲಂ ॥ ೨೮ ॥

ಏವಂವಿಧಂ ಗಿರಿಂ ದೃಷ್ಟ್ವಾ ಕೈಲಾಸಾಖ್ಯಂ ಶಿವಪ್ರಿಯಂ ।
ಯಯುಸ್ತೇ ವಿಸ್ಮಯಂ ದೇವಾ ವಿಷ್ಣ್ವಾದ್ಯಾಸ್ಸಮುನೀಶ್ವರಾಃ ॥ ೨೯ ॥

ತತ್ಸಮೀಪೇಽಲಕಾಂ ರಮ್ಯಾಂ ದದೃಶುರ್ನಾಮ ತೇ ಪುರೀಂ ।
ಕುಬೇರಸ್ಯ ಮಹಾದಿವ್ಯಾಂ ರುದ್ರಮಿತ್ರಸ್ಯ ನಿರ್ಜರಾಃ ॥ ೩೦ ॥

ವನಂ ಸೌಗಂಧಿಕಂ ಚಾಪಿ ದದೃಶುಸ್ತತ್ಸಮೀಪತಃ ।
ಸರ್ವದ್ರುಮಾನ್ವಿತಂ ದಿವ್ಯಂ ಯತ್ರ ತನ್ನಾದಮುದ್ಭುತಂ ॥ ೩೧ ॥

ತದ್ಬಾಹ್ಯತಸ್ತಸ್ಯ ದಿವ್ಯೇ ಸರಿತಾವತಿ ಪಾವನೇ ।
ನಂದಾ ಚಾಲಕನಂದಾ ಚ ದರ್ಶನಾತ್ಪಾಪಹಾರಿಕೇ ॥ ೩೨ ॥

---

ಲಿದ್ದುವು. ಆ ಗಿರಿಯ ಏಕಾಂತವಾದ ಗುಹೆಗಳಲ್ಲಿ ಸಿದ್ಧ ಸ್ತ್ರೀಪುರುಷರು ವಿಹರಿಸುತ್ತ ಲಿದ್ದರು. ಅನೇಕ ಗಿರಿನದಿಗಳು ಮಂಜುಳನಿನಾದದೊಡನೆ ಹರಿಯುತ್ತಲಿದ್ದುವು. ಪವಿತ್ರವಾದ ಜಲವುಳ್ಳ ಗಂಗಾನದಿಯು ಆ ಗಿರಿಯ ಸುತ್ತಲೂ ತಪ್ಪಲಲ್ಲಿ ಹರಿಯುತ್ತ ಲಿದ್ದಿತು.

೨೯-೩೨. ಈರೀತಿಯಾಗಿರುವ ಶಿವಪ್ರಿಯವಾದ ಆ ಕೈಲಾಸಗಿರಿಯನ್ನು ನೋಡಿ ವಿಷ್ಣುವೇ ಮೊದಲಾದ ದೇವತೆಗಳೂ ಮತ್ತು ಮುನಿಗಳೂ ತುಂಬಾ ವಿಸ್ಮಯ ಗೊಂಡರು. ಆ ಗಿರಿಯ ಸಮೀಪದಲ್ಲಿಯೇ ಶಂಕರಮಿತ್ರನಾದ ಕುಬೇರನ ರಾಜಧಾನಿ ಯಾದ ಅಲಕಾಪುರಿಯನ್ನೂ ನೋಡಿದರು. ಅದು ಬಹು ಮನೋಹರವಾಗಿತ್ತು. ಆ ಪುರದ ಸಮೀಪದಲ್ಲಿ ಸೌಗಂಧಿಕವೆಂಬ ಸುಂದರವಾದ ಕ್ರೀಡಾವನವಿರುವುದು. ಆ ವನವು ಸರ್ವವೃಕ್ಷಗಳಿಂದಲೂ ಕೂಡಿದ್ದು ಪಕ್ಷಿಗಳ ಇಂಪಾದ ಧ್ವನಿಯಿಂದ ಮನವನ್ನು ಸೆಳೆಯುತ್ತಲಿದ್ದಿತು. ಆ ವನದ ಸಮೀಪದಲ್ಲಿ ನಂದಾ ಮತ್ತು ಅಲಕನಂದಾ ಎಂಬೆರಡು ಪವಿತ್ರನದಿಗಳು ಹರಿಯುತ್ತಲಿದ್ದುವು.

ಪಪುಃ ಸುರಸ್ತ್ರಿಯೋ ನಿತ್ಯಮುವಗೂಹ್ಯ ಸ್ವಲೋಕತಃ ।
ವಿಗಾಹ್ಯ ಪುಂಭಿಸ್ತಾಸ್ತತ್ರ ಕ್ರೀಡಂತಿ ರತಿಕರ್ಶಿತಾಃ ॥ ೩೩ ॥

ಹಿತ್ವಾ ಯಕ್ಷೇಶ್ವರಪುರೀಂ ವನಂ ಸೌಗಂಧಿಕಂ ಚ ತತ್ ।
ಗಚ್ಛಂತಸ್ತೇ ಸುರಾ ಆರಾದ್ದದೃಶುಶ್ಶಾಂಕರಂ ವಟಂ ॥ ೩೪ ॥

ಪರ್ಯಕ್ ಕೃತಾಚಲಚ್ಛಾಯಂ ಪಾದೋನವಿಟಪಾಯತಂ ।
ಶತಯೋಜನಕೋತ್ಸೇಧಂ ನಿರ್ನೀಡಂ ತಾಪವರ್ಜಿತಂ ॥ ೩೫ ॥

ಮಹಾಪುಣ್ಯವತಾಂ ದೃಶ್ಯಂ ಸುರಮ್ಯಂ ಚಾತಿಪಾವನಂ ।
ಶಂಭುಯೋಗಸ್ಥಲಂ ದಿವ್ಯಂ ಯೋಗಿಸೇವ್ಯಂ ಮಹೋತ್ತಮಂ ॥ ೩೬ ॥

ಮುಮುಕ್ಷುಶರಣೇ ತಸ್ಮಿನ್ಮಹಾಯೋಗಮಯೇ ವಟೇ ।
ಆಸೀನಂ ದದೃಶುಸ್ಸರ್ವೇ ಶಿವಂ ವಿಷ್ಣ್ವಾದಯಸ್ಸುರಾಃ ॥ ೩೭ ॥

---

೩೩. ಆ ಅಲಂಕನಂದಾ ಮತ್ತು ನಂದಾನದಿಗಳಲ್ಲಿ ಪ್ರತಿನಿತ್ಯವೂ ದೇವತಾ ಸುಂದರಿಯರು ತಮ್ಮ ಪ್ರಿಯರೊಡನೆ ಬಂದು ಜಲಕೇಳಿಯನ್ನಾಡುತ್ತಾ ಅನೇಕಬಗೆಯಾಗಿ ರಮಿಸುವರು.

೩೪. ದೇವತೆಗಳು ಆ ಅಲಕಾಪಟ್ಟಣವನ್ನೂ ಸೌಗಂಧಿಕವನವನ್ನೂ ಬಿಟ್ಟು ಮುಂದೆ ಹೋಗುತ್ತಾ ಸ್ವಲ್ಪದೂರದಲ್ಲಿ ಶಂಕರನ ವಿಶ್ರಾಂತಿಸ್ಥಾನವಾದ ವಟವೃಕ್ಷವನ್ನು ನೋಡಿದರು.

೩೫-೩೬. ಆ ಮಹಾವಟವು ತನ್ನ ಕೊಂಬೆಗಳನ್ನು ದಿಕ್ಕುದಿಕ್ಕುಗಳಿಗೂ ಪ್ರಸರಿಸಿದ್ದಿತು. ಎಪ್ಪತ್ತೈದುಯೋಜನ ಅಗಲವಾಗಿದ್ದಿತು. ನೂರುಯೋಜನ ಎತ್ತರವಾಗಿದ್ದಿತು. ಪಕ್ಷಿಗಳ ಗೂಡುಗಳಿಲ್ಲದೇ ನಿರ್ಮಲವಾಗಿದ್ದಿತು. ಎಲೆಗಳಿಂದ ನಿಬಿಡವಾಗಿ ಮುಚ್ಚಲ್ಪಟ್ಟು ತಂಪಾದ ನೆರಳನಿಂದ ಬಹು ಹಿತಕರವಾಗಿದ್ದಿತು. ಮಹಾಪುಣ್ಯವಂತರೇ ಆ ವೃಕ್ಷವನ್ನು ನೋಡಬಲ್ಲರು. ಅದು ಅಷ್ಟು ಪವಿತ್ರವಾದುದು ಮತ್ತು ರಮ್ಯವಾದುದು. ಅಲ್ಲಿ ಯೋಗಿಗಳು ಬಂದು ಶಿವನನ್ನು ಸೇವಿಸುವರು. ಶಿವನು ಅಲ್ಲಿ ಯೋಗಸಮಾಧಿಗೆ ಕುಳಿತುಕೊಳ್ಳುವನು. ಇಂತಹ ಮಹೋತ್ತಮ ವೃಕ್ಷವದು.

೩೭-೪೦. ಮುಕ್ತಿಯನ್ನು ಬಯಸುವ ವಿರಕ್ತರಿಗೆ ಆಶ್ರಯವಾದ ಆ ಮಹಾಯೋಗಮಯವಾದ ವಟವೃಕ್ಷದ ನೆರಳಿನಲ್ಲಿ ಶಿವನು ಮಂಡಿಸಿದ್ದನು. ಮಹಾಸಿದ್ಧ

ವಿಧಿಪುತ್ರೈರ್ಮಹಾಸಿದ್ಧೈಶ್ಶಿವಭಕ್ತಿರತೈಸ್ಸದಾ ।
ಉಪಾಸ್ಯಮಾನಂ ಸುಮುದಾ ಶಾಂತೈಸ್ಸಂಶಾಂತವಿಗ್ರಹೈಃ ॥ ೩೮ ॥

ತಥಾ ಸಖ್ಯಾ ಕುಬೇರೇಣ ಭರ್ತ್ರಾ ಗುಹ್ಯಕರಕ್ಷಸಾಂ ।
ಸೇವ್ಯಮಾನಂ ವಿಶೇಷೇಣ ಸ್ವಗಣೈರ್ಜ್ಞಾತಿಭಿಸ್ಸದಾ ॥ ೩೯ ॥

ತಾಪಸಾಭೀಷ್ಟಸದ್ರೂಪಂ ಬಿಭ್ರತಂ ಪರಮೇಶ್ವರಂ ।
ವಾತ್ಸಲ್ಯಾದ್ವಿಶ್ವಸುಹೃದಂ ಭಸ್ಮಾದಿಸುವಿರಾಜಿತಂ ॥ ೪೦ ॥

ಮುನೇ ತುಭ್ಯಂ ಪ್ರವೋಚಂತಂ ಪೃಚ್ಛತೇ ಜ್ಞಾನಮುತ್ತಮಂ ।
ಕುಶಾಸನೇ ಸೂಪವಿಷ್ಟಂ ಸರ್ವೇಷಾಂ ಶೃಣ್ವತಾಂ ಸತಾಂ ॥ ೪೧ ॥

ಕೃತ್ವೋರೌ ದಕ್ಷಿಣೇ ಸವ್ಯಂ ಚರಣಂ ಚೈವ ಜಾನುನಿ ।
ಬಾಹುಪ್ರಕೋಷ್ಠಾಕ್ಷಮಾಲಂ ಸ್ಥಿತಂ ಸತ್ತರ್ಕಮುದ್ರಯಾ ॥ ೪೨ ॥

ಏವಂವಿಧಂ ಶಿವಂ ದೃಷ್ಟ್ವಾ ತದಾ ವಿಷ್ಣ್ವಾದಯಸ್ಸುರಾಃ ।
ಪ್ರಣೇಮುಸ್ತ್ವರಿತಂ ಸರ್ವೇ ಕರೌ ಬದ್ಧ್ವಾ ವಿನಮ್ರಕಾಃ ॥ ೪೩ ॥

---

ರಾದ ಸನಕಾದಿಮುನಿಗಳು ಭಕ್ತಿಯಿಂದ ಆ ಶಿವನನ್ನು ಸೇವಿಸುತ್ತಲಿದ್ದರು. ಅಲ್ಲದೆ, ಯಕ್ಷ ರಾಕ್ಷಸರಿಗೆ ಪ್ರಭುವಾದ ಶಿವನಿಗೆ ಪರಮಸಖನಾದ ಕುಬೇರನು ತನ್ನ ಗಣಗಳಿಂದಲೂ ಬಂಧುಗಳಿಂದಲೂ ಆ ಶಿವನನ್ನು ಸೇವಿಸುತ್ತಲಿದ್ದನು. ತಪಸ್ವಿಗಳಿಗೆ ಸಹಜವಾದ ಶಾಂತಮುದ್ರೆಯಿಂದ ಕೂಡಿ ಪ್ರಸನ್ನಮುಖದಿಂದ ಶೋಭಿಸುತ್ತಲಿದ್ದನು. ಮುಖದಲ್ಲಿ ವಾತ್ಸಲ್ಯವು ಹೊರಸೂಸುತ್ತಲಿದ್ದಿತು. ಪವಿತ್ರವಾದ ಭಸ್ಮವನ್ನು ಶರೀರದಲ್ಲಿ ಲೇಪಿಸಿಕೊಂಡಿದ್ದನು.

೪೧-೪೨. ಎಲೈ ನಾರದ, ಪ್ರಶ್ನಿಸುತ್ತಲಿರುವ ನಿನಗೆ ಎಲ್ಲರಿಗೂ ಕೇಳಿಸುವಂತೆ ಉತ್ತಮಜ್ಞಾನವನ್ನು ಉಪದೇಶಿಸುತ್ತಲಿದ್ದನು. ದರ್ಭಾಸನದಲ್ಲಿ ಕುಳಿತು ಬಲಗಾಲನ್ನು ಎಡತೊಡೆಯಲ್ಲಿ ಸೇರಿಸಿ, ಎಡಗಾಲನ್ನು ಬಲಜಾನುವಿನ ಕೆಳಗಿರಿಸಿ ಪದ್ಮಾಸನವನ್ನು ಹಾಕಿ ಕುಳಿತಿದ್ದನು. ಬಲಗೈಯಿನ ಪ್ರಕೋಷ್ಠ (ಮುಂಭಾಗ) ಭಾಗದಲ್ಲಿ ಜಪಮಾಲೆಯನ್ನು ಧರಿಸಿದ್ದನು. ಒಳ್ಳೆಯ ಗಹನವಾದ ಯಾವದೋ ಒಂದು ತತ್ತ್ವವನ್ನು ವಿಚಾರಮಾಡುವಂತಹ ಚಿಂತಾಮುದ್ರೆಯಿಂದ ಕೂಡಿದ್ದನು.

೪೩. ಈರೀತಿಯಾಗಿರುವಂತಹ ಶಿವನನ್ನು ನೋಡಿ ಆಗ ಹರಿಯೇ ಮೊದಲಾದ ದೇವತೆಗಳು ತ್ವರೆಯಿಂದ ಕೈಕಟ್ಟಿಕೊಂಡು ಬಗ್ಗಿ ನಮಸ್ಕರಿಸಿದರು.

ಉಪಲಭ್ಯಾಗತಂ ರುದ್ರೋ ಮಯಾ ವಿಷ್ಣುಂ ಸತಾಂ ಗತಿಃ ।
ಉತ್ಥಾಯ ಚಕ್ರೇ ಶಿರಸಾಭಿವಂದನಮಪಿ ಪ್ರಭುಃ ॥ ೪೪ ॥

ವಂದಿತಾಂಘ್ರಿಸ್ತದಾ ಸರ್ವೈರ್ದಿವ್ಯೈರ್ವಿಷ್ಣ್ವಾದಿಭಿಶ್ಶಿವಃ ।
ನಾನಾಮಾಥ ಯಥಾ ವಿಷ್ಣುಂ ಕಶ್ಯಪಂ ಲೋಕಸದ್ಗತಿಃ ॥ ೪೫ ॥

ಸುರಸಿದ್ಧಗಣಾಧೀಶಮಹರ್ಷಿಸುನಮಸ್ಕೃತಂ ।
ಸಮುವಾಚ ಸುರೈರ್ವಿಷ್ಣುಂ ಕೃತಸನ್ನತಿಮಾದರಾತ್ ॥ ೪೬ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಸತೀಖಂಡೇ ಚತ್ವಾರಿಂಶೋಽಧ್ಯಾಯಃ

---

೪೪. ನನ್ನೊಡನೆ ವಿಷ್ಣುವು ಬಂದಿರುವುದನ್ನು ನೋಡಿ ರುದ್ರನು ತಾನೂ ಎದ್ದು ಶಿರಸ್ಸಿನಿಂದ ಪ್ರತ್ಯಭಿವಾದನವನ್ನು ಮಾಡಿದನು.

೪೫-೪೬. ದೇವತೆಗಳು, ಸಿದ್ಧರು, ಗಣಾಧಿಪತಿ, ಮಹರ್ಷಿಗಳು ಇವರೆಲ್ಲರಿಂದಲೂ ನಮಸ್ಕೃತನಾದ ಆ ಪರಮೇಶ್ವರನನ್ನು ವಿಷ್ಣುವು ಬಹು ಭಕ್ತಿಯಿಂದ ನಮಸ್ಕರಿಸಿ ಹೀಗೆ ಹೇಳಿದನು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ನಲವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಸತೀಖಂಡೇ

## ಏಕಚತ್ವಾರಿಂಶೋಽಧ್ಯಾಯಃ

---

॥ ವಿಷ್ಣ್ವಾದಯ ಊಚುಃ ॥

ದೇವದೇವ ಮಹಾದೇವ ಲೌಕಿಕಾಚಾರಕೃತ್ಪ್ರಭೋ ।
ಬ್ರಹ್ಮ ತ್ವಾಮೀಶ್ವರಂ ಶಂಭುಂ ಜಾನೀಮಃ ಕೃಪಯಾ ತವ ॥ ೧ ॥

ಕಿಂ ಮೋಹಯಸಿ ನಸ್ತಾತ ಮಾಯಯಾ ಪರಯಾ ತವ ।
ದುರ್ಜ್ಞೇಯಯಾ ಸದಾ ಪುಂಸಾಂ ಮೋಹಿನ್ಯಾ ಪರಮೇಶ್ವರ ॥ ೨ ॥

ಪ್ರಕೃತೇಃ ಪುರಷಸ್ಯಾಪಿ ಜಗತೋ ಯೋನಿಬೀಜಯೋಃ ।
ಪರಬ್ರಹ್ಮ ಪರಸ್ತ್ವಂ ಚ ಮನೋವಾಚಾಮಗೋಚರಃ ॥ ೩ ॥

---

## ನಲವತ್ತೊಂದನೆಯ ಅಧ್ಯಾಯವು.

೧-೨. ವಿಷ್ಣು ಮೊದಲಾದವರು ಹೇಳಿದರು :—ದೇವದೇವನಾದ ಓ ಮಹಾದೇವನೆ, ಲೋಕಾಚಾರದಂತೆ ಓರ್ವ ಸಾಮಾನ್ಯದೇವನಂತೆ ನೀನು ಆಚರಿಸುತ್ತಿದ್ದರೂ ನಿನ್ನನ್ನು ನಾವು ಬ್ರಹ್ಮವಸ್ತುವೆಂತಲೂ ನೀನೇ ಪರಮೇಶ್ವರನೆಂತಲೂ ತಿಳಿದಿರುವೆವು. ಇದು ನಿನ್ನ ಅನುಗ್ರಹವು, ಓ ಜಗದ್ಗುರುವೇ, ತಿಳಿಯಲಸಾಧ್ಯವಾದ ನಿನ್ನ ಮಹಾಮಾಯೆಯಿಂದ ನಮ್ಮನ್ನು ಸುಮ್ಮನೆ ಏಕೆ ಮೋಹಗೊಳಿಸುವೆ?

೩-೪. ಜಗತ್ತಿಗೆ ಯೋನಿ ಮತ್ತು ಬೀಜಗಳಾದ ಪ್ರಕೃತಿ ಮತ್ತು ಪುರುಷರುಗಳಿಗಿಂತಲೂ ನೀನು, ಪರನು, ಪರಬ್ರಹ್ಮನು. ನಿನ್ನ ಸ್ವರೂಪವು ಮನಸ್ಸು ಮತ್ತು

ತ್ವಮೇವ ವಿಶ್ವಂ ಸೃಜಸಿ ಪಾಸ್ಯಸಿ ನಿಜತಂತ್ರತಃ ।
ಸ್ವರೂಪಾಂ ಶಿವಶಕ್ತಿಂ ಹಿ ಕ್ರೀಡನ್ನೂರ್ಣಪಟೋ ಯಥಾ ॥ ೪ ॥

ತ್ವಮೇವ ಕ್ರತುಮೀಶಾನ ಸಸರ್ಜಿಥ ದಯಾಪರಃ ।
ಶ್ರದ್ಧೇಣ ಸೂತ್ರೇಣ ವಿಭೋ ಸದಾ ತ್ರಯ್ಯಭಿಪತ್ತಯೇ ॥ ೫ ॥

ತ್ವಯೈವ ಲೋಕೇಽವಸಿತಾಸ್ಸೇತವೋ ಯರ್ಾ ಧೃತವ್ರತಾಃ ।
ಯದರ್ಥ ಶ್ರದ್ಧಧತೇ ವಿಪ್ರಾ ವೇದಮಾರ್ಗವಿಚಕ್ಷಣಾಃ ॥ ೬ ॥

ಕರ್ತಾ ತ್ವಂ ಮಂಗಲಾನಾಂ ಹಿ ಸ್ವಪರಂ ಹಿ ಮಖೇ ವಿಭೋ ।
ಅಮಂಗಲಾನಾಂ ಚ ಹಿತಂ ಮಿಶ್ರಂ ವಾಥ ವಿಪರ್ಯಯಂ ॥ ೭ ॥

ಸರ್ವಕರ್ಮಫಲಾನಾಂ ಹಿ ಸದಾ ದಾತಾ ತ್ವಮೇವ ಹಿ ।
ಸರ್ವೇ ಪ್ರೋಕ್ತಾ ಹಿ ಯಶಸ್ತತ್ಪತಿಸ್ತ್ವಂ ಶ್ರುತಿಶ್ರುತಃ ॥ ೮ ॥

ಪೃಥಗ್ಧಿಯಃ ಕರ್ಮದೃಶೋಽರುಂತುದಾಶ್ಚ ದುರಾಶಯಾಃ ।
ತುದಂತಿ ಪರಾನ್ ಮೂಢಾ ದುರೂಹೈರ್ಮತ್ಸರಾನ್ವಿತಾಃ ॥ ೯ ॥

---

ವಾಕ್ಕುಗಳಿಗೆ ನಿಲುಕದಂತಹುದು. ರೇಶಿಮೆಹುಳುವು ದಾರವನ್ನು ತಾನೇ ಬಿಟ್ಟು, ಪ್ರಸ
ಕ ತಿರುಗಿ ತನ್ನಲ್ಲಿ ಸೇರಿಸಿಕೊಳ್ಳುವಂತೆ ನೀನೂ ಸಹ ನಿನ್ನಚ್ಛೆಯಿಂದಲೇ ಜಗತ್ತನ್ನು
ಸೃಜಿಸುವೆ, ಪಾಲಿಸುವೆ, ತಿರುಗಿ ಸಂಹರಿಸುವೆ.

೫. ಓ ಪ್ರಭು, ದೇವತೆಗಳಿಗಾಗಿ ಮೂರು ವೇದಗಳಲ್ಲಿ ಹೇಳಲ್ಪಟ್ಟಿರುವ
ಯಜ್ಞಾದಿಕರ್ಮಗಳನ್ನು ನೀನೇ ದಯೆಯಿಂದ ಸೃಜಿಸಿರುವೆ.

೬-೮. ಓ ಸ್ವಾಮಿಯೆ, ಲೋಕಾಚಾರಗಳು ನಿನ್ನಿಂದ ನಿಂತಿರುವುವು. ಅವು
ಗಳನ್ನು ವೇದವಿತ್ತುಗಳಾದ ಬ್ರಾಹ್ಮಣರು ಶ್ರದ್ಧೆಯಿಂದ ಆಚರಿಸುವರು. ಯಾಗದಲ್ಲಿ
ಮಂಗಳವನ್ನೋ ಅಮಂಗಳವನ್ನೋ ಅಥವಾ ಮಿಶ್ರಫಲವನ್ನೋ ಅವರವರ ಕರ್ಮಕ್ಕೆ
ತಕ್ಕಂತೆ ಕೊಡುವವನು ನೀನೇ ಆಗಿರುವೆ. ಎಲ್ಲಾ ಕರ್ಮಫಲಗಳನ್ನೂ ನೀನು
ನೀಡುವೆ. ಎಲ್ಲರೂ ನಿನ್ನ ಕೀರ್ತಿಯನ್ನು ಗಾನಮಾಡುವರು. ವೇದವು ನಿನ್ನನ್ನು
ಹೊಗಳುವುದು.

೯-೧೦. ಭೇದಬುದ್ಧಿಯುಳ್ಳ ಕರ್ಮಠರಾದ ದುರಭಿಪ್ರಾಯವುಳ್ಳ ಕೆಲವು

ತೇಷಾಂ ದೈವವಧಾನಾಂ ಭೋ ಭೂಯಾತ್ತ್ವಚ್ಚ ವಧೋ ವಿಭೋ ।
ಭಗವನ್ ಪರಮೇಶಾನ ಕೃಪಾಂ ಕುರು ಪರಪ್ರಭೋ　　॥ ೧೦ ॥

ನಮೋ ರುದ್ರಾಯ ಶಾಂತಾಯ ಬ್ರಹ್ಮಣೇ ಪರಮಾತ್ಮನೇ ।
ಕಪರ್ದಿನೇ ಮಹೇಶಾಯ ಜ್ಯೋತ್ಸ್ನಾಯ ಮಹತೇ ನಮಃ　　॥ ೧೧ ॥

ತ್ವಂ ಹಿ ವಿಶ್ವಸೃಜಾಂ ಸ್ರಷ್ಟಾ ಧಾತಾ ತ್ವಂ ಪ್ರಪಿತಾಮಹಃ ।
ತ್ರಿಗುಣಾತ್ಮಾ ನಿರ್ಗುಣಶ್ಚ ಪ್ರಕೃತೇಃ ಪುರುಷಾತ್ಪರಃ　　॥ ೧೨ ॥

ನಮಸ್ತೇ ನೀಲಕಂಠಾಯ ವೇಧಸೇ ಪರಮಾತ್ಮನೇ ।
ವಿಶ್ವಾಯ ವಿಶ್ವಬೀಜಾಯ ಜಗದಾನಂದಹೇತವೇ　　॥ ೧೩ ॥

ಓಂಕಾರಸ್ತ್ವಂ ವಷಟ್ಕಾರಸ್ಸರ್ವಾರಂಭಪ್ರವರ್ತಕಃ ।
ಹಂತಕಾರಸ್ಸ್ವಧಾಕಾರೋ ಹವ್ಯಕವ್ಯಾನ್ನಭುಕ್ಸದಾ　　॥ ೧೪ ॥

---

ಮೂರ್ಖರು, ಅಸೂಯೆಯಿಂದ ಮಹಾತ್ಮರನ್ನು ನಿಂದಿಸುವರು. ಪೀಡಿಸುವರು, ಅಂಥವರನ್ನು ನೀನೇ ಶಿಕ್ಷಿಸುವೆ. ಓ ಪರಮೇಶ್ವರ, ನಮ್ಮಲ್ಲಿ ಅನುಗ್ರಹವನ್ನು ಮಾಡು.

೧೧. ಶಾಂತಸ್ವರೂಪನೂ, ರುದ್ರ (ಭಯಂಕರ) ಸ್ವರೂಪನೂ ಆದ ನಿನಗೆ ನಮಸ್ಕಾರವು. ವ್ಯಾಪಕವಾದ ಪರಮೇಶ್ವರನಿಗೆ ನಮಸ್ಕಾರವು. ನೀನೇ ಪರಮಾತ್ಮನು ಜ್ಞಾನಜ್ಯೋತಿಸ್ವರೂಪನು. ಇಂತಹ ನಿನಗೆ ನಮಸ್ಕಾರವು.

೧೨. ನೀನು ಜಗತ್ತನ್ನು ಸೃಜಿಸುವ ಪ್ರಜಾಪತಿಗಳನ್ನೂ ಸೃಜಿಸುವವನು. ಆದಕಾರಣ ನೀನು ಜಗತ್ತಿಗೆ ಪ್ರಪಿತಾಮಹನು. ಮಾಯಿಕವಾದ ಸತ್ವ. ರಜಸ್ಸು, ತಮಸ್ಸುಗಳೆಂಬ ತ್ರಿಗುಣಸ್ವರೂಪನಾದ ಪರಮೇಶ್ವರನು. ಆದರೆ ನಿಜವಾಗಿ ನಿನಗೆ ಆ ಗುಣಗಳ ಸಂಬಂಧವಿಲ್ಲ. ಪ್ರಕೃತಿಪುರುಷರಿಗಿಂತಲೂ ಉತ್ಕೃಷ್ಟನಾದವನು, ಬೇರೆಯಾದವನು.

೧೩. ಜಗತ್ತನ್ನು ಸೃಜಿಸುವವನೂ, ಪರಮಾತ್ಮನೂ ಆದ ನೀಲಕಂಠನಿಗೆ ನಮಸ್ಕಾರವು ಜಗದ್ರೂಪನೂ, ಜಗತ್ಕಾರಣನೂ, ಆ ಜಗತ್ತಿಗೆ ಆನಂದವನ್ನುಂಟು ಮಾಡುವವನೂ ಆದ ಓ ಪರಮೇಶ್ವರನೇ, ಇಗೋ ನಿನಗೆ ನಮಸ್ಕಾರಮಾಡುವೆವು.

೧೪-೧೫. ನೀನು ಓಂಕಾರಸ್ವರೂಪನು, ವಷಟ್ಕಾರಸ್ವರೂಪನು. ಎಲ್ಲಾ ಕರ್ಮಗಳನ್ನೂ ನಡೆಸುವವನು, ಹಂತಕಾರಸ್ವರೂಪನು, ಸ್ವಧಾಸ್ವರೂಪನು, ಹವ್ಯ

ಕೃತಃ ಕಥಂ ಯಜ್ಞಭಂಗಸ್ತ್ವಯಾ ಧರ್ಮಪರಾಯಣಃ ।
ಬ್ರಹ್ಮಣ್ಯಸ್ತ್ವಂ ಮಹಾದೇವ ಕಥಂ ಯಜ್ಞಹನೋಽಭವಃ ॥ ೧೫ ॥

ಬ್ರಾಹ್ಮಣಾನಾಂ ಗವಾಂ ಚೈವ ಧರ್ಮಸ್ಯ ಪ್ರತಿಪಾಲಕಃ ।
ಶರಣ್ಯೋಽಸಿ ಸದಾನಂತ್ಯಃ ಸರ್ವೇಷಾಂ ಪ್ರಾಣಿನಾಂ ವಿಭೋ ॥ ೧೬ ॥

ನಮಸ್ತೇ ಭಗವನ್ ರುದ್ರ ಭಾಸ್ಕರಾಮಿತತೇಜಸೇ ।
ನಮೋ ಭವಾಯ ದೇವಾಯ ರಸಾಯಾಂಬುಮಯಾಯ ಚ ॥ ೧೭ ॥

ಶರ್ವಾಯ ಕ್ಷಿತಿರೂಪಾಯ ಸದಾ ಸುರಭಿಣೇ ನಮಃ ।
ರುದ್ರಾಯಾಗ್ನಿಸ್ವರೂಪಾಯ ಮಹಾತೇಜಸ್ವಿನೇ ನಮಃ ॥ ೧೮ ॥

ಈಶಾಯ ವಾಯವೇ ತುಭ್ಯಂ ಸಂಸ್ಪರ್ಶಾಯ ನಮೋನಮಃ ।
ಮಹಾದೇವಾಯ ಸೋಮಾಯ ಪ್ರವೃತ್ತಾಯ ನಮೋಽಸ್ತು ತೇ ॥ ೧೯ ॥

ಪಶೂನಾಂ ಪತಯೇ ತುಭ್ಯಂ ಯಜಮಾನಾಯ ವೇಧಸೇ ।
ಭೀಮಾಯ ವ್ಯೋಮರೂಪಾಯ ಶಬ್ದಮಾತ್ರಾಯ ತೇ ನಮಃ ॥ ೨೦ ॥

---

ಕವ್ಯಗಳ ಸ್ವರೂಪನು, ಸದಾ ಧರ್ಮನಿಷ್ಠನು, ಬ್ರಾಹ್ಮಣರಕ್ಷಕನು. ಓ ಮಹಾದೇವ ಇಂತಹ ನೀನು ಯಜ್ಞನಾಶವನ್ನು ಹೇಗೆ ಮಾಡಿರುವೆ?

೧೬. ಓ ಪರಮೇಶ್ವರ, ಬ್ರಾಹ್ಮಣರು, ಗೋವುಗಳು, ಧರ್ಮ ಇವುಗಳನ್ನು ರಕ್ಷಿಸುವವನು ನೀನೇ ಅಲ್ಲವೇ? ಅಂತವಿಲ್ಲದ ನೀನು ಎಲ್ಲ ಪ್ರಾಣಿಗಳಿಗೂ ಶರಣ್ಯನು, ಎಲ್ಲರನ್ನೂ ರಕ್ಷಿಸುವವನು.

೧೭-೧೯ ಕೋಟಿಸೂರ್ಯತೇಜಸ್ವಿಯಾದ ಓ ರುದ್ರನೇ, ಓ ಭಗವಂತನೇ, ನಿನಗೆ ಪುನಃ ಪುನಃ ನಮಿಸುವೆವು. ಸಂಸಾರರೂಪನೂ, ಭೂರೂಪನೂ, ಜಲರೂಪನೂ, ಆದ ಶಂಕರನಿಗೆ ನಮಸ್ಕಾರವು. ಸುಖರೂಪನೂ, ಗಂಧಸ್ವರೂಪನೂ, ಅಗ್ನಿರೂಪನೂ ಆದ ದೇವನಿಗೆ ನಮಸ್ಕಾರವು ಪರಮೇಶ್ವರನೂ, ವಾಯುರೂಪನೂ, ಸ್ಪರ್ಶರೂಪನೂ ಆದ ಶಿವನಿಗೆ ನಮಸ್ಕಾರವು. ಚಂದ್ರರೂಪನೂ, ಕರ್ಮರೂಪನೂ ಆದ ಮಹಾದೇವನಿಗೆ ನಮಸ್ಕಾರವು.

೨೦. ಯಜಮಾನಸ್ವರೂಪನೂ, ಆಕಾಶಸ್ವರೂಪನೂ, ಶಬ್ದ (ಸೂಕ್ಷ್ಮಭೂತ) ಸ್ವರೂಪನೂ ಪಾಪಿಗಳಿಗೆ ಭಯಂಕರನೂ ಆದ ಪಶುಪತಿಗೆ ನಮಸ್ಕಾರವು.

ಉಗ್ರಾಯ ಸೂರ್ಯರೂಪಾಯ ನಮಸ್ತೇ ಕರ್ಮಯೋಗಿನೇ ।
ನಮಸ್ತೇ ಕಾಲಕಾಲಾಯ ನಮಸ್ತೇ ರುದ್ರಮನ್ಯವೇ ॥ ೨೧ ॥

ನಮಶ್ಶಿವಾಯ ಭೀಮಾಯ ಶಂಕರಾಯ ಶಿವಾಯ ತೇ ।
ಉಗ್ರೋಽಸಿ ಸರ್ವಭೂತಾನಾಂ ನಿಯಂತಾ ಯಚ್ಛಿವೋಽಸಿ ನಃ ॥ ೨೨ ॥

ಮಯಸ್ಕರಾಯ ವಿಶ್ವಾಯ ಬ್ರಹ್ಮಣೇ ಹ್ಯಾರ್ತಿನಾಶಿನೇ ।
ಅಂಬಿಕಾಪತಯೇ ತುಭ್ಯಮುಮಾಯಾಃ ಪತಯೇ ನಮಃ ॥ ೨೩ ॥

ಶರ್ವಾಯ ಸರ್ವರೂಪಾಯ ಪುರುಷಾಯ ಪರಾತ್ಮನೇ ।
ಸದಸದ್ವ್ಯಕ್ತಿಹೀನಾಯ ಮಹತಃ ಕಾರಣಾಯ ತೇ ॥ ೨೪ ॥

ಜಾತಾಯ ಬಹುಧಾ ಲೋಕೇ ಪ್ರಭೂತಾಯ ನಮೋ ನಮಃ ।
ನೀಲಾಯ ನೀಲರುದ್ರಾಯ ಕದ್ರುದ್ರಾಯ ಪ್ರಚೇತಸೇ ॥ ೨೫ ॥

---

೨೧ ಸೂರ್ಯರೂಪನೂ, ಜಗತ್ತಿನಲ್ಲಾಗುವ ಕರ್ಮಗಳಿಗೆ ಸಾಕ್ಷಿಯೂ, ಆದ ಓ ದೇವನೆ, ಜಗತ್ತನ್ನೇ ಪ್ರಳಯಿಸುವಂತಹ ನಿನ್ನ ಕೋಪಕ್ಕೆ ನಮಸ್ಕಾರ ಮಾಡುವೆವು.

೨೨-೨೫ ಮಂಗಳರೂಪನೂ ದುಷ್ಟರಿಗೆ ಭಯಂಕರನೂ, ಪುಣ್ಯವಂತರಿಗೆ ಸುಖವನ್ನು ಕೊಡುವವನೂ ಆದ ದೇವನಿಗೆ ನಮಸ್ಕಾರವು. ಓ ದೇವ, ನೀನು ಸಕಲ ಪ್ರಾಣಿಗಳಿಗೂ (ಪ್ರಳಯದಲ್ಲಿ) ಭಯಂಕರನು. ಆದರೆ ಎಲ್ಲ ಪ್ರಾಣಿಗಳನ್ನು ಆಳುವವನೂ ನೀನೇ ಆಗಿರುವೆ. ಜಗದ್ರೂಪನೂ, ಯಶಸ್ಸನ್ನುಂಟುಮಾಡುವವನೂ ನೀನು. ನೀನೇ ಜಗತ್ತನ್ನು ಸೃಷ್ಟಿಸುವೆ. ಭಕ್ತರ ಕಷ್ಟವನ್ನು ಹೋಗಲಾಡಿಸುವೆ. ಜಗನ್ಮಾತೆಯಾದ ದೇವಿಯ ಪತಿಯು ನೀನು. ತಿರುಗಿ ದೇವಿಯ ಎರಡನೆಯ ಅವತಾರವಾದ ಪಾರ್ವತಿಯ ಪತಿಯೂ ನೀನು. ನೀನು ಸುಖರೂಪನು, ಸಕಲ ಜಗದ್ರೂಪನು, ಜಗತ್ತೆಲ್ಲವನ್ನೂ ವ್ಯಾಪಿಸಿರುವನು, ಪರಮಾತ್ಮನು. ನಿನಗೆ ಯಾವ ರೀತಿಯಿಂದಲೂ ಜನ್ಮವಿಲ್ಲ. ಜಗತ್ತಿಗೆ ನೀನೇ ಆದಿಕಾರಣನು. ನೀನು ಒಬ್ಬನೇ ಆದರೂ ಜಗತ್ತಿನಲ್ಲಿ ಅನೇಕ ಜೀವರೂಪಗಳಿಂದ ಜನಿಸಿರುವೆ. ನೀಲವಾದ ಕಂಠದಿಂದ ಶೋಭಿಸುತ್ತಲಿರುವೆ. ನೀನು ಜಲರೂಪನು, ದುಷ್ಟರನ್ನು ನಿಗ್ರಹಿಸುವವನು. ಇಂತಹ ನಿನಗೆ ನಮಸ್ಕಾರವು.

ಮೀಢುಷ್ಟಮಾಯ ದೇವಾಯ ಶಿಪಿವಿಷ್ಟಾಯ ತೇ ನಮಃ ।
ಮಹೀಯಸೇ ನಮಸ್ತುಭ್ಯಂ ಹಂತ್ರೇ ದೇವಾರಿಣಾಂ ಸದಾ ॥ ೨೬ ॥

ತಾರಾಯ ಚ ಸುತರಾಯ ತರುಣಾಯ ಸುತೇಜಸೇ ।
ಹರಿಕೇಶಾಯ ದೇವಾಯ ಮಹೇಶಾಯ ನಮೋ ನಮಃ ॥ ೨೭ ॥

ದೇವಾನಾಂ ಶಂಭವೇ ತುಭ್ಯಂ ವಿಭವೇ ಪರಮಾತ್ಮನೇ ।
ಪರಮಾಯ ನಮಸ್ತುಭ್ಯಂ ಕಾಲಕಂಠಾಯ ತೇ ನಮಃ ॥ ೨೮ ॥

ಹಿರಣ್ಯಾಯ ಪರೇಶಾಯ ಹಿರಣ್ಯವಪುಷೇ ನಮಃ ।
ಭೀಮಾಯ ಭೀಮರೂಪಾಯ ಭೀಮಕರ್ಮರತಾಯ ಚ ॥ ೨೯ ॥

ಭಸ್ಮದಿಗ್ಧಶರೀರಾಯ ರುದ್ರಾಕ್ಷಾಭರಣಾಯ ಚ ।
ನಮೋ ಹ್ರಸ್ವಾಯ ದೀರ್ಘಾಯ ವಾಮನಾಯ ನಮೋಽಸ್ತು ತೇ ॥ ೩೦ ॥

ದೂರೇವಧಾಯ ತೇ ದೇವಾಗ್ರೇವಧಾಯ ನಮೋನಮಃ ।
ಧನ್ವಿನೇ ಶೂಲಿನೇ ತುಭ್ಯಂ ಗದಿನೇ ಹಲಿನೇ ನಮಃ ॥ ೩೧ ॥

---

೨೬-೩೦. ಓ ದೇವದೇವನೆ, ನೀನು ಭಕ್ತರನ್ನುದ್ಧರಿಸುವುದರಲ್ಲಿ ಅಗ್ರಗಣ್ಯನು ತೇಜಸ್ವರೂಪನು, ಪಿಂಗಳಕೇಶದಿಂದ ಶೋಭಿಸುತ್ತಿರುವ ಮಹಾದೇವನು. ದೇವತೆಗಳಿಗೆಲ್ಲಾ ಪ್ರಭುವಾದವನು. ಸಮಸ್ತ ಪ್ರಾಣಿಗಳಿಗೂ ಸುಖವನ್ನುಂಟುಮಾಡುವವನು' ಪರಮಾತ್ಮಸ್ವರೂಪನು. ಕಪ್ಪಾದ ಕಂಠದಿಂದಲೂ, ಸುವರ್ಣಮಯವಾದ ದೇಹಕಾಂತಿಯಿಂದಲೂ ಬೆಳಗುತ್ತಿರುವನು. ಪ್ರಳಯಕಾಲದಲ್ಲಿ ಉಗ್ರರೂಪವನ್ನು ತಾಳಿ ಮಹಾಭಯಂಕರನಾಗಿ ತೋರುವವನು. ಪವಿತ್ರವಾದ ಭಸ್ಮವನ್ನು ಶರೀರದಲ್ಲಿ ಲೇಪನಮಾಡಿಕೊಂಡು ರುದ್ರಾಕ್ಷಮಾಲೆಗಳನ್ನು ಧರಿಸಿ ಶೋಭಿಸುತ್ತಿರುವವನು. ಸಮಯೋಚಿತವಾಗಿ ಹ್ರಸ್ವ, ದೀರ್ಘ, ವಾಮನ ಮುಂತಾದ ರೂಪಗಳನ್ನು ಧರಿಸುವವನು, ಇಂತಹ ಪರಮೇಶ್ವರನಾದ ನಿನಗೆ ಅನಂತ ನಮಸ್ಕಾರಗಳು.

೩೧-೩೩. ದೂರದಲ್ಲಿಯೇ ಶತ್ರುಗಳನ್ನು ಸಂಹರಿಸುವವನೂ, ಎದುರಿನಲ್ಲಿಯೇ ಶತ್ರುಗಳನ್ನು ಸಂಹರಿಸುವವನೂ ಆದ ದೇವನಿಗೆ ನಮಸ್ಕಾರವು. ಧನುಸ್ಸು, ಶೂಲ, ಗದೆ, ಹಲ ಮುಂತಾದ ನಾನಾಯುಧಗಳನ್ನು ಧರಿಸಿ ದೈತ್ಯ ಮತ್ತು ದಾನವರನ್ನು

ನಾನಾಯುಧಧರಾಯೈವ ದೈತ್ಯದಾನವನಾಶಿನೇ ।
ಸದ್ಯಾಯ ಸದ್ಯರೂಪಾಯ ಸದ್ಯೋಜಾತಾಯ ವೈ ನಮಃ ॥ ೩೨ ॥

ವಾಮಾಯ ವಾಮರೂಪಾಯ ವಾಮನೇತ್ರಾಯ ತೇ ನಮಃ ।
ಅಘೋರಾಯ ಪರೇಶಾಯ ವಿಕಟಾಯ ನಮೋ ನಮಃ ॥ ೩೩ ॥

ತತ್ಪುರುಷಾಯ ನಾಥಾಯ ಪುರಾಣಪುರುಷಾಯ ಚ ।
ಪುರುಷಾರ್ಥಪ್ರದಾನಾಯ ವ್ರತಿನೇ ಪರಮೇಷ್ಠಿನೇ ॥ ೩೪ ॥

ಈಶಾನಾಯ ನಮಸ್ತುಭ್ಯಮೀಶ್ವರಾಯ ನಮೋ ನಮಃ ।
ಬ್ರಹ್ಮಣೇ ಬ್ರಹ್ಮರೂಪಾಯ ನಮಸ್ಸಾಕ್ಷಾತ್ಪರಾತ್ಮನೇ ॥ ೩೫ ॥

ಉಗ್ರೋಽಸಿ ಸರ್ವದುಷ್ಟಾನಾಂ ನಿಯಂತಾಸಿ ಶಿವೋಽಸಿ ನಃ ।
ಕಾಲಕೂಟಾಶಿನೇ ತುಭ್ಯಂ ದೇವಾದ್ಯವನಕಾರಿಣೇ ॥ ೩೬ ॥

ವೀರಾಯ ವೀರಭದ್ರಾಯ ರಕ್ಷದ್ವೀರಾಯ ಶೂಲಿನೇ ।
ಮಹಾದೇವಾಯ ಮಹತೇ ಪಶೂನಾಂ ಪತಯೇ ನಮಃ ॥ ೩೭ ॥

---

ನಾಶಮಾಡುವವನೂ, ಸದಾ ಹೊಸದಾದ ಸ್ವರೂಪವುಳ್ಳವನೂ, ಆಗ ತಾನೇ ಜನಿಸಿದ ಶಿಶುವಿನಂತೆ ನಿರ್ಮಲವಾದ ಹೃದಯವುಳ್ಳವನೂ ಆದ ದೇವನಿಗೆ ನಮಸ್ಕಾರವು. ಸುಂದರನೂ, ಸುಂದರವಾದ ರೂಪವುಳ್ಳವನೂ, ಸುಂದರವಾದ ನಯನಗಳುಳ್ಳವನೂ ಶಾಂತಸ್ವರೂಪನೂ, ವಕ್ರಸ್ವರೂಪನೂ ಆದ ಪರಮೇಶ್ವರನಿಗೆ ನಮಸ್ಕಾರವು.

೩೪-೩೬. ಮಹಾಪುರುಷನೂ, ಜಗನ್ನಾಥನೂ, ಅನಾದಿಪುರುಷನೂ, ಪುರುಷಾರ್ಥಗಳನ್ನು ಕೊಡುವವನೂ, ಭಕ್ತರನ್ನು ಸಲಹುವ ವ್ರತವನ್ನು ಕೈಗೊಂಡವನೂ, ಸರ್ವೋತ್ಕೃಷ್ಟನೂ, ಈಶಾನನೂ, ಆದ ಈಶ್ವರನಿಗೆ ನಮಸ್ಕಾರವು. ಜಗತ್ತನ್ನು ಸೃಷ್ಟಿಸುವ ಬ್ರಹ್ಮಸ್ವರೂಪನೂ, ಪರಮಾತ್ಮನೂ ಆದ ದೇವನಿಗೆ ನಮಸ್ಕಾರವು. ನೀನು ದುಷ್ಟರಿಗೆ ಉಗ್ರನಾಗಿರುವೆ. ಶಿಷ್ಟರನ್ನು ಸಲಹುವೆ. ಕಾಲಕೂಟ ವಿಷವನ್ನು ಭಕ್ಷಿಸಿ ದೇವತೆಗಳು ಮೊದಲಾದವರನ್ನು ರಕ್ಷಿಸಿರುವೆ. ಇಂತಹ ಮಹಿಮೆಯುಳ್ಳ ಮಂಗಳರೂಪನಾದ ನಿನಗೆ ನಮಸ್ಕಾರವು.

೩೭-೪೦. ವೀರನೂ, ವೀರಭದ್ರನೂ, ವೀರರನ್ನು ಸಲಹುವವನೂ, ತ್ರಿಶೂಲವನ್ನು ಧರಿಸಿರುವವನೂ, ದೇವದೇವನೂ ಆದ ಪಶುಪತಿಗೆ ನಮಸ್ಕಾರವು. ವೀರ

ವೀರಾತ್ಮನೇ ಸುವಿದ್ಯಾಯ ಶ್ರೀಕಂಠಾಯ ಪಿನಾಕಿನೇ ।
ನಮೋಽನಂತಾಯ ಸೂಕ್ಷ್ಮಾಯ ನಮಸ್ತೇ ಮೃತ್ಯುಮನ್ಯವೇ ॥ ೩೮ ॥

ಪರಾಯ ಪರಮೇಶಾಯ ಪರಾತ್ಪರತರಾಯ ಚ ।
ಪರಾತ್ಪರಾಯ ವಿಭವೇ ನಮಸ್ತೇ ವಿಶ್ವಮೂರ್ತಯೇ ॥ ೩೯ ॥

ನಮೋ ವಿಷ್ಣುಕಳತ್ರಾಯ ವಿಷ್ಣುಕ್ಷೇತ್ರಾಯ ಭಾನವೇ ।
ಭೈರವಾಯ ಶರಣ್ಯಾಯ ತ್ರ್ಯಂಬಕಾಯ ವಿಹಾರಿಣೇ ॥ ೪೦ ॥

ಮೃತ್ಯುಂಜಯಾಯ ಶೋಕಾಯ ತ್ರಿಗುಣಾಯ ಗುಣಾತ್ಮನೇ ।
ಚಂದ್ರಸೂರ್ಯಾಗ್ನಿನೇತ್ರಾಯ ಸರ್ವಕಾರಣಸೇತವೇ ॥ ೪೧ ॥

ಭವತಾ ಹಿ ಜಗತ್ಸರ್ವಂ ವ್ಯಾಪ್ತಂ ಸ್ವೇನೈವ ತೇಜಸಾ ।
ಪರಬ್ರಹ್ಮ ನಿರ್ವಿಕಾರೀ ಚಿದಾನಂದಃ ಪ್ರಕಾಶವಾನ್ ॥ ೪೨ ॥

ಬ್ರಹ್ಮವಿಷ್ಣ್ವಿಂದ್ರಚಂದ್ರಾದಿಪ್ರಮುಖಾಸ್ಸಕಲಾಸ್ಸುರಾಃ ।
ಮುನಯಶ್ಚಾಪರೇ ತ್ವತ್ತಸ್ಸಂಪ್ರಸೂತಾ ಮಹೇಶ್ವರ ॥ ೪೩ ॥

---

ಸ್ವರೂಪನೂ, ವಿದ್ಯಾಸ್ವರೂಪನೂ, ಪಿನಾಕಧನುಸ್ಸನ್ನು ಧರಿಸಿರುವವನೂ ಕೊನೆಯಿಲ್ಲದವನೂ, ಸೂಕ್ಷ್ಮಸ್ವರೂಪನೂ, ಭಯಂಕರವಾದ ಕೋಪವುಳ್ಳವನೂ ಆದಶ್ರೀಕಂಠನಿಗೆ ನಮಸ್ಕಾರವು. ಸರ್ವೋತ್ಕೃಷ್ಟನೂ, ಜಗದೊಡೆಯನೂ, ಜಗದ್ರೂಪನೂ ಆದ ಶಿವನಿಗೆ ನಮಸ್ಕಾರವು. ವಿಷ್ಣುವೇ ಪತ್ನಿಯಾಗುಳ್ಳವನೂ, ವಿಷ್ಣುವೇ ಕ್ಷೇತ್ರವಾಗುಳ್ಳವನೂ, ತೇಜಸ್ಸ್ವರೂಪನೂ, ಭಯಂಕರನೂ, ಅನಾಥರಕ್ಷಕನೂ, ಮೂರು ಕಣ್ಣುಗಳುಳ್ಳವನೂ ಆದ ಪರಮೇಶ್ವರನಿಗೆ ನಮಸ್ಕಾರವು.

೪೧-೪೩. ಎಲೈ ಮಹೇಶ್ವರನೇ ನೀನು ಮೃತ್ಯುವನ್ನೇ ಜಯಿಸಿದವನು. ಶೋಕವಿಲ್ಲದವನು, ಸತ್ತ್ವ ರಜಸ್ಸು ತಮಸ್ಸು ಎಂಬ ಮೂರು ಗುಣಗಳ ಸ್ವರೂಪನು, ಚಂದ್ರ, ಸೂರ್ಯ, ಅಗ್ನಿರೂಪಗಳಾದ ಮೂರು ಕಣ್ಣುಗಳು ನಿನಗಿರುವವು. ಎಲ್ಲ ಜಗತ್ತಿಗೂ ಆದಿಕಾರಣನು. ಇಂತಹ ದೇವನಿಗೆ ನಮಸ್ಕಾರವು. ಓ ದೇವನೇ, ನೀನು ನಿನ್ನ ತೇಜಸ್ಸಿನಿಂದ ಸಕಲ ಜಗತ್ತನ್ನೂ ವ್ಯಾಪಿಸಿರುವೆ. ನೀನು ಪರಬ್ರಹ್ಮನು, ಉತ್ಪತ್ತಿ ಮೊದಲಾದ ಯಾವ ವಿಕಾರಗಳೂ ನಿನಗಿಲ್ಲ. ನೀನು ಜ್ಞಾನಸ್ವರೂಪನು. ಆನಂದ

ಯತೋ ಬಿಭರ್ಷಿ ಸಕಲಂ ವಿಭಜ್ಯ ತನುಮಷ್ಟಧಾ ।
ಅಷ್ಟಮೂರ್ತಿರಿತೀಶಶ್ಚ ತ್ವಮಾದ್ಯಃ ಕರುಣಾಮಯಃ ॥ ೪೪ ॥

ತ್ವದ್ಭಯಾದ್ವಾತಿ ವಾತೋಽಯಂ ದಹತ್ಯಗ್ನಿರ್ಭಯಾತ್ತವ ।
ಸೂರ್ಯಸ್ತಪತಿ ತೇ ಭೀತ್ಯಾ ಮೃತ್ಯುರ್ಧಾವತಿ ಸರ್ವತಃ ॥ ೪೫ ॥

ದಯಾಸಿಂಧೋ ಮಹೇಶಾನ ಪ್ರಸೀದ ಪರಮೇಶ್ವರ ।
ರಕ್ಷ ರಕ್ಷ ಸದೈವಾಸ್ಮಾನ್ ಯಸ್ಮಾನ್ನಷ್ಟಾನ್ ವಿಚೇತಸಃ ॥ ೪೬ ॥

ರಕ್ಷಿತಾಸ್ಸತತಂ ನಾಥ ತ್ವಯೈವ ಕರುಣಾನಿಧೇ ।
ನಾನಾಪದ್ಭ್ಯೋ ವಯಂ ಶಂಭೋ ತಥೈವಾದ್ಯ ಪ್ರಪಾಹಿ ನಃ ॥ ೪೭ ॥

ಯಜ್ಞಸ್ಯೋದ್ಧರಣಂ ನಾಥ ಕುರು ಶೀಘ್ರಂ ಪ್ರಸಾದಕೃತ್ ।
ಅಸಮಾಪ್ತಸ್ಯ ದುರ್ಗೇಶ ದಕ್ಷಸ್ಯ ಚ ಪ್ರಜಾಪತೇಃ ॥ ೪೮ ॥

ಭಗೋಽಕ್ಷಿಣೀ ಪ್ರಪದ್ಯೇತ ಯಜಮಾನಶ್ಚ ಜೀವತು ।
ಪೂಷ್ಣೋ ದಂತಾಶ್ಚ ರೋಹಂತು ಭೃಗೋಃ ಶ್ಮಶ್ರೂಣಿ ಪೂರ್ವತತ್ ॥

---

ಸ್ವರೂಪನು, ಸ್ವಯಂಪ್ರಕಾಶನು, ಬ್ರಹ್ಮ, ವಿಷ್ಣು, ಇಂದ್ರ, ಚಂದ್ರ ಮೊದಲಾದ ದೇವತೆಗಳೂ, ಮುನಿಗಳೂ, ಮಿಕ್ಕೆಲ್ಲ ಪ್ರಾಣಿಗಳೂ ಸಹ ನಿನ್ನಿಂದಲೇ ಜನಿಸಿರುವರು.

೪೪-೪೬. ಓ ದೇವ, ಈ ಜಗತ್ತನ್ನು ಎಂಟು ಭಾಗವಾಗಿ ವಿಭಾಗಿಸಿ ಎಂಟು ಮೂರ್ತಿಗಳಾಗಿ ನೀನು ಧರಿಸಿರುವೆ. ಆದಕಾರಣ ನಿನಗೆ ಅಷ್ಟಮೂರ್ತಿಯೆಂದು ಹೆಸರು. ನೀನು ಆದಿಪುರುಷನು, ದಯಾಮಯನು, ನಿನ್ನ ಭಯದಿಂದ ಗಾಳಿಯು ಬೀಸುವನು. ನಿನ್ನ ಭಯದಿಂದಲೇ ಅಗ್ನಿಯು ಉರಿಯುವನು. ನಿನ್ನ ಭಯದಿಂದಲೇ ಸೂರ್ಯನು ಬೆಳಗುವನು. ಮೃತ್ಯುವು ನಿನ್ನ ಹೆದರಿಕೆಯಿಂದ ದೂರ ಓಡುವನು. ದಯಾಮಯನಾದ ಓ ಪರಮೇಶ್ವರನೇ, ಪ್ರಸನ್ನನಾಗು. ದುಃಖಿತರೂ ಮೂಢರೂ ಆದ ನಮ್ಮನ್ನು ಸದಾ ಸಲಹುವವನಾಗು.

೪೭-೪೯. ಕರುಣಾಮಯನಾದ ಓ ಪರಮೇಶ್ವರ, ಅನೇಕ ಆಪತ್ತುಗಳಲ್ಲಿ ಹಿಂದೆ ನೀನೇ ನಮ್ಮನ್ನು ಸಲಹಿರುವೆ. ಆದರಂತೆ ಈಗಲೂ ನಮ್ಮನ್ನು ಸಲಹಬೇಕು. ದಕ್ಷಯಜ್ಞವನ್ನು ಉದ್ಧರಿಸಿ ಸಮಾಪ್ತಗೊಳಿಸು. ಭಗ (ಸೂರ್ಯರಲ್ಲೊರ್ವನು) ನು

ಭವತಾನುಗೃಹೀತಾನಾಂ ದೇವಾದೀನಾಂ ಚ ಸರ್ವಶಃ ।
ಆರೋಗ್ಯಂ ಭಗ್ನಗಾತ್ರಾಣಾಂ ಶಂಕರ ತ್ವಾಯುಧಾಶ್ಮಭಿಃ ॥ ೫೦ ॥

ಪೂರ್ಣಭಾಗೋಽಸ್ತು ತೇ ನಾಥ ವಸಿಷ್ಠೋಽಧ್ವರಕರ್ಮಣಿ ।
ರುದ್ರಭಾಗೇನ ಯಜ್ಞಸ್ತೇ ಕಲ್ಪಿತೋ ನಾನ್ಯಥಾ ಕ್ವಚಿತ್ ॥ ೫೧ ॥

ಇತ್ಯುಕ್ತ್ವಾ ಸಪ್ರಜೇಶಶ್ಚ ರಮೇಶಶ್ಚ ಕೃತಾಂಜಲಿಃ ।
ದಂಡವತ್ಪತಿತೋ ಭೂಮೌ ಕ್ಷಮಾಪಯಿತುಮುದ್ಯತಃ ॥ ೫೨ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಸತೀಖಂಡೇ
ಏಕಚತ್ವಾರಿಂಶೋಽಧ್ಯಾಯಃ

---

ತನ್ನ ಕಣ್ಣುಗಳನ್ನು ತಿರುಗಿ ಪಡೆಯಲಿ ಯಜಮಾನನಾದ ದಕ್ಷನು ಬದುಕುವಂತೆ ಮಾಡು. ಪೂಷನೆಂಬ ಆದಿತ್ಯನ ಹಲ್ಲುಗಳು ತಿರುಗಿ ಬೆಳೆಯಲಿ. ಭೃಗುಮುನಿಯ (ಗಡ್ಡ) ಕೂದಲುಗಳು ಮೊದಲಿನಂತೆ ಬೆಳೆಯಲಿ.

೫೦-೫೧. ಓ ಪ್ರಭುವೆ, ನಿನ್ನ ಅನುಗ್ರಹದಿಂದ ದೇವತೆಗಳು ಮುಂತಾದವರು ಆರೋಗ್ಯವನ್ನು ಹೊಂದಲಿ. ವೀರಭದ್ರನ ಆಯುಧ ಪ್ರಹಾರಗಳ ನೋವುಗಳು ನಾಶವಾಗಲಿ. ಓ ಶಂಕರ, ಇದು ಮೊದಲುಗೊಂಡು ಯಜ್ಞದಲ್ಲಿ ನಿನಗೆ ಪೂರ್ಣಭಾಗವನ್ನು ಕಲ್ಪಿಸುವೆವು, ಇದನ್ನೆಂದಿಗೂ ತಪ್ಪಿಸುವುದಿಲ್ಲ.

೫೨. ಎಲೈ ನಾರದ, ಹೀಗೆ ಹೇಳಿ ಬ್ರಹ್ಮನು ವಿಷ್ಣುವೂ ಸಹ ಅಂಜಲಿಬದ್ಧರಾಗಿ ದಂಡದಂತೆ ಭೂಮಿಯಲ್ಲಿ ಬಿದ್ದು ಪ್ರಾರ್ಥಿಸುತ್ತಾ ತಮ್ಮನ್ನು ಕ್ಷಮಿಸುವಂತೆ ಶಿವನನ್ನು ಬೇಡಿಕೊಂಡರು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ನಲವತ್ತೊಂದನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ದ್ವಿಚತ್ವಾರಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಶ್ರೀಬ್ರಹ್ಮೇಶಪ್ರಜೇಶೇನ ಸುದೇವಮುನಿನಾ ಚ ವೈ ।
ಅನುನೀತಃ ಶಂಭುರಾಸೀತ್ಪ್ರಸನ್ನಃ ಪರಮೇಶ್ವರಃ ॥ ೧ ॥

ಆಶ್ವಾಸ್ಯ ದೇವಾನ್ ವಿಷ್ಣ್ವಾದೀನ್ ವಿಹಸ್ಯ ಕರುಣಾನಿಧಿಃ ।
ಉವಾಚ ಪರಮೇಶಾನಃ ಕುರ್ವನ್ಪರಮನುಗ್ರಹಂ ॥ ೨ ॥

---

## ನಲವತ್ತೆರಡನೆಯ ಅಧ್ಯಾಯ.

೧-೨. ಬ್ರಹ್ಮನು ಹೇಳಿದನು :—ಎಲೈ ನಾರದ, ಹೀಗೆ ವಿಷ್ಣು, ಬ್ರಹ್ಮ, ದೇವತೆಗಳು, ಮುನಿಗಳು, ಎಲ್ಲರೂ ಅನುನಯದಿಂದ ಪ್ರಾರ್ಥಿಸಲು ಪರಮೇಶ್ವರನು ಪ್ರಸನ್ನನಾದನು. ಕರುಣಾಮಯನಾದ ಆ ಶಿವನು ಮಂದಹಾಸವನ್ನು ಸೂಸುತ್ತಾ ವಿಷ್ಣು ಮೊದಲಾದ ದೇವತೆಗಳನ್ನು ಸಮಾಧಾನಗೊಳಿಸಿ ಅವರನ್ನು ಅನುಗ್ರಹಿಸ ಬೇಕೆಂದು ಹೀಗೆ ಹೇಳಿದನು.

॥ ಶ್ರೀಮಹಾದೇವ ಉವಾಚ ॥
ಶೃಣುತಂ ಸಾವಧಾನೇನ ಮಮ ವಾಕ್ಯಂ ಸುರೋತ್ತಮೌ ।
ಯಥಾರ್ಥಂ ವಚ್ಮಿ ವಾಂ ತಾತ ವಾಂ ಕ್ರೋಧಂ ಸರ್ವದಾಸಹಂ ॥ ೩ ॥

ನಾಘಂ ತನೌ ತು ಬಾಲಾನಾಂ ವರ್ಣಮೇವಾನುಚಿಂತಯೇ ।
ಮಮ ಮಾಯಾಭಿಭೂತಾನಾಂ ದಂಡಸ್ತತ್ರ ಧೃತೋ ಮಯಾ ॥ ೪ ॥

ದಕ್ಷಸ್ಯ ಯಜ್ಞಭಂಗೋಽಯಂ ನ ಕೃತಶ್ಚ ಮಯಾ ಕ್ವಚಿತ್ ।
ಪರಂ ದ್ವೇಷ್ಟಿ ಪರೇಷಾಂ ಯದಾತ್ಮನಸ್ತದ್ಭವಿಷ್ಯತಿ ॥ ೫ ॥

ಪರೇಷಾಂ ಕ್ಲೇದನಂ ಕರ್ಮ ನ ಕಾರ್ಯಂ ತತ್ಕದಾಚನ ।
ಪರಂ ದ್ವೇಷ್ಟಿ ಪರೇಷಾಂ ಯದಾತ್ಮನಸ್ತದ್ಭವಿಷ್ಯತಿ ॥ ೬ ॥

ದಕ್ಷಸ್ಯ ಯಜ್ಞಶೀರ್ಷ್ಣೋ ಹಿ ಭವತ್ವಜಮುಖಂ ಶಿರಃ ।
ಮಿತ್ರನೇತ್ರೇಣ ಸಂಪಶ್ಯೇದ್ಯಜ್ಞಭಾಗಂ ಭಗಸ್ಸುರಃ ॥ ೭ ॥

ಪೂಷಾಭಿಧಸ್ಸುರಸ್ತಾತೌ ದದ್ಭಿರ್ಯಜ್ಞಸುಪಿಷ್ಟಭುಕ್ ।
ಯಾಜಮಾನೈರ್ಭಗ್ನದಂತಸ್ಸತ್ಯಮೇತನ್ಮಯೋದಿತಂ ॥ ೮ ॥

---

೩-೫. ಮಹಾದೇವನು ಹೇಳಿದನು :—ಎಲೈ ಬ್ರಹ್ಮವಿಷ್ಣುಗಳೇ, ಸಾವಧಾನ ಮನಸ್ಸಿನಿಂದ ನನ್ನ ಮಾತನ್ನು ಕೇಳಿ ನಿಜವಾದುದನ್ನು ಹೇಳುವೆನು. ಬಾಲಕರಾದ ನೀವೆಲ್ಲರೂ ನನ್ನ ಮಾಯೆಗೆ ಒಳಪಟ್ಟವರಾಗಿ ಅನಿಷ್ಟವನ್ನಾಚರಿಸಿರುವಿರಿ. ಆದರಿಂದ ನನಗೇನೂ ವ್ಯಥೆಯಿಲ್ಲ. ಆದರೆ ನಿಮಗೆ ಬುದ್ಧಿ ಬರಲೆಂದು ಆ ರೀತಿ ಶಿಕ್ಷಿಸಿರುವೆನು. ದಕ್ಷನ ಯಜ್ಞನಾಶವನ್ನು ನಾನು ಬೇಕೆಂದು ಮಾಡಲಿಲ್ಲ. ಆದರೆ ಇನ್ನೊಬ್ಬರಿಗೆ ಕೇಡನ್ನು ಬಯಸಿದರೆ ಅದು ತನಗೇ ಬಂದೊದಗುವುದು ಎಂದು ತೋರಿಸಲು ಹಾಗೆ ಯಜ್ಞವನ್ನು ಧ್ವಂಸಗೊಳಿಸಿದೆನು.

೬-೮. ಪರರಿಗೆ ತೊಂದರೆಯಾಗುವಂತಹ ಕಾರ್ಯವನ್ನು ಮಾಡಬಾರದು. ಹಾಗೆ ಮಾಡಿದರೆ ಅದು ತನಗೇ ಕೇಡಾಗುವುದು. ಇದಕ್ಕೆ ದಕ್ಷನೇ ದೃಷ್ಟಾಂತವು ಶಿರಸ್ಸನ್ನು ಕಳೆದುಕೊಂಡ ದಕ್ಷನು ಆಡಿನ ಮುಖವುಳ್ಳವನಾಗಲಿ. ಮಿತ್ರನೆಂಬ ಆದಿತ್ಯನ ಕಣ್ಣಿನಿಂದ ಭಗದೇವತೆಯು ಯಜ್ಞಭಾಗವನ್ನು ನೋಡುವವನಾಗಲಿ. ಹಲ್ಲುಗಳನ್ನು ಕಳೆದುಕೊಂಡ ಸೂರ್ಯನು ಕರ್ಮಗಳಲ್ಲಿ ಮೊಸರು, ಹಿಟ್ಟು ( ಸಕ್ತು ) ಮುಂತಾದ ಹವಿಸ್ಸನ್ನು ಪಡೆಯಲಿ.

ಬಸ್ತಶ್ಮಶ್ರುರ್ಭವೇದೇವ ಭೃಗುರ್ಮಮ ವಿರೋಧಕೃತ್ ।
ದೇವಾಃ ಪ್ರಕೃತಿಸರ್ವಾಂಗಾ ಯೇ ಮ ಉಚ್ಛೇದನಂ ದದುಃ　　　॥ ೯ ॥

ಬಾಹುಭ್ಯಾಮಶ್ವಿನೌ ಪೂಷ್ಣೋ ಹಸ್ತಾಭ್ಯಾಂ ಕೃತವಾಹಕಃ ।
ಭವಂತ್ವಧ್ವರ್ಯವಶ್ಚಾನ್ಯೇ ಭವತ್ಪ್ರೀತ್ಯಾ ಮಯೋದಿತಂ　　　॥ ೧೦ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಪರಮೇಶಾನೋ ವಿರರಾಮ ದಯಾನ್ವಿತಃ ।
ಚರಾಚರಪತಿರ್ದೇವಸ್ಸಮ್ರಾಟ್ ವೇದಾನುಸಾರಕೃತ್　　　॥ ೧೧ ॥

ತದಾ ಸರ್ವೇ ಸುರಾದ್ಯಾಸ್ತೇ ಶ್ರುತ್ವಾ ಶಂಕರಭಾಷಿತಂ ।
ಸಾಧು ಸಾಧ್ವಿತಿ ಸಂಪ್ರೋಚುಃ ಪರಿತುಷ್ಟಾಃ ಸವಿಷ್ಣುಜಾಃ　　　॥ ೧೨ ॥

ತತಶ್ಶಂಭುಂ ಸಮಾಮಂತ್ರ್ಯ ಮಯಾ ವಿಷ್ಣುಸ್ಸುರರ್ಷಿಭಿಃ ।
ಭೂಯಸ್ತದ್ದೇವಯಜನಂ ಯಯೌ ಚ ಪರಯಾ ಮುದಾ　　　॥ ೧೩ ॥

---

೯-೧೦. ನನ್ನನ್ನು ತೀವ್ರವಾಗಿ ವಿರೋಧಿಸಿದ ಭೃಗುಮುನಿಯು ಆಡಿನಂತೆ ಗಡ್ಡವುಳ್ಳವನಾಗಲಿ. ಮಿಕ್ಕ ದೇವತೆಗಳೆಲ್ಲರೂ ಆರೋಗ್ಯವನ್ನು ಹೊಂದಲಿ. ಸೂರ್ಯ ಮತ್ತು ಅಶ್ವಿನೀದೇವತೆಗಳು ವಾಹನಗಳನ್ನು ಮಾಡಿಕೊಂಡು ಬಾಹು ಮತ್ತು ಕೈಗಳಿಂದ ಸಂಚರಿಸುವವರಾಗಲಿ. ಮಿಕ್ಕ ಅಧ್ವರ್ಯುಗಳೆಲ್ಲರೂ ನೀವು ಹೇಳಿದಂತೆ ಆರೋಗ್ಯವನ್ನು ಹೊಂದಲಿ ಎಂದನು.

೧೧-೧೩. ಬ್ರಹ್ಮನು ಹೇಳಿದನು:—ಹೀಗೆ ಹೇಳಿ ಜಗತ್ಪ್ರಭುವೂ ವೇದ ಮಾರ್ಗಕ್ಕೆ ನಿಯಾಮಕನೂ, ದಯಾಮಯನೂ, ದೇವನಾಥನೂ ಆದ ಪರಮೇಶ್ವರನು ಸುಮ್ಮನಾದನು. ಆಗ ಶಂಕರನ ಮಾತನ್ನು ಕೇಳಿ ವಿಷ್ಣು ಮೊದಲಾದವರೆಲ್ಲರೂ ಸಂತೋಷದಿಂದ ಸಾಧು ಸಾಧು ಎಂದು ಹೇಳಿದರು. ಬಳಿಕ ಹರಿಯೂ ನಾನೂ ಸಹ ಶಿವನ ಅಪ್ಪಣೆಯನ್ನು ಪಡೆದು ದೇವತೆಗಳೊಡನೆ ತಿರುಗಿ ದಕ್ಷಯಜ್ಞಶಾಲೆಗೆ ಬಂದೆವು.

ಏವಂ ತೇಷಾಂ ಪ್ರಾರ್ಥನಯಾ ವಿಷ್ಣುಪ್ರಭೃತಿಭಿಸ್ಸರ್ವೈಃ ।
ಯಯೌ ಕನಖಲಂ ಶಂಭುರ್ಯಜ್ಞವಾಟಂ ಪ್ರಜಾಪತೇಃ ॥ ೧೪ ॥

ರುದ್ರಸ್ತದಾ ದದರ್ಶಾಥ ವೀರಭದ್ರೇಣ ಯತ್ಕೃತಂ ।
ಪ್ರಧ್ವಂಸಂ ತಂ ಕ್ರತೋಸ್ತತ್ರ ದೇವರ್ಷೀಣಾಂ ವಿಶೇಷತಃ ॥ ೧೫ ॥

ಸ್ವಾಹಾ ಸ್ವಧಾ ತಥಾ ಪೂಷಾ ಧೃತಿಸ್ತುಷ್ಟಿಸ್ಸರಸ್ವತೀ ।
ತಥಾನ್ಯೇ ಋಷಯಸ್ಸರ್ವೇ ಪಿತರಶ್ಚಾಗ್ನಯಸ್ತಥಾ ॥ ೧೬ ॥

ಯೇಽನ್ಯೇ ಚ ಬಹವಸ್ತತ್ರ ಯಕ್ಷಗಂಧರ್ವರಾಕ್ಷಸಾಃ ।
ತ್ರೋಟಿತಾ ಲುಂಭಿತಾಶ್ಚೈವ ಮೃತಾಃ ಕೇಚಿದ್ರಣಾಜಿರೇ ॥ ೧೭ ॥

ಯಜ್ಞಂ ತಥಾವಿಧಂ ದೃಷ್ಟ್ವಾ ಸಮಾಹೂಯ ಗಣಾಧಿಪಂ ।
ವೀರಭದ್ರಂ ಮಹಾವೀರಮುವಾಚ ಪ್ರಹಸನ್ ಪ್ರಭುಃ ॥ ೧೮ ॥

ವೀರಭದ್ರ ಮಹಾಬಾಹೋ ಕಿಂ ಕೃತಂ ಕರ್ಮ ತೇ ತ್ವಿದಂ ।
ಮಹಾನ್ ದಂಡೋ ಧೃತಸ್ತಾತ ದೇವರ್ಷ್ಯಾದಿಷು ಸತ್ವರಂ ॥ ೧೯ ॥

---

೧೪-೧೫. ಹೀಗೆ ವಿಷ್ಣು ಮೊದಲಾದವರ ಪ್ರಾರ್ಥನೆಯಂತೆ ಶಿವನು ಅವರೊಡನೆ ಕನಖಲಕ್ಷೇತ್ರದಲ್ಲಿರುವ ದಕ್ಷಯಜ್ಞಶಾಲೆಗೆ ತೆರಳಿದನು. ಅಲ್ಲಿ ಶಿವನು ವೀರಭದ್ರನು ಮಾಡಿದ ಯಜ್ಞಧ್ವಂಸವನ್ನು ವಿಶೇಷವಾಗಿ ನೋಡಿದನು.

೧೬-೧೭. ಸ್ವಾಹಾದೇವಿ, ಸ್ವಧಾದೇವಿ, ಪೂಷಾ, ಧೃತಿ, ತುಷ್ಟಿದೇವಿ, ಸರಸ್ವತೀ, ಮಿಕ್ಕ ಕೆಲವರು ಋಷಿಗಳು, ಪಿತೃಗಳು, ಅಗ್ನಿಪುರುಷರು, ಯಕ್ಷರು, ಗಂಧರ್ವರು, ರಾಕ್ಷಸರು, ಇವರಲ್ಲಿ ಕೆಲವರನ್ನು ವೀರಭದ್ರನು ಹೊಡೆದು ಗಾಯಗೊಳಿಸಿದ್ದನು. ಕೆಲವರು ಮೃತರಾಗಿದ್ದರು.

೧೮-೨೦. ಆರೀತಿ ನಷ್ಟವಾದ ಯಜ್ಞವನ್ನು ನೋಡಿ ಶಂಕರನು ನಗುತ್ತಾ ಮಹಾವೀರನಾದ ವೀರಭದ್ರನನ್ನು ಕರೆದು, ಮಹಾಪರಾಕ್ರಮಿಯಾದ ಎಲೈ ವೀರಭದ್ರನೆ, ಇದೆಂತಹ ಕಾರ್ಯವನ್ನು ಮಾಡಿರುವೆ? ದೇವತೆಗಳಿಗೂ ಮುನಿಗಳಿಗೂ ಮಹಾಶಿಕ್ಷೆಯನ್ನೇ ವಿಧಿಸಿರುವೆ. ಆ ದಕ್ಷನು ಇಂತಹ ವಿಲಕ್ಷಣವಾದ ಯಾಗವನ್ನು

ದಕ್ಷಮಾನಯ ಶೀಘ್ರಂ ತ್ವಂ ಯೇನೇದಂ ಕೃತಮೀದೃಶಂ ।
ಯಜ್ಞೋ ವಿಲಕ್ಷಣಸ್ತಾತ ಯಸ್ಯೇದಂ ಫಲಮೀದೃಶಂ　　　॥ ೨೦ ॥

॥ ಬ್ರಹ್ಮೋವಾಚ ॥

ಏವಮುಕ್ತಶ್ಶಂಕರೇಣ ವೀರಭದ್ರಸ್ತ್ವರಾನ್ವಿತಃ ।
ಕಬಂಧಮಾನಯಿತ್ವಾಗ್ರೇ ತಸ್ಯ ಶಂಭೋರಥಾಕ್ಷಿಪತ್　　　॥ ೨೧ ॥

ವಿಶಿರಸ್ಕಂ ಚ ತಂ ದೃಷ್ಟ್ವಾ ಶಂಕರೋ ಲೋಕಶಂಕರಃ ।
ವೀರಭದ್ರಮುವಾಚಾಗ್ರೇ ವಿಹಸನ್ ಮುನಿಸತ್ತಮ　　　॥ ೨೨ ॥

ಶಿರಃ ಕುತ್ರೇತಿ ತೇನೋಕ್ತಂ ವೀರಭದ್ರೋऽಬ್ರವೀತ್ಪ್ರಭುಃ ।
ಮಯಾ ಶಿರೋ ಹುತಂ ಚಾಗ್ನೌ ತದಾನೀಮೇವ ಶಂಕರ　　　॥ ೨೩ ॥

ಇತಿ ಶ್ರುತ್ವಾ ವಚಸ್ತಸ್ಯ ವೀರಭದ್ರಸ್ಯ ಶಂಕರಃ ।
ದೇವಾಂಸ್ತದಾಜ್ಞಪತ್ಪ್ರೀತ್ಯಾ ಯದುಕ್ತಂ ತತ್ಪುರಾ ಪ್ರಭುಃ　　　॥ ೨೪ ॥

ವಿಧಾಯ ಕಾರ್ತ್ಸ್ನ್ಯೇನ ಚ ತದ್ಯದಾಹ ಭಗವಾನ್ ಭವಃ ।
ಮಯಾ ವಿಷ್ಣ್ವಾದಯಸ್ಸರ್ವೇ ಭೃಗ್ವಾದೀನಥ ಸತ್ವರಂ　　　॥ ೨೫ ॥

---

ಮಾಡಿದನು. ಅದಕ್ಕೆ ತಕ್ಕ ಫಲವು ಅವನಿಗೆ ಲಭಿಸಿತು. ಆಗಲಿ, ಆ ದಕ್ಷನನ್ನು ಇಲ್ಲಿಗೆ ಕರೆದುಕೊಂಡು ಬಾ ಎಂದನು.

೨೧-೨೩. ಬ್ರಹ್ಮನು ಹೇಳಿದನು :—ಹೀಗೆ ಶಿವನು ಹೇಳಲು, ವೀರಭದ್ರನು ತ್ವರೆಯಿಂದ ದಕ್ಷನ ತಲೆಯಿಲ್ಲದ ಮುಂಡವನ್ನು ತಂದು ಎದುರಿಗಿರಿಸಿದನು. ಆಗ ಶಿವನು ದಕ್ಷನ ಶಿರಸ್ಸೆಲ್ಲಿ? ಎಂದು ಪ್ರಶ್ನಿಸಿದನು. ಅದಕ್ಕೆ ವೀರಭದ್ರನು ಓ ಶಂಕರ, ಆಗಲೇ ಅಗ್ನಿಯಲ್ಲಿ ದಕ್ಷನ ಶಿರವನ್ನು ಹೋಮಮಾಡಿದೆನು ಎಂದು ಹೇಳಿದನು.

೨೪-೨೫. ಹೀಗೆ ವೀರಭದ್ರನು ಹೇಳಿದ ಮಾತನ್ನು ಕೇಳಿ ಶಂಕರನು ಹಿಂದೆ ಹೇಳಿದಂತೆ ದೇವತೆಗಳಿಗೆ ಅಪ್ಪಣೆಮಾಡಿದನು. ಹಿಂದೆ ನಮ್ಮೆಲ್ಲರ ಮುಂದೆ ಹೇಳಿದಂತೆ ಎಲ್ಲವನ್ನೂ ಜಾಗ್ರತೆ ಮಾಡಿಸಿದನು.

ಅಥ ಪ್ರಜಾಪತೇಸ್ತಸ್ಯ ಸವನೀಯಪಶೋಶ್ಶಿರಃ ।
ಬಸ್ತಸ್ಯ ಸಂದಧುಶ್ಶಂಭೋಃ ಕಾರ್ಯೇನಾರಂ ಸುಶಾಸನಾತ್ ॥ ೨೬ ॥

ಸಂಧೀಯಮಾನೇ ಶಿರಸಿ ಶಂಭುಸದ್ದೃಷ್ಟಿವೀಕ್ಷಿತಃ ।
ಸದ್ಯಸ್ಸುಪ್ತ ಇವೋತ್ತಸ್ಥೌ ಲಬ್ಧಪ್ರಾಣಃ ಪ್ರಜಾಪತಿಃ ॥ ೨೭ ॥

ಉತ್ಥಿತಶ್ಚಾಗ್ರತಶ್ಶಂಭುಂ ದದರ್ಶ ಕರುಣಾನಿಧಿಂ ।
ದಕ್ಷಃ ಪ್ರೀತಮತಿಃ ಪ್ರೀತ್ಯಾ ಸಂಸ್ಥಿತಃ ಸುಪ್ರಸನ್ನಧೀಃ ॥ ೨೮ ॥

ಪುರಾ ಹರಮಹಾದ್ವೇಷಕಲಿಲಾತ್ಮಾಭವದ್ಧಿ ಸಃ ।
ಶಿವಾವಲೋಕನಾತ್ಸದ್ಯಃ ಶರಚ್ಚಂದ್ರ ಇವಾಮಲಃ ॥ ೨೯ ॥

ಭವಂ ಸ್ತೋತುಮನಾಃ ಸೋऽಥ ನಾಶಕ್ನೋದನುರಾಗತಃ ।
ಉತ್ಕಂಠಾವಿಕಲತ್ವಾಚ್ಚ ಸಂಪರೇತಾಂ ಸುತಾಂ ಸ್ಮರನ್ ॥ ೩೦ ॥

ಅಥ ದಕ್ಷಃ ಪ್ರಸನ್ನಾತ್ಮಾ ಶಿವಂ ಲಜ್ಜಾಸಮನ್ವಿತಃ ।
ತುಷ್ಟಾವ ಪ್ರಣತೋ ಭೂತ್ವಾ ಶಂಕರಂ ಲೋಕಶಂಕರಂ ॥ ೩೧ ॥

---

೨೬.೨೮. ಬಳಿಕ ದೇವತೆಗಳು ಸವನೀಯಯಾಗಕ್ಕಾಗಿ ಸಿದ್ಧಪಡಿಸಿದ ಪಶುವಿನ ಶಿರವನ್ನು ಕತ್ತರಿಸಿ ಶಂಕರನ ಅಪ್ಪಣೆಯಂತೆ ದಕ್ಷನ ಮುಂಡಕ್ಕೆ ಸೇರಿಸಿದರು. ಹಾಗೆ ಶಿರಸ್ಸನ್ನು ಸೇರಿಸಲು ದಕ್ಷನು ಪ್ರಾಣವನ್ನು ಪಡೆದನು. ಶಂಕರನು ಶುಭ ದೃಷ್ಟಿಯಿಂದ ನೋಡಲು ಮಲಗಿ ಎದ್ದವನಂತೆ ಎದ್ದನು ತನ್ನ ಎದುರಿನಲ್ಲಿ ನಿಂತಿರುವ ಕರುಣಾನಿಧಿಯಾದ ಶಂಕರನನ್ನು ನೋಡಿ ತುಂಬಾ ಹರ್ಷಗೊಂಡನು.

೨೯-೩೧- ಹಿಂದೆ ಆ ದಕ್ಷನು ಶಿವದ್ವೇಷದಿಂದ ಪಾಪಿಯಾಗಿದ್ದನು. ಈಗ ಅವನ ಮೇಲೆ ಶಿವನ ಪ್ರಸನ್ನದೃಷ್ಟಿ ಬೀಳಲು ಶರತ್ಕಾಲದ ಚಂದ್ರನಂತೆ ನಿರ್ಮಲನಾದನು. ಆಗ ಅವನು ಮೃತಳಾದ ತನ್ನ ಮಗಳ (ಸತಿಯ) ನ್ನು ನೆನೆಸಿಕೊಂಡು ತುಂಬಾದುಃಖಿಸಿದನು. ಬಳಿಕ ಪ್ರಸನ್ನಚಿತ್ತದಿಂದ ಜಗತ್ತಿಗೆ ಕ್ಷೇಮವನ್ನುಂಟುಮಾಡುವಂತಹ ಶಂಕರನನ್ನು ನಮಸ್ಕರಿಸಿ ಹೀಗೆ ಸ್ತುತಿಸಿದನು.

॥ ದಕ್ಷ ಉವಾಚ ॥

ನಮಾಮಿ ದೇವಂ ವರದಂ ವರೇಣ್ಯಂ
ಮಹೇಶ್ವರಂ ಜ್ಞಾನನಿಧಿಂ ಸನಾತನಂ ।
ನಮಾಮಿ ದೇವಾಧಿಪತೀಶ್ವರಂ ಹರಂ
ಸದಾ ಸುಖಾಢ್ಯಂ ಜಗದೇಕಬಾಂಧವಂ ॥ ೩೨ ॥

ನಮಾಮಿ ವಿಶ್ವೇಶ್ವರ ವಿಶ್ವರೂಪಂ
ಪುರಾತನಂ ಬ್ರಹ್ಮ ನಿಜಾತ್ಮರೂಪಂ ।
ನಮಾಮಿ ಶರ್ವಂ ಭವಭಾವಭಾವಂ
ಪರಾತ್ಪರಂ ಶಂಕರಮಾನತೋಽಸ್ಮಿ ॥ ೩೩ ॥

ದೇವದೇವ ಮಹಾದೇವ ಕೃಪಾಂ ಕುರು ನಮೋಽಸ್ತು ತೇ ।
ಅಪರಾಧಂ ಕ್ಷಮಸ್ವಾದ್ಯ ಮಮ ಶಂಭೋ ಕೃಪಾನಿಧೇ ॥ ೩೪ ॥

ಅನುಗ್ರಹಃ ಕೃತಸ್ತೇ ಹಿ ದಂಡವ್ಯಾಜೇನ ಶಂಕರ ।
ಖಲೋಽಹಂ ಮೂಢಧೀರ್ದೇವ ಜ್ಞಾತಂ ತತ್ವಂ ಮಯಾ ನ ತೇ ॥ ೩೫ ॥

---

೩೨. ದಕ್ಷನು ಹೇಳಿದನು :—ಭಕ್ತರಿಗೆ ವರವನ್ನು ಕೊಡುವವನೂ, ಸರ್ವೋತ್ತಮನೂ, ಜ್ಞಾನಸ್ವರೂಪನೂ, ಪುರಾಣಪುರುಷನೂ, ದೇವತೆಗಳಿಗೆ ಅಧಿಪತಿಯೂ, ಸುಖಸ್ವರೂಪನೂ ಜಗತ್ತಿಗೆ ಬಂಧುವೂ ಆದ ಶಂಕರನಿಗೆ ನಮಸ್ಕಾರವು.

೩೩. ಓ ವಿಶ್ವೇಶ್ವರ, ನೀನು ಜಗದ್ರೂಪನು, ಪರಬ್ರಹ್ಮಸ್ವರೂಪನು, ಜೀವಾತ್ಮರೂಪನು, ಜಗತ್ತನ್ನು ಸಲಹುವ ಹರಿ ಮುಂತಾದವರನ್ನೂ ಸಲಹುವವನು, ಸರ್ವೋತ್ತಮನು. ಇಂತಹ ನಿನಗೆ ನಮಸ್ಕಾರವು.

೩೪-೩೬. ದೇವದೇವನಾದ ಓ ಮಹಾದೇವ, ನನ್ನಲ್ಲಿ ಅನುಗ್ರಹವನ್ನು ಮಾಡು. ನಿನಗೆ ನಮಸ್ಕಾರವು ಕರುಣಾಮಯನಾದ ಓ ಶಂಕರನೇ, ನನ್ನ ಅಪರಾಧವನ್ನು ಕ್ಷಮಿಸು. ಓ ಶಂಭೋ, ಶಿಕ್ಷಿಸುವ ನೆವದಿಂದ ನನ್ನಲ್ಲಿ ಅನುಗ್ರಹವನ್ನೇ ನೀನು ಮಾಡಿರುವೆ. ನಾನು ತಿಳಿವಳಿಕೆಯಿಲ್ಲದ ಮೂಢನಾಗಿದ್ದೆನು. ಈಗ ನಿನ್ನ ಸ್ವರೂಪವು ತಿಳಿಯಿತು. ನೀನು ಎಲ್ಲರಿಗಿಂತಲೂ ಶ್ರೇಷ್ಠನು. ವಿಷ್ಣು, ಬ್ರಹ್ಮ ಮೊದಲಾದವರು

ಅದ್ಯ ಜ್ಞಾತಂ ಮಯಾ ತತ್ತ್ವಂ ಸರ್ವೋಪರಿ ಭವಾನ್ಮತಃ ।
ವಿಷ್ಣುಬ್ರಹ್ಮಾದಿಭಿಸ್ಸೇವ್ಯೋ ವೇದವೇದ್ಯೋ ಮಹೇಶ್ವರಃ ॥ ೩೬ ॥

ಸಾಧೂನಾಂ ಕಲ್ಪವೃಕ್ಷಸ್ತ್ವಂ ದುಷ್ಟಾನಾಂ ದಂಡಧೃಕ್ಸದಾ ।
ಸ್ವತಂತ್ರಃ ಪರಮಾತ್ಮಾ ಹಿ ಭಕ್ತಾಭೀಷ್ಟವರಪ್ರದಃ ॥ ೩೭ ॥

ವಿದ್ಯಾತಪೋವ್ರತಧರಾನಸೃಜಃ ಪ್ರಥಮಂ ದ್ವಿಜಾನ್ ।
ಆತ್ಮತತ್ತ್ವಂ ಸಮಾವೇತ್ತುಂ ಮುಖತಃ ಪರಮೇಶ್ವರಃ ॥ ೩೮ ॥

ಸರ್ವಾಪದ್ಭ್ಯಃ ಪಾಲಯಿತಾ ಗೋಪತಿಸ್ತು ಪಶೂನಿವ ।
ಗೃಹೀತದಂಡೋ ದುಷ್ಟಾಂಸ್ತ್ವಂ ಮರ್ಯಾದಾಪರಿಪಾಲಕಃ ॥ ೩೯ ॥

ಮಯಾ ದುರುಕ್ತವಿಶಿಖೈಃ ಪ್ರವಿದ್ಧಃ ಪರಮೇಶ್ವರಃ ।
ಅಮರಾನತಿದೀನಾಂಶ್ಚ ಮದನುಗ್ರಹಕಾರಕಃ ॥ ೪೦ ॥

ಸ ಭವಾನ್ ಭಗವಾನ್ ಶಂಭೋ ಧೀನಬಂಧುಃ ಪರಾತ್ಪರಃ ।
ಸ್ವಕೃತೇನ ಮಹಾರ್ಹೇಣ ಸಂತುಷ್ಟೋ ಭಕ್ತವತ್ಸಲ ॥ ೪೧ ॥

---

ನಿನ್ನನ್ನು ಸೇವಿಸುವರು. ವೇದಗಳು ನಿನ್ನನ್ನು ಸ್ತುತಿಸುವುವು. ಪರಮೇಶ್ವರನೇ ನೀನು.

೩೭-೩೯. ಸತ್ಪುರುಷರಿಗೆ ನೀನು ಕಲ್ಪವೃಕ್ಷದಂತೆ ಬೇಕಾದುದನ್ನು ಕೊಡುವೆ. ನೀನು ವಿದ್ಯಾ, ತಪಸ್ಸು, ವ್ರತ ಇವುಗಳನ್ನನುಷ್ಠಿಸುವ ಬ್ರಾಹ್ಮಣರನ್ನು ಆತ್ಮತತ್ತ್ವವನ್ನು ತಿಳಿಯಲು ಮೊದಲು ಮುಖದಿಂದ ಸೃಜಿಸಿರುವೆ. ಗೋಪಾಲನು ಪಶುಗಳನ್ನು ರಕ್ಷಿಸುವಂತೆ ನೀನು ಪ್ರಾಣಿಗಳನ್ನು ಎಲ್ಲ ಆಪತ್ತುಗಳಿಂದಲೂ ರಕ್ಷಿಸುವೆ ದುಷ್ಟರನ್ನು ಶಿಕ್ಷಿಸಿ ವರ್ಣಾಶ್ರಮಧರ್ಮಗಳನ್ನು ರಕ್ಷಿಸುವೆ.

೪೦-೪೧. ಓ ಪರಮೇಶ್ವರ, ನಾನು ನಿನ್ನನ್ನು ಕೆಟ್ಟ ಮಾತುಗಳೆಂಬ ಬಾಣಗಳಿಂದ ಬಹಳವಾಗಿ ಪ್ರಹರಿಸಿರುವೆನು. ದೇವತೆಗಳೂ ಮಹಾ ಅಪರಾಧವನ್ನು ಆಚರಿಸಿರುವರು. ಆದರೂ ದಯಾಮಯನಾದ ನೀನು ನಮ್ಮೆಲ್ಲರನ್ನೂ ಅನುಗ್ರಹಿಸಿರುವೆ. ನೀನು ಬಡವರ ಬಂಧುವು, ಸರ್ವೋತ್ತಮನು, ಭಕ್ತವತ್ಸಲನು ಎಂದು ಬಹು ವಿಧವಾಗಿ ಸ್ತೋತ್ರಮಾಡಿದನು.

॥ ಬ್ರಹ್ಮೋವಾಚ ॥

ಇತಿ ಸ್ತುತ್ವಾ ಮಹೇಶಾನಂ ಶಂಕರಂ ಲೋಕಶಂಕರಂ ।
ಪ್ರಜಾಪತಿರ್ವಿನೀತಾತ್ಮಾ ವಿರರಾಮ ಮಹಾಪ್ರಭುಂ ॥ ೪೨ ॥

ಅಥ ವಿಷ್ಣುಃ ಪ್ರಸನ್ನಾತ್ಮಾ ತುಷ್ಟಾವ ವೃಷಭಧ್ವಜಂ ।
ಬಾಷ್ಪಗದ್ಗದಯಾ ವಾಣ್ಯಾ ಸುಪ್ರಣಮ್ಯ ಕೃತಾಂಜಲಿಃ ॥ ೪೩ ॥

॥ ವಿಷ್ಣುರುವಾಚ ॥

ಮಹಾದೇವ ಮಹೇಶಾನ ಲೋಕಾನುಗ್ರಹಕಾರಕ ।
ಪರಬ್ರಹ್ಮ ಪರಾತ್ಮಾ ತ್ವಂ ದೀನಬಂಧೋ ದಯಾನಿಧೇ ॥ ೪೪ ॥

ಸರ್ವವ್ಯಾಪೀ ಸ್ವೈರವರ್ತೀ ವೇದವೇದ್ಯಯಶಾಃ ಪ್ರಭೋ ।
ಅನುಗ್ರಹಃ ಕೃತಸ್ತೇನ ಕೃತಾರ್ಥಾಸ್ಸುಕೃತಾ ವಯಂ ॥ ೪೫ ॥

ದಕ್ಷೋಽಯಂ ಮಮಭಕ್ತಸ್ತ್ವಾಂ ಯನ್ನಿನಿಂದ ಖಲಃ ಪುರಾ ।
ತತ್ಕ್ಷಂತವ್ಯಂ ಮಹೇಶಾದ್ಯ ನಿರ್ವಿಕಾರೋ ಯತೋ ಭವಾನ್ ॥ ೪೬ ॥

---

೪೨-೪೩. ಬ್ರಹ್ಮನು ಹೇಳಿದನು:—ಲೋಕಕ್ಕೆ ಸುಖವನ್ನುಂಟುಮಾಡುವ ಶಂಕರನನ್ನು ದಕ್ಷನು ಹೀಗೆ ಭಕ್ತಿಯಿಂದ ಸ್ತುತಿಸಿ ವಿನಯದಿಂದ ನಿಂತುಕೊಂಡನು. ಬಳಿಕ ಹರಿಯು ಶಿವನನ್ನು ನಮಸ್ಕರಿಸಿ ಭಕ್ತಿಪರವಶತೆಯಿಂದ ನುಡಿಯು ತೊದಲುತ್ತಿರಲು ಜಗದೊಡೆಯನಾದ ಅವನನ್ನು ಹೀಗೆ ಸ್ತುತಿಸಿದನು.

೪೪-೪೬. ಹರಿಯು ಹೇಳಿದನು:—ಲೋಕವನ್ನು ಅನುಗ್ರಹಿಸುವ ಓ ಪರಮೇಶ್ವರನೆ, ನೀನು ದೇವದೇವನು, ಪರಬ್ರಹ್ಮನು, ಪರಮಾತ್ಮನು, ಬಡವರ ಬಂಧುವು ದಯಾಮಯನು, ಜಗತ್ತೆಲ್ಲವನ್ನೂ ವ್ಯಾಪಿಸಿರುವೆ, ಸ್ವತಂತ್ರನು, ನಿನ್ನ ಯಶಸ್ಸನ್ನು ವೇದಗಳು ಗಾನಮಾಡುವುವು. ಇಂತಹ ನೀನು ಅಪರಾಧಿಗಳಾದ ನಮ್ಮಲ್ಲಿ ಅನುಗ್ರಹವನ್ನು ಮಾಡಿರುವೆ. ನನ್ನ ಭಕ್ತನಾದ ಈ ಮೂರ್ಖದಕ್ಷನು ನಿನ್ನನ್ನು ಹಿಂದೆ ತುಂಬಾ ನಿಂದಿಸಿರುವನು. ಅವನ ಆ ಅಪರಾಧವನ್ನು ಮನ್ನಿಸಬೇಕು. ನೀನು ಸ್ತುತಿನಿಂದೆಗಳಿಂದ ಮನೋವಿಕಾರವನ್ನು ಹೊಂದುವವನಲ್ಲ.

ಕೃತೋ ಮಯಾಪರಾಧೋಽಪಿ ತವ ಶಂಕರ ಮೂಢತಃ ।
ತ್ವದ್ಗಣೇನ ಕೃತಂ ಯುದ್ಧಂ ವೀರಭದ್ರೇಣ ಪಕ್ಷತಃ ॥ ೪೭ ॥

ತ್ವಂ ಮೇ ಸ್ವಾಮೀ ಪರಬ್ರಹ್ಮ ದಾಸೋಽಹಂ ತೇ ಸದಾಶಿವ ।
ಪೋಷ್ಯಶ್ಚಾಪಿ ಸದಾ ತೇ ಹಿ ಸರ್ವೇಷಾಂ ತ್ವಂ ಪಿತಾ ಯತಃ ॥ ೪೮ ॥

॥ ಬ್ರಹ್ಮೋವಾಚ ॥

ದೇವದೇವ ಮಹಾದೇವ ಕರುಣಾಸಾಗರ ಪ್ರಭೋ ।
ಸ್ವತಂತ್ರಃ ಪರಮಾತ್ಮಾ ತ್ವಂ ಪರಮೇಶೋಽದ್ವಯೋಽವ್ಯಯಃ ॥ ೪೯ ॥

ಮಮ ಪುತ್ರೋಪರಿ ಕೃತೋ ದೇವಾನುಗ್ರಹ ಈಶ್ವರ ।
ಸ್ವಾಪಮಾನಂ ನ ಗಣ್ಯ ತ್ವಂ ದಕ್ಷಯಜ್ಞಂ ಸಮುದ್ಧರ ॥ ೫೦ ॥

ಪ್ರಸನ್ನೋ ಭವ ದೇವೇಶ ಸರ್ವಶಾಪಾನ್ನಿರಾಕುರು ।
ಸಬೋಧಃ ಪ್ರೇರಕಸ್ತ್ವಂ ಮೇ ತ್ವಮೇವ ವಿನಿವಾರಕಃ ॥ ೫೧ ॥

---

೪೭-೪೮. ಓ ಶಂಕರ, ಮೂಢತನದಿಂದ ನಾನೂ ನಿನಗೆ ಅಪರಾಧವನ್ನು ಮಾಡಿರುವೆನು. ನಿನ್ನ ಗಣಗಳೊಡನೆಯೂ, ವೀರಭದ್ರನೊಡನೆಯೂ, ತಿಳುವಳಿಕೆಯಿಲ್ಲದೆ ಯುದ್ಧಮಾಡಿದೆನು. ನೀನು ಪರಬ್ರಹ್ಮಸ್ವರೂಪನು. ನೀನೇ ನನಗೆ ಸ್ವಾಮಿಯು. ನಿನಗೆ ನಾನು ಸದಾ ದಾಸನಾಗಿರುವೆನು. ಸಮಸ್ತರಿಗೂ ನೀನು ಜನಕನಾಗಿರುವೆ. ಆದುದರಿಂದ ನನ್ನ ಅಪರಾಧಗಳನ್ನು ಕ್ಷಮಿಸಿ ನನ್ನನ್ನು ಕಾಪಾಡಬೇಕು ಎಂದು ಸ್ತುತಿಸಿದನು.

೪೯-೫೧. ಬ್ರಹ್ಮನು ಹೇಳಿದನು ;—ದೇವದೇವನೂ ದಯಾಮಯನೂ ಆದ ಓ ಮಹಾದೇವನೆ, ನೀನು ಸ್ವತಂತ್ರನು, ಪರಮಾತ್ಮನು, ಪರಮೇಶ್ವರನು, ಭೇದವಿಲ್ಲದವನು. ನಿನಗೆ ನಾಶವೆಂಬುದಿಲ್ಲ. ಓ ಪರಮೇಶ್ವರ, ನೀನು ನಿನ್ನ ಅವಮಾನವನ್ನು ಗಣಿಸದೆ ನನ್ನ ಪುತ್ರನಾದ ದಕ್ಷನಲ್ಲಿ ಅನುಗ್ರಹವನ್ನು ಮಾಡಿರುವೆ. ಓ ದೇವೇಶ, ಈಗ ನೀನು ಪ್ರಸನ್ನನಾಗಿ ದಕ್ಷಯಜ್ಞವನ್ನು ಉದ್ಧರಿಸಿ ಸಮಾಪ್ತಿಗೊಳಿಸು. ಎಲ್ಲರ ಶಾಪವನ್ನು ಹೋಗಲಾಡಿಸು. ನಮ್ಮನ್ನು ಸತ್ಕರ್ಮದಲ್ಲಿ ಪ್ರೇರಿಸುವವನೂ ನೀನೆ, ದುಷ್ಕರ್ಮವನ್ನು ನಿರಾಕರಿಸುವವನೂ ನೀನೆ ಆಗಿರುವೆ.

ಇತಿ ಸ್ತುತ್ವಾ ಮಹೇಶಾನಂ ಪರಮಂ ಚ ಮಹಾಮುನೇ ।
ಕೃತಾಂಜಲಿಪುಟೋ ಭೂತ್ವಾ ವಿನಮ್ರಾಕೃತಮಸ್ತಕಃ ॥ ೫೨ ॥

ಅಥ ಶಕ್ರಾದಯೋ ದೇವಾ ಲೋಕಪಾಲಾಸ್ಸುಚೇತಸಃ ।
ತುಷ್ಟುವುಃ ಶಂಕರಂ ದೇವಂ ಪ್ರಸನ್ನಮುಖಪಂಕಜಂ ॥ ೫೩ ॥

ತತಃ ಪ್ರಸನ್ನಮನಸಃ ಸರ್ವೇ ದೇವಾಸ್ತಥಾ ಪರೇ ।
ಸಿದ್ಧರ್ಷಯಃ ಪ್ರಜೇಶಾಶ್ಚ ತುಷ್ಟುವುಃ ಶಂಕರಂ ಮುದಾ ॥ ೫೪ ॥

ತಥೋಪದೇವನಾಗಾಶ್ಚ ಸದಸ್ಯಾ ಬ್ರಾಹ್ಮಣಾಸ್ತಥಾ ।
ಪ್ರಣಮ್ಯ ಪರಯಾ ಭಕ್ತ್ಯಾ ತುಷ್ಟುವುಶ್ಚ ಪೃಥಕ್ಪೃಥಕ್ ॥ ೫೫ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಸತೀಖಂಡೇ
ದ್ವಿಚತ್ವಾರಿಂಶೋಽಧ್ಯಾಯಃ

---

೫೨. ಹೀಗೆ ಪರಮೇಶ್ವರನನ್ನು ಸ್ತೋತ್ರಮಾಡಿ ಬ್ರಹ್ಮನು ಅಂಜಲಿಯನ್ನು ಧರಿಸಿ ವಿನಯದಿಂದ ಶಿರಸ್ಸನ್ನು ಬಗ್ಗಿಸಿ ನಿಂತುಕೊಂಡನು.

೫೩-೫೫. ಬಳಿಕ ಇಂದ್ರನೇ ಮೊದಲಾದ ದೇವತೆಗಳು, ಲೋಕಪಾಲರು, ಪ್ರಸನ್ನನಾದ ಪರಮೇಶ್ವರನನ್ನು ಭಕ್ತಿಯಿಂದ ಅನೇಕ ವಿಧವಾಗಿ ಸ್ತುತಿಸಿದರು. ಮತ್ತು ಸಿದ್ಧರು, ಗಂಧರ್ವರು, ದೇವಮುನಿಗಳು ನಾಗದೇವತೆಗಳು, ಸದಸ್ಯರು, ಬ್ರಾಹ್ಮಣರು ಎಲ್ಲರೂ ಸಹ ಭಕ್ತಿಯಿಂದ ಶಿವನನ್ನು ನಮಸ್ಕರಿಸಿ ಸ್ತುತಿಸಿದರು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ನಲವತ್ತೆರಡನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಸತೀಖಂಡೇ

## ತ್ರಿಚತ್ವಾಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಇತಿ ಸ್ತುತೋ ರಮೇಶೇನ ಮಯಾ ಚೈವ ಸುರರ್ಷಿಭಿಃ ।
ತಥಾನ್ಯೈಶ್ಚ ಮಹಾದೇವಃ ಪ್ರಸನ್ನಃ ಸಂಬಭೂವ ಹ ॥ ೧ ॥

ಅಥ ಶಂಭುಃ ಕೃಪಾದೃಷ್ಟ್ಯಾ ಸರ್ವಾನ್ಸೃಷಿಸುರಾದಿಕಾನ್ ।
ಬ್ರಹ್ಮವಿಷ್ಣೂ ಸಮಾಧಾಯ ದಕ್ಷಮೇತದುವಾಚ ಹ ॥ ೨ ॥

॥ ಮಹದೇವ ಉವಾಚ ॥

ಶೃಣು ದಕ್ಷ ಪ್ರವಕ್ಷ್ಯಾಮಿ ಪ್ರಸನ್ನೋಽಸ್ಮಿ ಪ್ರಜಾಪತೇ ।
ಭಕ್ತಾಧೀನಃ ಸದಾಹಂ ವೈ ಸ್ವತಂತ್ರೋಽಪ್ಯಖಿಲೇಶ್ವರಃ ॥ ೩ ॥

---

### ನಲವತ್ತಮೂರನೆಯ ಅಧ್ಯಾಯವು.

೧-೨. ಬ್ರಹ್ಮನು ಹೇಳಿದನು :—ಹೀಗೆ ಹರಿಯೂ ನಾನೂ (ಬ್ರಹ್ಮನು) ದೇವಮುನಿಗಳೂ, ಮಿಕ್ಕವರೂ ಸ್ತುತಿಸಲು ಪರಮೇಶ್ವರನು ಪ್ರಸನ್ನನಾದನು. ಬಳಿಕ ಆ ಶಿವನು ದೇವತೆ ಮೊದಲಾದವರನ್ನು ದಯೆಯಿಂದ ನೋಡಿ ಬ್ರಹ್ಮ ವಿಷ್ಣುಗಳನ್ನು ಸಮಾಧಾನಗೊಳಿಸಿ ದಕ್ಷನನ್ನು ಕುರಿತು ಹೀಗೆ ಹೇಳಿದನು.

೩-೫. ಮಹಾದೇವನು ಹೇಳಿದನು :—ಎಲೈ ದಕ್ಷನೆ, ನಿನಗೆ ನಾನು ಪ್ರಸನ್ನ ನಾಗಿರುವೆನು. ನಾನು ಹೇಳುವುದನ್ನು ಕೇಳು. ಸ್ವತಂತ್ರನಾದ ಪರಮೇಶ್ವರನಾದರೂ

ಚತುರ್ವಿಧಾ ಭಜಂತೇ ಮಾಂ ಜನಾಸ್ಸುಕೃತಿನಸ್ಸದಾ ।
ಉತ್ತರೋತ್ತರತಃ ಶ್ರೇಷ್ಠಾಸ್ತೇಷಾಂ ದಕ್ಷ ಪ್ರಜಾಪತೇ ॥ ೪ ॥

ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚೈವ ಚತುರ್ಥಕಃ ।
ಪೂರ್ವೇ ತ್ರಯಶ್ಚ ಸಾಮಾನ್ಯಾಶ್ಚತುರ್ಥೋ ಹಿ ವಿಶಿಷ್ಯತೇ ॥ ೫ ॥

ತತ್ರ ಜ್ಞಾನೀ ಪ್ರಿಯತರೋ ಮಮ ರೂಪಂ ಚ ಸ ಸ್ಮೃತಃ ।
ತಸ್ಮಾತ್ಪ್ರಿಯತರೋ ನಾನ್ಯಃ ಸತ್ಯಂ ಸತ್ಯಂ ವದಾಮ್ಯಹಂ ॥ ೬ ॥

ಜ್ಞಾನಗಮ್ಯೋಽಹಮಾತ್ಮಜ್ಞೈರ್ವೇದಾಂತಶ್ರುತಿಪಾರಗೈಃ ।
ವಿನಾ ಜ್ಞಾನೇನ ಮಾಂ ಪ್ರಾಪ್ತುಂ ಯತಂತೇ ಚಾಲ್ಪಬುದ್ಧಯಃ ॥ ೭ ॥

ನ ವೇದೈಶ್ಚ ನ ಯಜ್ಞೈಶ್ಚ ನ ದಾನೈಸ್ತಪಸಾ ಕ್ವಚಿತ್ ।
ನ ಶಕ್ನುವಂತಿ ಮಾಂ ಪ್ರಾಪ್ತುಂ ಮೂಢಾಃ ಕರ್ಮವಶಾ ನರಾಃ ॥ ೮ ॥

---

ನಾನು ಸದಾ ಭಕ್ತರ ಅಧೀನನು. ನಾಲ್ಕು ವಿಧವಾದಂತಹ ಪುಣ್ಯಶಾಲಿಗಳು ನನ್ನನ್ನು ಭಜಿಸುವರು. ದುಃಖಪೀಡಿತನು ಮೊದಲನೆಯವನು. ಜ್ಞಾನವನ್ನು ಪಡೆಯಲಿಚ್ಛಿಯುಳ್ಳವನು ಎರಡನೆಯವನು. ಮೂರನೆಯವನು ಧನವನ್ನಪೇಕ್ಷಿಸುವನು. ಜ್ಞಾನಿಯು ನಾಲ್ಕನೆಯವನು. ಇವರಲ್ಲಿ ಮೊದಲಿನ ಮೂವರು ಸಾಮಾನ್ಯರು. ಎಂದರೆ ಮೊದಲನೆಯವನಿಗಿಂತ ಎರಡನೆಯವನೂ ಎರಡನೆಯವನಿಗಿಂತ ಮೂರನೆಯವನೂ ಶ್ರೇಷ್ಠನು. ನಾಲ್ಕನೆಯವನಾದ ಜ್ಞಾನಿಯು ಎಲ್ಲರಿಗಿಂತಲೂ, ಶ್ರೇಷ್ಠನು.

೬-೮. ಆ ಜ್ಞಾನಿಯು ನನಗೆ ತುಂಬಾ ಪ್ರಿಯನು. ನನ್ನ ಸ್ವರೂಪವೇ ಅವನಾಗಿರುವನು. ಇದು ಸತ್ಯವಾದ ಮಾತು. ವೇದಾಂತವನ್ನು ಬಲ್ಲ ಆತ್ಮಜ್ಞರು ನನ್ನನ್ನು ಜ್ಞಾನದಿಂದ ತಿಳಿಯಬಲ್ಲರು. ಜ್ಞಾನವಿಲ್ಲದೇ ನನ್ನನ್ನು ಪಡೆಯಲು ಕೆಲವರು ಮೂಢರು ಯತ್ನಿಸುವರು. ಜ್ಞಾನಮಾರ್ಗವನ್ನು ಬಿಟ್ಟು ವೇದಗಳು, ಯಜ್ಞಗಳು, ದಾನಗಳು, ತಪಸ್ಸು ಮುಂತಾದುವುಗಳಿಂದ ನನ್ನನ್ನು ಪಡೆಯಲಸಾಧ್ಯವು.

ಕೇವಲಂ ಕರ್ಮಣಾ ತ್ವಂ ಸ್ಮ ಸಂಸಾರಂ ತರ್ತುಮಿಚ್ಛಸಿ ।
ಅತ ಏವಾಭವಂ ರುಷ್ಟೋ ಯಜ್ಞವಿಧ್ವಂಸಕಾರಕಃ ॥ ೯ ॥

ಇತಃ ಪ್ರಭೃತಿ ಭೋ ದಕ್ಷ ಮತ್ವಾ ಮಾಂ ಪರಮೇಶ್ವರಂ ।
ಬುದ್ಧ್ಯಾ ಜ್ಞಾನಪರೋ ಭೂತ್ವಾ ಕುರು ಕರ್ಮ ಸಮಾಹಿತಃ ॥ ೧೦ ॥

ಅನ್ಯಚ್ಚ ಶೃಣು ಸದ್ಬುದ್ಧ್ಯಾ ವಚನಂ ಮೇ ಪ್ರಜಾಪತೇ ।
ವಚ್ಮಿ ಗುಹ್ಯಂ ಧರ್ಮಹೇತೋಃ ಸಗುಣತ್ವೇಽಪ್ಯಹಂ ತವ ॥ ೧೧ ॥

ಅಹಂ ಬ್ರಹ್ಮಾ ಚ ವಿಷ್ಣುಶ್ಚ ಜಗತಃ ಕಾರಣಂ ಪರಂ ।
ಆತ್ಮೇಶ್ವರ ಉಪದ್ರಷ್ಟಾ ಸ್ವಯಂ ದೃಗವಿಶೇಷಣಃ ॥ ೧೨ ॥

ಆತ್ಮಮಾಯಾಂ ಸಮಾವಿಶ್ಯ ಸೋಽಹಂ ಗುಣಮಯೀಂ ಮುನೇ ।
ಸೃಜನ್ ರಕ್ಷನ್ ಹರನ್ ವಿಶ್ವಂ ದಧೇ ಸಂಜ್ಞಾಃ ಕ್ರಿಯೋಚಿತಾಃ ॥ ೧೩ ॥

ಅದ್ವಿತೀಯೇ ಪರೇ ತಸ್ಮಿನ್ ಬ್ರಹ್ಮಣ್ಯಾತ್ಮನಿ ಕೇವಲೇ ।
ಅಜ್ಞಃ ಪಶ್ಯತಿ ಭೇದೇನ ಭೂತಾನಿ ಬ್ರಹ್ಮ ಚೇಶ್ವರಂ ॥ ೧೪ ॥

---

೯-೧೧ ಎಲೈ ದಕ್ಷನೆ, ಕೇವಲ ಕರ್ಮದಿಂದ ಸಂಸಾರವನ್ನು ದಾಟಲು ನೀನು ಪ್ರಯತ್ನಪಟ್ಟಿರುವೆ. ಆದಕಾರಣ ನಾನು ಕೋಪಗೊಂಡು ನಿನ್ನ ಯಜ್ಞವನ್ನು ನಾಶ ಮಾಡಿದೆನು. ಎಲೈ ದಕ್ಷನೆ, ಇದು ಮೊದಲುಗೊಂಡು ನಾನು ಪರಮೇಶ್ವರನೆಂದು ತಿಳಿದು ಕರ್ಮವನ್ನು ಸದ್ಬುದ್ಧಿಯಿಂದ ಮಾಡು. ಜ್ಞಾನಮಾರ್ಗವನ್ನಾಶ್ರಯಿಸು. ಇನ್ನೂ ಒಂದುರಹಸ್ಯವಾದ ವಿಷಯವನ್ನು ಧರ್ಮಾನುಷ್ಠಾನಕ್ಕಾಗಿ ನಿನಗೆ ಹೇಳುವೆನು. ನನ್ನ ಸಗುಣಸ್ವರೂಪವನ್ನು ನಿನಗೆ ಹೇಳುವೆನು. ಸಾವಧಾನವಾಗಿ ಕೇಳು.

೧೨-೧೪. ನಾನೂ (ಶಿವನೂ) ಬ್ರಹ್ಮನೂ ಹರಿಯೂ ಜಗತ್ತಿಗೆ ಕಾರಣರು. ಆತ್ಮಸ್ವರೂಪನೂ ಸಾಕ್ಷಿಯೂ ಆದ ನಾನು ನನ್ನ ಮಾಯೆಯನ್ನು ಪ್ರಸರಿಸಿ ಬ್ರಹ್ಮ ವಿಷ್ಣು ರುದ್ರರೆಂಬ ಸಂಜ್ಞೆಗಳನ್ನು ಪಡೆದು ಸೃಷ್ಟಿ, ಪಾಲನೆ, ಸಂಹಾರ, ರೂಪವಾದ ಕರ್ಮಗಳನ್ನು ಮಾಡುತ್ತಲಿರುವೆನು. ವಸ್ತುತಃ ಬ್ರಹ್ಮ ವಿಷ್ಣು ಮಹೇಶ್ವರರು ಒಂದೇ ಆತ್ಮಸ್ವರೂಪರು. ಭೇದವಿಲ್ಲದ ಆ ಆತ್ಮವಸ್ತುವಿನಲ್ಲಿ ಭೇದವೇ ಇಲ್ಲವು. ಹೀಗಿದ್ದರೂ ಮೂಢರು ನಾನು ಬೇರೆ, ತಾನು ಬೇರೆ, ಬ್ರಹ್ಮನು ಬೇರೆ, ಈಶ್ವರನು ಬೇರೆ ಎಂದು ಇಲ್ಲದ ಭೇದವನ್ನೆಣಿಸುವರು.

ಶಿರಃಕರಾದಿಸ್ವಾಂಗೇಷು ಕುರುತೇ ನ ಯಥಾ ಪುಮಾನ್ ।
ಪಾರಕ್ಯಶೇಮುಷೀಂ ಕ್ವಾಪಿ ಭೂತೇಷ್ವೇವಂ ಹಿ ಮತ್ಪರಃ ॥ ೧೫ ॥

ಸರ್ವಭೂತಾತ್ಮನಾಮೇಕಭಾವಾನಾಂ ಯೋ ನ ಪಶ್ಯತಿ ।
ತ್ರಿಸುರಾಣಾಂ ಭಿದಾಂ ದಕ್ಷ ಸ ಶಾಂತಿಮಧಿಗಚ್ಛತಿ ॥ ೧೬ ॥

ಯಃ ಕರೋತಿ ತ್ರಿದೇವೇಷು ಭೇದಬುದ್ಧಿಂ ನರಾಧಮಃ ।
ನಾರಕೇ ಸ ವಸೇನ್ನೂನಂ ಯಾವದಾಚಂದ್ರತಾರಕಂ ॥ ೧೭ ॥

ಮತ್ಪರಃ ಪೂಜಯೇದ್ದೇವಾನ್ ಸರ್ವಾನಪಿ ವಿಚಕ್ಷಣಃ ।
ಸ ಜ್ಞಾನಂ ಲಭತೇ ಯೇನ ಮುಕ್ತಿರ್ಭವತಿ ಶಾಶ್ವತೀ ॥ ೧೮ ॥

ವಿಧಿಭಕ್ತಿಂ ವಿನಾ ನೈವ ಭಕ್ತಿರ್ಭವತಿ ವೈಷ್ಣವೀ ।
ವಿಷ್ಣುಭಕ್ತಿಂ ವಿನಾ ಮೇ ನ ಭಕ್ತಿಃ ಕ್ವಾಪಿ ನ ಜಾಯತೇ ॥ ೧೯ ॥

ಇತ್ಯುಕ್ತ್ವಾ ಶಂಕರಃ ಸ್ವಾಮೀ ಸರ್ವೇಷಾಂ ಪರಮೇಶ್ವರಃ ।
ಸರ್ವೇಷಾಂ ಶೃಣ್ವತಾಂ ತತ್ರೋವಾಚ ವಾಣೀಂ ಕೃಪಾಕರಃ ॥ ೨೦ ॥

---

೧೫-೧೬. ಶಿರಸ್ಸು, ಕೈ ಮೊದಲಾದ ಅಂಗಗಳು ತನ್ನ ಶರೀರಕ್ಕಿಂತಲೂ ಬೇರೆಯಲ್ಲ ಎಂದು ಹೇಗೆ ತಿಳಿಯುವನೋ ಅದರಂತೆ ಸರ್ವಾತ್ಮರಾದ ತ್ರಿಮೂರ್ತಿಗಳಿಗೆ ಪರಸ್ಪರ ಭೇದವನ್ನು ಕಲ್ಪಿಸಬಾರದು. ಹಾಗೆ ಭೇದವನ್ನೆಣಿಸದವನು ಶಾಂತಿಯನ್ನು ಹೊಂದುವನು.

೧೭-೧೮. ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ಭೇದವನ್ನು ಯಾವ ನರಾಧಮನು ಎಣಿಸುವನೋ ಅವನು ಚಂದ್ರ ಸೂರ್ಯರಿರುವವರೆಗೆ ನರಕವನ್ನನುಭವಿಸುವನು. ನನ್ನ ಭಕ್ತನು ಎಲ್ಲಾ ದೇವತೆಗಳನ್ನೂ ಪೂಜಿಸಬೇಕು. ಹಾಗೆ ಪೂಜಿಸಿದರೆ ಮುಕ್ತಿಗೆ ಸಾಧನವಾದಂತಹ ಜ್ಞಾನವನ್ನು ಪಡೆಯುವನು.

೧೯-೨೦. ಬ್ರಹ್ಮನಲ್ಲಿ ಭಕ್ತಿಯಿಲ್ಲದೆ ಹರಿಯಲ್ಲಿ ಭಕ್ತಿಯು ಉದಯಿಸಲಾರದು. ಹರಿಭಕ್ತಿಯಿಲ್ಲದೆ ನನ್ನ (ಶಂಕರನ) ಲ್ಲಿ ಭಕ್ತಿಯುದಯಿಸಲಾರದು. ಹೀಗೆಂದು ಜಗದೊಡೆಯನಾದ ಪರಮೇಶ್ವರನು ಹೇಳಿ ತಿರುಗಿ ಎಲ್ಲರಿಗೂ ಕೇಳಿಸುವಂತೆ ಮತ್ತೆ ಹೇಳಿದನು.

ಹರಿಭಕ್ತೋ ಹಿ ಮಾಂ ನಿಂದೇತ್ತಥಾ ಶೈವೋ ಭವೇದ್ಯದಿ ।
ತಯೋಃಶಾಪಾ ಭವೇಯುಸ್ತೇ ತತ್ತ್ವಪ್ರಾಪ್ತಿರ್ಭವೇನ್ನ ಹಿ ॥ ೨೧ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ಮಹೇಶಸ್ಯ ವಚನಂ ಸುಖಕಾರಕಂ ।
ಜಹರ್ಷುಸ್ಸಕಲಾಸ್ತತ್ರ ಸುರಮುನ್ಯಾದಯೋ ಮುನೇ ॥ ೨೨ ॥

ದಕ್ಷೋಽಭವನ್ಮಹಾಪ್ರೀತ್ಯಾ ಶಿವಭಕ್ತಿರತಸ್ತದಾ ।
ಸಕುಟುಂಬಃ ಸುರಾದ್ಯಾಸ್ತೇ ಶಿವಂ ಮತ್ವಾಖಿಲೇಶ್ವರಂ ॥ ೨೩ ॥

ಯಥಾ ಯೇನ ಕೃತಾ ಶಂಭೋಃ ಸಂಸ್ತುತಿಃ ಪರಮಾತ್ಮನಃ ।
ತಥಾ ತಸ್ಮೈ ವರೋ ದತ್ತಶ್ಶಂಭುನಾ ತುಷ್ಟಚೇತಸಾ ॥ ೨೪ ॥

ಜಪ್ತಃ ಶಿವೇನಾಶು ದಕ್ಷಃ ಶಿವಭಕ್ತಃ ಪ್ರಸನ್ನಧೀಃ ।
ಯಜ್ಞಂ ಚಕಾರ ಸಂಪೂರ್ಣಂ ಶಿವಾನುಗ್ರಹತೋ ಮುನೇ ॥ ೨೫ ॥

ದದೌ ಭಾಗಾನ್ ಸುರೇಭ್ಯೋ ಹಿ ಪೂರ್ಣಭಾಗಂ ಶಿವಾಯ ಸಃ ।
ದಾನಂ ದದೌ ದ್ವಿಜೇಭ್ಯಶ್ಚ ಪ್ರಾಪ್ತಃ ಶಂಭುಸ್ವನುಗ್ರಹಃ ॥ ೨೬ ॥

---

೨೧. ಹರಿಭಕ್ತನಾಗಲೀ, ಶಿವಭಕ್ತನಾಗಲೀ ನನ್ನನ್ನು ನಿಂದಿಸಿದರೆ ಅವರ ಮೇಲೆ ಶಾಪವಿರುವುದು. ಅವರಿಗೆ ಎಂದೆಂದಿಗೂ ಮುಕ್ತಿಯಿಲ್ಲವು.

೨೨-೨೪. ಬ್ರಹ್ಮನು ಹೇಳಿದನು ;—ಹೀಗೆ ಪರಮೇಶ್ವರನು ಹೇಳಿದ ಸುಖಕರವಾದ ಮಾತನ್ನು ಕೇಳಿ ದೇವತೆಗಳು ಮುನಿಗಳು ಮೊದಲಾದವರು ಸಂತೋಷಗೊಂಡರು. ದಕ್ಷನೂ ಸಹ ಹರ್ಷಗೊಂಡು ಶಿವನಲ್ಲಿ ಭಕ್ತಿಯುಳ್ಳವನಾದನು. ದೇವತೆಗಳೆಲ್ಲರೂ ಶಿವನೇ ಎಲ್ಲರಿಗೂ ಒಡೆಯನೆಂದು ತಿಳಿದರು. ಯಾವ ಯಾವನು ಯಾವ ರೀತಿಯಾಗಿ ಶಿವನನ್ನು ಸ್ತುತಿಸಿದನೋ ಅದಕ್ಕನುಗುಣವಾಗಿ ಶಿವನು ಪ್ರೀತಿಯಿಂದ ಅವನವನಿಗೆ ವರವನ್ನನುಗ್ರಹಿಸಿದನು.

೨೫-೨೬. ಬಳಿಕ ದಕ್ಷನು ಶಿವನ ಅಪ್ಪಣೆಯಂತೆ ಅವನನುಗ್ರಹದಿಂದ ಯಜ್ಞವನ್ನು ಸಂಪೂರ್ಣವಾಗಿ ನೆರವೇರಿಸಿದನು. ದೇವತೆಗಳಿಗೆ ಹವಿರ್ಭಾಗವನ್ನು ಯೋಗ್ಯವಾಗಿ ಕೊಟ್ಟನು. ಶಿವನಿಗೆ ಸಂಪೂರ್ಣವಾದ ಭಾಗವನ್ನು ಕೊಟ್ಟನು. ಬ್ರಾಹ್ಮಣರಿಗೆ

ಅಥೋ ದೇವಸ್ಯ ಸುಮಹತ್ತತ್ಕರ್ಮ ವಿಧಿಪೂರ್ವಕಂ ।
ದಕ್ಷಃ ಸಮಾಪ್ಯ ವಿಧಿವತ್ಸಹರ್ತ್ವಿಗ್ಭಿಃ ಪ್ರಜಾಪತಿಃ ॥ ೨೭ ॥

ಏವಂ ದಕ್ಷಮಖಃ ಪೂರ್ಣೋಽಭವತ್ತತ್ರ ಮುನೀಶ್ವರ ।
ಶಂಕರಸ್ಯ ಪ್ರಸಾದೇನ ಪರಬ್ರಹ್ಮಸ್ವರೂಪಿಣಃ ॥ ೨೮ ॥

ಅಥ ದೇವರ್ಷಯಸ್ಸರ್ವೇ ಶಂಸಂತಃ ಶಾಂಕರಂ ಯಶಃ ।
ಸ್ವಧಾಮಾನಿ ಯಯುಸ್ತುಷ್ಟಾಃ ಪರೇಽಪಿ ಸುಮುಖಾಸ್ತದಾ ॥ ೨೯ ॥

ಅಹಂ ವಿಷ್ಣುಶ್ಚ ಸುಪ್ರೀತಾವಪಿ ಸ್ವಂ ಸ್ವಂ ಪುರಂ ಮುದಾ ।
ಗಾಯಂತೌ ಸುಯಶಶ್ಶಂಭೋಃ ಸರ್ವಮಂಗಲದಂ ಸದಾ ॥ ೩೦ ॥

ದಕ್ಷಸಮ್ಮಾನಿತಃ ಪ್ರೀತ್ಯಾ ಮಹಾದೇವೋಽಪಿ ಸದ್ಗತಿಃ ।
ಕೈಲಾಸಂ ಸ ಯಯೌ ಶೈಲಂ ಸುಪ್ರೀತಸ್ಸಗಣೋ ನಿಜಂ ॥ ೩೧ ॥

ಆಗತ್ಯ ಸ್ವಗಿರಿಂ ಶಂಭುಃ ಸಸ್ಮಾರ ಸ್ವಪ್ರಿಯಾಂ ಸತೀಂ ।
ಗಣೇಭ್ಯಃ ಕಥಯಾಮಾಸ ಪ್ರಧಾನೇಭ್ಯಶ್ಚ ತತ್ಕಥಾಃ ॥ ೩೨ ॥

---

ದಾನಮಾಡಿದನು. ಹೀಗೆ ಶಿವನ ಅನುಗ್ರಹದಿಂದ ವಿಧಿವತ್ತಾಗಿ ದಕ್ಷನು ಯಜ್ಞವನ್ನು ಮಾಡಿ ಮುಗಿಸಿದನು.

೨೮-೩೦. ಎಲೈ ನಾರದ, ಹೀಗೆ ಪರಬ್ರಹ್ಮರೂಪನಾದ ಶಂಕರನ ಅನುಗ್ರಹದಿಂದ ದಕ್ಷಯಜ್ಞವು ಪೂರ್ಣವಾಯಿತು. ಬಳಿಕ ದೇವತೆಗಳು, ಮುನಿಗಳು ಎಲ್ಲರೂ ಶಿವನನುಮತಿಯನ್ನು ಪಡೆದು, ಅವನ ಯಶಸ್ಸನ್ನು ಸ್ತುತಿಸುತ್ತಾ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ನಾನೂ, ವಿಷ್ಣುವೂ ಸಹ ಹರ್ಷಗೊಂಡು ಶಂಕರನ ಮಂಗಳವಾದ ಯಶಸ್ಸನ್ನು ಗಾನಮಾಡುತ್ತಾ ನಮ್ಮ ನಮ್ಮ ಪುರಗಳಿಗೆ ಹೋದೆವು.

೩೧-೩೨. ದಕ್ಷನಿಂದ ಗೌರವಿಸಲ್ಪಟ್ಟು ಶಂಕರನೂ ಸಹ ತನ್ನ ಕೈಲಾಸಗಿರಿಗೆ ಗಣಗಳೊಂದಿಗೆ ತೆರಳಿದನು. ಆ ಗಿರಿಗೆ ಬಂದು ಶಿವನು ಮೃತಳಾದ ತನ್ನ ಪ್ರಿಯೆ ಸತೀದೇವಿಯನ್ನು ಕುರಿತು ತುಂಬಾ ಚಿಂತಿಸಿದನು. ಪ್ರಧಾನಗಣಗಳೆದುರಿಗೆ ಅವಳ ಪ್ರಿಯವಾದ ಕಥೆಗಳನ್ನು ಹೇಳಿದನು. ಹೀಗೆ ಶಿವನು ಲೋಕಗತಿಯನ್ನಾಶ್ರಯಿಸಿ

ಕಾಲಂ ನಿನಾಯ ವಿಜ್ಞಾನೀ ಬಹು ತಚ್ಚರಿತಂ ವದನ್ ।
ಲೌಕಿಕೀಂ ಗತಿಮಾಶ್ರಿತ್ಯ ದರ್ಶಯನ್ ಕಾಮಿತಾಂ ಪ್ರಭುಃ ॥ ೩೩ ॥

ನಾನೀತಿಕಾರಕಃ ಸ್ವಾಮೀ ಪರಬ್ರಹ್ಮ ಸತಾಂ ಗತಿಃ ।
ತಸ್ಯ ಮೋಹಃ ಕ್ವ ವಾ ಶೋಕಃ ಕ್ವ ವಿಕಾರಃ ಪರೋ ಮುನೇ ॥ ೩೪ ॥

ಅಹಂ ವಿಷ್ಣುಶ್ಚ ಜಾನೀವಸ್ತದ್ಭೇದಂ ನ ಕದಾಚನ ।
ಕೇ ಪರೇ ಮುನಯೋ ದೇವಾ ಮಾನುಷಾದ್ಯಾಶ್ಚ ಯೋಗಿನಃ ॥ ೩೫ ॥

ಮಹಿಮಾ ಶಾಂಕರೋಽನಂತೋ ದುರ್ವಿಜ್ಞೇಯೋ ಮನೀಷಿಭಿಃ ।
ಭಕ್ತಜ್ಞಾತಶ್ಚ ಸದ್ಭಕ್ತ್ಯಾ ತತ್ಪ್ರಸಾದಾದ್ವಿನಾ ಶ್ರಮಂ ॥ ೩೬ ॥

ಏಕೋಽಪಿ ನ ವಿಕಾರೋ ಹಿ ಶಿವಸ್ಯ ಪರಮಾತ್ಮನಃ ।
ಸಂದರ್ಶಯತಿ ಲೋಕೇಭ್ಯಃ ಕೃತ್ವಾ ತಾಂ ತಾದೃಶೀಂ ಗತಿಂ ॥ ೩೭ ॥

ಯತ್ಪಠಿತ್ವಾ ಚ ಸಂಶ್ರುತ್ವಾ ಸರ್ವಲೋಕಸುಧೀರ್ಮುನೇ ।
ಲಭತೇ ಸದ್ಗತಿಂ ದಿವ್ಯಾಮಿಹಾಪಿ ಸುಖಮುತ್ತಮಂ ॥ ೩೮ ॥

---

ಸತಿಯಲ್ಲಿ ಅನುರಾಗವನ್ನು ಪ್ರಕಟಿಸುತ್ತಾ ಅವಳ ಚರಿತ್ರವನ್ನು ಹೇಳುತ್ತಾ ಬಹಳ ಕಾಲವನ್ನು ಕಳೆದನು.

೩೪-೩೬. ಶಿವನು ನೀತಿಯನ್ನು ಬಿಟ್ಟು ನಡೆಯತಕ್ಕವನಲ್ಲ. ಅವನು ಪರಬ್ರಹ್ಮಸ್ವರೂಪನು, ಸತ್ಪುರುಷರಿಗೆ ಗತಿಯು, ಇಂತಹ ಶಿವನಿಗೆ ಮೋಹವೆಲ್ಲಿಯದು? ಶೋಕವೆಲ್ಲಿಯದು? ಕಾಮವಿಕಾರವೆಲ್ಲಿಯದು? ಅವನ ಸ್ವರೂಪನ್ನು ನಾನೂ (ಬ್ರಹ್ಮನೂ) ವಿಷ್ಣುವೂ ಸಹ ತಿಳಿಯಲಾರೆವು. ಮಿಕ್ಕ ಮುನಿಗಳು, ದೇವತೆಗಳು, ಮನುಷ್ಯರು, ಯೋಗಿಗಳು ಇವರು ಹೇಗೆ ತಿಳಿಯಬಲ್ಲರು? ಶಂಕರನ ಮಹಿಮೆಯು ಅನಂತವಾದುದು, ತಿಳಿಯಲಸಾಧ್ಯವಾದುದು. ಆದರೆ ಶಿವಭಕ್ತನು ಶಿವನ ಅನುಗ್ರಹದಿಂದ ಶ್ರಮವಿಲ್ಲದೆ ಶಿವಮಹಿಮೆಯನ್ನು ತಿಳಿಯಬಲ್ಲನು.

೩೭-೩೮. ಶಿವನಿಗೆ ಯಾವ ವಿಕಾರವೂ ಇಲ್ಲ. ಆದರೂ ಅವನು ಮಾಯೆಯಿಂದ ಲೋಕಗತಿಯನ್ನನುಸರಿಸಿ ವಿಕಾರಗಳನ್ನು ಪ್ರದರ್ಶಿಸುವವನು. ಶಂಕರನ ಮಹಿಮೆಯೇ ಅಂತಹುದು. ಶಂಕರನ ಮಹಿಮೆಯನ್ನು ಓದಿಯಾಗಲೀ ಕೇಳಿ

ಇತ್ಥಂ ದಾಕ್ಷಾಯಣೀ ಹಿತ್ವಾ ನಿಜದೇಹಂ ಸತೀ ಪುನಃ ।
ಜಜ್ಞೇ ಹಿಮವತಃ ಪತ್ನ್ಯಾಂ ಮೇನಾಯಾಮಿತಿ ವಿಶ್ರುತಂ　　॥ ೬೯ ॥

ಪುನಃ ಕೃತ್ವಾ ತಪಸ್ತತ್ರ ಶಿವಂ ವವ್ರೇ ಪತಿಂ ಚ ಸಾ ।
ಗೌರೀಭೂತ್ವಾರ್ಧವಾಮಾಂಗೀ ಲೀಲಾಶ್ಚಕ್ರೇಽದ್ಭುತಾಶ್ಶಿವಾ　　॥ ೪೦ ॥

ಇತ್ಥಂ ಸತೀಚರಿತ್ರಂ ತೇ ವರ್ಣಿತಂ ಪರಮಾದ್ಭುತಂ ।
ಭುಕ್ತಿಮುಕ್ತಿಪ್ರದಂ ದಿವ್ಯಂ ಸರ್ವಕಾಮಪ್ರದಾಯಕಂ　　॥ ೪೧ ॥

ಇದಮಾಖ್ಯಾನಮನಘಂ ಪವಿತ್ರಂ ಪರಪಾವನಂ ।
ಸ್ವರ್ಗ್ಯಂ ಯಶಸ್ಯಮಾಯುಷ್ಯಂ ಪುತ್ರಪೌತ್ರಫಲಪ್ರದಂ　　॥ ೪೨ ॥

---

ಯಾಗಲೀ ತಿಳಿದುಕೊಂಡರೆ ಅವನು ಪಂಡಿತನಾಗುವನು. ಇಹದಲ್ಲಿ ದಿವ್ಯವಾದ ಸುಖವನ್ನನುಭವಿಸಿ ಪರದಲ್ಲಿ ಸದ್ಗತಿಯನ್ನು ಪಡೆಯುವನು. ಹೀಗೆ ಸತೀದೇವಿಯು ದಕ್ಷಯಜ್ಞದಲ್ಲಿ ಶರೀರವನ್ನು ತ್ಯಜಿಸಿ ತಿರುಗಿ ಹಿಮವಂತನ ಪತ್ನಿಯಾದ ಮೇನಕಾ ದೇವಿಯಲ್ಲಿ ಜನಿಸಿದಳು ಎಂದು ನಾವು ಕೇಳಿರುವೆವು.

೪೦-೪೧. ತಿರುಗಿ ಆ ಪಾರ್ವತಿಯು ತಪಸ್ಸನ್ನು ಮಾಡಿ ಶಿವನನ್ನೇ ಪತಿಯಾಗಿ ವರಿಸಿದಳು ಆ ಮೇಲೆ ಶಿವನ ಅನುಗ್ರಹದಿಂದ ಗೌರಿಯಾಗಿ ಅವನ ಅರ್ಧ ದೇಹವನ್ನಾಕ್ರಮಿಸಿ ಅದ್ಭುತವಾದ ಅನೇಕ ಲೀಲೆಗಳನ್ನು ಪ್ರದರ್ಶಿಸಿದಳು. ಎಲೈ ನಾರದ, ನಿನಗೆ ಅತ್ಯದ್ಭುತವಾದ ಸತೀಚರಿತ್ರವನ್ನು ಹೇಳಿರುವೆನು. ಇದು ಭೋಗ ಮತ್ತು ಮೋಕ್ಷಗಳನ್ನು ಕೊಡುವಂತಹುದು, ಸಕಲ ಇಷ್ಟಾರ್ಥಗಳನ್ನೂ ಕೊಡುವುದು, ದಿವ್ಯವಾದುದು.

೪೨. ಈ ಆಖ್ಯಾನವು ಪರಮಪವಿತ್ರವಾದುದು, ಪರರನ್ನೂ ಪವಿತ್ರಗೊಳಿಸುವುದು, ಸ್ವರ್ಗವನ್ನುಂಟುಮಾಡುವುದು, ಯಶಸ್ಸನ್ನುಂಟುಮಾಡುವುದು, ಆಯುಸ್ಸನ್ನು ಅಭಿವೃದ್ಧಿಮಾಡುವುದು, ಪುತ್ರಪೌತ್ರರನ್ನು ಕೊಡುವುದು.

ಯ ಇದಂ ಶೃಣುಯಾದ್ಭಕ್ತ್ಯಾ ಶ್ರಾವಯೇದ್ಭಕ್ತಿಮಾನ್ ನರಾನ್ ।
ಸರ್ವಕಾಮಾನ್ ಲಭೇತ್ತಾತ ಪರತ್ರ ಪರಮಾಂ ಗತಿಂ ॥ ೪೩ ॥

ಯಃ ಪಠೇತ್ಪಾಠಯೇದ್ವಾಪಿ ಸಮಾಖ್ಯಾನಮಿದಂ ಶುಭಂ ।
ಸೋಽಪಿ ಭುಕ್ತ್ವಾಖಿಲಾನ್ ಭೋಗಾನಂತೇ ಮೋಕ್ಷಮವಾಪ್ನುಯಾತ್ ॥

**ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಸತೀಖಂಡೇ ತ್ರಿಚತ್ವಾರಿಂಶೋಽಧ್ಯಾಯಃ**

---

೪೩-೪೪. ಇಂತಹ ಈ ಇತಿಹಾಸವನ್ನು ಭಕ್ತಿಯಿಂದ ಓದಿದರಾಗಲಿ, ಕೇಳಿದರಾಗಲಿ, ಇತರರಿಗೆ ಹೇಳಿದರಾಗಲಿ, ಅವನು ಇಹದಲ್ಲಿ ಸಕಲ ಭೋಗಗಳನ್ನೂ ಅನುಭವಿಸಿ ಪರದಲ್ಲಿ ಉತ್ತಮಗತಿಯಾದ ಮುಕ್ತಿಯನ್ನು ಪಡೆಯುವನು.

ಇಲ್ಲಿಗೆ ಶಿವಪುರಾಣದ ರುದ್ರಸಂಹಿತೆಯಲ್ಲಿನ ಸತೀಖಂಡದಲ್ಲಿ ನಲವತ್ತಮೂರನೆಯ ಅಧ್ಯಾಯವು ಮುಗಿದುದು.

**ರುದ್ರಸಂಹಿತೆಯಲ್ಲಿನ ಸತೀಖಂಡವು ಸಮಾಪ್ತವಾದುದು.**

**॥ ಮಂಗಳಂ ॥**



---

ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್ಸಿನಲ್ಲಿ ಪ್ರೊಪ್ರೈಟರ್ ವೈ. ಆರ್. ರಂಗರಾವ್ ರವರಿಂದ ಮುದ್ರಿಸಲ್ಪಟ್ಟಿತು. ಮೈಸೂರು, ೧೯೪೫.